

# ಕರ್ನಾಟಕ ವಿಧಾನ ಸಭೆಯ ನಡವಳಿಕೆಗಳು

## KARNATAKA LEGISLATIVE ASSEMBLY DEBATES

ಅಧಿಕೃತ ವರದಿ

**OFFICIAL REPORT**

**PART — II**

ಹತ್ತನೆಯ ವಿಧಾನಸಭೆಯ ಎರಡನೆಯ ಅಧಿವೇಶನ

*SECOND SESSION OF THE TENTH LEGISLATIVE ASSEMBLY*

ಸಂಪುಟ — ೩ (ಕ್ರಮಾಂಕ ೧ ರಿಂದ ೫)

**VOLUME III — (Nos. 1 to 5)**

(೫ನೇ ಏಪ್ರಿಲ್ ೧೯೯೫ ರಿಂದ ೬ನೇ ಏಪ್ರಿಲ್ ೧೯೯೫ರವರೆಗೆ)

*(5th April 1995 to 6th April 1995)*

ಕರ್ನಾಟಕ ವಿಧಾನ ಮಂಡಲದ ಕಾರ್ಯಾಲಯ ಬೆಂಗಳೂರು

**Karnataka Legislature Secretariat Bangalore**

# ಕರ್ನಾಟಕ ವಿಧಾನಸಭೆಯ ನಡೆವಳಿಕೆಗಳು

# KARNATAKA LEGISLATIVE ASSEMBLY DEBATES

PART-II

## ಅಧಿಕೃತ ವರದಿ

## OFFICIAL REPORT

ಹತ್ತನೆಯ ವಿಧಾನಸಭೆಯ ಎರಡನೆಯ ಅಧಿವೇಶನ

*Second Session of the Tenth Legislative Assembly*

ಸಂಪುಟ - ೩ (ಕ್ರಮಾಂಕ ೧ ರಿಂದ ೫)

**Volume III - (Nos. 1 To 5)**

(೫ನೇ ಏಪ್ರಿಲ್ ೧೯೯೫ ರಿಂದ ೬ನೇ ಏಪ್ರಿಲ್ ೧೯೯೫ರವರೆಗೆ)

(5th April 1995 to 6th April 1995)

ಕರ್ನಾಟಕ ವಿಧಾನ ಮಂಡಲದ ಕಾರ್ಯಾಲಯ, ಬೆಂಗಳೂರು

**Karnataka Legislature Secretariat, Bangalore**

ಬುಧವಾರ, ೫ನೇ ಏಪ್ರಿಲ್ ೧೯೯೫

ಚೈತ್ರ, ಶಕ ೧೯೧೭

## ಗುರುವಾರ, ೬ನೇ ಏಪ್ರಿಲ್ ೧೯೯೫

## ಚೈತ್ರ, ಶಕ ೧೯೧೬

ಶ್ರೀ ಡಿ. ಮಂಜುನಾಥ್ (ಉನ್ನತ ಶಿಕ್ಷಣ ಸಚಿವರು) : ಮಾನ್ಯ ಅಧ್ಯಕ್ಷರೆ, ಶಾಲಾ ಶಿಕ್ಷಕರ ನೇಮಕಾತಿಯಲ್ಲಿ ಸರ್ಕಾರ ತನ್ನದೆ ಆದ ಮಾನದಂಡವನ್ನು ಉಪಯೋಗಿಸಿದೆ. ಈ ನೇಮಕಾತಿಯ ಬಗ್ಗೆ ಸರ್ಕಾರಕ್ಕೆ ದೂರುಗಳು ಬಂದಿಲ್ಲ. ತಮ್ಮ ಗಮನಕ್ಕೆ ಬಂದಿದ್ದರೆ ತಿಳಿಸಿ ಅದರ ಬಗ್ಗೆ ತನಿಖೆ ಮಾಡಿಸುತ್ತೇನೆ.

ಶ್ರೀ ಹೆಚ್.ಎಸ್. ಶಂಕರಲಿಂಗೇಗೌಡ : ಮಾನ್ಯ ಅಧ್ಯಕ್ಷರೆ, ಕೆಲವು ಪಟ್ಟಣಗಳಲ್ಲಿ ಮತ್ತು ಹಳ್ಳಿಗಳಲ್ಲಿ ಮೂರು ತರಗತಿಗಳನ್ನು ಒಬ್ಬರೆ ಉಪಾಧ್ಯಾಯರು ನಡೆದುಕೊಂಡು ಹೋಗುತ್ತಿದಾದರೆ. ಇಷ್ಟು ಹುದ್ದೆಗಳು ಖಾಲಿ ಇದ್ದರೂ ಕೂಡ ಆ ಹುದ್ದೆಗಳನ್ನು ತುಂಬತಕ್ಕಂತಹ ದಿಕ್ಕಿನಲ್ಲಿ ಪ್ರಮುಖ ಪ್ರಯತ್ನವನ್ನು ಸರ್ಕಾರ ಮಾಡಲಿಲ್ಲ. ನಾವು ಶಿಕ್ಷಣಕ್ಕೆ ಆದ್ಯತೆ ಕೊಡುತ್ತೇವೆ, ಶಿಕ್ಷಣ ಬಹಳ ಮುಖ್ಯವಾಗಿ ಬೇಕು ಎನ್ನುವ ಮಾತನ್ನು ಹೇಳುತ್ತೀರಿ. ವಯಸ್ಕರ ಶಿಕ್ಷಣವನ್ನು ರದ್ದು ಮಾಡಿ ಇನ್ನೂರ ಜನ ಅಲ್ಲಿ ಒದ್ದಾಡುತ್ತಿದ್ದಾರೆ. ಅವರು 25 ವರ್ಷಗಳ ಶಿಕ್ಷಣವನ್ನು ಮಾಡಿದ್ದರೂ ಕೂಡ ಅವರ ಗೋಳಿನ ಕತೆಯನ್ನು ಹೇಳುವುದಕ್ಕಾಗುವುದಿಲ್ಲ...

ಅಧ್ಯಕ್ಷರು : ಶಂಕರ ಲಿಂಗೇಗೌಡರವರೆ, ತಮ್ಮ ಪ್ರಶ್ನೆಗೆ ಉತ್ತರವನ್ನು ಕೊಟ್ಟಿದ್ದಾರೆ. ಪ್ರಸ್ತುತ ಖಾಲಿಯಿರತಕ್ಕಂಥ ಹುದ್ದೆಗಳನ್ನು ಮುಂದಿನ ಶೈಕ್ಷಣಿಕ ವರ್ಷದಿಂದ ತುಂಬುತ್ತೇವೆಂದು ಖಚಿತವಾಗಿ ಹೇಳಿದ್ದಾರೆ, ಉತ್ತರ ಸರಿಯಾಗಿಯೇ ಇದೆ ನೋಡಿ.

ಶ್ರೀ ಹೆಚ್.ಎಸ್. ಶಂಕರಲಿಂಗೇಗೌಡ : ಉತ್ತರ ಸಮರ್ಪಕವಾಗಿಲ್ಲ.

ಅಧ್ಯಕ್ಷರು : ಸಮರ್ಪಕವಾಗಿ ಅಂದರೇನು? ಯಾವ ತಾರೀಖಿನಿಂದ ಮಾಡುತ್ತೇವೆಂದು ಹೇಳಬೇಕು.

ಶ್ರೀ ಹೆಚ್.ಎಸ್. ಶಂಕರಲಿಂಗೇಗೌಡ : ನೇಮಕಾತಿಯಲ್ಲಿ ಅರಾಜಕತೆ ನಡೆದಿದೆ, ವಯೋಮಿತಿಯನ್ನು ಅನುಸರಿಸಿಲ್ಲ, ಗ್ರೂಪ್‌ಗಳನ್ನು ತಿದ್ದುಪಡಿ ಮಾಡುವಾಗ ಅದರಲ್ಲಿ ಅವ್ಯವಹಾರ ನಡೆದಿದೆ ಎಂದು ಹೇಳಿದ್ದಾರೆ...

ಶ್ರೀ ಡಿ. ಮಂಜುನಾಥ್ : ಮಾನ್ಯ ಅಧ್ಯಕ್ಷರೆ, ಮಾನ್ಯ ಸದಸ್ಯರು ಅವ್ಯವಹಾರ ನಡೆದಿದೆ ಎಂದು ಅಪಾದನೆ ಮಾಡಿದ್ದಾರೆ. ನೀವು ನಿರ್ಧಿಷ್ಟವಾದ ಪ್ರಕರಣವನ್ನು ಕೊಟ್ಟರೆ, ಅದರ ಬಗ್ಗೆ ತನಿಖೆ ಮಾಡಿಸುತ್ತೇನೆ.

ಅಧ್ಯಕ್ಷರು : ಜಯವಂತರವರೆ, ನಿಮ್ಮ 166(944)ನೇ ಪ್ರಶ್ನೆಯನ್ನು ತಡೆಹಿಡಿದಿದ್ದೇವೆ.

**ತಾಲ್ಲೂಕು ಕೇಂದ್ರಗಳಲ್ಲಿ ಕ್ರೀಡಾಂಗಣಗಳ ನಿರ್ಮಾಣ ಕುರಿತು**

1116 - ಡಾ|| ಎಂ.ಪಿ. ಕರ್ಕಿ (ಕುಮಟಾ) : ಮಾನ್ಯ ಯುವಜನ ಸೇವಾ ಹಾಗೂ ಕ್ರೀಡಾ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಕ್ರೀಡಾಂಗಣ ನಿರ್ಮಿಸುವ ನಿರ್ಣಯ ಸರ್ಕಾರದ ಪರಿಶೀಲನೆಯಲ್ಲಿದೆಯೇ

ಆ) ಸರ್ಕಾರಿ ಸ್ವಾಮ್ಯದಲ್ಲಿ ಸರಿಯಾದ ನಿವೇಶನ ಇಲ್ಲದಿದ್ದಲ್ಲಿ ಸಾರ್ವಜನಿಕ ನಿವೇಶನದಲ್ಲಿ ಅನುಕೂಲ ಮಾಡಿಕೊಡಲು ಕ್ರಮ ಕೈಗೊಳ್ಳುವರೇ?

ಶ್ರೀ ಅಜಯಕುಮಾರ್ ಸರ್. ನಾಯಕ್ (ಯುವಜನ ಸೇವಾ ಹಾಗೂ ಕ್ರೀಡಾ ರಾಜ್ಯಾ ಸಚಿವರು) :

ಅ) ಹೌದು

ಆ) ಸರ್ಕಾರಿ ಜಮೀನು ಇಲ್ಲದ ಸ್ಥಳಗಳಲ್ಲಿ ಸಾರ್ವಜನಿಕ ಜಮೀನನ್ನು ಇಲಾಖೆಗೆ ವರ್ಗಾವಣೆ ಮಾಡಿಕೊಂಡು ಸೂಕ್ತವಾಗಿದ್ದಲ್ಲಿ ಅಂತಹ ನಿವೇಶನದಲ್ಲಿ ಕ್ರೀಡಾಂಗಣ ನಿರ್ಮಾಣವನ್ನು ಕೈಗೆತ್ತಿಕೊಳ್ಳಲಾಗುವುದು.

ಡಾ॥ ಎಂ.ಪಿ. ಕರ್ಕಿ : ಸನ್ಮಾನ್ಯ ಸಭಾಧ್ಯಕ್ಷರೆ, ಉತ್ತರ ಕನ್ನಡ ಜಿಲ್ಲೆಯ ಕರಾವಳಿ ತಾಲ್ಲೂಕುಗಳಲ್ಲಿ ಸಮತಟ್ಟಾದ ಸ್ಥಳ ಸಿಗುವುದಿಲ್ಲ. ಅಂತಹ ಸ್ಥಳಗಳಲ್ಲಿ ಸಾರ್ವಜನಿಕರ ಉಪಯೋಗಕ್ಕೆ ಕ್ರೀಡಾಂಗಣಕ್ಕೆ ಉತ್ತೇಜನ ಕೊಡಬೇಕೆಂದು ತಾವು ಏನು ಯೋಜನೇಯನ್ನು ಹಾಕಿಕೊಂಡಿದ್ದೀರಿ, ಅಂಥ ಯೋಜನೆಗಳು ಉಪಯೋಗವಿಲ್ಲದಿರತಕ್ಕಂತಹವು ಎಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಅದಕ್ಕಾಗಿ ಸಾರ್ವಜನಿಕ ಸಂಸ್ಥೆಗಳಲ್ಲಿ ಅಂಥ ಸ್ಥಳವಿದ್ದರೆ ಅಲ್ಲಿ ಕ್ರೀಡಾಂಗಣಗಳನ್ನು ನಿರ್ಮಾಣ ಮಾಡುವುದಕ್ಕೆ ಆಗುತ್ತದೆಯೆ? ಸಾರ್ವಜನಿಕ ಸಂಸ್ಥೆಗಳ ಬೈಲಾಗಳಲ್ಲಿ ಸರ್ಕಾರಕ್ಕೆ ಹಸ್ತಾಂತರ ಮಾಡುವುದಕ್ಕೆ ಸ್ವಲ್ಪ ತೊಂದರೆಯಿದೆ. ಅಂತಹ ಸ್ಥಳಗಳನ್ನು ಪರಿಶೀಲಿಸಿ, ಆ ಸ್ಥಳಗಳಲ್ಲಿ ಈಗಿರತಕ್ಕಂತಹ ಕಾನೂನನ್ನು ಸ್ವಲ್ಪ ಬದಲಾಯಿಸಿಕೊಂಡು, ಕ್ರೀಡಾಂಗಣವನ್ನು ನಿರ್ಮಿಸಲು ಸರ್ಕಾರ ಯೋಚಿಸುತ್ತುದೆಯೆ? ಅದರ ನಿಯಂತ್ರಣಕ್ಕೆ ಆ ಕಮಿಟಿಯಲ್ಲಿ ಬೇಕಾದರೆ ಒಬ್ಬ ಅಧಿಕಾರಿಯನ್ನು ನೇಮಿಸಿ ಎಲ್ಲಾ ಸಾರ್ವಜನಿಕರಿಗೆ ಉಪಯೇಗವಾಗತಕ್ಕಂಥಹ ಕೆಲಸವನ್ನು ಸರ್ಕಾರ ಮಾಡಿಕೊಡುತ್ತಿದೆಯ.? ಆ ತಾಲ್ಲೂಕುಗಳಲ್ಲಿ ಸಾರ್ವಜನಿಕರಿಗೆ ಕ್ರೀಡಾಂಗಣಗಳ ಬಗ್ಗೆ ಸಹಕಾರ ಅಥವಾ ಸೌಲಭ್ಯ ನೀಡಲು ಸರ್ಕಾರ ಪ್ರವೃತ್ತವಾಗುತ್ತದೆಯೆ? ಎನ್ನುವ ಪ್ರಶ್ನೆ ಕೇಳುತ್ತಿದ್ದೇನೆ.

ಶ್ರೀ ಅಜಯಕುಮಾರ್ ಸರ್. ನಾಯಕ್ : ಸನ್ಮಾನ್ಯ ಸಭಾಪತಿಗಳೆ, ಯಾವ ತಾಲ್ಲೂಕುಗಳಲ್ಲಿ ನಮ್ಮ ಸರ್ಕಾರ ಜಮೀನು ಲಭ್ಯವಿರುವುದಿಲ್ಲ ಅಂತಹ ತಾಲ್ಲೂಕುಗಳಲ್ಲಿ ಖಾಸಗಿ ಸಂಸ್ಥೆಗಳ ಸ್ಥಳವಿದ್ದರೆ ವಿದ್ಯಾ ಸಂಸ್ಥೆಗಳ ಸ್ಥಳವಿದ್ದರೆ ಆ ಸ್ಥಳವನ್ನು ನಮ್ಮ ಇಲಾಖೆಗೆ ಹಸ್ತಾಂತರ ಮಾಡಿಕೊಂಡು ಅಂಥ ಸ್ಥಳಗಳಲ್ಲಿ ತಾಲ್ಲೂಕು ಕ್ರೀಡಾಂಗಣವನ್ನು ನಿರ್ಮಾಣ ಮಾಡಲಿಕ್ಕೆ ಸಿದ್ಧವಿದ್ದೇವೆ.

ಡಾ॥ ಎಂ.ಪಿ. ಕರ್ಕಿ : ಮಾನ್ಯ ಅಧ್ಯಕ್ಷರೆ, ನಾನು ಹೇಳತಕ್ಕಂತದ್ದು ಸಾರ್ವಜನಿಕ ಸಂಸ್ಥೆಗಳ ಬೈಲಾಗಳಲ್ಲಿ ಹಸ್ತಾಂತರ ಮಾಡುವುದಕ್ಕೆ ಅವಕಾಶವಿರುವುದಿಲ್ಲ.

ಶ್ರೀ ಅಜಯಕುಮಾರ್ ಸರ್. ನಾಯಕ್ : ಸಾಕಷ್ಟು ಕಡೆ ಹಾಗೇ ಕೆಲಸ ಮಾಡಿದ್ದೇವೆ. ಸಾಕಷ್ಟು ಕಡೆ ಸರ್ಕಾರಿ ಜಮೀನಿಲ್ಲ. ಖಾಸಗಿ ಸಂಸ್ಥೆಗಳು ತಮ್ಮಲ್ಲಿರತಕ್ಕಂತಹ ಜಾಗವನ್ನು ಸರ್ಕಾರಕ್ಕೆ ಹಸ್ತಾಂತರ ಮಾಡಿದಲ್ಲಿ ತಾಲ್ಲೂಕು ಕ್ರೀಡಾಂಗಣಗಳ ಕೆಲಸವನ್ನು ಮಾಡಲಿಕ್ಕೆ ಪ್ರಯತ್ನ ಮಾಡುತ್ತೇವೆ.

ಡಾ॥ ಎಂ,ಪಿ, ಕರ್ಕಿ : ಅಧ್ಯಕ್ಷರೆ, ಮೂಲವಾಗಿರುವುದು ಕ್ರೀಡೆಗೆ ಉತ್ತೇಜನ ಕೊಡತಕ್ಕಂತದ್ದು. ಸರ್ಕಾರವೇ ಮಾಡಬೇಕು ಎನ್ನತಕ್ಕಂಥಹ ನಿಯಮವೇನಿಲ್ಲ, ಸರ್ಕಾರದ ಜಾಗದಲ್ಲೇ ಮಾಡಬೇಕೆಂದು ನಿಯಮವೇನಿಲ್ಲ. ನಿಯಮಕ್ಕೆ ಒಂದು ತಿದ್ದುಪಡಿಯನ್ನು ತಂದು ಎಲ್ಲಿ ಸಾಧ್ಯವೋ ಅಲ್ಲಿಮಾಡಿ. ಎಲ್ಲಿ ಸಹಕಾರ ಸಂಸ್ಥೆಗಳು, ಸಾರ್ವಜನಿಕ ಸಂಸ್ಥೆಗಳಿರತಕ್ಕಂತಹ ಜಾಗದಲ್ಲಿ ಕೊಡುವುದಕ್ಕೋಸ್ಕರ, ಒಂದು ಸಣ್ಣ ತಿದ್ದುಪಡಿ ತಂದರೆ ಜನಕ್ಕೆ ಅನುಕೂಲವಾಗುತ್ತದೆ ಹಾಗೂ ಪ್ರಯೋಜನವಾಗುತ್ತದೆ ಎನ್ನತಕ್ಕ ಮಾತನ್ನು ಹೇಳುತ್ತಿದ್ದೇನೆ.

ಅಧ್ಯಕ್ಷರು : ಇದು ಒಳ್ಳೆಯ ಸಲಹೆ.

ಶ್ರೀ ಅಜಯಕುಮಾರ್ ಸರ್. ನಾಯಕ್ : ಮಾನ್ಯ ಸದಸ್ಯರ ಸಲಹೆಯನ್ನು ಪರಿಶೀಲನೆ ಮಾಡುತ್ತೇನೆ.

(ಪ್ರಶ್ನೆ ಸಂಖ್ಯೆ : 168(904) (ಮಾನ್ಯ ಸದಸ್ಯರು ಗೈರು ಹಾಜರಾಗಿದ್ದರು)

ಅಧ್ಯಕ್ಷರು : ಚೀಫ್ ವಿಪ್‌ರವರು ದಯಮಾಡಿ ಗಮನಿಸಬೇಕು. ಕೃಷ್ಣಮೂರ್ತಿಯವರು ಮೂರುಸಲ ಪ್ರಶ್ನೆ ಕೇಳಿದ್ದಾರೆ, ಅವರು ಇಲ್ಲಿ ಸದನದಲ್ಲಿ ಇರುವುದಿಲ್ಲ. ನಾನು ನಿಮಗೆ ಹೇಳುತ್ತಿದ್ದೇನೆ. ಯಾರಾದರೂ ಪ್ರಶ್ನೆಗಳನ್ನು ಕಳುಹಿಸಿ ಸದನಕ್ಕೆ ಬರುವುದಿಲ್ಲವೋ ಅಂಥಹವರ ಪ್ರಶ್ನೆಗಳನ್ನು ಎಂಟರ್ ಟೈನ್ ಮಾಡುವುದಿಲ್ಲ. ನೀವು ನಿಮಗೆ ಅನುಮತಿ ಕೊಟ್ಟಿಲ್ಲ. ಒಂದು ವೇಳೆ ಮೊದಲೇ ತಿಳಿಸಿದ್ದರೆ ತಮಗೆ ಮಾತನಾಡಲು ಅವಕಾಶ ಕೊಡುತ್ತಿದ್ದೆ. ನಿಮ್ಮ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮತ್ತೊಂದು ಸಲ ಕಳುಹಿಸಿ.

**ಕೊಡಗಿನಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ವೈದ್ಯರುಗಳನ್ನು ನೇಮಕ ಮಾಡುವ ಬಗ್ಗೆ**

1070 - ಶ್ರೀ ಡಿ.ಎಸ್. ಮಾದಪ್ಪ (ಮಡಿಕೇರಿ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಕೊಡಗಿನಲ್ಲಿ ಜಿಲ್ಲಾ ಆಸ್ಪತ್ರೆ ಹೊರತುಪಡಿಸಿ ಎಷ್ಟು ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದು ಎಷ್ಟು ವೈದ್ಯರುಗಳ ಕೊರತೆ ಇದೆ? ಇದನ್ನು ಭರ್ತಿ ಮಾಡಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಆ) ಒಟ್ಟು ಎಷ್ಟು ದಾದಿಯರ ಮತ್ತು 'ಡಿ' ಗ್ರೂಪ್ ನೌಕರರ ಕೊರತೆ ಇದೆ? ಇವುಗಳನ್ನು ಭರ್ತಿ ಮಾಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?

ಇ) ಕೊಡಗು ಜಿಲ್ಲೆಯ ಎಲ್ಲಾ ಆಸ್ಪತ್ರೆಗಳಿಗೆ ಕಳೆದ ವರ್ಷ ಸರಬರಾಜುಗೊಂಡ ಔಷಧಿಗಳ ಮೊತ್ತವೆಷ್ಟು? ಪ್ರಸ್ತುತ ಈ ಸಾಲಿನಲ್ಲಿ ಎಷ್ಟು ಔಷಧಿಗಳನ್ನು ಸರಬರಾಜು ಮಾಡಲಾಗಿದೆ.

ಈ) ಕೊಡಗಿನಲ್ಲಿ ಎಷ್ಟು ಮಹಿಳಾ ವೈದ್ಯರುಗಳ ಹುದ್ದೆ ಖಾಲಿ ಇದೆ? ಇದನ್ನು ಭರ್ತಿ ಮಾಡಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಪ್ರಾಥಮಿಕ ಆರೋಗ್ಯ ಕೇಂದ್ರ - 28

ಖಾಲಿ ಇರುವ ವೈದ್ಯರ ಹುದ್ದೆಗಳು -14

ಇದರ ಪೈಕಿ 10 ವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ದಿನಾಂಕ 10-2-95ರ ಅಧಿಸೂಚನೆಯಲ್ಲಿ ನೇಮಕ ಮಾಡಲಾಗಿದೆ.

ಆ) ಶುಶ್ರೂಷಾ ದಾದಿಯರು - 4

ಗ್ರೂಪ್-ಡಿ - 20

ಸಾರ್ವತ್ರಿಕ ವರ್ಗಾವಣೆಯ ಸಮಯದಲ್ಲಿ ಕೆಲವೊಂದು ಹುದ್ದೆಗಳನ್ನು ತುಂಬಲು ಕ್ರಮ ಕೈಗೊಳ್ಳಲಾಗುವುದು. ಆದಷ್ಟು ಬೇಗ ಉಳಿದ ಹುದ್ದೆಗಳನ್ನು ತುಂಬಲಾಗುವುದು.

ಇ) 1993-94ನೇ ಸಾಲಿನಲ್ಲಿ ರೂ, 47,06,990-55

1994-95ನೇ ಸಾಲಿನಲ್ಲಿ ರೂ. 44,78,432-94

ಈ) 2 ಮಹಿಳಾ ವೈದ್ಯರ ಹುದ್ದೆಗಳು ಖಾಲಿ ಇದ್ದು, ಒಂದು ಹುದ್ದೆಯನ್ನು ದಿನಾಂಕ 10-2-95ರ ಅಧಿಸೂಚನೆಯಲ್ಲಿ ತುಂಬಲಾಗಿದೆ. ಸಾರ್ವತ್ರಿಕ ವರ್ಗಾವಣೆಯ ಸಮಯದಲ್ಲಿ ಮತ್ತೊಂದು ತುಂಬಲು ಕ್ರಮ ಕೈಗೊಳ್ಳಲಾಗುವುದು.

ಶ್ರೀ ಡಿ.ಎಸ್. ಮಾದಪ್ಪ : ಸನ್ಮಾನ್ಯ ಅಧ್ಯಕ್ಷರೆ, ಮಾನ್ಯ ಸಚಿವರು ಏನು ಉತ್ತರ ಕೊಟ್ಟಿದ್ದಾರೆ. ಅದು ಸತ್ಯಕ್ಕೆ ಬಹಳ ದೂರವಾಗಿದೆಯೆಂದು ಹೇಳಬಯಸುತ್ತೇನೆ. ಕೊಡಗು ಜಿಲ್ಲೆಯಲ್ಲಿ ಕನಿಷ್ಠ ಸುಮಾರು 30ಕ್ಕಿಂತಲೂ ಹೆಚ್ಚು ವೈದ್ಯಾಧಿಕಾರಿಗಳ

ಕೊರತೆ ಇವೆ. ಮಾನ್ಯ [illegible]ವರು ತಮ್ಮ ಉತ್ತರದಲ್ಲಿ 10.2.95ರಲ್ಲಿ 10ಜನ ಕಿರಿಯ ವೈದ್ಯಾಧಿಕಾರಿ[illegible] ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿದ್ದೇವೆಂದು ತಿಳಿಸಿದ್ದಾರೆ. ಅವರು [illegible]ವರೆಗೂ ರಿಪೋರ್ಟ್ ಮಾಡಿಕೊಂಡಿದ್ದಾರೆಯೇ? ಎಂದು ಕೇಳಲು ಇಷ್ಟಪಡುತ್ತೇನೆ.

ಡಾ॥ ಹೆಚ್.[illegible] [illegible]ಪದೇವಪ್ಪ : ಮಾನ್ಯ ಅಧ್ಯಕ್ಷರೆ, ನನ್ನಲ್ಲಿರತಕ್ಕ ಮಾಹಿತಿ ಪ್ರಕಾರ ಕೊಡಗು [illegible]ಯಲ್ಲಿ ಸುಮಾರು 14 ವೈದ್ಯಾಧಿಕಾರಿಗಳ ಹುದ್ದೆಗಳು ಖಾಲಿ ಇವೆ. ಅದರಲ್ಲಿ [illegible]ರಲ್ಲಿ 10 ಜನರಿಗೆ ಗುತ್ತಿಗೆ ಆಧಾರದ ಮೇಲೆ ಸರ್ಕಾರ ನೇಮಕಾತಿ [illegible]ದೆ. ಇದುವರೆವಿಗೂ ಕೂಡ ಅವರ ಸರ್ಟಿಫಿಕೇಟ್‌ಗಳ ವೆರಿಫಿಕೇಶನ್ [illegible] ಮತ್ತು ಎಷ್ಟು ವೈದ್ಯಾಧಿಕಾರಿಗಳನ್ನು ನೇಮಕ ಮಾಡಿದ್ದೀರೆಂದು ಕೇಳಿದ್ದೇವೆ. [illegible] ಮಹಿಳಾ ವೈದ್ಯಾಧಿಕಾರಿಗಳ ಹುದ್ದೆಗಳು ಖಾಲಿ ಇವೆ. ಆ ಹುದ್ದೆಗಳನ್ನು [illegible] ಮಾಡಲು ಆದೇಶ ಕೊಟ್ಟಿದ್ದೇವೆ. ಈಗಾಗಲೇ ಅಲ್ಲಿ ವೈದ್ಯಾಧಿಕಾರಿಗಳು ರಿಪೋರ್ಟ್ ಮಾಡಿಕೊಂಡಿದ್ದಾರೆಂದು ನಮಗೆ ವರದಿ ಬಂದಿದೆ.

ಶ್ರೀ [illegible] ಮಾದಪ್ಪ : ಸನ್ಮಾನ್ಯ ಅಧ್ಯಕ್ಷರೆ, ಕೊಡಗು ಜಿಲ್ಲೆಯ ಸೋಮವಾರ [illegible] ಉದಾಹರಣೆಗೆ ಹೇಳುವುದಾದರೆ ಅಲ್ಲಿಯ ನಗರದಲ್ಲಿರುವ [illegible]ಲ್ಲಿ ಏಳು ಹುದ್ದೆಗಳು ಖಾಲಿ ಇವೆ. ಸುಂಟಿಕೊಪ್ಪದಲ್ಲಿ 3 [illegible] ಶಾಂತಹಳ್ಳಿಯಲ್ಲಿ 2 ಹುದ್ದೆಗಳು ಖಾಲಿ ಇವೆ. ಹೀಗೆ [illegible] ಹೇಳುತ್ತಿದ್ದೇನೆ. ಅದೇ ರೀತಿ ಮಡಿಕೇರಿ ತಾಲ್ಲೂಕಿನಲ್ಲಿ 15 ವೈದ್ಯಾಧಿಕಾರಿಗಳ [illegible] ಕೊರತೆ ಇದೆ. ಕೊಡಗು ಜಿಲ್ಲೆ ಮಲೆನಾಡು ಪ್ರದೇಶ[illegible] [illegible]ಕಾರಿಗಳನ್ನು ನೇಮಿಸುವಾಗ ದಯವಿಟ್ಟು ಏಪ್ರಿಲ್ ತಿಂಗಳಿನಲ್ಲಿ [illegible] ಹೋದರೆ ಅಲ್ಲಿ ವೈದ್ಯಾಧಿಕಾರಿಗಳಿಗೆ ಇರುವಂಥ ವಸತಿ ಗೃಹವೇನು, [illegible] ಬಹಳಷ್ಟು ಹೀನಾಯ ಸ್ಥಿತಿಯಲ್ಲಿದೆ. ಯಾವ ವೈದ್ಯಾಧಿಕಾರಿಗಳೂ ಸಹ ಅಲ್ಲಿಗೆ ಬಂದು ಇರುವುದಕ್ಕೆ ಅಪೇಕ್ಷಿಸುವುದಿಲ್ಲ. ಅವರು ರಜೆ ಮೇಲೆ ಹೋಗುತ್ತಾನೆ. ಹಾಗಾಗಿ, ತಾವು ಏನು ಕೊಡಗು ಜಿಲ್ಲೆಗೆ ವೈದ್ಯಾಧಿಕಾರಿಗಳನ್ನು [illegible]ತ್ತೀರಿ, ಅವರನ್ನು ಕೂಡಲೇ ನೇಮಿಸಬೇಕಾಗುತ್ತದೆ. ಬಹಳಷ್ಟು ವೈದ್ಯಾಧಿಕಾರಿಗಳ ವಸತಿ ಗೃಹಗಳು ಹೀನಸ್ಥಿತಿಯಲ್ಲಿರುವುದರಿಂದ ಅವುಗಳ ದುರಸ್ತಿ ಕಾರ್ಯದ ಬಗ್ಗೆ ತಾವು ದಯವಿಟ್ಟು ಆದಷ್ಟು ಬೇಗ ಕ್ರಮ ಕೈಗೊಳ್ಳಬೇಕು. [illegible] ಜಿಲ್ಲಾ [illegible]ದಲ್ಲಿ 500 ಹಾಸಿಗೆಗಳ ಹೊಸ ಆಸ್ಪತ್ರೆಯೇನಿದೆ, ಅಲ್ಲಿ 17 ವೈದ್ಯಾಧಿಕಾರಿಗಳ ಕೊರತೆ ಇದೆ. ಇದಲ್ಲದೆ,

[illegible]ತರ ಪ್ರದೇಶದಲ್ಲಿ ವಸತಿ ಗೃಹಗಳು ಇಲ್ಲದಿರುವುದರಿಂದ [illegible]ಗೆ ಹೋಗಲು ಬಯಸುವುದಿಲ್ಲ. ಆ ನಿಟ್ಟಿನಲ್ಲಿ [illegible]ಧಿಕಾರಿಗಳ ವಸತಿ ಗೃಹವನ್ನು ದುರಸ್ತಿಪಡಿಸುವುದಕ್ಕೆ [illegible]ಗಾಲ ಪ್ರಾರಂಭ ಆಗುವುದಕ್ಕೆ ಮೊದಲು ಆ ಹುದ್ದೆಗಳನ್ನು ನೇಮಕ ಮಾಡಬೇಕಾಗುತ್ತದೆ. ಈ [illegible]ಗೆ ಇಲದಿದ್ದರೆ ಅವರು ರಜೆ ಮೇಲೆ [illegible], [illegible]ದು ಮಡಿಕೇರಿ ತಾಲ್ಲೂಕಿನಲ್ಲಿ ಬರತಕ್ಕಂಥ [illegible] ಆರೋಗ್ಯ ಕೇಂದ್ರ ಕೂಡ [illegible]ಆಗಿದೆ. ಅಲ್ಲಿ [illegible]ಣಿತರಾದ ವೈದ್ಯರನ್ನು ಬಿಟ್ಟರೆ ಬೇರಾರೂ ಇಲ್ಲ, ಶಸ್ತ್ರಚಿಕಿತ್ಸೆ [illegible] ಶವ ಪರೀಕ್ಷೆ ಮಾಡುವುದಕ್ಕಾಗಲೀ ಅರ್ಹತೆ ಹೊಂದಿರುವ [illegible] ಆದುದರಿಂದ, ತಾವು ಗ್ರಾಮಾಂತರ ಪ್ರದೇಶಗಳಲ್ಲಿರತಕ್ಕ ವೈದ್ಯಾಧಿಕಾರಿಗಳನ್ನು ನೇಮಕ ಮಾಡಬೇಕೆಂದು ಈ ಮೂಲಕ [illegible] ವರ್ಗಾವಣೆ ಸಮಯದಲ್ಲಿ ಖಾಲಿ ಬಿದ್ದಿರತಕ್ಕಂತಹ ಹುದ್ದೆಗಳನ್ನು

ತುಂಬಲಿಕ್ಕೆ ಕ್ರಮ ತೆಗೆದುಕೊಳ್ಳುವುದರ ಜೊತೆಗೆ ಐ.ಪಿ.ಪಿ. 9 ರಲ್ಲಿ ಕಟ್ಟಡಗಳ ನಿರ್ಮಾಣದ ವಿಚಾರದಲ್ಲಿ ಪರಿಶೀಲಿಸಿ ಕ್ರಮಗಳನ್ನು ಕೈಗೊಳ್ಳುವುದಾಗಿ ತಮ್ಮ ಮೂಲಕ ತಿಳಿಸಬಯಸುತ್ತೇನೆ.

ಅಧ್ಯಕ್ಷರು : ಕಂಟ್ರಾಕ್ಟ್ ಬೇಸಿಸ್ ಮೇಲೆ 10-2-1995ರಲ್ಲಿ ಅಂತ ತಾವು ಹೇಳಿದ್ದೀರಿ. ಅದು ಹೋದ ವರ್ಷ ಪ್ರಾರಂಭವಾಗಿರುವುದು, ಡಾಕ್ಟರ್‌ಗಳನ್ನು ಭರ್ತಿ ಮಾಡುತ್ತೇವೆ ಅಂತ ಹೇಳಿದ್ದೀರಿ, ಆದರೆ ಇವತ್ತಿನವರೆಗೂ ಆಗೇ ಇಲ್ಲ. 10-2-95 ನಂತರ ಮತ್ತೆ ಈಗ ಎರಡು ತಿಂಗಳು ಆಗಿದೆ. ಎಲ್ಲ ಊರುಗಳಲ್ಲೂ, ನನ್ನ ಕ್ಷೇತ್ರದ್ದೂ ಸೇರಿಸಿಕೊಂಡು ಹೇಳುತ್ತಾ ಇದ್ದೇನೆ. ನಾವು ಹೇಳುತ್ತಲೇ ಇರುತ್ತೇವೆ ಡಾಕ್ಟರುಗಳು ಬರುತ್ತಾರೆ, ಪೋಸ್ಟಿಂಗ್ ಆಗುತ್ತದೆ ಅಂತ. ಆದರೆ ಇದು ಆಗುತ್ತಾ ಇಲ್ಲ. ಇನ್ನು ಎಷ್ಟು ದಿವಸ ಬೇಕು ಅವರಿಗೆ ಸರ್ಟಿಫಿಕೇಟ್ ವೆರಿಫೈ ಮಾಡಲಿಕ್ಕೆ? ಸಿ.ಬಿ.ಐ.ಗೆ ಕಳುಹಿಸಿದ್ದೀರಾ?

ಶ್ರೀ ಹೆಚ್.ಸಿ. ಮಹದೇವಪ್ಪ : 10-2-1995ರಲ್ಲಿ ಸುಮಾರು 219 ವೈದ್ಯಾಧಿಕಾರಿಗಳನ್ನು ಕಂಟ್ರಾಕ್ಟ್ ಆಧಾರದ ಮೇಲೆ ನೇಮಕಮಾಡಿಕೊಂಡಿದ್ದೇವೆ. ಅವರು ಆಯಾಯ ಜಿಲ್ಲೆಗಳಲ್ಲಿ ತೋರಿಸಿರತಕ್ಕಂತಹ ಗ್ರಾಮೀಣ ಪ್ರದೇಶದ ಆಸ್ಪತ್ರೆಗಳಿಗೆ ಹೋಗಿ ಅವರು ಡ್ಯೂಟಿ ರಿಪೋರ್ಟ್ ಮಾಡಬೇಕು ಅಂತ ಹೇಳಿದ್ದೇರೆ. ಮತ್ತು ನಾವು ನೇಮಕ ಮಾಡಿದಂಥ ವೈದ್ಯರುಗಳು ಹೋಗಿ ಅಲ್ಲಿ ರಿಪೋರ್ಟ್ ಮಾಕೊಳ್ಳುವುದಿಲ್ಲ, ಅಂಥವರ ಬಗ್ಗೆ ತಕ್ಷಣ ಜಿಲ್ಲಾ ಆರೋಗ್ಯ ಅಧಿಕಾರಿಗಳು ನಮಗೆ ತಿಳಿಸಬೇಕು, ಎಂದು ಹೇಳಿದ್ದೇವೆ. ಮತ್ತೇ ಖಾಲಿ ಬಿದ್ದಿರತಕ್ಕಂಥ ಹುದ್ದಗಳಿಗೆ ಅಂಥವರುಗಳು ಹೋಗುವುದಕ್ಕೆ ಇಷ್ಟವಿಲ್ಲದಿದ್ದರೆ, ಮತ್ತೆ ಇನ್ನೊಂದು ಬ್ಯಾಚನ್ನು ತೆಗೆದುಕೊಳ್ಳುವುದಕ್ಕೆ ಪ್ರಯತ್ನ ಮಾಡುತ್ತೇನೆ. ಈಗಾಗಲೇ ಖಾಲಿ ಇರತಕ್ಕಂಥ ಹುದ್ದೆಗಳ ಬಗ್ಗೆ ಅನೇಕ ಮಾನ್ಯ ಸದಸ್ಯರುಗಳು ಈ ಮನೆಯಲ್ಲಿ ಮನೆಯಲ್ಲಿ ಪ್ರಶ್ನೆ ಮಾಡಿದ್ದಾರೆ. ದಿನಾಂಕ 1-1-1995ಕ್ಕೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಗೆ ಎಲ್ಲ ವರ್ಗದಲ್ಲಿ ಖಾಲಿ ಇರುವ ಒಟ್ಟು ಹುದ್ದೆಗಳು, ಶ್ರೇಣಿ ಎ,ಬಿ,ಸಿ,ಡಿ, ಇವುಗಳ ಪೈಕಿ ಈ ಕೆಳಕಂಡ ಹುದ್ದೆಗಳು ಆಸ್ಪತ್ರೆ ಹಾಗೂ ರೋಗಿಗಳ ದೃಷ್ಟಿಯಿಂದ ಅತ್ಯಗತ್ಯವಾಗಿದ್ದು, ಈ ಪೈಕಿ ಸುಮಾರು 3,000 ಹುದ್ದೆಗಳನ್ನು ತುಂಬಲು ಈಗಾಗಲೆ ಅನುಮೋದನೆ ಸಿಕ್ಕಿರುತ್ತದೆ. ರೋಸ್ಟರ್ ಬಿಡುಗಡೆಯಾದ ತಕ್ಷಣವೇ ಈ ಹುದ್ದೆಗಳನ್ನು ತುಂಬಲಾಗುತ್ತದೆ.

ಅಧ್ಯಕ್ಷರು : ಕಾಂಟ್ರಾಕ್ಟ್ ಬೇಸಿಸ್ ಮೇಲೆ ಅಪಾಯಿಂಟ್‌ಮೆಂಟ ಮಾಡಲಿಕ್ಕೆ ತಾವು ಆದೇಶ ಹೊರಡಿಸಿದ್ದೀರಿ. ಅದರಲ್ಲೂ ಕೂಡ ಬಹುತೇಕ ಜನ ನಗರಗಳಲ್ಲಿ ಯಾರು ವಿದ್ಯಾರ್ಥಿಗಳು ಇದ್ದಾರೆ ಅವರು ಅಪ್ಲೈ ಮಾಡಿಕೊಂಡಿದ್ದಾರೆ. ಮೆರಿಟ್ ಆದ ತಕ್ಷಣ ಹಳ್ಳಿಗಳಲ್ಲಿ ಇದ್ದು ಪಾಸ್ ಮಾಡಿಕೊಂಡಿರುವವರಿಗೆ ಯಾರಿಗೂ ಸಿಕ್ಕಿಲ್ಲ. ಅರರು ಕೆಲಸಕ್ಕೆ ಅಪ್ಲೈ ಮಾಡುತ್ತಾರೆ ಆದರೆ ಅವರಿಗೆ ಬರುವುದಿಲ್ಲ, ಹಳ್ಳಿಗಳಲ್ಲಿ ಹೋಗಿ ಕೆಲಸಮಾಡಲಿಕ್ಕೆ ನೀವು ಆದೇಶಕೊಡಿ ನಿಮ್ಮ ಅಧಿಕಾರಿಗಳಿಗೆ ಯಾರು ಸೆಲೆಕ್ಟ್ ಆಗಿದ್ದಾರೆ, ಅವರಿಗೆ ಎಂಟು ದಿವಸ ಟೈಮ್ ಕೊಡಿ ಬರದೇ ಹೋದರೆ ಅವರ ಹೆಸರು ಕಿತ್ತುಹಾಕಿ. ಯಾರು ಹೋಗಿ ಅಲ್ಲಿ ಕೆಲಸಮಾಡುತ್ತಾರೋ, ಅಂಥ ಅವರಿಗೆ ಅವಕಾಶ ಮಾಡಿಕೊಡಬೇಕು. ತಿಂಗಳುಗಟ್ಟಲೆ ಇಟ್ಟುಕೊಂಡರೆ ತೊಂದರೆಯಾಗುತ್ತದೆ. ಎಲ್ಲಾ ಸದಸ್ಯರುಗಳ ಈ ಸಂಬಂಧವಾಗಿ ಪ್ರಶ್ನೆ ಕೇಳಲು ಕೈ ಎತ್ತಿರುವುದರಿಂದ ನಾನೇ ನಿಮ್ಮೆಲ್ಲರ ಪರವಾಗಿ ಹೇಳುತ್ತಾ ಇದ್ದೀನಿ. ಆದ್ದರಿಂದ ಮಾನ್ಯ ಮಂತ್ರಿಗಳಿಗೆ ಆದಷ್ಟು ಬೇಗ ಆ ಹುದ್ದೆಗಳನ್ನು ಭರ್ತಿ ಮಾಡಿಸುವುದಕ್ಕೆ ವ್ಯವಸ್ಥೆ ಮಾಡಿಸಿ.

ಡಾ|| ಹೆಚ್.ಸಿ. ಮಹದೇವಪ್ಪ : ಆಗಬಹುದು.

**ಕೊಪ್ಪಳ ನಗರದ ಆಸ್ಪತ್ರೆಯಲ್ಲಿ ಮಹಿಳಾ ವೈದ್ಯಾಧಿಕಾರಿಗಳು ಹಾಗೂ ದಂತ ವೈದ್ಯಾಧಿಕಾರಿಗಳು ಇಲ್ಲದಿರುವ ಬಗ್ಗೆ**

1242 - ಶ್ರೀ ಸಂಗಣ್ಣ ಕರಡಿ (ಕೊಪ್ಪಳ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಕೊಪ್ಪಳ ನಗರದ ಆಸ್ಪತ್ರೆಯಲ್ಲಿ ಮಹಿಳಾ ವೈದ್ಯಾಧಿಕಾರಿಗಳು ಮತ್ತು ದಂತ ವೈದ್ಯಾಧಿಕಾರಿಗಳು ಇಲ್ಲದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಆ) ಹಾಗಿದ್ದಲ್ಲಿ, ಖಾಲಿಯಿರುವ ವೈದ್ಯಾಧಿಕಾರಿಗಳನ್ನು ನೇಮಕ ಮಾಡುವ ಬಗ್ಗೆ ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಹೌದು

ಆ) ಸಾರ್ವತ್ರಿಕ ವರ್ಗಾವಣೆಯ ಸಮಯದಲ್ಲಿ ಕ್ರಮ ತೆಗೆದುಕೊಳ್ಳಲಾಗುವುದು.

ಶ್ರೀ ಸಂಗಣ್ಣ ಕರಡಿ : ಸರ್ಕಾರದವರು ಉತ್ತರವನ್ನು ಕೊಟ್ಟಿದ್ದಾರೆ, ಆದರೆ ಸಾರ್ವತ್ರಿಕ ವರ್ಗಾವಣೆ ಸಮಯದಲ್ಲಿ ಇವುಗಳನ್ನು ತುಂಬುತ್ತೇವೆ ಎನ್ನುವ ಮಾತನ್ನು ಹೇಳಿದ್ದಾರೆ. ಆದರೆ ಇವತ್ತಿನ ಒಂದು ಆಸ್ಪತ್ರೆ ವ್ಯವಸ್ಥೆಯನ್ನು ನೋಡಿದ್ದರೆ ಅತ್ಯಂತ ಹೀನ ಪರಿಸ್ಥಿತಿಯಲ್ಲಿದೆ. ಮಾನ್ಯ ಸಚಿವರು ಕೂಡ ಆ ಆಸ್ಪತ್ರೆಗೆ ಭೇಟಿ ನೀಡಿದ್ದರು. ಆ ಸಂದರ್ಭದಲ್ಲಿ ಇವರು ಒಬ್ಬ ಮಹಿಳಾ ವೈದ್ಯಾಧಿಕಾರಿಯನ್ನು ಮತ್ತು ದಂತ ವೈದ್ಯಾಧಿಕಾರಿಯನ್ನು ತುಂಬುವ ಒಂದು ಮಾತನ್ನು ಹೇಳಿದ್ದರು. ಆದರೆ ಇದುವರೆಗೂ ಇದು ಕಾರ್ಯಗತವಾಗಿಲ್ಲ. ಅದಕ್ಕೆ ಮಾನ್ಯ ಸಚಿವರು ಉತ್ತರವನ್ನು ಕೊಡಬೇಕು.

ಡಾ|| ಹೆಚ್.ಸಿ. ಮಹದೇವಪ್ಪ : ಮಾನ್ಯ ಸದಸ್ಯರು ಹೇಳಿದಂತಹ ಒಬ್ಬ ಮಹಿಳಾ ವೈದ್ಯಾಧಿಕಾರಿ ಮತ್ತು ದಂತ ವೈದ್ಯಾಧಿಕಾರಿಯನ್ನು ನೇಮಿಸಲಿಕ್ಕೆ ಶೀಘ್ರದಲ್ಲಿಯೇ ಕ್ರಮ ಕೈಗೊಳ್ಳುತ್ತೇನೆ.

ಶ್ರೀ ಸಂಗಣ್ಣ ಕರಡಿ : ಮಾನ್ಯ ಅಧ್ಯಕ್ಷರೇ, ಕಾಂಟ್ರಾಕ್ಟ್ ಬೇಸಿಸ್ ಮೇಲೆ ಆರ್ಡರ್ ಮಾಡಿದವರು, ಯಾರೂ ಅಲ್ಲಿ ಬಂದು ತರ್ಕ ಮಾಡಲಿಕ್ಕೆ ತಯಾರಿಲ್ಲ. ಸರ್ಕಾರ ಯಾವುದೆ ಬಿಗಿ ಕ್ರಮ ತೆಗೆದುಕೊಳ್ಳದಿದ್ದರೆ ಇವತ್ತು ಗ್ರಾಮೀಣ ಭಾಗದಲ್ಲಿ ವೈದ್ಯಾಧಿಕಾರಿಗಳನ್ನು ತುಂಬದಿದ್ದರೆ ಅಲ್ಲಿಯ ಜನಗಳ ಪರಿಸ್ಥಿತಿ ಏನು? ಅಥವಾ ಆರೋಗ್ಯದ ಚಿಂತನೆ ಏನು? ಇದರ ಬಗ್ಗೆ ಒಂದು ವ್ಯವಸ್ಥಿತವಾದ ಒಂದು ಕೆಲಸವನ್ನು ಮಾಡಬೇಕಾಗುತ್ತದೆ. ಇಲ್ಲ ಅಂದರೆ ನಾವು ಹಳ್ಳಿಗಾಡಿನಲ್ಲಿ ಜನ ವಾಸಿಸಲಿಕ್ಕೂ ಕೂಡ ಹಿಂದು ಮುಂದು ನೋಡುತ್ತಾರೆ. ಯಾವುದೇ ಒಂದು ಬಿಗಿ ವ್ಯವಸ್ಥೆಯನ್ನು ಕಾನೂನು ರೀತಿಯಲ್ಲಿ ಇವತ್ತು ನೀವು ನೇಮಕಾತಿ ಮಾಡುವ ಸಂದರ್ಭದಲ್ಲಿ ಇಷ್ಟು ವರ್ಷ ರೊಟೇಷನ್ ಪ್ರಕಾರ ಇಷ್ಟು ವರ್ಷ ಸೇವೆ ಮಾಡಬೇಕೆನ್ನುವ ಪದ್ಧತಿಯನ್ನು ಅಳವಡಿಸಿಕೊಂಡರೆ ಇದು ಸಾಧ್ಯವಾಗುತ್ತದೆನ್ನುವುದು ನನ್ನ ಭಾವನೆ ಇಷ್ಟು ಹೇಳಿ ನನ್ನ ಎರಡು ಮಾತನ್ನು ಮುಗಿಸುತ್ತೇನೆ.

ಅಧ್ಯಕ್ಷರು : ಎಲ್ಲ ಅದೆ ನಿಮ್ಮ ನೇಮಕಾತಿ ಪದ್ಧತಿಯನ್ನು ಬದಲಾವಣೆ ಮಾಡಿಕೊಳ್ಳಿ.

ಡಾ|| ಹೆಚ್.ಸಿ. ಮಹದೇವಪ್ಪ : ಆರೋಗ್ಯ ಇಲಾಖೆಗೆ ಅಗತ್ಯವಾಗಿ ಬೇಕಾಗಿರ ತಕ್ಕಂಥ ವೈದ್ಯ ಮತ್ತು ಅರೆವೈದ್ಯ ಸಿಬ್ಬಂದಿಗಳಿಗೆ ಈಗಾಗಲೆ 2,000 ಹುದ್ದೆಗಳನ್ನು ತುಂಬಲಿಕ್ಕೆ ಸರ್ಕಾರದಿಂದ ಅನುಮತಿ ಸಿಕ್ಕಿದೆ, ಫೈನಾನ್ಸ್ ಡಿಪಾರ್ಟಮೆಂಟ್‌ನಿಂದ ಅದರಲ್ಲಿ ವೈದ್ಯಾಧಿಕಾರಿ ಗ್ರಾಮಾಂತರ ಮತ್ತು ನಗರ ಗ್ರಾಮಾಂತರ, 308 ಮತ್ತು 168 ನಗರದಲ್ಲಿ, ಒಟ್ಟು 476 ಮತ್ತು ಲೇಡಿ ಹೆಲ್ತ್ ವಿಸಿಟರ್ 249 ಪ್ಯಾರಾ

ಮಡಿಕಲ್ ವರ್ಕರ್ಸ್ 522, ಸ್ಟಾಫ್ ನರ್ಸ್ 223, ಕಿರಿಯ ಲ್ಯಾಬ್ ಟೆಕ್ನಿಸಿಯನ್ಸ್ 620 ಹಿರಿಯ ಲ್ಯಾಬ್ ಟೆಕ್ನಿಸಿಯನ್ಸ್ 44, ಎಕ್ಸರೆ ಟೆಕ್ನಿಸಿಯನ್ಸ್ 11, ರೇಡಿಯೋ ಗ್ರಾಫರ್ಸ್ 10, ರೆಫ್ರಿಜರೇಟರ್ ಮೆಕ್ಯಾನಿಕ್ 168, 'ಡಿ' ದರ್ಜೆ ಸಿಬ್ಬಂದಿ 2,568 ಒಟ್ಟು 3,823 ಹುದ್ದೆಗಳು, ಅಗತ್ಯವಾಗಿ ನಮ್ಮ ಆರೋಗ್ಯ ಇಲಾಖೆಗೆ ಬೇಕಾಗಿರುವುದರಿಂದ (ಡಿ) ದರ್ಜೆ ಹುದ್ದೆಗಳ ಪೈಕಿ 1,000 ದಿನಗೂಲಿ ಅಭ್ಯರ್ಥಿಗಳನ್ನು ಕೃಷಿ ಮತ್ತು ರೇಷ್ಮೆ ಇಲಾಖೆಯಿಂದ ಈಗಾಗಲೇ ನೇಮಕಾತಿ ಮಾಡಿ ತೆಗೆದುಕೊಳ್ಳುತ್ತಿದ್ದೇವೆ. 2,823 ಅಗತ್ಯವಿರತಕ್ಕಂಥ ಸಿಬ್ಬಂದಿಗಳ ನೇಮಕಕ್ಕೆ ಈ ವರ್ಷದ ಅಂತ್ಯದೊಳಗೆ ಸರ್ಕಾರ ಕ್ರಮ ತೆಗೆದುಕೊಳ್ಳುತ್ತದೆಂದು ಮಾನ್ಯ ಎಲ್ಲ ಸದಸ್ಯರುಗಳಿಗೆ ತಿಳಿಸುತ್ತೇನೆ.

ಅಧ್ಯಕ್ಷರು : 1067ನೇ ಪ್ರಶ್ನೆಗೆ ಉತ್ತರಿಸಲು ಸಮಯ ಕೇಳಿದ್ದಾರೆ.

ಶ್ರೀ ಬಿ. ಶಿವರಾಮು : ಗೊತ್ತಾಯಿತು, ನಾನು ಆವಾಗ ಕೈ ಎತ್ತಿದ್ದೂ ಇದೇ ಉದ್ದೇಶ. ಈಗಾಗಲೇ ಮಂತ್ರಿಗಳು ಹೇಳಿದರು ಐ.ಪಿ.ಪಿ 9ರಲ್ಲಿ ಮಂಜೂರಾಗಿದೆ ವಸತಿ ಗೃಹಗಳನ್ನು ಕಟ್ಟುತ್ತೀರಿ ಇದನ್ನು ಕಟ್ಟುತ್ತೇವೆ ಅಂತ. ಅದು ಏನಾಯಿತು ಅಂತ ಮಂತ್ರಿಗಳಿಗೆ ಗೊತ್ತಿರಬೇಕಲ್ಲ ವಿಚಾರ ಅದು. ಜೊತೆಗೆ ನಾನು ಯಾವ ಉದ್ದೇಶದಿಂದ ಈ ಪ್ರಶ್ನೆ ಹಾಕಿದ್ದೀನಿ ಅಂತ ಯೋಚನೆ ಮಾಡಬೇಕು. ಅದಕ್ಕೆ ಅಂದಾಜನ್ನು ಕೇಳಿದ್ದೀನಿ. ಜಿಲ್ಲಾ ಪರಿಷತ್‌ಗೆ ಇನ್ನೂ ಒದಗಿಸುವಂಥದ್ದನ್ನು ಮಾಡಿಲ್ಲ. ಅದಕ್ಕೆ ಅವರು ಮಾಹಿತಿಯನ್ನು ಕೊಟ್ಟಿಲ್ಲ. ನಿಮ್ಮ ಮೂಲಕ ಪ್ರಶ್ನೆಗಳನ್ನು ಏಕೆ ಕೇಳುತ್ತೀರಿ ನಾವು? ಅದನ್ನು ತಪ್ಪಿಸತಕ್ಕಂತಹ ಕೆಲಸ ಮಾಡಿದರೆ, ನಿಮಗೆ ಗೊತ್ತೇ ಇದೆ, ಈಗ ಮಂತ್ರಿಗಳು ಸದನಕ್ಕೆ ಬರುವುದಿಲ್ಲ. ಬಹಳಷ್ಟು ಮಂತ್ರಿಗಳು ಬರುವುದಿಲ್ಲ. ಪ್ರಶ್ನೆಗಳನ್ನು ಕೇಳಿದರೆ ಉತ್ತರವನ್ನು ಕೊಡುವುದಿಲ್ಲ. ಈ ರೀತಿಯಾದರೆ ಹೇಗೆ ಕೆಲಸಗಳು ಆಗುತ್ತದೆ?

ಅಧ್ಯಕ್ಷರು : ನಾನು ಉತ್ತರ ತರಿಸಿಕೊಡುತ್ತೇನೆ, ದಯಮಾಡಿ ನನ್ನಲ್ಲಿ ವಿಶ್ವಾಸ ಇಡಿ.

ವಿರಾಜಪೇಟೆಯಲ್ಲಿ 10 ಹಾಸಿಗೆಗಳ ಆಸ್ಪತ್ರೆ ನಿರ್ಮಾಣ ಕುರಿತು

924 - ಶ್ರೀ ಹೆಚ್.ಡಿ. ಬಸವರಾಜು (ವಿರಾಜಪೇಟೆ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ವಿರಾಜಪೇಟೆ ತಾಲ್ಲೂಕಿನಲ್ಲಿನ 10 ಹಾಸಿಗೆಗಳ ಆಸ್ಪತ್ರೆಯನ್ನು ಎಷ್ಟು ವೆಚ್ಚ ಮಾಡಿ ನಿರ್ಮಾಣ ಮಾಡಿದೆ ಹಾಗೂ ಯಾವ ವರ್ಷದಲ್ಲಿ.*

*ಆ) ಈ ಆಸ್ಪತ್ರೆಯಲ್ಲಿ ಎಷ್ಟು ವೈದ್ಯಾಧಿಕಾರಿಗಳನ್ನು ನೇಮಕ ಮಾಡಿಕೊಳ್ಳಲಾಗಿದೆ ಹಾಗೂ ಎಲ್ಲಾ ಹುದ್ದೆಗಳು ಭರ್ತಿಯಾಗಿದೆಯೇ? ಹಾಗಿಲ್ಲದಿದ್ದಲ್ಲಿ ಕಾರಣವೇನು?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ವಿರಾಜಪೇಟೆಯ ಸಾರ್ವಜನಿಕ ಆಸ್ಪತ್ರೆಯು 240 ಹಾಸಿಗೆಯ ಆಸ್ಪತ್ರೆಯಾಗಿದ್ದು 1994-95ನೇ ಸಾಲಿನಲ್ಲಿ 10 ಹಾಸಿಗೆಗಳ ಮಕ್ಕಳ ವಾರ್ಡಿಗೆ 20 ಲಕ್ಷ ರೂಪಾಯಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಆ) ಈ ಆಸ್ಪತ್ರೆಗೆ 10 ವೈದ್ಯರ ಹುದ್ದೆ ಮಂಜೂರಾಗಿದ್ದು 6 ಹುದ್ದೆಗಳನ್ನು ಭರ್ತಿ ಮಾಡಲಾಗಿದೆ. 4 ಹುದ್ದೆಗಳು ಖಾಲಿ ಇದೆ

ಶ್ರೀ ಹೆಚ್.ಡಿ. ಬಸವರಾಜು : ಉತ್ತರದಲ್ಲಿ 10 ಹಾಸಿಗೆಗಳ ವಾರ್ಡನ್ನು 20 ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ 1994-95ರಲ್ಲಿ ಅನುಮೋದನೆಯನ್ನು

ನೀಡಲಾಗಿದೆ, ಎಂದು ಹೇಳಿದ್ದಾರೆ. ಇನ್ನು ಎಷ್ಟು ವರ್ಷ ಮಕ್ಕಳಿಗೆ ಒಂದು ವಾರ್ಡ ಆಗಲಿಕ್ಕೇಂತ ತಿಳಿಯಲಿಕ್ಕೆ ಇಚ್ಛಿಪಡುತ್ತೇನೆ. ಎರಡನೆಯದಾಗಿ ಈ ಆಸ್ಪತ್ರೆಯಲ್ಲಿ ನಾಲ್ಕು ಹುದ್ದೆಗಳು ಖಾಲಿ ಇವೆ ಅಂತ ಹೇಳಿದ್ದಾರೆ. ಈ 4 ಹುದ್ದೆಗಳು ಎಷ್ಟು ವರ್ಷದಿಂದ ಖಾಲಿ ಇವೆ ಅಂತ ತಮಗೆ ಗೊತ್ತಿದೆ. ಅದರ ಬಗ್ಗೆ ನಾನು ಹೇಳುವುದಿಲ್ಲ. ಆದಷ್ಟು ಬೇಗ ಅಂದರೆ ಎಷ್ಟು ದಿನಗಳಲ್ಲಿ ತಾವು ಇದನ್ನು ಭರ್ತಿ ಮಾಡುತ್ತೀರ ಎನ್ನುವುದು ಮತ್ತು ಕಾನ್ನೂರು ಆಸ್ಪತ್ರೆಯಲ್ಲಿ ಒಂದು 10 ಹಾಸಿಗೆಗಳ ಕಟ್ಟಡ ಕಟ್ಟಿದ್ದಾರೆ, ಅಲ್ಲಿ ಯಾವುದೇ ಒಂದು ವೈದ್ಯಾಧಿಕಾರಿಗಳನ್ನು ನೇಮಕ ಮಾಡಿಲ್ಲ. ಮತ್ತೆ ಔಷಧಿ ಸರಬರಾಜು ವೀರಾಜಪೇಟೆ ತಾಲ್ಲೂಕಿನಲ್ಲಿ ಸಮರ್ಪಕವಾಗಿಲ್ಲ ಇಷ್ಟಕ್ಕೂ ಆರೋಗ್ಯ ಮಂತ್ರಿಗಳಿಂದ ಉತ್ತರವನ್ನು ನಿರೀಕ್ಷಿಸುತ್ತೇನೆ.

ಶ್ರೀ ಹೆಚ್.ಸಿ. ಮಹದೇವಪ್ಪ : ಮಾನ್ಯ ಅಧ್ಯಕ್ಷರೆ, ವೀರಾಜಪೇಟೆ ಜನರಲ್ ಆಸ್ಪತ್ರೆ 240 ಹಾಸಿಗೆ ಸಾಮರ್ಥ್ಯವನ್ನು ಹೊಂದಿರುತ್ತದೆ. ಸುಮಾರು 1918ರಲ್ಲಿ ನಿರ್ಮಾಣ ಮಾಡಿದ್ದು ಹಾಲಿ 1994-95ನೇ ಸಾಲಿನ ಆಯವ್ಯಯದಲ್ಲಿ ಈ ಆಸ್ಪತ್ರೆಯನ್ನು ವಿಸ್ತರಿಸುವ ದಿಸೆಯಲ್ಲಿ ಮೊದಲ ಹಂತದ ಕಾಮಗಾರಿಗಾಗಿ 20 ಲಕ್ಷ ರೂ. ವೆಚ್ಚದಲ್ಲಿ 10 ಹಾಸಿಗೆಯ ಮಕ್ಕಳ ವಾರ್ಡ ನಿರ್ಮಾಣ ಹಾಗೂ ಬ್ಲಡ್ ಬ್ಯಾಂಕ್ ನಿರ್ಮಾಣಕ್ಕಾಗಿ ಎಂದು ಸರ್ಕಾರದ ಆದೇಶ ಸಂಖ್ಯೆ : ಆಕೃಕ; 9 ; ಆಯೊಕ : 94, ಬೆಂಗಳೂರು, ದಿನಾಂಕ 4-3-94ರಲ್ಲಿ ಸರ್ಕಾರ ಆಡಳಿತಾತ್ಮಕ ಅನುಮೋದನೆ ನೀಡಿರುತ್ತದೆ. ಈ ಬಗ್ಗೆ ಮುಖ್ಯ ಇಂಜಿನಿಯರ್‌ರವರು ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಇವರ ಮಾರ್ಚ್ 10ರ ತ್ರೈಮಾಸಿಕ ಪ್ರಗತಿ ವರದಿಯಲ್ಲಿ ಡಿಸೆಂಬರ್ ಅಂತ್ಯದವರೆಗೆ ಈ ಕಾಮಗಾರಿ ಟೆಂಡರ್ ಪರಿಶೀಲನೆಯಲ್ಲಿದೆ. ಎಂದು ತಿಳಿಸಿರುವಂತೆ ಈ 10 ಹಾಸಿಗೆಗಳ ವಾರ್ಡ ಕಾಮಗಾರಿಯ ಇನ್ನೂ ಪ್ರಾರಂಬವಾಗಿರುವುದಿಲ್ಲ. ಹಾಗೂ 10 ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ಈ ಆಸ್ಪತ್ರೆಯ ಓ.ಪಿ.ಡಿ. ಹಾಗೂ ಮೆಟರ್ನಿಟಿ L ಬ್ಲಾಕ್ ನಿರ್ಮಾಣ ಎಂಬ ಸಂಚಿಕೆಯಲ್ಲಿ ಕಾಮಗಾರಿಗಳು ನಿರ್ದೇಶಕರು ಮಂಜೂರಾತಿ ನೀಡಿದ್ದು, ಈ ಕಾಮಗಾರಿಗೂ ನಾಲ್ಕನೇ ಬಾರಿಗೆ ಟೆಂಡರ್ ಕರೆಯಲಾಗಿದೆ ಎಂದು ಪ್ರಗತಿ ವರದಿಯಲ್ಲಿ ತಿಳಿಸಿರುತ್ತಾರೆ. ಈ ಕಾಮಗಾರಿ ಇನ್ನೂ ಪ್ರಾರಂಭವಾಗಿರುವುದಿಲ್ಲ. 1994-95 ಸಾಲಿಗೆ ಮೂರು ಲಕ್ಷ ರೂಗಳ ಅನುದಾನವನ್ನು ಈ ಕಾಮಗಾರಿಗೆ ಒದಗಿಸಲಾಗಿದೆ. ಕೊಡಗು ಜಿಲ್ಲೆಯ, ವೀರಾಜಪೇಟೆ ತಾಲ್ಲೂಕಿಗೆ ಒಟ್ಟು 10 ವೈದ್ಯರ ಹುದ್ದೆ ಮಂಜೂರಾಗಿದ್ದು ಈ ಪೈಕಿ 6 ಸಹಾಯಕ ಶತ್ರು ಚಿಕಿತ್ಸಕ ಹುದ್ದೆಗಳಾಗಿದ್ದು, ಈ ಎಲ್ಲ 6 ಸಹಾಯಕ ಶಸ್ತ್ರ ಚಿಕತ್ಸಕ ಹುದ್ದೆಗಳಾಗಿದ್ದು, ಈ ಎಲ್ಲ ಸಹಾಯಕ ಶಸ್ತ್ರ ಚಿಕಿತ್ಸಕ ಹುದ್ದೆಗಳನ್ನು ಭರ್ತಿ ಮಾಡಲಾಗಿದೆ. ಹಾಗೂ ಉಳಿದ ಉಪ ಶಸ್ತ್ರ ಚಿಕಿತ್ಸಕರ ಹುದ್ದೆಗಳು ಮತ್ತು ಸಿವಿಲ್ ಸರ್ಜನ್ ಹುದ್ದೆ ಖಾಲಿ ಇರುತ್ತದೆ. ಈ ಖಾಲಿ ಹುದ್ದೆಗಳನ್ನು ಏಪ್ರಿಲ್-ಮೇ 1995ರಲ್ಲಿ ಭರ್ತಿ ನೀಡುವುದರ ಮೂಲಕ, ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುವುದೆಂದು ತಿಳಿಸಬಯಸುತ್ತೇನೆ.

ಶ್ರೀ ಹೆಚ್.ಡಿ. ಬಸವರಾಜು : ಕಾನೂರ್ ಆಸ್ಪತ್ರೆ ಬಗ್ಗೆ ಯಾವುದೇ ಒಂದು ವಿವರಣೆ ನೀಡಿಲ್ಲ. ಕಾನೂರ್ ಆಸ್ಪತ್ರೆಯಲ್ಲಿ 10 ಹಾಸಿಗೆಗಳ ಕಟ್ಟಡ ಕಟ್ಟಿದ್ದಾರೆ. ಅಲ್ಲಿಗೆ ಯಾವುದೇ ವೈದ್ಯಾಧಿಕಾರಿಗಳನ್ನು ಇದುವರೆಗೂ ನೇಮಕ ಮಾಡಿಲ್ಲ. ಔಷಧಿಗಳ ಸರಬರಾಜು, ಗೋಣಿಕೊಪ್ಪ ಆಸ್ಪತ್ರೆಗೆ ಮತ್ತು ವಿರಾಜಪೇಟೆ ಆಸ್ಪತ್ರೆಗೆ ಸಮರ್ಪಕವಾಗಿ ಆಗುತ್ತಿಲ್ಲ. ಈ ನನ್ನ ಪ್ರಶ್ನೆಗೆ ಉತ್ತರ ಬರಲಿಲ್ಲ;

ಡಾ॥ ಹೆಚ್.ಸಿ. ಮಹದೇವಪ್ಪ : ಸನ್ಮಾನ್ಯ ಅಧ್ಯಕ್ಷರೆ, ನಮಗೆ ಇರತಕ್ಕಂತಹ ಕಾನೂನು ವ್ಯಾಪ್ತಿಯಲ್ಲಿ ಆಸ್ಪತ್ರೆಗಳಿಗೆ ಔಷಧಿಯನ್ನು ಸರಬರಾಜು ಮಾಡಿದ್ದೇವೆ. ಇನ್ನು ಉಳಿದ ನಾಲ್ಕು ಸಿವಿಲ್ ಸರ್ಜನ್ ಹುದ್ದೆ ಖಾಲಿ ಇದೆ. ಅದನ್ನು ಏಪ್ರಿಲ್ ಮೇ

ತಿಂಗಳಲ್ಲಿ ತುಂಬಲಿಕ್ಕೆ ಕ್ರಮ ತೆಗೆದುಕೊಳ್ಳುತ್ತೇವೆ. ಮತ್ತು ಈ ಕಟ್ಟಡದ ವಿಚಾರವಾಗಿ 3-4 ಸಾರಿ ಟೆಂಡರ್ ಕರೆದರೂ ಕೂಡ ಯಾರೂ ಅಲ್ಲಿ ಪಾರ್ಟಿಸಿಪೇಟ್ ಮಾಡಿಲ್ಲ ಅಧ್ಯಕ್ಷರೆ, ಅಲ್ಲಿ ಕಟ್ಟಡ ಕಟ್ಟಲಿಕ್ಕೆ ಯಾವ ಟೆಂಡರು ಬರುವುದಿಲ್ಲ. ಹೀಗಾಗಿ ಇಲಾಖಾ ವತಿಯಿಂದಲೇ ಕಟ್ಟಡ ನಿರ್ಮಾಣ ಪೂರ್ತಿ ಮಾಡಲಿಕ್ಕೆ ನಾವು ಪ್ರಯತ್ನ ಮಾಡುತ್ತೇವೆ.

ಶ್ರೀ ಹೆಚ್.ಡಿ. ಬಸವರಾಜು : ಕಾನೂರು ಬಗ್ಗೆ ನಾನು ಹೇಳಿರತಕ್ಕಂತಹದನ್ನು ಅವರು ತಪ್ಪಾಗಿ ತಿಳಿದುಕೊಂಡಿದ್ದಾರೆ. ಕಾನೂರು ಬೇರೆ ಪ್ರದೇಶ. ಅಲ್ಲದೆ ಯಾವಾಗ ನೇಮಕ ಮಾಡುತ್ತೀರಿ?

ಅಧ್ಯಕ್ಷರು : ಅದಕ್ಕೆ ಬೇರೆ ನೋಟೀಸ್ ಕೊಡಬೇಕಲ್ಲ. ವಿರಾಜಪೇಟೆ ವಿಚಾರ ಕೇಳಿ ಇಲ್ಲಿ ಬೇರೆ ಊರಿನ ಬಗ್ಗೆ ಕೇಳಿದರೆ ಆಗುವುದಿಲ್ಲ.

ಶ್ರೀ ಹೆಚ್.ಡಿ. ಬಸವರಾಜು : ಸಪ್ಲಿಮೆಂಟರಿಯಲ್ಲಿ ನಾನು ಕೇಳುತ್ತಿದ್ದೇನೆ.

ಅಧ್ಯಕ್ಷರು : ಸಪ್ಲಿಮೆಂಟ್‌ರಿ ಆದರೂ ಆ ಇನ್‌ಫರ್ಮೇಷನ್ ಏತಕ್ಕೆ ಇಟ್ಟುಕೊಂಡಿದ್ದಾರೆ?

ಶ್ರೀ ಹೆಚ್.ಡಿ. ಬಸವರಾಜು : ಯಾವಾಗ ನೇಮಕ ಮಾಡಬಹುದು ಎಂದು.

ಅಧ್ಯಕ್ಷರು : ಏಪ್ರಿಲ್ ಮೇ ಅಂತ ಹೇಳಿದ್ದಾರಲ್ಲ. ಈಗ ಮುಂದಿನ ಪ್ರಶ್ನೆ.

**ಬೀದರ್ ಜಿಲ್ಲಾ ಆಸ್ಪತ್ರೆಗೆ ಮಂಜೂರಾದ ವೈದ್ಯಕೀಯ ಸಿಬ್ಬಂದಿ ವರ್ಗದ ವಿವರ ಕುರಿತು**

1186 - ಶ್ರೀ ಸೈಯದ್ ಜುಲ್ಫಿಕರ್ ಹಷ್ಮಿ (ಬೀದರ್) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಬೀದರ್‌ನಲ್ಲಿರುವ ಜಿಲ್ಲಾ ಆಸ್ಪತ್ರೆ (ಸಾರ್ವಜನಿಕ ಆಸ್ಪತ್ರೆ)ಗೆ ಮಂಜೂರಾಗಿರುವ ವೈದ್ಯಕೀಯ ಸಿಬ್ಬಂದಿ ವರ್ಗದ ಸಂಖ್ಯೆ ಎಷ್ಟು (ಎಲ್ಲಾ ವರ್ಗದ ಪರಿಣಿತರು ಹಾಗೂ ವೈದ್ಯರುಗಳ ಹಾಗೂ ಇತರೆ ಸಿಬ್ಬಂದಿ ವರ್ಗದ ವಿವರಗಳನ್ನು ಒದಗಿಸುವುದು)?*

*ಆ) ಇದರ ಪೈಕಿ ಎಷ್ಟು ಹುದ್ದೆಗಳು ಭರ್ತಿಯಾಗಿದೆ ಹಾಗೂ ಎಷ್ಟು ಹುದ್ದಗಳು ಖಾಲಿ ಇವೆ?*

*ಇ) ಎಷ್ಟು ಸಮಯದಿಂದ ಈ ಹುದ್ದೆಗಳು ಖಾಲಿ ಇವೆ? ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಬೀದರ್ ಜಿಲ್ಲಾ ಆಸ್ಪತ್ರೆಗೆ ಒಟ್ಟು 213 ವಿವಿಧ ವರ್ಗದ ಹುದ್ದಗಳು ಮಂಜೂರಾಗಿರುವುದು (ವಿವರ ಲಗತ್ತಿಸಲಾಗಿದೆ)

ಆ) ಇದರ ಪೈಕಿ 206 ಹುದ್ದೆಗಳು ಭರ್ತಿಯಾಗಿವೆ ಹಾಗೂ 7 ಹುದ್ದೆಗಳು ಖಾಲಿ ಇರುವುದು.

ಇ) ಅ) ಕ್ಲಿನಿಕಲ್ ಸೈಕಾಲಜಿಸ್ಟ್ ಹುದ್ದೆಯು ದಿನಾಂಕ 27-7-84ರಿಂದ ಖಾಲಿ ಇರುವುದು. ಮೀಸಲಾತಿ ನಿಯಮ ಜಾರಿ ಇಲ್ಲದ ಪ್ರಯುಕ್ತ ಭರ್ತಿ ಮಾಡಲಾಗಲಿಲ್ಲ.

ಸರ್ಕಾರವು ಮೀಸಲಾತಿ ನಿಯಮ ಜಾರಿಗೊಳಿಸುವ ನಂತರ ಭರ್ತಿ ಮಾಡಲು ಕ್ರಮ ತೆಗೆದುಕೊಳ್ಳುವುದು.

ಆ) ಹಿರಿಯ ಶುಶ್ರೂಷಕರ ಹುದ್ದೆ 3 ವರ್ಷಗಳಿಂದ ಖಾಲಿ ಇರುವುದು. ಈ ಹುದ್ದೆಗಳನ್ನು ಪದೋನ್ನತಿ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದು.

## ಜಿಲ್ಲಾ ಆಸ್ಪತ್ರೆ ಬೀದರ್ ಇಲ್ಲಿನ ಸಿಬ್ಬಂದಿ ವಿವರ

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳು | ಭರ್ತಿಯಾದ ಹುದ್ದೆ | ಖಾಲಿ ಹುದ್ದೆ |
|---|---|---|---|---|
| 1. | ವೈದ್ಯಾಧಿಕಾರಿಗಳು, ದರ್ಜೆ-1 | 5 | 5 | - |
| 2 | ಸಹಾಯಕ ಶಸ್ತ್ರ ಚಿಕಿತ್ಸಕರು | 13 | 13 | - |
| 3. | ಸಹಾಯಕ ದಂತ ಚಿಕಿತ್ಸಕರು | 1 | 1 | - |
| 4. | ಲೇ ಕಾರ್ಯದರ್ಶಿ | 1 | 1 | - |
| 5. | ಶುಶ್ರೂಷಾಧೀಕ್ಷಕರು, ದರ್ಜೆ-1 | 1 | 1 | - |
| 6. | ಶುಶ್ರೂಷಾಧೀಕ್ಷಕರು, ದರ್ಜೆ-2 | 2 | 2 | - |
| 7. | ಹಿರಿಯ ಶುಶ್ರೂಷಕರು | 9 | 3 | 6 |
| 8. | ಶುಶ್ರೂಷಕರು | 36 | 36 | - |
| 9. | ಹಿರಿಯ ಆರೋಗ್ಯ ಸಹಾಯಕರು (ಪುರುಷ) | 1 | 1 | - |
| 10. | ಕಿರಿಯ ಆರೋಗ್ಯ ಸಹಾಯಕರು (ಪುರುಷ) | 1 | 1 | - |
| 11. | ಹಿರಿಯ ವೈದ್ಯೇತರ ಮೇಲ್ವಿಚಾರಕರು | 1 | 1 | - |
| 12. | ಹಿರಿಯ ಪ್ರಯೋಗಶಾಲಾ ತಂತ್ರಜ್ಞರು | 3 | 3 | - |
| 13. | ಕಿರಿಯ ಪ್ರಯೋಗಶಾಲಾ ತಂತ್ರಜ್ಞರು | 2 | 2 | - |
| 14. | ಕ್ಷ-ಕಿರಣ ತಂತ್ರಜ್ಞರು | 1 | 1 | - |
| 15. | ವಿಕಿರಣ ತಂತ್ರಜ್ಞರು | 1 | 1 | - |
| 16. | ರಿಫ್ರಾಕ್ಷನಿಸ್ಟ್ | 1 | 1 | - |
| 17. | ಎಲೆಕ್ಟ್ರಿಷಿಯನ್ | 1 | 1 | - |
| 18. | ಸೋಷಿಯಲ್ ವರ್ಕರ್ಸ್ | 1 | 1 | - |
| 19. | ಕ್ಲಿನಿಕಲ್‌ಸೈ ಕಾಲಜಿಸ್ಟ್ | 1 | - | 1 27-7-84 |
| 20. | ಹಿರಿಯ ಮಹಿಳಾ ಆರೋಗ್ಯ ಸಹಾಯಕಿ | 4 | 4 | - |
| 21. | ಕಿರಿಯ ಮಹಿಳಾ ಆರೋಗ್ಯ ಸಹಾಯಕಿ | 6 | 6 | - |
| 22. | ಹಿರಿಯ ಫಾರ್ಮಾಸಿಸ್ಟ್ | 5 | 5 | - |
| 23. | ಕಿರಿಯ ಫಾರ್ಮಾಸಿಸ್ಟ್ | 5 | 5 | - |
| 24. | ಚೀಫ್‌ಫಾರ್ಮಾಸಿಸ್ಟ್ | 1 | 1 | - |
| 25. | ಗ್ರಾಜ್ಯುಯೇಟ್ ಫಾರ್ಮಾಸಿಸ್ಟ್ | 2 | 2 | - |

| | | | | |
|---|---|---|---|---|
| 26. | ಕಛೇರಿ ಅಧೀಕ್ಷಕರು | 1 | 1 | - |
| 27. | ಪ್ರಥಮ ದರ್ಜೆ ಸಹಾಯಕರು | 5 | 5 | - |
| 28. | ದ್ವಿತೀಯ ದರ್ಜೆ ಸಹಾಯಕರು | 2 | 2 | - |
| 29. | ಸಹಾಯಕ ಹಾಗೂ ಬೆರಳಚ್ಚುಗಾರರು | 1 | 1 | - |
| 30. | ಬೆರಳಚ್ಚುಗಾರರು | 1 | 1 | - |
| 31. | ಗ್ರೂಪ್ 'ಡಿ' | 95 | 95 | - |
| 32. | ವಾಹನ ಚಾಲಕರು | 3 | 3 | - |
| | ಒಟ್ಟು | 213 | 206 | 7 |

ಶ್ರೀ ಸೈಯದ್ ಜುಲ್ಪಿಕರ್ ಹಷ್ಮಿ : ಸನ್ಮಾನ್ಯ ಅಧ್ಯಕ್ಷರೆ, ನಮ್ಮ ಬೀದರನಲ್ಲಿರತಕ್ಕ ಖಾಲಿ ಹುದ್ದೆಗಳನ್ನು ಯಾವಾಗ ಫಿಲ್‌ಅಪ್ ಮಾಡುತ್ತೀರಿ? ಇದನ್ನು ಕ್ಲಿಯರ್ ಮಾಡಬೇಕೆಂದು ನನ್ನ ವಿನಂತಿ. ಪೋಸ್ಟ್ ವೇಕೆಂಟ್ ಇದೆ. ನಮ್ಮಲ್ಲಿ ಇದನ್ನು ಯಾವಾಗ ಫಿಲ್‌ಅಫ ಮಾಡುತ್ತಿರಿ?

ಡಾ|| ಹೆಚ್.ಸಿ. ಮಹದೇವಪ್ಪ : ಖಾಲಿ ಇರತಕ್ಕಂತಹ ಅಗತ್ಯ ಹುದ್ದೆಗಳನ್ನು ಭರ್ತಿ ಮಾಡಲಿಕ್ಕೆ ಸರ್ಕಾರದ ನಿಲುವನ್ನು ಈಗಾಗಲೇ ಪ್ರಕಟಣೆ ಮಾಡಿದ್ದೇವೆ. ಈ ವರ್ಷದ ಅಂತ್ಯದಲ್ಲಿ ಖಾಲಿ ಇರತಕ್ಕಂತಹ ಅಗತ್ಯವಾಗಿ ಬೇಕಾಗಿರತಕ್ಕಂತಹ ವೈದ್ಯ ಮತ್ತು ಅರೆ ವೈದ್ಯ ಸಿಬ್ಬಂದಿಗಳ ನೇಮಕವನ್ನು ಈ ವರ್ಷದ ಒಳಗೆ ಮಾಡಲಿಕ್ಕೆ ಕ್ರಮ ಕೈಗೊಳ್ಳುತ್ತೇವೆ.

ಶ್ರೀ ಸೈಯದ್ ಜುಲ್ಫಕರ್ ಹಷ್ಮಿ : ಸನ್ಮಾನ್ಯ ಸಭಾಧ್ಯಕ್ಷರೆ, ನಮ್ಮ ಒಂದು ಪ್ರಶ್ನೆಯನ್ನು ಸಾಹೇಬರಿಗೆ ಕೇಳಿದ್ದೆ. ಅದಕ್ಕೆ ಉತ್ತರ ಬಂದಿಲ್ಲ. ನಮ್ಮಲ್ಲಿ ಓಲ್ಡ್ ಹಾಸ್ಪಿಟಲ್ ಇದೆ. ಅಲ್ಲಿ ಮೆಟರ್ನಿಟಿ ಸೆಕ್ಷನ್ ಇತ್ತು. ಅಲ್ಲಿ ಸ್ಟಾಫ್ ಇಲ್ಲ ಏನೂ ಇಲ್ಲ. ಮತ್ತು ಅಲ್ಲಿ ಓ.ಪಿ.ಡಿ. ಇದೆ. ಬಹಳ ಜನರು ದೂರದಿಂದ ಬರುತ್ತಾರೆ ಅಲ್ಲಿಗೆ. ಅಲ್ಲಿಗೆ ಸ್ಟಾಫ್ ಯಾವಾಗ ಫಿಲಅಫ್ ಮಾಡುತ್ತೀರಿ? ಓಲ್ಡ್ ಹಾಸ್ಪಿಟಲ್ ಇದೆ. ಒಂದು ಜನರಲ್ ಹಾಸ್ಪಿಟಲ್ ಇದೆ ಒಂದು ಮೆಟರ್ನಿಟಿ ಮತ್ತೊಂದು ಓಪಿಡಿ ಸೆಕ್ಷನ್ ಬೇರೆ ಇದೆ. ಆ ಹಾಸ್ಪಿಟಲ್‌ಗೆ ಸ್ಟಾಫ್ ಇಲ್ಲ, ಆರ್ಡರ್ ಆಗಿದೆ. ಮತ್ತೆ ಕೆಲಸ ಆಗಿಲ್ಲ.

ಡಾ|| ಹೆಚ್.ಸಿ. ಮಹದೇವಪ್ಪ : ರೋಸ್ಟರ್ ಸಿಸ್ಟಮ್ ಕ್ಲಿಯರ್ ಆದ ತಕ್ಷಣ ನಾನು ಕ್ರಮ ತೆಗೆದುಕೊಳ್ಳುತ್ತೇನೆ.

**ಮಂಡ್ಯ ಜಿಲ್ಲೆಯ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಮತ್ತು ಘಟಕಗಳ ಸಂಖ್ಯೆ ಕುರಿತು**

758 - ಶ್ರೀ ಜಿ.ಬಿ. ಶಿವಕುಮಾರ್ (ಕೆರಗೋಡು) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಮಂಡ್ಯ ಜಿಲ್ಲೆಯಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರ : ಘಟಕಗಳೆಷ್ಟು?

ಆ) ಎಷ್ಟು ಕೇಂದ್ರ ಘಟಕಗಳಲ್ಲಿ ವೈದ್ಯರುಗಳಿರುವುದಿಲ್ಲ. ವೈದ್ಯರುಗಳನ್ನು ತುಂಬಲು ಕ್ರಮ ತೆಗೆದುಕೊಂಡಿದೆಯೇ?

ಇ) ಪ್ರತಿ ಆರೋಗ್ಯ ಕೇಂದ್ರ ಘಟಕಗಳಿಗೆ ಪ್ರತಿ ವರ್ಷ ಸರ್ಕಾರ ಒದಗಿಸುವ ಹಣ ಎಷ್ಟು.

*ಈ) ಕೇಂದ್ರ ಘಟಕಗಳಿರುವೆಡೆ ವೈದ್ಯರುಗಳು ಮತ್ತು ಸಿಬ್ಬಂದಿಯವರಿಗೆ ಕೊಠಡಿಗಳನ್ನು ಕಟ್ಟಿಸುವ ಆಲೋಚನೆ ಸರ್ಕಾರಕ್ಕೆ ಇದೆಯೇ?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಪ್ರಾಥಮಿಕ ಆರೋಗ್ಯ ಕೇಂದ್ರ - 28

ಪ್ರಾಥಮಿಕ ಆರೋಗ್ಯ ಕೇಂದ್ರ - 38

ಆ) 6 ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು 2 ಪ್ರಾಥಮಿಕ ಆರೋಗ್ಯ ಘಟಕಗಳಲ್ಲಿ ವೈದ್ಯರುಗಳಿರುವುದಿಲ್ಲ. ಮಂಡ್ಯ ಜಿಲ್ಲೆಯಲ್ಲಿ ಖಾಲಿ ಇರುವ ವೈದ್ಯರ ಹುದ್ದೆ ಭರ್ತಿ ಮಾಡಲು ಗುತ್ತಿಗೆ ಆಧಾರದ ಮೇಲೆ ವೈದ್ಯರನ್ನು ಆಯ್ಕೆ ಮಾಡಲಾಗುವುದು.

ಇ) ಜಿಲ್ಲಾ ಪಂಚಾಯತ್‌ನ ಆಯವ್ಯಯದಲ್ಲಿ 1994-95ನೇ ಸಾಲಿನಲ್ಲಿ ಒದಗಿಸಿದ ಆಯವ್ಯಯದಲ್ಲಿ 1994-95ನೇ ಸಾಲಿನಲ್ಲಿ ಒದಗಿಸಿದ ಆಯವ್ಯಯದ ವಿವರ ಕೆಳಗಿನಂತಿದೆ.

ಪ್ರಾಥಮಿಕ ಆರೋಗ್ಯ : 12.20 ಲಕ್ಷ ಕೇಂದ್ರ.

ಪ್ರಾಥಮಿಕ ಆರೋಗ್ಯ : 4.5 ಲಕ್ಷ ಘಟಕ.

ಈ) ಸೂಕ್ತ ಕ್ರಮ ಕೈಗೊಳ್ಳಲು ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ಗೆ ಕೋರಲಾಗುವುದು.

ಶ್ರೀ ಜಿ.ಬಿ. ಶಿವಕುಮಾರ್ : ಮೊದಲಿಗೆ ಆರೋಗ್ಯ ಇಲಾಖೆಯ ಮೇಲೆ ನನ್ನ ಸಹೋದ್ಯೋಗಿಗಳನ್ನು ಕೇಳಿದ ಪ್ರಶ್ನೆಗೆ ತಾವೇ ರಕ್ಷಣೆಗೆ ಬಂದು ಸರ್ಕಾರದಿಂದ ಆದಷ್ಟು ಸರಿಯಾದ ಉತ್ತರವನ್ನು ಕೊಡಿಸಲಿಕ್ಕೆ ಪ್ರಯತ್ನ ಮಾಡಿದ್ದಕ್ಕೆ ನಾನು ತಮ್ಮನ್ನು ಅಭಿನಂದಿಸುತ್ತೇನೆ. ಆ ಒಂದು ಪ್ರಶ್ನೆಯಲ್ಲಿ ಬಹಳ ಮೂಲಭೂತವಾಗಿ ಸದಸ್ಯರಿಗೆ ಸ್ವಲ್ಪ ಸುಳ್ಳು ಹೇಳಿದರೂ ಪರವಾಗಿಲ್ಲ, ಸಭಾಧ್ಯಕ್ಷರಿಗೆ ಹೇಳುವುದಕ್ಕಾಗುವುದಿಲ್ಲ.

ಮಾನ್ಯ ಸಚಿವರೇ ಮೂಲಭೂತವಾಗಿ ಕೊನೆ ಪ್ರಶ್ನೆ ಏನು ಇದೆ ನಾನು ಕೇಳಿರತಕ್ಕಂತಹದ್ದು ಕೇಂದ್ರ ಹಾಗೂ ಘಟಕಗಳಿರುವ ಕಡೆ ವೈದ್ಯರು ಮತ್ತು ಸಿಬ್ಬಂದಿಯವರಿಗೆ ಕೊಠಡಿಗಳನ್ನು ಕಟ್ಟಿಸುವ ಆಲೋಚನೆ ಇದೆಯೇ ಎಂದು. ಈಗಾಗಲೇ ಸನ್ಮಾನ್ಯ ನಮ್ಮ ಸಹದ್ಯೋಗಿ ಮಾದಪ್ಪನವರು ಕೇಳುತ್ತಿದ್ದಾಗ ತಾವು ಮಧ್ಯೆ ಪ್ರವೇಶ ಮಾಡಿ ಕೇಳಿದಿರಿ. ಮೂಲಭೂತವಾಗಿ ನಮ್ಮ ಆರೋಗ್ಯ ಘಟಕ, ಕೇಂದ್ರಗಳು ಗ್ರಾಮೀಣ ಪ್ರದೇಶದಲ್ಲಿ ಇರತಕ್ಕಂತದಕ್ಕೆ ತಾವು ಹೇಳಿದಿರಿ ವೈದ್ಯರುಗಳು ಹೋಗಲ್ಲ ಅಂತ ಹೇಳಿ. ಇವತ್ತು ಅವರ ಮನೋಭಾವ ಬದಲಾವಣೆ ಮಾಡಿಕೊಳ್ಳಬೇಕು. ಈಗ ಏನು ಒಂದು ಕಂಟ್ರಾಕ್ಟ್ ಬೇಸಿಸ ಮೇಲೆ ಕಳುಹಿಸಿಕೊಟ್ಟಿದ್ದಾರೆ ಅವರು ಇನ್ನೂ ಕೂಡ ರಿಪೋರ್ಟ್ ಮಾಡಿಕೊಂಡಿಲ್ಲ, ದುರಾದೃಷ್ಟ ಅದನ್ನು ಅವರಿಗೆ ತಿಳಿಸಿ ಜಿಲ್ಲಾಧಿಕಾರಿಗಳಿಗೆ ಕಳುಹಿಸಿ, ಇದು ಏತಕ್ಕೆ ಈ ಕಸರತ್ತು ಮಾಡುತ್ತಾರೋ ನನಗಂತು ಅರ್ಥವಾಗುತ್ತಿಲ್ಲ. ಯಾರ ವೈದ್ಯರು ಗ್ರಾಮಾಂತರ ಪ್ರದೇಶದಲ್ಲಿ ಕಡ್ಡಾಯವಾಗಿ ಕನಿಷ್ಠ 5 ವರ್ಷ ನಾನು ಸೇವೆ ಸಲ್ಲಿಸುತ್ತೇನೆ ಎನ್ನತಕ್ಕಂತಹ ಕಟ್ಟುನಿಟ್ಟಾದ ಕರಾರನ್ನು ತಾವು ಮಾಡಿಸಿಕೊಂಡು ಕೆಲಸ ಕೊಡಲಿಕ್ಕೆ ಮುಂದೆ ಬಂದರೆ ಖಂಡಿತವಾಗಿಯೂ ಇವತ್ತು ಅನೇಕ ಜನ ನಿರುದ್ಯೋಗಿ ವೈದ್ಯರು ಹೋಗಲಿಕ್ಕೆ ತಯಾರು ಆಗಿದ್ದಾರೆ ಯಾವುದೋ ಮೆರಿಟ್ ಮೇಲೋ ಅಥವಾ ಸೀನಿಯಾರಿಟಿ ಮೇಲೋ ಶಿಫಾರಸ್ಸು ಮಾಡಿ ಕಳುಹಿಸಿದರೆ ಅವರು ಹೋಗುವುದೇ ಇಲ್ಲ. ಈಗ ಮೊನ್ನೆ ಒಂದು ವಾರದ ಹಿಂದೆ 4 ಜನ ಪೋಸ್ಟ್ ಮಾಡಿದ್ದೀರಿ ಅಂತ ಡಿ.ಹೆಚ್.ಓ. ಹೇಳುತ್ತಾರೆ.

ಅವರನ್ನು ಕೇಳಿದರೆ ಬಸರಾಳ ದೂರ ಕೆರಗೋಡುಗೆ ಹಾಕಿಸಿ, ಕೆರಗೋಡು ದೂರ, ಕೀಲಾರಕ್ಕೆ ಹಾಕಿಸಿ ಎಂದು ಹೇಳುತ್ತಾರೆ. ಇದನ್ನು ಬಹಳ ನೊಂದು ಹೇಳುತ್ತೇನೆ. ಮಾನ್ಯ ಸಭಾಧ್ಯಕ್ಷರೆ, ಇವತ್ತು ವೈದ್ಯರುಗಳಲ್ಲಿ ಕೂಡ ಸೇವಾ ಮನೋಭಾವ ಕೊರತೆ ಆಗಿದೆ. ಅವರು ನರ್ಸಿಂಗ್ ಹೋಂಗೆ ಇರುವಷ್ಟು ನಿಯತ್ತು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಇಲ್ಲ. ಪ್ರಾಥಮಿಕ ಆರೋಗ್ಯ ಕೇಂದ್ರ, ಘಟಕದಲ್ಲಿ ಸಂಬಳ ತೆಗೆದುಕೊಳ್ಳಲಿಕ್ಕೆ ಒಂದು ರಿಜಿಸ್ಟರ್ ಇರಬೇಕು ಅಲ್ಲಿ. 4 ಸಾವಿರ ರೂಪಾಯಿ ಏನೋ ಕೊಡುತ್ತಾರಲ್ಲಾ ಸರ್ಕಾರದ್ದು ಸಂಬಳ ತೆಗೆದುಕೊಳ್ಳುವುದಕ್ಕೆ ಅಟೆಂಡೆನ್ಸ್ ರಿಜಿಸ್ಟರ್ ಬಿಟ್ಟರೆ, ಅರ್ಧ ಗಂಟೆ ಸೇವೆ ಮಾಡಲ್ಲ, ಬಂದು ನಗರ ಪ್ರದೇಶದಲ್ಲಿ ನರ್ಸಿಂಗ್ ಹೋಂಗೆ ರಾತ್ರಿಯೆಲ್ಲಾ ದುಡಿಯುತ್ತಾರೆ. ಅವರು ಹತ್ತು ವರ್ಷದಲ್ಲಿ ದುಡಿಯುವಂತಹದ್ದನ್ನು ಒಂದೇ ವರ್ಷದಲ್ಲಿ ಸಂಪಾದನೆ ಮಾಡಬೇಕೆಂಬ ಒಂದು ದುರಾಸೇ ಬಂದಿದೆ. ಸರ್ಕಾರ ಒಂದು ಕಟ್ಟುನಿಟ್ಟಾದ ಕ್ರಮವನ್ನು ತೆಗೆದುಕೊಂಡು ಗ್ರಾಮಾಂತರ ಪ್ರದೇಶದಲ್ಲಿ ಕಡ್ಡಾಯವಾಗಿ ನಾವು 10 ವರ್ಷಗಳ ತನಕ ಸೇವೆಯನ್ನು ಮಾಡುತ್ತೇವೆ ಎನ್ನತಕ್ಕಂತಹ ಕರಾರನ್ನು ಮಾಡಿದರೆ, ಆ ಒಂದು ಕಟ್ಟುನಿಟ್ಟಾದ ಆಜ್ಞೆಗೆ ತಾವು ಅಳವಡಿಸಿಕೊಂಡರೆ ಪ್ರಾಯಶ: ಆಗ ಅವರುಗಳು ಕೆಲಸ ಮಾಡುತ್ತಾರೆ, ಮತ್ತೆ ಇವಾಗ ಗ್ರಾಮಾಂತರ ಪ್ರದೇಶಗಳಿಗೆ ಒತ್ತು ಕೊಡುತ್ತೇವೆ ಅಂತ ಹೇಳತಕ್ಕಂತಹದ್ದು ಏನಿದೆ ಅದರಂತೆ ಅಲ್ಲಿ ಸಿಬ್ಬಂದಿಗೆ ನರ್ಸ್‌ಗಳಿಗೆ ಅಗಲಿ ಅಥವಾ ಬೇರೆ ಕಾಂಪೌಂಡರುಗಳಿಗೆ ಅಗಲಿ, ಡಾಕ್ಟರುಗಳಿಗೆ ಆಗಲಿ, ಘಟಕ ಮತ್ತು ಕೇಂದ್ರ ಕಟ್ಟಡದ ಸೌಲಭ್ಯ ಇಲ್ಲದೆ ನಾವು ಡಾಕ್ಟರುಗಳನ್ನು ಸಿಬ್ಬಂದಿಯನ್ನಾಗಲೀ, ದೂಷಿಸುವುದಕ್ಕೆ ಕೂಡ ಆಗುವುದಿಲ್ಲ. ಅವರು ಒಂದೇ ಕಾರಣ ಹೇಳುತ್ತಾರೆ, ಏನೆಂದರೆ, ನಮಗೆ ಮನೆ ಸಿಕ್ಕಿಲ್ಲ. ಆದ್ದರಿಂದ ನಾವು ಪಟ್ಟಣಕ್ಕೆ ಬಂದು ವಾಸ ಮಾಡುತ್ತೇವೆ ಎಂದು. ಗ್ರಾಮಾಂತರ ಪ್ರದೇಶಕ್ಕೆ ಒತ್ತು ಕೊಡುವಂತಹದ್ದು. ಹೆಚ್ಚಿಗೆ ಹಣವನ್ನು ಖರ್ಚು ಮಾಡಿ ಪ್ರತಿ ಘಟಕ ಕೇಂದ್ರ ಇರುವ ಕಡೆ ಕನಿಷ್ಟ ಸಿಬ್ಬಂದಿಗೆ ಬೇಕಾದಂತಹ ವಸತಿ ಸೌಕರ್ಯ ಮಾಡಬೇಕಾದುದು ಬಹಳ ಅಗತ್ಯ ಎಂದು ತಮ್ಮ ಮೂಲಕ ಪ್ರಾರ್ಥಿಸುತ್ತೇನೆ.

ಡಾ॥ಹೆಚ್.ಸಿ. ಮಹದೇವಪ್ಪ : ಸನ್ಮಾನ್ಯ ಅಧ್ಯಕ್ಷರೆ, ಮಾನ್ಯ ಸದಸ್ಯರ ಸಲಹೆಗಳನ್ನು ಗಮನದಲ್ಲಿಟ್ಟುಕೊಂಡು ಐಪಿಪಿ 9 ರಲ್ಲಿ ಸುಮಾರು 200ಕ್ಕೂ ಹೆಚ್ಚು ವೈದ್ಯಾಧಿಕಾರಿಗಳ ಕಟ್ಟಡ ನಿರ್ಮಾಣಕ್ಕೆ ಸುಮಾರು 1000 ಕ್ಕೂ ಹೆಚ್ಚು ಸಬ್‌ಸೆಂಟರಿಗಳು ಕಟ್ಟಡ ನಿರ್ಮಾಣಕ್ಕೆ ಸರ್ಕಾರ ಕ್ರಮ ಕೈಗೊಳ್ಳುತ್ತಾ ಇದೆ. ವೈದ್ಯರುಗಳು ಕಡ್ಡಾಯವಾಗಿ ಅವರ ದಿನಚರಿಯನ್ನು ಸರ್ಕಾರಿ ಆಸ್ಪತ್ರೆಯಲ್ಲಿ ಕಳೆಯಲಿಕ್ಕೆ ಕಟ್ಟುನಿಟ್ಟಿನ ಆದೇಶವನ್ನು ಕೊಡುವುದರ ಜೊತೆಗೆ ಈಗಾಗಲೇ ಈ ಕಾಂಟ್ರಾಕ್ಟ್ ಆಧಾರದ ಮೇಲೆ ನೇಮಕಾತಿಯನ್ನು ಹೊಂದಿರತಕ್ಕಂತಹ ವೈದ್ಯರುಗಳು ಇನ್ನು 15 ದಿನದಲ್ಲಿ ರಿಪೋರ್ಟ್ ಮಾಡಿಕೊಳ್ಳದೇ ಹೋದರೆ ಅವರ ಅಪಾಯಿಂಟ್‌ಮೆಂಟನ್ನು ರದ್ದುಗೊಳಿಸಿ ಹೊಸದಾಗಿ ಯಾರು ಗ್ರಾಮೀಣ ಪ್ರದೇಶದಲ್ಲಿ ಸೇವೆ ಮಾಡಲಿಕ್ಕೆ ಮುಂದು ಬರುತ್ತಾರೋ, ಅಂತಹವರಿಗೆ ರೋಸ್ಟರ್ ಸಿಸ್ಟಮ್‌ನ್ನು ಗಮನದಲ್ಲಿಟ್ಟುಕೊಂಡು ನೇಮಕಾತಿಯನ್ನು ಕೊಟ್ಟು ಗ್ರಾಮೀಣ ಪ್ರದೇಶದಲ್ಲಿ ಸೇವೆಯನ್ನು ಸಲ್ಲಿಸಲಿಕ್ಕೆ ಅವಕಾಶ ಮಾಡಿಕೊಡುವ ವಿಚಾರದಲ್ಲಿ ಪರಿಶೀಲನೆ ಮಾಡುತ್ತೇವೆ ಎಂದು ಹೇಳಲಿಕ್ಕೆ ಬಯಸುತ್ತೇನೆ.

ಶ್ರೀ ಜಿ.ಬಿ. ಶಿವಕುಮಾರ್ : ಮಾನ್ಯ ಅಧ್ಯಕ್ಷರೆ, ಒಂದು ಆ ಅಧಿಕಾರವನ್ನು ಇವರು ಡೈರೆಕ್ಟರ್ ಇಲ್ಲಿಗೆ ಕಳುಹಿಸಿಕೊಡುವ ಬದಲು ಜಿಲ್ಲಾಧಿಕಾರಿಗಳು ಆ ಕ್ಷೇತ್ರದ ಶಾಸಕರ ಜೊತೆ ನೀವು ಯಾವ ಸಿಸ್ಟಂ ಅದರೂ ಮಾಡಿ ರೋಸ್ಟರ್ ಸಿಸ್ಟಂಗೆ ನಾವು ತಲೆಬಾಗುತ್ತೇವೆ. ಅಲ್ಲಿ ನಮ್ಮಮರಿಗೆ ಮಾಡಿಸಿದರೆ ನಮಗೂ ಅವರಿಗೂ ಒಂದು.

ಬೈಂಡಿಂಗ್ ಇರುತ್ತದೆ. ಹೆದರಿಕೆ ಇರುತ್ತದೆ. ಇಲ್ಲಿಗೆ ಕಳುಹಿಸಿಕೊಟ್ಟರೆ ಆಗುವುದಿಲ್ಲ. ಸ್ಥಳೀಯ ಶಾಸಕರನ್ನು ಜಿಲ್ಲಾಧಿಕಾಳಿಗಳನ್ನು ಪಿ.ಎಚ್.ಓ. ಇರುತ್ತಾರೆ. ಇವರ ಸಹಕಾರದಿಂದ

ಮೆರಿಟ್ಟೋ ರೋಸ್ಟರೋ ಏನಾದರೂ ಮಾಡಿಕೊಡಿ. ಡಾಕ್ಟರುಗಳು ಹಳ್ಳಿಗಳಲ್ಲಿ ಹೋಗಿ ಸೇವೆ ಮಾಡುವಂತಹ ವ್ಯವಸ್ಥೆ ಮಾಡಿ.

ಶ್ರೀ ಅಮರೇಗೌಡ ಎಲ್. ಪಾಟೀಲ್ : ಮಾನ್ಯ ಅಧ್ಯಕ್ಷರೆ, ಈ ಒಂದು ಗ್ರಾಮಾಂತರ ಪ್ರದೇಶದಲ್ಲಿ ಕೆಲಸ ಮಾಡತಕ್ಕಂತಹ ವೈದ್ಯರಿಗೆ ವೇತನದಲ್ಲಿ ವಿಶೇಷ ಸೌಲಭ್ಯವನ್ನು ಒದಗಿಸಿ ಮತ್ತು ಅವರಿಗೆ ಹೆಚ್ಚಿನ ವೇತನವನ್ನು ಒದಗಿಸಿದರೆ ಅವರು ಅಲ್ಲಿ ಕೆಲಸ ಮಾಡುವುದಕ್ಕೆ ಇಚ್ಛೆ ಪಡುತ್ತಾರೋ ಏನೊ ಎಂದು ಸರ್ಕಾರದವರಲ್ಲಿ ತಮ್ಮ ಮೂಲಕ ವಿನಂತಿಸಿಕೊಳ್ಳುತ್ತೇನೆ. ಈಗ ಒಂದು ವಿಶೇಷವಾದ ವೇತನವನ್ನು ಕೂಡ ಕೊಡತಕ್ಕಂತಹ ವ್ಯವಸ್ಥೆ ಆಗಬೇಕು ಗ್ರಾಮೀಣ ಪ್ರದೇಶದಲ್ಲಿ ಕೆಲಸ ಮಾಡತಕ್ಕಂತಹ ವೈದ್ಯರಿಗೆ.

ಡಾ॥ ಯು. ಚಿತ್ತರಂಜನ್ : ಈ ಕಾಂಟ್ರಾಕ್ಟ್ ಬೇಸಿಸ್‌ನಲ್ಲಿ ಡಾಕ್ಟರುಗಳನ್ನು ನೇಮಕ ಮಾಡುವಂಥ ಪದ್ಧತಿ ಜಾರಿಗೆ ಬಂದಿದೆ. ಈ ಕಾಂಟ್ರಾಕ್ಟ್ ಪದ್ಧತಿಯಲ್ಲಿ ಕೆಲಸ ಮಾಡುವಂತಹ ವೈದ್ಯರಿಗೆ ಮುಂದೆ ಏನು ಪ್ರಶ್ನೆ ಬರುತ್ತದೆ. ಈ ಜೂನ್‌ನಲ್ಲಿ ಮೊದಲು ಕಂಟ್ರಾಕ್ಟ್ ತೆಗೆದುಕೊಂಡರೆ ಪೀರಿಯಡ್ ಎಕ್ಸ್‌ಪೈರಿ ಆಗುತ್ತದೆ. ನಮ್ಮ ಹತ್ತಿರ ಒಬ್ಬ ವೈದ್ಯರು ಬಂದಿದ್ದರು. ಮುಂದೆ ಏನು ಅಂತ. ಇದರ ಬಗ್ಗೆ ಸ್ಪಷ್ಟವಾಗಿ ನಿಲುವನ್ನು ಸರ್ಕಾರ ತಾಳಬೇಕಾಗಿದೆ. ಎರಡನೆಯದಾಗಿ, ಕಾಂಟ್ರಾಕ್ಟ್ ಬೇಸಿಸ್‌ನ ಜೊತೆಗೆ ಈ ರೆಗ್ಯುಲರ್ ಅಪಾಯಿಂಟ್‌ಮೆಂಟ್ಸ್ ಬಗ್ಗೆ ಸಮರೋಪಾದಿಯಲ್ಲಿ ಈ ಕೆಲಸವನ್ನು ಮಾಡಬೇಕೆಂದು ನನ್ನದು ಬೇಡಿಕೆ. ಏಕೆಂದರೆ construction of a building can wait, but not a dying man cannot wait. ಹಾಗಾಗಿ ವೈದ್ಯರ ನೇಮಕಾತಿಯನ್ನು ಸರ್ವೀಸ್ ರೂಲ್ಸ್ ಪ್ರಕಾರ ನೇಮಕ ಮಾಡಿ, ಆಮೇಲೆ ಅವರ ಮೇಲೆ ಶಿಸ್ತು ಕ್ರಮವನ್ನು ಖಂಡಿತ ತೆಗೆದುಕೊಳ್ಳಲೇ ಬೇಕು. ಯಾವೇ ವೈದ್ಯರು ಆದರೂ ಅವರ ಮೇಲೆ ಕ್ರಮವನ್ನು ತೆಗೆದುಕೊಳ್ಳಲೇಬೇಕು ಎಂದು ಹೇಳತಕ್ಕಂಥದ್ದನ್ನು ನಾನು ಕೂಡ ಅಪೇಕ್ಷಿಸುತ್ತೇನೆ. ಇದರ ಬಗ್ಗೆ ಮಾನ್ಯ ಮಂತ್ರಿಗಳು ಸ್ಪಷ್ಟೀಕರಣ ನೀಡಬೇಕೆಂದು ಕೇಳುತ್ತೇನೆ.

ಡಾ॥ ಹೆಚ್.ಸಿ. ಮಹದೇವಪ್ಪ : ಮಾನ್ಯ ಸಭಾಧ್ಯಕ್ಷರೆ, ಮಾನ್ಯ ಸದಸ್ಯರುಗಳ ಸಲಹೆಯನ್ನು ಗಮನದಲ್ಲಿಟ್ಟುಕೊಂಡು ಕಾಂಟ್ರಾಕ್ಟ್ ಬೇಸಿಸ್ ಮೇಲೆ ವೈದ್ಯರನ್ನು ನೇಮಕ ಮಾಡಿಕೊಳ್ಳತಕ್ಕಂಥದ್ದು ದು ತಾತ್ಕಾಲಿಕ ವ್ಯವಸ್ಥೆ. ಅವರಿಗೂ ರೆಗ್ಯುಲರ್ ಅಪಾಯಿಂಟ್‌ಮೆಂಟ್ ಮಾಡಲಿಕ್ಕೆ ಸಿ.ಎಸ್.ಸಿ. ಹೆಚ್ಚು ಸಮಯ ಹಿಡಿಯುವುದರಿಂದ "ಜನರು ರಸ್ತೆ ವ್ಯವಸ್ಥೆ ಇಲ್ಲದಿದ್ದರೆ ತಡೆದುಕೊಳ್ಳಬಹುದು, ಆದರೆ ಮನುಷ್ಯ ಸಾಯುವುದನ್ನು ತಡೆಯುವುದಕ್ಕೆ ಸಾಧ್ಯ ಇಲ್ಲ" ಎನ್ನತಕ್ಕಂತಹ ಮಾತನ್ನು ಮಾನ್ಯ ಸದಸ್ಯರು ಹೇಳಿದ್ದಾರೆ. ಅದಕ್ಕಾಗಿ ತಾತ್ಕಾಲಿಕವಾಗಿ ವ್ಯವಸ್ಥೆಯಾಗಿ ಕಂಟ್ರಾಕ್ಟ್ ಬೇಸಿಸ್ ಮೇಲೆ ವೈದ್ಯರುಗಳನ್ನು ಅಪಾಯಿಂಟ್‌ಮೆಂಟ್ಸ್ ಮಾಡಿಕೊಂಡರೂ ಕೂಡ ಶಾಶ್ವತವಾಗಿ ಪಬ್ಲಿಕ್ ಕಮಿಷನ್‌ನವರಿಗೆ ನಾವು ವರದಿಯನ್ನು ಕೊಟ್ಟು ಖಾಲಿ ಇರತಕ್ಕಂತಹ ಹುದ್ದೆಗಳನ್ನು ತುಂಬಲಿಕ್ಕೆ ಸರ್ಕಾರ ಪರಿಶೀಲನೆ ಮಾಡಿ ಕ್ರಮ ತೆಗೆದುಕೊಳ್ಳುತ್ತದೆ ಎಂಬ ಭರವಸೆಯನ್ನು ನಾನು ಕೊಡಲಿಕ್ಕೆ ಬಯಸುತ್ತೇನೆ.

Malnad Mandali Plan Minis

**ಮಲೆನಾಡು ಅಭಿವೃದ್ಧಿ ಮಂಡಲಿ ಯೋಜನೆಗೆ ನಿರ್ದಿಷ್ಟಪಡಿಸಿದ ಹಣದ ವಿವರ ಕುರಿತು**

12 - ಬಿ.ಎಸ್. ಯಡಿಯೂರಪ್ಪ (ಶಿಕಾರಿಪುರ) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯ ಸಚಿವರು ಈ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಮಲೆನಾಡು ಅಭಿವೃದ್ಧಿ ಮಂಡಳಿ ಯೋಜನೆ ಎಂದಿನಿಂದ ಪ್ರಾರಂಭವಾಯಿತು.*

13

ಆ) ಪ್ರತಿವರ್ಷ ಈ ಮಂಡಳಿಗೆ ಕಾದಿರಿಸಿದ ಹಣವೆಷ್ಟು ಹಾಗೂ ಖರ್ಚು ಮಾಡಿ ಹಣವೆಷ್ಟು: (ಜಿಲ್ಲಾವಾರು ವಿವರ ಒದಗಿಸುವುದು)

ಇ) ಮಲೆನಾಡು ಅಭಿವೃದ್ಧಿ ಮಂಡಳಿ ಅಧ್ಯಕ್ಷರ ಮತ್ತು ಸರ್ಕಾರಕ್ಕೆ ಈ ಯೋಜನೆಯಲ್ಲಿ ವಿವೇಚನಾತ್ಮಕ ನಿಧಿ ಎಂದು ಹಣ ಕಾದಿರಿಸಿಲಾಗಿತ್ತೆ

ಈ) ಹಾಗಿದ್ದಲ್ಲಿ ಪ್ರತಿವರ್ಷ ಹಣ ಎಷ್ಟು ಕಾದಿರಿಸಲಾಗಿತ್ತು ಮತ್ತು ಎಷ್ಟು ಖರ್ಚಾಗಿದೆ?

ಶ್ರೀ ಹೆಚ್.ಜಿ. ಗೋವಂದೇಗೌಡ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯ ಸಚಿವರು) : ಇವರ ಪರವಾಗಿ

ಶ್ರೀ ಡಿ. ಮಂಜುನಾಥ್ (ಉನ್ನತ ಶಿಕ್ಷಣ ಸಚಿವರು) :

ಅ) ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿಯು 10.3.92ರಿಂದ ಜಾರಿಗೆ ಬಂತು.

ಆ) ವಿವರಗಳನ್ನು ಅನುಬಂಧ-1ರಲ್ಲಿ ಕೊಡಲಾಗಿದೆ.

ಇ) ಹೌದು.

ಈ) ಕಾದಿರಿಸಿದ ಹಣ ಈ ರೀತಿ ಇದೆ.

ಲಕ್ಷ ರೂ.ಗಳಲ್ಲಿ

| | 1993-94 | | 1994-95 | |
|---|---|---|---|---|
| | ಅನುದಾನ | ಖರ್ಚು | ಅನುದಾನ | ಖರ್ಚು |
| ಅಧ್ಯಕ್ಷರ ವಿವೇಚನಾ ನಿಧಿ | 485 | 309 | 151 | 32 |
| ಸರ್ಕಾರದ ವಿವೇಚನಾ ನಿಧಿ | - | - | 156 | - |

ವಿವರಗಳನ್ನು ಅನುಬಂಧ 2,3,ಹಾಗೂ 4ರಲ್ಲಿ ಇಡಲಾಗಿದೆ.

## ಅನುಬಂಧ-1

### ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿಗೆ ವರ್ಷಾವಾರು ಆಯವ್ಯಯದಲ್ಲಿ ಕಾದಿರಿಸಿ, ಬಿಡುಗಡೆಯಾದ ಹಾಗೂ ಖರ್ಚಾದ ವಿವರಗಳು

(ಲಕ್ಷ ರೂ.ಗಳಲ್ಲಿ)

| ಕ್ರ. ಸಂ. | ವರ್ಷ | ಆಯವ್ಯಯ ದಲ್ಲಿ ನೀಡಲಾದ ಹಣ | ಬಿಡುಗಡೆಯಾದ ಹಣ | ವೆಚ್ಚ |
|---|---|---|---|---|
| 1. | 1991-92 | 1000 | 1000 | - |
| 2. | 1992-93 | 3500 | - | 11 |
| 3. | 1993-94 | 3500 | 3300 | 1559 |
| 4. | 1994-95 | 3500 | 1500 | 2933 |

22-3-95ರವರೆಗೆ

## ಮಲೇನಾಡು ಅಭಿವೃದ್ಧಿ ಮಂಡಳಿಯಲ್ಲಿ ಜಿಲ್ಲಾವಾರು ಖರ್ಚಾದ ವಿವರಗಳು

ಲಕ್ಷ ರೂ.ಗಳಲ್ಲಿ

| ಕ್ರ. ಸಂ. | ಜಿಲ್ಲೆ | 1992-93 | 1993-94 | 1994-95 |
|---|---|---|---|---|
| 1. | ಬೆಳಗಾಂವ | - | 145 | 318 |
| 2. | ಚಿಕ್ಕಮಗಳೂರು | - | 226 | 311 |
| 3. | ಧಾರವಾಡ | - | 173 | 262 |
| 4. | ದಕ್ಷಿಣ ಕನ್ನಡ | - | 212 | 439 |
| 5. | ಹಾಸನ | - | 170 | 142 |
| 6. | ಕೊಡಗು | - | 71 | 124 |
| 7. | ಮೈಸೂರು | - | 153 | 228 |
| 8. | ಶಿವಮೊಗ್ಗ | - | 302 | 409 |
| 9. | ಉತ್ತರ ಕನ್ನಡ | - | 84 | 281 |
| | ಒಟ್ಟು | - | 1536 | 2514 |
| | ಆಡಳಿತ ವೆಚ್ಚ | 11 | 23 | 39 |
| | ಸಾಮಗ್ರಿ ಖರೀದಿಸಲು ಕಾರ್ಯಪಾಲಕ ಇಂಜನಿಯರ್ ಗಳಿಗೆ ಮುಂಗಡ ಹಣ | - | - | 380 |
| | | 11 | 1559 | 2933 |

## ಅನುಬಂಧ - 2

### 1993-94ನೇ ಸಾಲಿಗೆ ಅಧ್ಯಕ್ಷರ ವಿವೇಚನಾ ನಿಧಿಯಿಂದ ಮಂಜೂರಾದ ಕಾಮಗಾರಿಗಳ ವಿವರ

ಜಿಲ್ಲೆ : ಬೆಳಗಾಂವ

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಕಾಮಗಾರಿ ವಿವರ | ಅಂದಾಜು ಮೊತ್ತ | 93-94ನೇ ಸಾಲಿಗೆ ಅನುದಾನ | ಖರ್ಚಾದ ಮೊತ್ತ |
|---|---|---|---|---|
| 1 | 2 | 3 | 4 | 5 |
| 1) | ಬೈಲಹೊಂಗಲ ತಾ: ಸಂಪಗಾಂವ ಕರಗುಂದ ರಸ್ತೆ ನಿರ್ಮಾಣ ಮತ್ತು ಸುಧಾರಣೆ ಕಿಮಿ 1 ರಿಂದ 4 ರಲ್ಲಿ | 9.092 | 9.092 | 4.48 |
| 2) | ಹಿಂದಲಿ ಧರವಟ್ಟಿ ರಸ್ತೆ ಸುಧಾರಣೆ ಕಿಮಿ 5 ರಿಂದ 10 ರಲ್ಲಿ | 5.9775 | 5.9775 | 6.03 |
| 3) | ನೇಗಿನಹಾಳ ಕುರಗುಂದ ರಸ್ತೆಯ ಡಾಂಬರೀಕರಣ ಕಿಮಿ 1 ರಿಂದ 3.5ರ ವರೆಗೆ | 7.135 | 7.135 | 3.09 |
| 4) | ಬೆಲ್ಲದ ಬಾಗೇವಾಡಿಯಲ್ಲಿ ಪ್ರವಾಸ ಮಂದಿರ | 9.53 | 3.25 | - |

| | | | | |
|---|---|---|---|---|
| 5) | ಬೈಲಹೊಂಗಲ ತಾ: ಬೈಲವಾದ ಗ್ರಾಮದ ಸರ್ಕಾರಿ ಪ್ರೌಢಶಾಲೆಗೆ ಕಾಂಪೌಂಡ್ ನಿರ್ಮಾಣ | 1.53 | 1.50 | - |
| 6) | ಸವದತ್ತಿ ತಾ: ತನ್ನಿಕೊಳ ಗ್ರಾಮದಲ್ಲಿ ಸಮುದಾಯ ಭವನಕ್ಕೆ ಕಾಂಪೌಂಡ್ ನಿರ್ಮಾಣ | 1.995 | 1.400 | 1.35 |
| 7) | ರುದ್ರಾಪುರ ಗ್ರಾಮದ ಸಮುದಾಯ ಭವನಕ್ಕೆ ಕಾಂಪೌಂಡ್ ನಿರ್ಮಾಣ | 1.494 | 1.494 | 1.62 |
| | | 35.7135 | 29.6485 | 16.57 |

## ಅನುಬಂಧ-2

## 1993-94ನೇ ಸಾಲಿನ ಅಧ್ಯಕ್ಷರ ವಿವೇಚನಾ ನಿಧಿಯಿಂದ ಮಂಜೂರಾದ ಕಾಮಗಾರಿಗಳ ವಿವರ

| ಕ್ರ.ಸಂ | ಕಾಮಗಾರಿ ವಿವರ | ಅಂದಾಜು | 93-94ನೇ ಸಾಲಿಗೆ ನಿಗದಿಪಡಿಸಿದ ಮೊತ್ತ | ಖರ್ಚಾದ ಮೊತ್ತ |
|---|---|---|---|---|
| 1) | ಬಿಳಿಕೆರೆ ತರಿಕೆರೆ ರಸ್ತೆಯಿಂದ ಕಲ್ಲತ್ತಿಪುರ ಲಾಲ್ ಬಾಗ್ ರಸ್ತೆ ಕೆಂಚಾಪುರ ಮಾರ್ಗವಾಗಿ 0.1 ರಿಂದ 2 ಕಿ.ಮೀ.ವರೆಗೆ 3 ರಿಂದ 5 ಕಿಮಿವರೆಗೆ 186.5 ರಿಂದ 187 ಕಿ.ಮೀ. 194.5 ರಿಂದ 195ರ ವರೆಗೆ ಮರುಡಾಂಬರು | 5.40 | 5.40 | 5.103 |
| 2) | ಬಿ.ಬಿ.ಹಿಲ್ ರಸ್ತೆಯ 56.50 ರಿಂದ 27 ಕಿಮೀವರೆಗೆ ಮರು ಡಾಂಬರು | 0.60 | 0.60 | 0.660 |
| 3) | ಬೀರೂರು ಲಿಂಗದಳ್ಳಿ ರಸ್ತೆ 15.685 ರಿಂದ 15.940 ಕಿ.ಮೀ. ರಸ್ತೆ ಬಲಭಾಗದಲ್ಲಿ ಲಿಂಗದಹಳ್ಳಿ ಗ್ರಾಮದ ಪರಿಮಿತಿಯಲ್ಲಿ ಜಲ್ಲಿ | 2.00 | 2.00 | 2.076 |
| 4) | ಬೀರೂರು ಅಜ್ಜಂಪುರ ರಸ್ತೆ ಬೀರೂರು ಲಿಂಗದಹಳ್ಳಿ ರಸ್ತೆಗೆ ಸೇರುವ ರಸ್ತೆಯಲ್ಲಿ ಹಾವಿನಹಳ್ಳಿ ಗ್ರಾಮ ಪರಿಮಿತಿಯಲ್ಲಿ ಜಲ್ಲಿ ಹಾಕಿ ಅಭಿವೃದ್ಧಿ | 2.00 | 2.00 | 1.192 |
| 5) | ತರಿಕೆರೆ ಬಿಳಿಕೆರೆ ರಸ್ತೆ 2.5 ಕಿ.ಮೀ. 3 ಅಭಿವೃದ್ಧಿ | 1.00 | 1.00 | 0.580 |
| 6) | ಮರ್ಲೆ (ಮಂ) ಕಬ್ಬಿಕೆ ಪರಿಮಿತಿಯಲ್ಲಿ ಜಲ್ಲಿ ಮತ್ತು ಡಾಂಬರು | 0.66 | 0.66 | 0.690 |
| 7) | ಮರ್ಲೆ ಮಾನನ ಕೋಣ ಗ್ರಾಮದ ಪರಿಮಿತಿಯಲ್ಲಿ ಜಲ್ಲಿ ಮತ್ತು ಡಾಂಬರು | 0.66 | 0.66 | 0.356 |
| 8) | ಮರ್ಲೆ ಕುರುಬರಹಳ್ಳಿ | 0.66 | 0.66 | 0.275 |
| 9) | ಮರ್ಲೆ ಹೊನಹಳ್ಳಿ ಗ್ರಾಮದ ಪರಿಮಿತಿ | 0.66 | 0.66 | 0.540 |

| | | | | |
|---|---|---|---|---|
| 10) | ಹರಿಜನ ಕಾಲೋನಿ ಪರಿಮಿತಿ ಗ್ರಾಮದ ಮಿತಿಯಲ್ಲಿ | 0.66 | 0.66 | - |
| 11) | ತಿಮ್ಮನಹಳ್ಳಿ ಗ್ರಾಮದ ಪರಿಮಿತಿ | 0.66 | 0.66 | 0.636 |
| 12) | ಅಲ್ಲಂಪುರ (ಮಂ) ಅಲ್ಲಂಪುರ ಗ್ರಾಮದ | 0.66 | 0.66 | - |
| 13) | ಅಲ್ಲಂಪುರ ರಾಯನಹಳ್ಳಿ ಗ್ರಾಮದ ಪರಿಮಿತಿ | 0.66 | 0.66 | 0.190 |
| 14) | ಎಸ್.ಎಸ್. ಪೇಟೆ ರಸ್ತೆಯಲ್ಲಿ 7 ರಿಂದ 7.93 ರವರೆಗೆ ಡಾಂಬರು 8.35 ರಿಂದ 9.22 | 2.07 | 2.07 | 1.070 |
| 15) | ಶಿರವಾನೆ ಮಂಡಲ ಕಳವಾಸೆ ಮುಡ್ಲ ರಸ್ತೆ ಅಭಿವೃದ್ಧಿ | 1.00 | 1.00 | - |
| 16) | ದಾನಿಹಳ್ಳಿ ಕರಗೂರು ರಸ್ತೆ 0.16 ಕಿ.ಮೀ. ಅಭಿವೃದ್ಧಿ 1.16 ರಿಂದ 2.31 | 2.00 | 2.00 | 2.481 |
| 17) | ಮುಗ್ರಿಹಳ್ಳಿ ಮಂಡಲ ಮತ್ತಾವರ ಚೌಡೇಶ್ವರಿ ದೇವಾಲಯದ ರಸ್ತೆ ಡಾಂಬರು | 1.00 | 1.00 | 1.150 |
| 18) | ಮಾಳೂರು ಮಂಡಲ ಹೂವಿನಕೆರೆ ರಸ್ತೆ ಅಭಿವೃದ್ಧಿ | 1.00 | 1.00 | - |
| 19) | ಹಾರ್ಜಿ ಹಳ್ಳಿ ಬಸ್ನೂರು ರಸ್ತೆ ಹೊಲದ ಬೈಲು ರಸ್ತೆ ಅಭಿವೃದ್ಧಿ | 1.00 | 1.00 | 1.190 |
| 20) | ಚಿಕ್ಕಳ್ಳಿ ಬೂನಕಾಡು ರಸ್ತೆ ಅಭಿವೃದ್ಧಿ 1-2.60 | 2.00 | 2.00 | 2.210 |
| 21) | ಮರದಿ ದೇವರ ಹಳ್ಳಿ ರಸ್ತೆ ಅಭಿವೃದ್ಧಿ 0-1.16 | 1.00 | 1.00 | - |
| 22) | ಅಂಬಳೆ ಗ್ರಾಮದಿಂದ ಕೆ.ಆರ್. ಪೇಟೆ ಬಿಣ್ಣೂರು ಗಡಿಗೆ ಮರು ಡಾಂಬರು 3.60 ರಿಂದ 4.2ವರೆಗೆ ಮತ್ತು 11.80-12.40 | 2.00 | 2.00 | 1.040 |
| 23) | ಸಗರನಹಳ್ಳಿ ಚಿಕ್ಕನಹಳ್ಳಿ ರಸ್ತೆ ಮರುಡಾಂಬರು | 2.00 | 2.00 | 1.989 |
| 24) | ಕೆ.ಆರ್. ಪೇಟೆ ರಸ್ತೆಯಿಂದ ಗಡಿಗೆ | 2.00 | 1.00 | 0.876 |
| 25) | ಸಿ.ಎನ್.ಕೆ.ಆರ್. ಪುರ ಉಪ್ಪಳ್ಳಿ ಗ್ರಾಮದ ಪರಿಮಿತಿ ಬಾಕ್ಸ್ ಚರಂಡಿ ಎಡಭಾಗ | 2.00 | 2.00 | 2.00 |
| 26) | ಉಪ್ಪಳ್ಳಿ ಹಿರೇಕೊಳಲಿ ಉಪ್ಪಳ್ಳಿ ಗ್ರಾಮದ ಪರಿಮಿತಿ ಬಾಕ್ಸ್ ಚರಂಡಿ ಎಡಭಾಗ ಮತ್ತು ಬಲಭಾಗ | 2.00 | 2.00 | 2.00 |
| 27) | ಬೀಕನಹಳ್ಳಿ ಕೆ.ಎಂ. ರಸ್ತೆಯಿಂದ ನಗನೀಪುರ ರಸ್ತೆ 0-2.4 | 2.00 | 1.30 | 1.997 |
| 28) | ಬೀಕನಹಳ್ಳಿ ಕೆ.ಎಂ. ರಸ್ತೆಯಿಂದ ನಗನೀಪುರ ರಸ್ತೆ 0-2.4 | 2.00 | 1.30 | 2.560 |
| 29) | ತುಮಟದಹಳ್ಳಿ ಕಣಿವೆ ರಸ್ತೆ 4 ರಿಂದ 7 ಕಿಮಿವರಗೆ | 2.00 | 3.00 | 2.893 |

| | | | | |
|---|---|---|---|---|
| 30) | ಶಿವನಿ - ಶಿವನಿ ರೈಲು ನಿಲ್ದಾಣದಿಂದ ಫಂಡರ್ ರಸ್ತೆ ಕಿ.ಮೀ. 1 ರಿಂದ 2ರ ವರೆಗೆ | 1.00 | 1.00 | 0.979 |
| 31) | ಶಿವನಿ-ಶಿವನಿ ರೈಲು ನಿಲ್ದಾಣದಿಂದ ಫೀಡರ್ ರಸ್ತೆ 1ನೇ ಕಿಮೀಯಿಂದ 7ನೇ ಕಿಮಿವರೆಗೆ ಅಭಿವೃದ್ಧಿ | 2.00 | 3.00 | 2.247 |
| 32) | ತ್ಯಾಗದಕಟ್ಟೆ ಕಲ್ಲೇನಹಳ್ಳಿ ರಸ್ತೆ 1 ರಿಂದ 3ರ ವರೆಗೆ | 2.00 | 2.00 | 0.363 |
| 33) | ಶಿವನಿ ಆರ್‌ಎಸ್ ನಿಂದ ಬಸವಾಪುರ ಶಂಜೈನೂರು ರಸ್ತೆ | 1.00 | 1.00 | 0.607 |
| 34) | ತರಿಕೆರೆ ತಾಲ್ಲೂಕು ಬುಕ್ಕಾಂಬುದಿ ಶಿವನಿ ರಸ್ತೆಯಿಂದ 1 ಕಿಮೀ ಅಭಿವೃದ್ಧಿ | 1.00 | 1.00 | 1.398 |
| 35) | ಬಾಳೆಹೊನ್ನೂರು ಕಣಬೂರು ಕಾಸ್ಕಲ್ ರಸ್ತೆ ಅಭಿವೃದ್ಧಿ 0 ದಿಂದ 0.55 ಕಿಮೀವರೆಗೆ | 0.97 | 0.97 | 0.969 |
| 36) | ಕಣಬೂರು ಮಂಡಲ ಕಡ್ಲೆಮಕ್ಕಿಯಿಂದ ಒಟ್ಟಿಗೆ ಕಳಬೂರು ಸೇತುವೆ ಅಭಿವೃದ್ಧಿ | 0.97 | 0.97 | 0.969 |
| 37) | ಸುತ್ತ ಶೆಟ್ಟಿಕೊಪ್ಪ ರಸ್ತೆಯಿಂದ ನೇತ್ಕಲ್ ರಸ್ತೆ ಅಭಿವೃದ್ಧಿ 0 ದಿಂದ 0.55ರವರೆಗೆ | 0.95 | 0.95 | 0.933 |
| 38) | ಎನ್.ಆರ್.ಪುರ ತಾಮೆಣನಿಂದ ಮಂಡಲ ಶೆಟ್ಟಿಕೊಪ್ಪ ರಸ್ತೆ 3 ನೇ ಕಮೀ ದಾಂಭರು | 1.13 | 1.13 | 1.150 |
| 39) | ಸುತ್ತ ಶೆಟ್ಟಿಕೊಪ್ಪ ರಸ್ತೆಯಿಂದ ನೇತ್ಕಲ್ ರಸ್ತೆ 4ನೇ ಕಿಮೀ ಅಭಿವೃದ್ಧಿ | 1.76 | 1.76 | 1.777 |
| 40) | ಎನ್.ಆರ್.ಪುರ ತಾ: ಬಾಳೆಹೊನ್ನೂರು ಶ್ರೀ ರಂಭಾಪುರರಿ ಮಠ ಸಮುದಾಯ ಭವನ ನಿರ್ಮಾಣ. | 3.00 | 2.00 | 0.376 |
| 41) | ಹಳೇಮೂಡಿಗೆರೆ ಸಕಲೇಶಪುರ ರಸ್ತೆಯಿಂದ ಹಳೆಮೂಡಿಗೆರೆ ಹರಿಜನ ಕಾಲನಿ ರಸ್ತೆ ಅಭಿವೃದ್ಧಿ | 1.90 | 1.90 | 2.270. |
| 42) | ಬಾಳೂರು ಮಂಡಲ ಬಾಳೂರು ರಸ್ತೆ ಅಭಿವೃದ್ಧಿ 0.1 ರಿಂದ 2.50 ಕಮೀವರಗೆ | 4.00 | 3.00 | 3.50 |
| 43) | ಬಣಕಲ್‌ಮಂಡಲ ಕೋಗಿಲಿ ರಸ್ತೆ ಅಭಿವೃದ್ಧಿ 1 ರಿಂದ 2.90 ಕಿಮೀವರೆಗೆ | 6.00 | 4.50 | 6.155 |
| 44) | ಮೂಡಿಗೆರೆಯಲ್ಲಿ ಹೊಸದಾಗಿ ನಿರ್ಮಿಸಿದ ಪ್ರ ದ ಕಾಲೇಜಿನ ಪಶ್ಚಿಮ ಮತ್ತು ಉತ್ತರ ಭಾಗದಲ್ಲಿ ಆವರಣಗೋಡೆ ನಿರ್ಮಾಣ | 1.09 | 1.99 | 1.831 |
| 45) | ಹೊಸಕಬು ದತ್ತಹಳ್ಳಿ ಚಿಕ್ಕಹಳ್ಳಿ ರಸ್ತೆ ಜಲ್ಲಿ ಹಾಕುವುದು 5.452 | 1.99 | 1.99 | 1.831 |
| 46) | ಮೂಡಿಗೆರೆ ತಾ: ಹೊನಗಲ್ ಚಿಕ್ಕಹಳ್ಳಿ ರಸ್ತೆಗೆ ಜಲ್ಲಿ 4 ರಿಂದ 5.25 ಕಿಮಿವರೆಗೆ | 1.96 | 1.96 | 0.760 |
| 47) | ಹೊನಗಲ್ ಚಿಕ್ಕಹಳ್ಳಿ ರಸ್ತೆ ಜಲ್ಲಿ ಹಾಕುವುದು ಹಾಕುವುದು ಕಿಮೀ 4.525 ರಿಂದ 6.00 ವರೆಗೆ | 4.33 | 4.33 | 4.581 |

| | | | | |
|---|---|---|---|---|
| 48) | ಮೂಡಿಗೆರೆ ರೋಟರಿ ಕ್ಲಬ್ ವತಿಯಿಂದ ಆಸ್ಪತ್ರೆ ಕಟ್ಟಡದ ಬಗ್ಗೆ | 5.00 | 5.00 | 5.00 |
| 49) | ಮೂಡಿಗೆರೆ ಪಟ್ಟಣದಲ್ಲಿ ಗೇಟ್ಸ್ ಕಾಲೋನಿಯಿಂದ ಎಂ ಜಿ ರಸ್ತೆ ಅಗ್ರಹಾರ ರಸ್ತೆವರೆಗೆ ಡಾಂಬರು | 0.90 | 0.90 | 0.878 |
| 50) | ತೋಟದಪುರ ಗ್ರಾಮದ ಗ್ರಾಮದಲ್ಲಿ ಅಂಗನವಾಡಿ ಕಟ್ಟಡ | 0.85 | 0.85 | 1.329 |
| 51) | ಕೆನ್ನೆಹಾಳ್ ಗ್ರಾಮದ ನೀರು ಸರಬರಾಜು | 2.00 | 2.00 | 0.660 |
| 52) | ಉದುಸೆ ಹಿ.ಪ್ರಾ. ಪಾ ಪಾ ಕಟ್ಟಡ ನಿರ್ಮಾಣ | 0.99 | 0.99 | 0.825 |
| 53) | ಮೂಡಿಗೆರೆ ಬಾಲಕರ ಸರ್ಕಾರಿ ಹಿ.ಪ್ರಾ. ಶಾ. ಕೊಠಡಿ | 1.26 | 1.26 | 0.914 |
| 54) | ಬಿದರಹಳ್ಳಿಯಲ್ಲಿ ಶಾಲಾ ಕೊಠಡಿ ನಿರ್ಮಾಣ | 0.41 | 0.41 | 0.269 |
| 55) | ಹೊನ್ನಂಪುರ ಗ್ರಾಮದ ಶಾಲಾ ಕೊಠಡಿ ನಿರ್ಮಾಣ | 0.50 | 0.50 | 0.565 |
| 56) | ಕಿತ್ತಲೆಗುಂಡಿಯಲ್ಲಿ ಶಾಲಾ ಕಟ್ಟಡ ನಿರ್ಮಾಣ | 0.50 | 0.50 | 0.288 |
| 57) | ಸಿಗಡಿ ಮೂಲೆಯಲ್ಲಿ ಶಾಲಾ ಕಟ್ಟಡ ನಿರ್ಮಾಣ | 0.50 | 0.50 | 0.510 |
| 58) | ಹೊನಗಲ್ ರಸ್ತೆ ಡಾಸಮಂಟ ಹತ್ತಿರ ಬಾಕ್ಸ್ ಚರಂಡಿ | 2.00 | 1.50 | 2.008 |
| 59) | ಹಂತೂರು ಕಾನಡೂರು ರಸ್ತೆ ಮರು ಡಾಂಬರು ಕಿಮಿ 1 ರಿಂದ 6 ಕಿಮಿವರೆಗೆ | 6.05 | 7.05 | 5.990 |
| 60) | ಕಲ್ಯಾಣಗದ್ದೆ ಗ್ರಾಮಕ್ಕೆ ನೈಸರ್ಗಿಕ ನೀರು ಸರಬರಾಜು | 1.25 | 1.25 | - |
| 61) | ದೇವರುಂಡ ಗ್ರಾಮದ ಪಶುಚಿಕಿತ್ಸಾಲಯ ಕಟ್ಟಡ | 1.00 | 1.00 | 0.700 |
| 62) | ಕೊಟ್ಟಿಗೆಹಾರ ಅತ್ತಿಗೆರೆ ಗ್ರಾಮಕ್ಕೆ ನೀರು ಸರಬರಾಜು ತೆರೆದ ಬಾವಿ ಕೆಲಸ | 5.00 | 5.00 | 3.791 |
| 63) | ಪೋಲೀಸ್ ಸ್ಟೇಷನ್ ಮುಂಭಾಗದಿಂದ ಒಣಮೀನು ಮಾರುಕಟ್ಟೆ ದಾಂಬರು | 1.20 | 1.20 | 1.325 |
| 64) | ಬೂಲೆಮತ್ತಿಕಟ್ಟೆ ಹೆಗ್ಗಡ್ಲು ರಸ್ತೆ ಅಭಿವೃದ್ಧಿ | 2.00 | 1.50 | 2.180 |
| 65) | ಮೂಡಿಗೆರೆ ಪಟ್ಟಣದಲ್ಲಿ ಮರು ಡಾಂಬರು | 1.20 | 1.20 | 1.457 |
| 66) | ಹಳ್ಳಿಕೆರೆ ರಸ್ತೆ ಅಭಿವೃದ್ಧಿ 2 ನೇ ಕಿಮೀ ಅಭಿವೃದ್ಧಿ | 1.00 | 1.00 | 0.442 |
| 67) | ಹಳ್ಳಿಕೆರೆ ರಸ್ತೆ ಅಭಿವೃದ್ಧಿ | 1.12 | 1.12 | 0.686 |
| 68) | ಬೆಟ್ಟದಮನೆ ಬೇಕುಂದ ರಸ್ತೆ ಮರುಡಾಂಬರು 1 ನೇ ಕಿಮಿ | 2.80 | 2.80 | 2.796 |
| 69) | ಹಳ್ಳಿಕ್ಕೆ ಕೊಟ್ಟಿಕೆರೆ ಗುತ್ತಿ ರಸ್ತೆ 1ನೇ ಕಿಮಿ 72 ಕಿಮಿ | 09.47 | 9.47 | 0.939 |
| 70) | ನೆಲ್ಲಿ ಚಿಕ್ಕೋಡಿ ರಸ್ತೆ ಅಭಿವೃದ್ಧಿ | 2.00 | 1.50 | 2.229 |
| 71) | ಅಂಜಾನೆ ಹೊಲ್ಲ ರಸ್ತೆ ಅಭಿವೃದ್ಧಿ | 2.00 | 1.50 | 0.996 |

| | | | |
|---|---|---|---|
| 72) ಬೇಲೂರು ಪೆನಗೋಡು ರಸ್ತೆ ಡಾಂವರು 0-2 ಕಿಮಿ | 2.92 | 2.92 | 3.530 |
| 73) ಮೂಡಿಗೆರೆ ಕುಂದೂರು ಎಸ್ಟೇಟ್ ಹುಲ್ಲಿ ಮನೆ ಜೇನುಗದ್ದೆ ಮಾರ್ಗ 1 ರಿಂದ 4 ಕಿಮಿ | 5.10 | 5.10 | 5.686 |
| 74) ಬಾಳೆಹೊಳೆ ಪ್ರಾಥಮಿಕ ಆರೋಗ್ಯ ಕೇಂದ್ರ ಕಟ್ಟಡದ ರಸ್ತೆ | 2.00 | 1.50 | 1.550 |
| 75) ಬೆಟ್ಟದಮೇಲೆ ದೇವರುಂದ ರಸ್ತೆ 7 ನೇ ಕಿಮಿ ಡಾಂಬರು | 1.12 | 1.12 | 1.550 |
| 76) ತಳ್ಳಿಹಳ್ಳಿ ಗ್ರಾಮದ ಸರ್ಕಾರಿ ಸಂಘ ಮುಂಬಾಗದಿಂದ ದೇವಿರಮ್ಮ ದೇವಸ್ಥಾನ 0 ದಿಂದ 15 ರಸ್ತೆ ಅಭಿವೃದ್ಧಿ 1.15 ದಿಂದ 2.20 | 2.00 | 2.00 | 075 |
| 77) ಮಡ್ಡಿಕೆರೆ ಗ್ರಾಮದ ರಸ್ತೆ ಅಭಿವೃದ್ಧಿ | 2.00 | 2.00 | 1.303 |
| 78) ಲೋಕವಳ್ಳಿ ಗ್ರಾಮಕ್ಕೆ 3 ರಿಂದ 6 ಕಿಮಿ ಅಭಿವೃದ್ಧಿ | 5.00 | 5.00 | 5.258 |
| 80) ಗಾಳಿಪೇಟೆಯಿಂದ ಗುಡಮನಹಳ್ಳಿ ರಸ್ತೆ ಅಭಿವೃದ್ಧಿ 0-1 | 1.00 | 1.00 | 0.990 |
| 81) ಪಿ.ಎಸ್.ಆರ್. ಇಳಿಹೊಳೆ ಹರಿಜನ ಕಾಲೋನಿ ರಸ್ತೆ ಡಾಂಭರು | 1.00 | 1.00 | 1.040 |
| 82) ಆಲಗುಡ್ಡೆ ಬಸ್ಕಲ್ ರಸ್ತೆ ಅಭಿವೃದ್ಧಿ 12 ರಲ್ಲಿ ಅಭಿವೃದ್ಧಿ 1 ರಿಂದ 3.15 ಕಿಮಿವರೆಗೆ | 3.00 | 3.00 | 2.496 |
| 83) ಮೂಡಿಗೆರೆ ಪಟ್ಟಣದ ಛತ್ರದ ಮೈದಾನ ಮುಖ್ಯ ರಸ್ತೆ ಡಾಂಬ | 1.25 | 1.25 | 1.33 |
| 84) ಮೂಡಿಗೆರೆ ಪಟ್ಟಣ ಬೇಲೂರು ರಸ್ತೆಯಿಂದಂ ಚಿತ್ರಮಂದಿರ ಎಡಭಾಗದ ರಸ್ತೆ ಮೈದಾನ ಡಾಂಬರು | 1.25 | 1.25 | 1.283 |
| 85) ಮೂಡಿಗೆರೆ ಸುಲ್ತಾನ್ ರಸ್ತೆ ಕೆ.ಎಂ. ರಸ್ತೆಯಿಂದ ಈದ್ಗಾ ಮೈದಾನ ಪುರು ಡಾಂಬರು | 0.77 | 0.77 | 0.740 |
| 86) ಮೂಡಿಗೆರೆ ಅಗ್ರಹಾರ ರಸ್ತೆಯಿಂದ ಸುಬ್ರಮಣ್ಯ ಮನೆಯವರೆಗೆ ಆನಂದ ರಾಯರ ಮನೆವರೆಗೆ ಡಾಂಬರು | 1.39 | 1.39 | 1.450 |
| 87) ಮೂಡಿಗೆರೆ ಛತ್ರ ಮೈದಾನ ದಾನಶೆಟ್ಟಿ ಮನೆಯಿಂದ ಗದ್ದೆವರೆಗೆ ಬಿ ಎಂ ರಸ್ತೆ 2 ನೇ ಕ್ರಾಸ್ | 1.68 | 1.68 | 1.710 |
| 88) ಅಬೂಕೂರು ಮನೆ ಹೊರವಳ್ಳಿ ರಸ್ತೆಯಿಂದ ಕೆ.ಎಂ. ರಸ್ತೆ 2 ನೇ ಕ್ರಾಸ್ ಮರು ಡಾಂಭರು | 0.90 | 0.90 | 0.878 |
| 89) ಪಂಚರವಳ್ಳಿ ಎಂಕೆರೆ 1 ನೇ ಕಿಮಿ ಮತ್ತು 2 ನೇ ಕಿಮಿ ಅಭಿವೃದ್ಧಿ | 1.00 | 1.00 | 0.878 |
| 90) ಆಲೂರು ಮಂಡಲ ಆಲೂರು ರಸ್ತೆ ಹರಿಜನ ಕಾಲೋನಿ | 1.00 | 1.00 | 0.930 |

| | | | | |
|---|---|---|---|---|
| 91) | ಆಲೂರು ಮಂಡಲ ಮೂಡಿಗುಂಡಿ ಹರಿಜನ ಕಾಲೋನಿ ರಸ್ತೆ | 1.00 | 1.00 | 0.766 |
| 92) | ಹತ್ತಿಕಟ್ಟೆ ಕಲ್ಲುಗುಡ್ಡೆ ಹರಿಜನ ಕಾಲೋನಿ ರಸ್ತೆ | 1.00 | 1.00 | 1.002 |
| 93) | ಹತ್ತಿಕಟ್ಟೆ 3 ನೇ ಕಿಮಿನಲ್ಲಿ ಅಭಿವೃದ್ಧಿ | 1.00 | 1.00 | 1.010 |
| 94) | ಮೂಡಿಗರೆ ಗೋಣಬೀಡು ಅಗ್ರಹಾರ ರಸ್ತೆ ಮರುಡಾಂಬರು | 1.95 | 1.95 | 1.897 |
| 95) | ಮೂಡಿಗೆರೆ ಸುಬ್ರಮಣ್ಯಸ್ವಾಮಿ ದೇವಸ್ಥಾನ ರಸ್ತೆ ಅಭಿವೃದ್ಧಿ | 1.80 | 1.60 | 1.840 |
| 96) | ದಿಣ್ಣೆಕೂಡು ದಿಣ್ಣೆನಬೈಹಳ್ಳಿ ನೀರು ಸರಬರಾಜು ಯೋಜನೆ ಜಲ ಸಂಗ್ರಹಣೆ | 4.57 | 4.57 | 3:068 |
| | | 178.91 | 172.05 | 161.505 |

## 1993-94 ನೇ ಸಾಲಿನಲ್ಲಿ ಅಧ್ಯಕ್ಷರ ವಿವೇಚನಾ ನಿಧಿಯಿಂದ ಮಂಜೂರಾದ ಕಾಮಗಾರಿಗಳ ವಿವರ

ಜಿಲ್ಲೆ : ಧಾರವಾಡ

ರೂ.ಲಕ್ಷಗಳಲ್ಲಿ

| ಕ್ರಸಂ | ಕಾಮಗಾರಿ ಹೆಸರು | ಅಂದಾಜು ಮೊತ್ತ | 93-94ನೇ ಸಾಲಿನಲ್ಲಿ ನಿಗದಿಪಡಿಸಿದ ಅನುದಾನ | ಖರ್ಚಾದ ಮೊತ್ತ |
|---|---|---|---|---|
| 1) | ಬ್ಯಾಡಗಿ ಕದರಮಂಡಲಗಿ ರಸ್ತೆ ಕಿಮಿ 5.2 ರಿಂದ 5.50 ರಲ್ಲಿ ಪಕ್ಕ ಗಟಾರ | 2.97 | 2.97 | 1.87 |
| 2) | ಸವಣೂರು ಶಿರೆವಾಡ ರಸ್ತೆ 0 ದಿಂದ 5.50 ಅಭಿವೃದ್ಧಿ | 2.00 | 2.00 | 2.42 |
| 3) | ಕುಂಬ ರಕೊಪ್ಪದಿಂದ ಕುಲ್ಲಾಳಿಗೆ ಹೋಗುವ ರಸ್ತೆ ಕಿಮಿ 1 | 1.50 | 1.50 | 1.319 |
| 4) | ಕುಂಬಾರ ಕೊಪ್ಪದಿಂದ ಗರಮರಿಗೆ ಹೋಗುವ ರಸ್ತೆ ನಿರ್ಮಾಣ 1 ರಿಂದ 2 ರವರೆಗೆ | 4.50 | 4.50 | 5.51 |
| 5) | ಶಿವಳ್ಳಿ ಯಿಂದ ಹುಬ್ಬಳ್ಳಿಗೆ ರಸ್ತೆ ನಿರ್ಮಾಣ ಕಿಮಿ 1 ರಲ್ಲಿ ಮತ್ತು 2 ರಲ್ಲಿ | 2.00 | 2.00 | 2.023 |
| 6) | ಶಿವಳ್ಳಿಯಿಂದ ಹುಬ್ಬಳ್ಳಿಗೆ ಕಮಿ 3 ರಲ್ಲಿ ರಸ್ತೆ ರಚನೆ ಮಂತ್ರಿ ಕೇಸಿಂಗ್ | 2.00 | 2.00 | 1.684 |
| 7) | ಹಾನಗಲ್ ದುಮ್ಮನಹಳ್ಳಿ ರಸ್ತೆ ಕಿಮಿ 16.70 ದಿಂದ 17.20 ವರೆಗೆ ಮರು ಖಡಿ ಹಾಕಿ ಡಾಂಬರು | 1.54 | 1.54 | - |
| 8) | ಹಾನಗಲ್ ದುಮ್ಮನಹಳ್ಳಿ ರಸ್ತೆ ಕಿಮೀ 18.70 ದಿಂದ 17.20 ವರೆಗೆ ಮರು ಖಡಿ ಹಾಕಿಸಿ ಡಾಂಬರು | 2.10 | 2.10 | 0.32 |

| | | | | |
|---|---|---|---|---|
| 9) | ಹುಲ್ಲರಕಳ ದಶರಥಕೂಡ ರಸ್ತೆ ಕಿಮಿ 1 ರಲ್ಲಿ ದೊಡ್ಡ ಖಡಿ ಹಾಕುವುದು | 0.980 | 0.980 | 0.54 |
| 10) | ಹಾನಗಲ್ ವಂಡರಗಿ ರಸ್ತೆ ಸುಧಾರಣೆ 2 ರಿಂದ 3 ರವರೆಗೆ 6 ರಿಂದ 7, 7 ರಿಂದ 8 | 2.91 | 2.91 | 2.819 |
| 11) | ಹಾನಗಲ್ ದೊಮ್ಮನಹಳ್ಳಿ ರಸ್ತೆಯಿಂದ ಬಸವಾಪುರ ಗ್ರಾಮಕ್ಕೆ ಕೂಡು ರಸ್ತೆ ಕಿಮಿ 3 ರಲ್ಲಿ ಸುಧಾರಣೆ | 0.99 | 0.99 | 0.368 |
| 12) | ಆಲದಕಟ್ಟೆ ಮೂರನಬೀಡು ಕಿಮಿ 1 ರಿಂದ 2ರವರೆಗೆ ಸುಧಾರಣೆ 0 ದಿಂದ 1 | 1.995 | 1.975 | 1.187 |
| 13) | ಮಲ್ಲಿಗಾಡ ಮಹಾರಾಜಪೇಟೆ ವಾಯೂ ಕರಕುದರಿ ರಸ್ತೆ 0 ದಿಂದ 3 ರವರೆಗೆ ಸುಧಾರಣೆ | 0.965 | 0.965 | 0.769 |
| 14) | ಮಲಗುಂಡ ಬ್ಯಾಡಗಿ ರಸ್ತೆ ಕಿಮೀ 6 ರಲ್ಲಿ ಲೀಲೆವಲ್ ಕಾಸ್‌ವೇ ನಿರ್ಮಾಣ | 0.995 | 0.995 | 0.621 |
| 15) | ತಿಳುವಳ್ಳಿಯಿಂದ ಮಲಗುಂಡ ಬ್ಯಾಡಗಿ ರಸ್ತೆಗೆ ಕೂಡು ರಸ್ತೆ ಕಿಮೀ 9 ರಲ್ಲಿ ಖಡಿ ಹಾಕುವುದು | 0.930 | 0.930 | 1.013 |
| 16) | ಉಪ್ಪಾಣಿ ಹೊಸೂರು ರಸ್ತೆ ಕಿಮಿ 2 ರಲ್ಲಿ ಖಡಿ ಹಾಕುವುದು | 0.920 | 0.920 | 0.582 |
| 17) | ತಿಳುವಳ್ಳಿಯಿಂದ ಮಲಗುಂಡ ಬ್ಯಾಡಗಿ ರಸ್ತೆಗೆ ಕೂಡು ರಸ್ತೆಗೆ ಕಿಮಿ 9 ರಲ್ಲ ಖಡಿ ಹಾಕುವುದು | 0.930 | 0.930 | 1.013 |
| 18) | ಹಾನಗಲ್ ಮಲಗುಂಡ ರಸ್ತೆಯಿಂದ ಕಲ್ಲಾಪುರ ಕೂಡು ರಸ್ತೆಗೆ 0 ದಿಂದ 1 ಕಿಮಿವರೆಗೆ ಸುಧಾರಣೆ | 0.740 | 0.740 | 0.621 |
| 19) | ಹಾನಗಲ್ ಮಲಗುಂಡ ರಸ್ತೆಯಿಂದ ಯಲ್ಲಾಪುರ ಕೂಡು ರಸ್ತೆಗೆ ಖಡಿ ಹಾಕುವುದು 1 ರಿಂದ 1.5ವರೆಗೆ | 0.780 | 0.780 | - |
| 20) | ಕಲ್ಲಾಪುರ ಕ್ರಾಸ್‌ದಿಂದ ಕೊಂಕಣ ರಸ್ತೆ 1 ರಿಂದ 2 ರವೆರೆಗೆ ಖಡಿ ಹಾಕುವುದು | 0.685 | 0.685 | - |
| 21) | ಹೊಸಪೇಟೆ ಹುನುಗುಂಡ ರಸ್ತೆ ಕಿಮೀ 1 ರಲ್ಲಿ ಸುಧಾರಣೆ | 0.980 | 0.980 | - |
| | ಒಟ್ಟು | 33.417 | 33.417 | 23.934 |

## 93-94ನೇ ಸಾಲಿನ ಅಧ್ಯಕ್ಷರ ವಿವೇಚನಾ ನಿಧಿಯಿಂದ ಮಂಜೂರಾದ ಕಾಮಗಾರಿಗಳ ವಿವರ

ಜಿಲ್ಲೆ: ದ.ಕನ್ನಡ ಜಿಲ್ಲೆ (ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಕಾಮಗಾರಿ ವಿವರ | ಅಂದಾಜು ಮೊತ್ತ | 93-94ನೇ ಸಾಲಿಗೆ ನಿಗದಿಪಡಿಸಿದ ಅನುದಾನ | ವಿರ್ಚಾದ ಮೊತ್ತ |
|---|---|---|---|---|
| ಕಾರ್ಕಳ | | | | |
| 1) | ಕಾರ್ಕಳ ತಾ: ನಲ್ಲೂರ ಮಂಡಲದ ರಂಜಾಳದಿಂದ ಸಣೂರು ಸರ್ವತ್ತೂರು ಬೇಕಟ್ಟೆ ರಸ್ತೆಯ ಆಯ್ದಭಾಗಗಳಲ್ಲಿ ದುರಸ್ತಿ (ಡಾಂಬರೀಕಣ) | 4.75 | 2.00 | - |
| 2) | ಕಾರ್ಕಳ ತಾ. ಗ್ರಾಮದಲ್ಲಿ ಆಶ್ರಯ ಕಾಲೋನಿ ನೀರು ಸರಬರಾಜು ವಿಸ್ತರಣೆ | 1.50 | 1.50 | 0.37 |
| 3) | ಕಾರ್ಕಳ ತಾ. ಅಜೆಕಾರು ಹೆರ್ಮುಡೆ ಜಾರ್ಕಳ ದರ್ವಾನೆ ರಸ್ತೆಯ 5.90 ಕಿಮಿನಿಂದ 6.70ರ ವರಗೆ ಅಭಿವೃದ್ಧಿ ಹಾಗೂ ಜಲ್ಲಿ ಹಾಕಿ ಡಾಂಬರು | 3.50 | 3.50 | 0.02 |
| 4) | ಕಾರ್ಕಳ ತಾ. ಅಜೆಕಾರು ಮಿಯಾರು ರಸ್ತೆಯ ಕಿಮಿ 14.90 ದಿಂದ 20.50ರ ವರೆಗೆ 2ನೇ ಪದರ ಜಲ್ಲಿ ಹಾಕಿ ಡಾಂಬರು ಮಾಡುವುದು. | 15.69 | 7.00 | 1.09 |
| 5) | ಕಾರ್ಕಳ ತಾ. ಅಜೆಕಾರು ಹೆರ್ಮುದ ಕಾರ್ಕಳ ರಸ್ತೆಯ ಕಿಮಿ ಡಾಂಬರು ಮಾಡುವುದು | 2.50 | 2.50 | 4.38 |
| ವಿಟ್ಲ | | | | |
| 1) | ಬ್ರಹ್ಮರ ಕೊಟ್ಲು ಪಂಜಿನಡ್ಕ ಹರಿಜನ ಕಾಲೋನಿ ರಸ್ತೆ ಅಭಿವೃದ್ಧಿ | 10.00 | 3.00 | - |
| ಸುಳ್ಯ | | | | |
| 1) | ಸುಳ್ಯ ತಾ. ಕೊಲ್ಲ ಮಗ್ರ ಗ್ರಾಮ ಇಗ್ನೊರು ಎಂಬಲ್ಲಿ ಸೇತುವೆ ನಿರ್ಮಾಣ | 9.15 | 4.00 | 1.040 |
| | | 55.60. | 26.25 | 8.16 |

F-34

## 1993-94ನೇ ಸಾಲಿನಲ್ಲಿ ಅಧ್ಯಕ್ಷರ ವಿವೇಚನಾ ನಿಧಿಯಿಂದ ಮಂಜೂರಾದ ಕಾಮಗಾರಿಗಳ ವಿವರ

ಜಿಲ್ಲ : ಹಾಸನ . (ರೂ ಲಕ್ಷಗಳಲ್ಲಿ)

| ಅ.ನಂ | ಕಾಮಗಾರಿಯ ಹೆಸರು | ಅಂದಾಜು ಮೊತ್ತ | 93-94ನೇ ಸಾಲಿಗೆ ನಿಗಧಿ ಪಡಿಸಿದ ಮೊತ್ತ | ಖರ್ಚು |
|---|---|---|---|---|
| 1 | 2 | 3 | 4 | 5 |
| 1) | ಹಾಸನ ಅನಬಾಳಿ ದೇವರುಂದ ರಸ್ತೆಯಿಂದ ಜೈನಹಳ್ಳಿ ರಸ್ತೆಯನ್ನು ಅಭಿವೃದ್ಧಿ ಪಡಿಸುವುದು ಕಿ. ಮೀ 1 ರಿಂದ 5ರವರೆಗೆ | 11.57 | 7.70 | 1.307 |
| 2) | ಎಂ.ಎಸ್. ರಸ್ತೆಯಿಂದ ಕ್ಯಾನಹಳ್ಳಿ ರಸ್ತೆ | 1.75 | 1.75 | - |
| 3) | ದೇವಲಕುಮ ರಸ್ತೆ 1 ರಿಂದ 5.60 | 1.60 | 1.00 | 0.660 |
| 4) | ಹಾಸಬಾಳು ಮಂಡಿಗೆ ರಸ್ತೆ ಆವಿನಹಳ್ಳಿ 1 ರಿಂದ 5.60 | 8.796 | 5.00 | 1.337 |
| 5) | ದೇವಲಕ ನಿರವಾಹಳ್ಳಿ ರಸ್ತೆ ಡಾಂಬರೀಕರಣ | 1.98 | 1.00 | 0.095 |
| 6) | ಕಿರು ನೀರಾವರಿ ಯೋಜನೆ ಚೆನ್ನಗೌಡನಹಳ್ | 1.250 | 0.55 | 0.457 |
| 7) | ಕಿರು ನೀರು ಯೋಜನೆ ವಡೇರಹಟ್ಟಿ ಹಳ್ಳಿ | 1.300 | 0.55 | - |
| 8). | ಕಿರು ನೀರು ಯೋಜನೆ ನೆಲಗಟ್ಟು ಹಳ್ಳಿ | 1.200 | 0.55 | - |
| 9) | ಕಿರು ನೀರು ಯೋಜನೆ ಪರಸನಹಳ್ಳಿ | 1.300 | 0.55 | 0.275 |
| 10) | ಕಿರು ನೀರು ಯೋಜನೆ ಲಾಮನಹಳ್ಳಿ | 1.100 | 0.55 | - |
| 11) | ಕಿರು ನೀರು ಯೋಜನೆ ಮಾಗಲಹಳ್ಳಿ | 1.300 | 0.55 | - |
| 12) | ಕಿರು ನೀರು ಯೋಜನೆ ಅಕ್ಕನವಾಡಿರ | 1.300 | 0.55 | - |
| 13) | ಕಿರು ನೀರು ಸರಬಾಜು ಯೋಜನೆ ಕಾಡವನಹಳ್ಳಿ | 1.40 | 0.60 | - |
| 14) | ಕಿರು ನೀರು ಸರಬರಾಜು ಯೋಜನೆ ಸೋಮೇನಹಳ್ಳಿ ಹೊಸಳ್ಳಿ, ಅರಕಲಗೂಡು | 1.20 | 0.50 | 1.20 |
| 15) | ಚನ್ನಪಟ್ಟಣ ಮಂಡಲ ಗಪ್ಪೇನಹಳ್ಳಿ ಗ್ರಾಮದ ದೊಡ್ಡ ಕೆರೆ ಅಭಿವೃದ್ಧಿ | 2.00 | 2.00 | - |
| 16) | ಬೇರನಹಳ್ಳಿಯಿಂದ ನಿಡ್ಡು ಮಾರ್ಗ ಕಟ್ಟಳ್ಳಿಗೆ ಸೇರುವ ರಸ್ತೆ ಕ್ರಾಸ್ ಕಾಜುವೇ ನಿರ್ಮಾಣ.1ರಿಂದ 3 ಕಿಮೀ | 3.98 | 3.98 | 0.661 |
| 17) | ಬಿ.ಎಂ. ರಸ್ತೆ ಕ್ಯಾಮಿಹಳ್ಳಿ ರಸ್ತೆ ಮಾರ್ಗವಾಗಿ ವಿರುಮನಹಳ್ಳಿ ಹೋಗುವ ರಸ್ತೆ (3ನೇ ಕಿಮೀ)1 ರಿಂದ 2. | 3.28 | 3.28 | 1.029 |
| 18) | ಚನ್ನಂಗಿಹಳ್ಳಿಯಿಂದ ಗವೇನಹಳ್ಳಿ ಕಾನಲ್ ಮಾರ್ಗಬ್ಯಾಡರಹಳ್ಳಿ ಹರಿಜನ ಕಾಲೋನಿಗೆ ಸೇರುವ ರಸ್ತೆ ಮೋರಿ ಮತ್ತು ಕಾಜುವೇ ನಿರ್ಮಾಣ | 2.13 | 2.13 | 0.522 |
| 19) | ವರಹಳ್ಳಿ ಮಂಡಲ ವರಹಳ್ಳಿ ಗ್ರಾಮದ ಚಿಕ್ಕಕೆರೆ ಮುಖಾಂತರ ಅಗಸರವಳ್ಳಿಗೆ | | | |

| | | | | |
|---|---|---|---|---|
| | ಹೋಗುವ ರಸ್ತೆ ಅಭಿವೃದ್ಧಿ ಮತ್ತು ನಿರ್ಮಾಣ 0.90 ದಿಂದ 900 ಎಂ ಎಂ ವ್ಯಾಸದ ಮೋರಿ ಮತ್ತು ರಸ್ತೆ ನಿರ್ಮಾಣ | 3.00 | 3.00 | - |
| 20) | ಪಿ ಸಿ ರಸ್ತೆಯಿಂದ ಕೈಲಾಶವರ ದೇವಸ್ಥಾನ ಮಾರ್ಗವಾಗಿ ರೈಲು ಸಂಪರ್ಕ ರಸ್ತೆಗೆ ಸೇತುವೆ. | 1.999 | 1.999 | - |
| 21) | ಹೆಚ್ ಪಿ ಸಿ ರಸ್ತೆಯಿಂದ ಅರಳಿಕಟ್ಟೆ ರಸ್ತೆ ಅಭಿವೃದ್ಧಿ ಕಿ ಮೀ 1 | 2.00 | 1.500 | - |
| 22) | ದುದ್ದು ಹಿರೇಕಡಲೂರು ರಸ್ತೆ ಅಭಿವೃದ್ಧಿಕ ಕೆಲಸ | 2.00 | 2.00 | - |
| 23) | ಹರಿಜನಪುರ ಬ್ಯಾಡರಹಳ್ಳಿ ರಸ್ತೆ ಅಭಿವೃದ್ಧಿ | 1.00 | 1.00 | - |
| 24) | ಹೆಚ್. ಮೊಲನಹಳ್ಳಿ ರಸ್ತೆಯಲ್ಲಿ ಕೆಳಮಟ್ಟದ ಸೇತುವೆ ನಿರ್ಮಾಣ | 0.50 | 0.50 | - |
| 25) | ಗೋಪನಹಳ್ಳಿ ರಸ್ತೆಯಿಂದ ಕೊರಮಂಗಳ ರಸ್ತೆ ಅಭಿವೃದ್ಧಿ | 1.00 | 1.00 | - |
| 26) | ಹುರಳಿಕೊಪ್ಪಲಿನಿಂದ ಸಾಲಗಾಡು ರಸ್ತೆ ಅಭಿವೃದ್ಧಿ | 2.00 | 2.00 | - |
| 27) | ಬ್ಯಾಡರಹಳ್ಳಿ ಹೆರಗು ರಸ್ತೆಯಿಂದ ಹಂಪನಹಳ್ಳಿ | 2.00 | 2.00 | - |
| 28) | ಎಂ ಸಿ ಎಫ್ ರಸ್ತೆ ಮುತ್ತಾತ್ತಿಕೊಪ್ಪಲು ಮುತ್ತತ್ತಿ | 2.00 | 2.00 | - |
| 29) | ಬೈಲಹಳ್ಳಿಯಿಂದ ಕಲ್ಲೇನಹಳ್ಳಿ ಕಲ್ಲಹಳ್ಳಿ ರಸ್ತೆ ಅಭಿವೃದ್ಧಿ | 0.50 | 0.50 | - |
| 30) | ಸಾಲಗಾಮೆ ರಸ್ತೆಯಿಂದ ಕಲ್ಲದೇವರಹಳ್ಳಿ ರಸ್ತೆ | 0.75 | 0.75 | - |
| 31) | ನಿಟ್ಟೂರು ರಸ್ತೆಯಿಂದ ಹೊಬಗೊಡೇನಹಳ್ಳಿ ರಸ್ತೆ | 0.75 | 0.75 | - |
| 32) | ಬೇಲೂರು ರಸ್ತೆಯಿಂದ ದೊಡ್ಡಗಡ್ಡಹಳ್ಳಿ ಮಾರ್ಗ ಕ್ಯಾತದಹಳ್ಳಿ ರಸ್ತೆ ಅಭಿವೃದ್ಧಿ ಡಾಂಬರು | 2.00 | 1.00 | - |
| 33) | ಬೇಲೂರು ರಸ್ತೆಯಿಂದ ದೊಡ್ಡಗಡ್ಡಹಳ್ಳಿ ಮಾರ್ಗ ಕ್ಯಾತದಹಳ್ಳಿ ರಸ್ತೆ ಡಾಂಬರೀಕರಣ | 1.00 | 1.00 | - |
| 34) | ಸಾಲಗಾಮೆ ರಸ್ತೆ ಕಕ್ಕಿಹಳ್ಳಿಗೆ ರಸ್ತೆ. | 1.00 | 1.00 | - |
| 35) | ಹಲಸನಹಳ್ಳಿಯಿಂದ ಹೋಗಿಹಳ್ಳಿ ರಸ್ತೆ ಅಭಿವೃದ್ಧಿ | 1.00 | 1.00 | - |
| | ಒಟ್ಟು | 72.435 | 52.639 | 7.543 |

**ತೀರ್ಥಹಳ್ಳಿ ಜೆ.ಸಿ. ಆಸ್ಪತ್ರೆಯಲ್ಲಿರುವ ಸಿಬ್ಬಂದಿ ಕೊರತೆ ಕುರಿತು**

804 - ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ತೀರ್ಥಹಳ್ಳಿ ಜಯಚಾಮರಾಜೇಂದ್ರ ಆಸ್ಪತ್ರೆಯಲ್ಲಿ ಪ್ರತಿದಿನ ಚಿಕಿತ್ಸೆ ಪಡೆಯುತ್ತಿರುವ ಹೊರ ರೋಗಿಗಳ ಮತ್ತು ಒಳರೋಗಿಗಳ ಸರಾಸರಿ ಸಂಖ್ಯೆ ಎಷ್ಟು.

ಆ) ಆಸ್ಪತ್ರೆಯಲ್ಲಿ ಮಂಜೂರಾಗಿದ್ದ ವೈದ್ಯರ ಮತ್ತು ವಿವಿಧ ಸಿಬ್ಬಂದಿಗಳ ಸಂಖ್ಯೆ ಮತ್ತು ಖಾಲಿ ಇರುವ ಸ್ಥಾನಗಳು ಯಾವುವು? ಹಾಗೂ ಎಷ್ಟು ಸಮಯದಿಂದ ಖಾಲಿ ಇವೆ.

ಇ) ಖಾಲಿ ಹುದ್ದೆಗಳನ್ನು ತುಂಬಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಪ್ರತಿದಿನ ಸರಾಸರಿ ಹೊರರೋಗಿಗಳ ಸಂಖ್ಯೆ250

ಪ್ರತಿದಿನ ಸರಾಸರಿ ಒಳರೋಗಿಗಳ ಸಂಖ್ಯೆ 20 ಆ) ಒಟ್ಟು ಮಂಜೂರಾದ ಹುದ್ದೆಗಳು 83

ಕಾರ್ಯ ನಿರ್ವಹಿಸುತ್ತಿರುವವರು 56

ಖಾಲಿ ಇರುವ ಹುದ್ದೆಗಳು 27

ಇ) ಖಾಲಿ ಇರುವ ಹುದ್ದೆಗಳನ್ನು 1995-96ನೇ ಸಾಲಿನ ಸಾಮಾನ್ಯ ವರ್ಗಾವಣೆಯ ಸಮಯದಲ್ಲಿ ತುಂಬಲು ಕ್ರಮ ಕೈಗೊಳ್ಳಲಾಗುವುದು.

**ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಕುರಿತು**

1068 - ಶ್ರೀ ಎಚ್.ಎನ್. ಮಹದೇವ ಪ್ರಸಾದ್ (ಗುಂಡ್ಲುಪೇಟೆ) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ ಅನುದಾನಿತ ಸಂಸ್ಥೆಯೇ, ಹಾಗಿದ್ದರೆ ಪೂರ್ಣ ಅನುದಾನ ನೀಡಲಾಗುತ್ತಿದೆಯೇ :

ಆ) ಸಮಿತಿ ಹಮ್ಮಿಕೊಂಡಿರುವ ಕಾರ್ಯ ಕ್ರಮಗಳೇನು?

ಇ) ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಗೆ ಸರ್ಕಾರ ರೂಪಿಸಿರುವ ಅನುದಾನ ಸಂಹಿತೆ ಪ್ರಕಾರ ಸಿಬ್ಬಂದಿ ವೆಚ್ಚಕ್ಕಾಗಿ ಕಾಲಕಾಲಕ್ಕೆ ಅನುದಾನ ಬಿಡುಗಡೆ ಮಾಡಲಾಗುತ್ತಿದೆಯೇ, ಇಲ್ಲದಿದ್ದರೆ ಕಾರಣವೇನು?

ಈ) ಇತರೆ ಸರ್ಕಾರಿ ನೌಕರರಿಗೆ ಪಾವತಿಸುತ್ತಿರುವಂತೆ ಈ ನೌಕರರಿಗೂ ಸಂಬಳ ಮತ್ತು ಭತ್ಯೆ ಇತ್ಯಾದಿ ಪಾವತಿಯಾಗುತ್ತಿದೆಯೇ?

ಉ) ಸಮಿತಿಯವರು ಈ ವರ್ಷಕ್ಕೆ ಎಷ್ಟು ಮೊತ್ತಕ್ಕೆ ಹೆಚ್ಚುವರಿ ಬೇಡಿಕೆ ಸಲ್ಲಿಸಿದ್ದಾರೆ ಸರ್ಕಾರ ಈ ಬಗ್ಗೆ ಏನು ಕ್ರಮ ತೆಗೆದುಕೊಂಡಿದೆ.

ಊ) ಸಮಿತಿಯ ಸಿಬ್ಬಂದಿಗೆ ಇದುವರೆಗೆ 1995ರ ಫೆಬ್ರವರಿ ವೇತನವನ್ನು ಪಾವತಿಸದಿರಲು ಕಾರಣವೇನು ಸರ್ಕಾರ ಈ ಬಗ್ಗೆ ಏನು ಕ್ರಮ ತೆಗೆದುಕೊಂಡಿದೆ.

ಋ) 1-7-90 ರಿಂದ ನೌಕರರಿಗೆ ತುಟ್ಟಿ ಭತ್ಯೆಯ ವ್ಯತ್ಯಾಸದ ಮೊತ್ತವನ್ನು ಪಾವತಿಸಲಾಗಿದೆಯೇ, ಪಾವತಿಸದಿದ್ದರೆ ಸರ್ಕಾರ ಈ ಸಂಬಂಧ ಬಿಡುಗಡೆ ಮಾಡುವ ಅನುದಾನವೆಷ್ಟು

*ಋ)ಸರ್ಕಾರಿ ನೌಕರರಿಗೆ ಅನ್ವಯಿಸುವಂತೆ 1994ರ ಪರಿಷ್ಕೃತ ವೇತನ ಸೌಲಭ್ಯವನ್ನು ಸಮಿತಿಯ ನೌಕರರಿಗೆ ವಿಸ್ತರಿಸಲಾಗಿದೆಯೇ. ಇಲ್ಲದಿದ್ದರೆ ಕಾರಣವೇನು?*

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು):

ಅ) ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿಯು ಒಂದು ಅನುದಾನಿತ ಸಂಸ್ಥೆ, ಅನುದಾನ ಸಂಹಿತೆಯ ಪ್ರಕಾರ ಆಗಿಂದಾಗ್ಗೆ ಅನುದಾನ ಒದಗಿಸಲಾಗುತ್ತಿದೆ.

ಆ) ಸಮಿತಿಯು ಈ ಕೆಳಕಂಡ ಕಾರ್ಯ ಕ್ರಮಗಳನ್ನು ಹಮ್ಮಿಕೊಂಡಿದೆ.

6 ರಿಂದ 14 ವಯಸ್ಸಿನ ಮದ್ಯ ಶಾಲೆ ಬಿಟ್ಟಿರುವ ಅಥವಾ ಶಾಲೆಗೆ ಹೋಗದಿರುವ ಮಕ್ಕಳಿಗೆ ಶಿಕ್ಷಣ ನೀಡಲು ಕೇಂದ್ರ ಸರ್ಕಾರ ಮಂಜೂರು ಮಾಡಿರುವ ಅನೌಪಚಾರಿಕ ಶಿಕ್ಷಣ ಯೋಜನೆಯ ಒಂದು ಸಾವಿರ ಕೇಂದ್ರಗಳನ್ನು ಸ್ಥಾಪಿಸುವುದು.

ಹಾಲಿ ಇರುವ 16 ವಿದ್ಯಾಪೀಠಗಳಲ್ಲಿ ಗ್ರಾಮೀಣ ಯುವ ಜನರಿಗೆ ಸ್ವಾವಲಂಬಿಗಳಾರುವಂತಹ ಹೊಸ ರೀತಿಯ ವೃತ್ತಿ ಆಧಾರಿತ ತರಬೇತಿ ನೀಡುವುದು.

ಸಾಕ್ಷರೋತ್ತರ ಕಾರ್ಯಕ್ರಮದ ಅಂಗವಾಗಿ ಹೊಸದಾಗಿ ಸಾಕ್ಷರರಾದವರಿಗೆ ಸಾಹಿತ್ಯ ರಚಿಸುವುದು.

ಹೊಸದಾಗಿ ಸಾಕ್ಷರರಾದವರಿಗೆ ಓದಲು ಅನುವಾಗುವಂತೆ 'ಬೆಳಕು ' ವಾರಪತ್ರಿಕೆ ಹಾಗೂ ಸಾಮಾನ್ಯ ಓದುಗರಿಗಾಗಿ 'ಪುಸ್ತಕ ಪ್ರಪಂಚ ' ಎಂಬ ಮಾಸಿಕ ಪ್ರಕಟಿಸುವುದು. ಮತ್ತು ವಿದ್ಯಾಪೀಠಗಳ ಅಭಿವೃದ್ಧಿಪಡಿಸುವುದು.

ಇ) ಅನುದಾನವನ್ನು ಸಮಿತಿಗೆ ಕಾಲಕಾಲಕ್ಕೆ ಬಿಡುಗಡೆ ಮಾಡಲಾಗುತ್ತಿದೆ. ಆಯಾ ಆರ್ಥಿಕ ವರ್ಷದಲ್ಲಿ ಖಾಯಂ ಸಿಬ್ಬಂದಿ ವೆಚ್ಚಕ್ಕಾಗಿ ಬೇಕಾಗುವ ಆಯವ್ಯಯವನ್ನು ಒದಗಿಸಿ ಬಿಡುಗಡೆ ಮಾಡಲಾಗುತ್ತಿದೆ.

ಈ) ಹಾದು

ಉ) ಸಮಿತಿಯು 1994-95ನೇ ಸಾಲಿಗೆ ಸಿಬ್ಬಂದಿ ವೆಚ್ಚಕ್ಕಾಗಿ ಎಂದು ರೂ.106.00 ಲಕ್ಷ ರೂ.ಗಳ ಬೇಡಿಕೆ ಸಲ್ಲಿಸಿತ್ತು. ಆದರೆ ಈ ಆಯವ್ಯಯವನ್ನು ಅಂದಾಜು ಮಾಡುವಾಗ ಸಮಿತಿಯು ಹಂಗಾಮಿ ನೌಕರರ ವೇತನವನ್ನು ಸಹ ಲೆಕ್ಕ ಹಾಕಿದೆ. ಸರ್ಕಾರದ ಮಟ್ಟದಲ್ಲಿ 189 ಜನ ಖಾಯಂ ನೌಕರರ ವೇತನ, ತುಟ್ಟಿಭತ್ಯೆ ತರಬೇತಿ ವಿದ್ಯಾಪೀಠಗಳ ನಿರ್ವಹಣೆ ಇತ್ಯದಿ ಅಭಿವೃದ್ಧಿಗಳಿಗಾಗಿ 1994-95ನೇ ಸಾಲಿನಲ್ಲಿ ರೂ. 80.00 ಲಕ್ಷಗಳನ್ನು ಒದಗಿಸಿತ್ತು. ಇಷ್ಟು ಆಯವ್ಯಯವನ್ನು ಕಂತುಗಳಲ್ಲಿ ಪೂರ್ತಿಯಾಗಿ ಬಿಡುಗಡೆ ಮಾಡಿದೆ.

ಊ) 4ನೇ ಕಂತಿನ ಅನುದಾನವನ್ನು ದಿನಾಂಕ 27-8-1995 ರಂದು ಬಿಡುಗಡೆ ಮಾಡಲಾಗಿದೆ.

ಋ) ಖಾಯಂ ನೌಕರರಿಗಾಗಿ ತುಟ್ಟಿಭತ್ಯೆ ಬಿಡುಗಡೆ ಮಾಡಿದ್ದರೂ ಸಹ ಸಂಸ್ಥೆಯು ಈ ಮೊತ್ತದಲ್ಲಿ ಹಂಗಾಮಿ ನೌಕರರಿಗೆ ಸಂಬಳವನ್ನು ನೀಡಿರುವ ಕಾರಣದಿಂದ ಖಾಯಂ ನೌಕರರ ಮೊತ್ತದಲ್ಲಿ ಈ ಖೋತಾ ಉಂಟಾಗಿದೆ. ಈ ವ್ಯತ್ಯಾಸವನ್ನು ಪ್ರತ್ಯೇಕವಾಗಿ ಅನುದಾನ ಬಿಡುಗಡೆ ಮಾಡಿಲ್ಲ. ಆಯವ್ಯಯವನ್ನು ಸಿದ್ಧಪಡಿಸುವಾಗ ತುಟ್ಟಿಭತ್ಯೆಯನ್ನು ಗಮನದಲ್ಲಿಟ್ಟುಕೊಂಡು ಆಯವ್ಯಯವನ್ನು ನಿಗಧಿಪಡಿಸಲಾಗಿದೆ.

ಋೂ) ಎಲ್ಲಾ ಅನುದಾನಿತ ಸಂಸ್ಥೆಗಳ ನೌಕರರಿಗೆ ಅನ್ವಯಿಸುವಂತೆ ಸಮಿತಿಯ ನೌಕರರಿಗೂ ಸಹ ಪರಿಷ್ಕೃತ ವೇತನವನ್ನು ಸರ್ಕಾರಿ ಆದೇಶ ಸಂಖ್ಯೆ ಇಡಿ 4 ವಿವಿಧ 94ರ ಪ್ರಕಾರ ವಿಸ್ತರಿಸಲಾಗಿದೆ.

**ರಾಜ್ಯದಲ್ಲಿರುವ ಕ್ರೀಡಾಂಗಣದಲ್ಲಿರುವ ಸಂಖ್ಯೆ ಕುರಿತು**

693 - ಶ್ರೀ ಯು,ಬಿ. ಬಣಕಾರ್ (ಹಿರೇಕೆರೂರು) : ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ರಾಜ್ಯದಲ್ಲಿ ಎಷ್ಟು ತಾಲ್ಲೂಕುಗಳಲ್ಲಿ ಕ್ರೀಡಾಂಗಣಗಳಿವೆ ಹಾಗೂ ಎಷ್ಟು ತಾಲ್ಲೂಕುಗಳಲ್ಲಿ ಕ್ರೀಡಾಂಗಣಗಳಿಲ್ಲ.*

*ಆ) ಕ್ರೀಡಾಂಗಣ ಇಲ್ಲದ ತಾಲ್ಲೂಕುಗಳಲ್ಲಿ ಎಷ್ಟು ವರ್ಷಗಳಲ್ಲಿ ಕ್ರೀಡಾಂಗಣವನ್ನು ನಿರ್ಮಿಸಲಾಗುವುದು?*

ಶ್ರೀ ಅಜಯಕುಮಾರ್ ಸರ್. ನಾಯಕ್ (ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರು) :

ಅ) ರಾಜ್ಯದಲ್ಲಿ ಒಟ್ಟು 68 ತಾಲ್ಲೂಕುಗಳಲ್ಲಿ ಕ್ರೀಡಾಂಗಣ ನಿರ್ಮಾಣ ಕಾರ್ಯ ಪ್ರಾರಂಭಿಸಿದೆ. ಉಳಿದ ತಾಲ್ಲೂಕುಗಳಲ್ಲಿ ಇರುವುದಿಲ್ಲ.

ಆ) ಸೂಕ್ತ ನಿವೇಶನ ಹಾಗೂ ಆಯವ್ಯಯದ ಹಂಚಿಕೆ ದೊರಕಿದಲ್ಲಿ ತಾಲ್ಲೂಕು ಕ್ರೀಡಾಂಗಣ ನಿರ್ಮಾಣ ಕಾರ್ಯವನ್ನು ಎಲ್ಲಾ ತಾಲ್ಲೂಕುಗಳಲ್ಲಿಯೂ ಕೈಗೆತ್ತಿಕೊಳ್ಳಲಾಗುವುದು.

**ಖಾಲಿ ಇರುವ ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಗಳನ್ನು ಕುರಿತು**

798 - ಶ್ರೀ ಯು.ಬಿ. ಬಣಕಾರ್ (ಹಿರೇಕೆರೂರು) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ರಾಜ್ಯದಲ್ಲಿ ಖಾಲಿ ಇರುವ ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು)*

*ಆ) ಖಾಲಿ ಇರುವ ಹುದ್ದೆಗಳನ್ನು ತುಂಬಲು ಏನು ಕ್ರಮ ಕೈಗೊಳ್ಳಲಾಗಿದೆ:*

*ಇ) ಖಾಲಿ ಇರುವ ಈ ಹುದ್ದೆಗಳಿಗೆ ಗ್ರಾಮಗಳಲ್ಲಿ ಇರುವ ನಿರುದ್ಯೋಗಿ ಟಿಸಿಹೆಚ್ ಯುವಕರನ್ನು ತಾತ್ಕಾಲಿಕವಾಗಿ ನೇಮಿಸಲು ಸರ್ಕಾರದವರು ಆಲೋಚಿಸುವರೇ?*

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು)

ಅ)

| | **ಜಿಲ್ಲೆ 13170** | **ಹುದ್ದೆ** |
|---|---|---|
| 1. | ಬೆಂಗಳೂರು ಉತ್ತರ | - |
| 2. | ಬೆಂಗಳೂರು ದಕ್ಷಿಣ | 147 |
| 3. | ಬೆಂಗಳೂರು ಗ್ರಾಮಾಂತರ | 735 |
| 4. | ತುಮಕೂರು | 776 |
| 5. | ಕೋಲಾರ | 351 |
| 6. | ಚಿತ್ರದುರ್ಗ | 886 |
| 7. | ಶಿವಮೊಗ್ಗ | 211 |
| 8. | ಮೈಸೂರು | 378 |

| | | |
|---|---|---|
| 9. | ಮಂಡ್ಯ | 313 |
| 10. | ಮಡಿಕೇರಿ | 136 |
| 11. | ಹಾಸನ | 384 |
| 12. | ಚಿಕ್ಕಮಗಳೂರು | 186 |
| 13. | ದಕ್ಷಿಣ ಕನ್ನಡ | 912 |
| 14. | ಬೆಳಗಾವಿ | 722 |
| 15. | ಬಿಜಾಪುರ | 576 |
| 16. | ಧಾರವಾಡ | 1213 |
| 17. | ಉತ್ತರಕನ್ನಡ | 385 |
| 18. | ಗುಲ್ಬರ್ಗ | 404 |
| 19. | ಬೀದರ್ | 595 |
| 20. | ರಾಯಚೂರು | 310 |
| 21. | ಬಳ್ಳಾರಿ | 495 |
| | ಕಪ್ಪು ಹಲಗೆ ಕಾರ್ಯಾಚರಣೆಗೆ 5 ಮತ್ತು 6ನೇ ಹಂತದಲ್ಲಿ ಮಂಜೂರಾದ ಹುದ್ದೆಗಳು | 3195 |
| | ಒಟ್ಟು | 13170 |

ಆ) ಮುಂದಿನ ಶೈಕ್ಷಣಿಕ ವರ್ಷದಲ್ಲಿ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕ್ರಮ ಕೈಗೊಳ್ಳಲಾಗುವುದು.

ಇ) ಖಾಲಿ ಹುದ್ದೆಗಳನ್ನು ಖಾಯಂ ಆಗಿ ಭರ್ತಿ ಮಾಡುವುದರಿಂದ ತಾತ್ಕಾಲಿಕವಾಗಿ ನೇಮಿಸುವ ಪ್ರಶ್ನೆ ಉದ್ಭವಿಸುವುದಿಲ್ಲ.

**ಆರೋಗ್ಯ ಕೇಂದ್ರಗಳಿಗೆ ವೈದ್ಯಾಧಿಕಾರಿಯವರ ನೇಮಕ ಆಗದಿರುವ ಬಗ್ಗೆ**

985 - ಶ್ರೀ ಡಿ.ವಿ. ಸದಾನಂದ ಗೌಡ (ಪುತ್ತೂರು) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ದಕ್ಷಿಣ ಕನ್ನಡ ಪುತ್ತೂರು ಉಪ್ಪಿನಂಗಡಿ ಹಾಗೂ ಪಾಣಜೆ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಯವರ ನೇಮಕ ಇನ್ನೂ ಆಗಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೆ?*

*ಆ) ಹಾಗಿದ್ದಲ್ಲಿ, ಸದರಿ ಆರೋಗ್ಯ ಕೇಂದ್ರಗಳಿಗೆ ಯಾವಾಗ ವೈದ್ಯಾಧಿಕಾರಿಗಳನ್ನು ನೇಮಿಸಲಾಗುವುದು?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಬಂದಿದೆ. ಪಾಣಾಜೆ ಆರೋಗ್ಯ ಕೇಂದ್ರದಲ್ಲಿ ಎರಡು ವೈದ್ಯರ ಹುದ್ದೆಗಳು ಖಾಲಿ ಇದ್ದು ಅವರಲ್ಲಿ 1 ಹುದ್ದೆಗೆ ದಿನಾಂಕ 10-2-95ರಂದು ಗುತ್ತಿಗೆ ಆಧಾರದ

ವೈದ್ಯರನ್ನು ನೇಮಕಾತಿ ಮಾಡಲಾಗಿದೆ. ಮತ್ತೊಂದು ಖಾಲಿ ಹುದ್ದೆಯನ್ನು ಆದಷ್ಟು ಜಾಗ್ರತೆ ತುಂಬಲು ಕ್ರಮ ಕೈಗೊಳ್ಳಲಾಗುವುದು.

ಆ) ಪುತ್ತೂರು ಸಾರ್ವಜನಿಕ ಆಸ್ಪತ್ರೆಯಲ್ಲಿ ಒಂದು ಉಪ ಶಸ್ತ್ರ ಚಿಕಿತ್ಸಕರ ಹುದ್ದೆ ಖಾಲಿ ಇದ್ದು ಈ ಹುದ್ದೆಯನ್ನು ಹಾಗೂ ಉಪ್ಪಿನಂಗಡಿ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಖಾಲಿ ಇರುವ ಹುದ್ದೆಯನ್ನು ತುಂಬಲು ಸಾರ್ವಜನಿಕ ವರ್ಗಾವಣೆ ಸಮಯದಲ್ಲಿ ಕ್ರಮ ಕೈಗೊಳ್ಳಲಾಗುವುದು.

**ಕಾಲೇಜುಗಳಲ್ಲಿ ಉಪನ್ಯಾಸಕರ ಹುದ್ದೆ ಭರ್ತಿ ಮಾಡುವ ಬಗ್ಗೆ**

1233 - ಶ್ರೀ ಪ್ರತಾಪ್‌ಚಂದ್ರ ಶೆಟ್ಟಿ (ಕುಂದಾಪುರ) : ಮಾನ್ಯ ಪ್ರಾಥಮಿಕ ಹಾಗೂ ಪ್ರೌಡ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಕುಂದಾಪುರ ಕ್ಷೇತ್ರದ ಈ ಕೆಳಗಿನ ಜೂನಿಯರ್‌ಕಾಲೇಜುಗಳಲ್ಲಿ ಗೋಳಿ ಅಂಗಡಿ, ಶಂಕರನಾರಾಯಣ, ಬಿದ್ಕಲಕಟ್ಟೆ, ಕೋಟೇಶ್ವರ. ಕುಂದಾಪುರ ಇವುಗಳಲ್ಲಿ ಕೊರತೆಯಿರುವ ಉಪನ್ಯಾಸಕರ ಸಂಖ್ಯೆ ಎಷ್ಟು?*

*ಆ) ಮಂಜೂರಾದ ಉಪನ್ಯಾಸಕರ ಸಂಖ್ಯೆ ಎಷ್ಟು?*

ಶ್ರೀ ಹೆಚ್.ಜಿ. ಗೋವಿಂದೆಗೌಡ (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು):

| | | |
|---|---|---|
| ಅ) | ಗೊಳಿಯಂಗಡಿ | 1 |
| | ಶಂಕರನಾರಾಯಣ | 1 |
| | ಬಿದ್ಕಲಕಟ್ಟೆ | - |
| | ಕೋಟೇಶ್ವರ | 1 |
| | ಕುಂದಾಪುರ | 1 |
| ಆ) | ಗೊಳಿಅಂಗಡಿ | 7 |
| | ಶಂಕರನಾರಾಯಣ | 10 |
| | ಬಿದ್ಕಲಕಟ್ಟೆ | 10 |
| | ಕೋಟೇಶ್ವರ | 11 |
| | ಕುಂದಾಪುರ | 9 |
| | | 47 |

ಇ) ದಿನಾಂಕ 29-03-1995ರಲ್ಲಿ 477 ಜನ ಪ್ರೌಢ ಶಾಲಾ ಸಹಶಿಕ್ಷಕರಿಗೆ ಉಪನ್ಯಾಸಕರಾಗಿ ಸ್ಥಾನವನ್ನು ಬಡ್ತಿ ನೀಡಲಾಗದ್ದು, ಖಾಲಿ ಇರುವ ಹುದ್ದೆಗಳನ್ನು ತುಂಬಲು ಕ್ರಮ ತೆಗೆದುಕೊಳ್ಳಲಾಗುತ್ತಿದೆ.

**ಪ್ರೌಢ ಶಾಲೆಗಳಲ್ಲಿ ಖಾಲಿಯಿರುವ ಶಿಕ್ಷಕರ ಹುದ್ದೆಗಳನ್ನು ಭರ್ತಿ ಮಾಡುವುದರ ಬಗ್ಗೆ**

1234 - ಶ್ರೀ ಕೆ. ಪ್ರತಾಪ ಚಂದ್ರ ಶೆಟ್ಟಿ (ಕುಂದಾಪುರ) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಕಂದಾಪುರ ಕ್ಷೇತ್ರದ ಆರ್ಡಿ. ಗೋಳಿಯಂಗಡಿ. ಅಮಸೆಬೈಲು. ಶಂಕರನಾರಾಯಣ, ಹೊಸಂಗಡಿ, ಅಂಡಾರು, ಕೋಟೇಶ್ವರ, ಬನ್ನೂರು, ಕುಂದಾಪುರ, ಹಾಲ್ವಾಡಿ, ಕೆದೂರು, ವಕ್ವಾಡಿ, ಪೇಳೂರು ಈ ಸ್ಥಳಗಳಲ್ಲಿರುವ ಪ್ರೌಢ ಶಾಲೆಗಳಲ್ಲಿ ಕೊರತೆಯಿರುವ ಅದ್ಯಾಪಕರ ಸಂಖ್ಯೆ ಎಷ್ಟು?*

ಆ) ಮಂಜೂರಾದ ಅದ್ಯಾಪಕರ ಸಂಖ್ಯೆ ಎಷ್ಟು?
ಇ) ಖಾಲಿಯಿರುವ ಹುದ್ದೆಗಳನ್ನು ಎಂದು ತುಂಬಲಾಗುವುದು?
ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು):
ಅ) 36
ಆ) 133
ಇ) ಮುಂದಿನ ನೇಮಕಾತಿಯಲ್ಲಿ ತುಂಬಲಾಗುವುದು.

**ತುಟ್ಟಿಭತ್ಯೆ ಮತ್ತು ಮನೆಬಾಡಿಗೆ ಭತ್ಯೆ ಬಗ್ಗೆ**

1296 - ಡಾ|| ಎಂ. ಶಂಕರನಾಯಕ್ (ನೆಲಮಂಗಲ) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?
ಅ) ಬೆಂಗಳೂರು ನಗರ ಜಿಲ್ಲೆಯ ವ್ಯಾಪ್ತಿಗೆ ಬರುವ ಪ್ರಾಥಮಿಕ ಮತ್ತು ಪ್ರೌಢಶಿಕ್ಷಕರ ತುಟ್ಟಿಭತ್ಯೆ ಮತ್ತು ಮನೆ ಬಾಡಿಗೆ ಭತ್ಯೆಯನ್ನು (ಹೆಚ್.ಆರ್.ಎ ಮತ್ತು ಸಿ.ಸಿ.ಎ) ನಿಲ್ಲಿಸಲು ಕಾರಣವೇನು?
ಆ) ಇದು ಎಲ್ಲಾ ಇಲಾಖೆಗಳಿಗೂ ಅನ್ವಯ ಆಗುತ್ತದೆಯೇ?
ಇ) ಹಾಗಿದ್ದರೇ, ಇತರೆ ಇಲಾಖೆಯವರು ಈ ಬಗ್ಗೆ ಕ್ರಮ ಕೈಗೊಂಡಿರುವರೇ?
ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು):
ಅ) ತುಟ್ಟಿಭತ್ಯೆಯನ್ನು ನಿಲ್ಲಿಸಿರುವುದಿಲ್ಲ. ಬೆಂಗಳೂರು ನಗರ ಸಭೆಯ ಸರಹದ್ದಿನಿಂದ 8 ಕಿ. ಮಿ. ವ್ಯಾಪ್ತಿಯ ಒಳಗೆ ಬರುವ ಸ್ಥಳಗಳಲ್ಲಿ ಸೇವೆ ಸಲ್ಲಿಸುತ್ತಿರುವ ಹಾಗೂ ಬೆಂಗಳೂರು ಜಿಲ್ಲಾಧಿಕಾರಿಗಳಿಂದ 8 ಕಿ.ಮಿ. ಗಳಿಗಿಂತಲೂ ಹೆಚ್ಚಿನ ದೂರದ ಸ್ಥಳಗಳಲ್ಲಿ ವಾಸಿಸಲು ಅನುಮತಿ ಪತ್ರ ಪಡೆದಂತಹ ಶಿಕ್ಷಕರಿಗಳಿಗೆ ಮನೆ ಬಾಡಿಗೆ ಮತ್ತು ನಗರ ಪರಿಹಾರ ಭತ್ಯಗಳನ್ನು ನೀಡಲಾಗುತ್ತಿದೆ.
ಆ) ಹೌದು
ಇ) ಉದ್ಭವಿಸುವುದಿಲ್ಲ.

**ಭದ್ರ ಅಭಯ ಅರಣ್ಯ ಸ್ಥಳಾಂತರಿಸುವ ಬಗ್ಗೆ**

857 - ಶ್ರೀ ಸಿ.ಆರ್. ಸಗಿರ್ ಅಹಮದ್ (ಚಿಕ್ಕಮಗಳೂರು) :ಮಾನ್ಯ ಅರಣ್ಯ ಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?
ಅ) ಭದ್ರ ಅಭಯಾರಣ್ಯ ಸ್ಥಳಾಂತರಿಸುವ ಬಗ್ಗೆ ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮ ಏನು?
ಆ) ಭದ್ರ ಅಭಯಾರಣ್ಯದಲ್ಲಿ ವಾಸಿಸುತ್ತಿರುವ ಗ್ರಾಮಸ್ಥರಿಗೆ ನಾಗರೀಕ ಸೌಲಭ್ಯಗಳನ್ನು ಒದಗಿಸಿಕೊಟ್ಟಿರುವ ವಿವರವನ್ನು ನೀಡವುದು?
ಇ) ಭದ್ರ ಅಭಯಾರಣ್ಯದಲ್ಲಿ ವಾಸಿಸುತ್ತಿರುವ ಗ್ರಾಮಸ್ಥರಿಗೆ ಇನ್ನೂ ಎಷ್ಟು ದಿನಗಳಲ್ಲಿ ಸ್ಥಳಾಂತರಿಸುವುದು?
ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) :
ಅ) ಭದ್ರ ಅಭಯಾರಣ್ಯದ ವ್ಯಾಪ್ತಿಯೊಳಗೆ ಬರುವ ಗ್ರಾಮಗಳಲ್ಲಿನ ಜನರನ್ನು ಸ್ಥಳಾಂತರಿಸಿ ಪುನರ್ ವಸತಿಗೊಳಿಸಲು ರೂ. 12.76 ಕೋಟಿಗಳ ಯೋಜನೆ ತಯಾರಿಸಲಾಗಿದ್ದು, ಕೇಂದ್ರ ಸರ್ಕಾರದ ನೆರವು ಕೋರಲಾಗಿದೆ.
ಆ) ಸೌಲಭ್ಯ ಒದಗಿಸಿರುವುದಿಲ್ಲ.
ಇ) ಕೇಂದ್ರ ಸರ್ಕಾರದಿಂದ ಯೋಜನೆ ಮಂಜೂರಾತಿಯಾದ ತಕ್ಷಣ ಕಾರ್ಯಕ್ರಮವನ್ನು ಕಾರ್ಯರೂಪಕ್ಕೆ ತರಲಾಗುವುದು.

**ಪ್ರಾಥಮಿಕ ಉರ್ದುಶಾಲೆಗಳ ಅಭಿವೃದ್ಧಿ ಕುರಿತು**

856 - ಶ್ರೀ ಸಿ.ಆರ್. ಸಗೀರ್ ಅಹಮದ್ (ಚಿಕ್ಕಮಗಳೂರು) : 'ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು.ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) 1994-95ನೇ ಸಾಲಿನಲ್ಲಿ ಪ್ರಾಥಮಿಕ ಉರ್ದು ಶಾಲೆಗಳ ಅಭಿವೃದ್ಧಿಗಾಗಿ ಎಷ್ಟು ಹಣ ಬಿಡುಗಡೆ ಮಾಡಿದೆ.*

*ಆ) ಸರ್ಕಾರ ಈ ಹಣವನ್ನು ಉರ್ದು ನಿರ್ದೇಶನಾಲಯಕ್ಕೆ ಬಿಡುಗಡೆ ಮಾಡಿದೆಯೇ?*

*ಇ) ಈ ಹಣದಲ್ಲಿ ಪ್ರಾಥಮಿಕ ಉರ್ದು ಶಾಲೆಗಳಿಗೆ ಪೀಠೋಪಕರಣ ಹಾಗೂ ಭೂಪಟಗಳನ್ನು ಖರೀದಿಸುವುದಕ್ಕೆ ಸರ್ಕಾರ ಅನುಮತಿ ನೀಡಿದೆಯೇ?*

ಈ) ಈ ಹಣ ಯಾವ ಯಾವ ಬಾಬ್ತುಗಳಿಗೆ ಖರ್ಚು ಮಾಡಲಾಗಿದೆ?

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು):

ಅ) 1994-95ನೇ ಸಾಲಿಗೆ ರೂ. 28.80 ಲಕ್ಷ ಹಣ ಬಿಡುಗಡೆ ಮಾಡಲಾಗಿದೆ.

ಆ) ಹೌದು

ಇ) ಹೌದು.

ಈ)

| | | | |
|---|---|---|---|
| 1) | ಪೀಠೋಪಕರಣಗಳಿಗೆ | ರೂ. | 10.00 ಲಕ್ಷ |
| 2) | ಬೋಧನೋಪಕರಣಗಳಿಗೆ | ರೂ. | 8.80 ಲಕ್ಷ |
| 3) | ಗ್ರಂಥಾಲಯ ಪುಸ್ತಕಗಳಿಗೆ | ರೂ. | 5.00 ಲಕ್ಷ |
| 4) | ತರಬೇತಿ ವಿಚಾರಣೆ ಸಂಕಿರಣ | ರೂ. | 5.00 ಲಕ್ಷ |

(ಈ ಹಣವನ್ನು ಉಪಯೋಗಿಸಿರುವುದಿಲ್ಲ)

**ಕ್ರೀಡಾ ಪಟುಗಳಗೆ ಕ್ರೀಡಾಮಾಸಾಶನ ಮಂಜೂರು ಮಾಡುವ ಬಗ್ಗೆ**

895 - ಶ್ರೀ ರಾಮಲಿಂಗ ರೆಡ್ಡಿ (ಜಯನಗರ) : ಮಾನ್ಯ ಯುವಜನ ಸೇವಾ ಹಾಗೂ ಕ್ರೀಡಾ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) 50 ವರ್ಷ ಮೀರಿದ ಎಷ್ಟು ಜನ ಕ್ರೀಡಾ ಪಟುಗಳಿಗೆ ಕ್ರೀಡಾ ಮಾಸಾಶನ ಮಂಜೂರು ಮಾಡಿದೆ? ಹಾಗಿದ್ದಲ್ಲಿ ಈ ಬಾಬ್ತು ವೆಚ್ಚ ಮಾಡಿದ ಮೊತ್ತವೆಷ್ಟು?*

*ಆ) ಇವರಲ್ಲಿ ಎಷ್ಟು ಜನ ಅಂತರಾಷ್ಟ್ರೀಯ ಮಟ್ಟ ರಾಷ್ಟ್ರೀಯ ಹಾಗೂ ರಾಜ್ಯ ಮಟ್ಟದ ಕ್ರೀಡಾ ಪಟುಗಳು*

*ಇ) ಫಲನುಭವಿಗಳನ್ನು ಹೇಗೆ ಆಯ್ಕೆ ಮಾಡಲಾಗುವುದು?*

*ಈ) ಮಾಸಾಶನದ ಧರವನ್ನು ಹೆಚ್ಚಿಸುವ ಉದ್ದೇಶ ಇದೆಯೇ?*

ಶ್ರೀ ಅಜಯಕುಮಾರ್ ನಾಯಕ್ (ಯುವಜನ ಸೇವಾ ಹಾಗೂ ಕ್ರೀಡಾ ರಾಜ್ಯ ಸಚಿವರು) :

ಅ) 325 ಕ್ರೀಡಾ ಪಟುಗಳಿಗೆ ಮಾಸಾಶನ ನೀಡಿದೆ. ವರ್ಷಕ್ಕೆ ರೂ. 6,28,200-00 ಗಳು

ಆ)

| | |
|---|---|
| ಅಂತರ ರಾಷ್ಟ್ರೀಯ | 6 |
| ರಾಷ್ಟ್ರೀಯ | 54 |
| ರಾಜ್ಯ ಮಟ್ಟ | 265 |

ಇ) ಕ್ರೀಡೆಗಳಲ್ಲಿ ಉತ್ತಮ ಸ್ಥಾನವನ್ನು ಪಡೆದ ಕ್ರೀಡಾಪಟುಗಳನ್ನು ಅವರರ ಆರ್ಥಿಕ ಸ್ಥಿತಿಯನ್ನು ಪರಿಗಣಿಸಿ, ಆಯ್ಕೆ ಮಾಡಲಾಗುವುದು.

ಈ) ಸರ್ಕಾರದ ಪರಿಶೀಲನೆಯಲ್ಲಿದೆ.

**ರಾಜ್ಯದದ ಕ್ರೀಡಾಪಟುಗಳು ವಲಸೆ ಹೋಗುತ್ತಿರುವುದರ ಬಗ್ಗೆ**

894 - ಶ್ರೀ ರಾಮಲಿಂಗ ರೆಡ್ಡಿ (ಜಯನಗರ) : ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಕರ್ನಾಟಕ ರಾಜ್ಯದ ಕ್ರೀಡಾಪಟುಗಳು ವಲಸೆ ಹೋಗುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ?*

*ಆ) ಹಾಗಿದ್ದಲ್ಲಿ ಅದಕ್ಕೆ ಕಾರಣಗಳೇನು?*

*ಇ) ಕ್ರೀಡಾಪಟುಗಳು ವಲಸೆ ಹೋಗುತ್ತಿರುವುದನ್ನು ತಡೆಗಟ್ಟಲು ಸರ್ಕಾರ ಕೈಗೊಳ್ಳುತ್ತಿರುವ ಕ್ರಮಗಳೇನು?*

ಶ್ರೀ ಅಜಯಕುಮಾರ್ ಸರ್. ನಾಯಕ್(ಯುವಜನ ಸೇವಾ ಮತ್ತು ಕ್ರೀಡಾ ಸಚಿವರು) :

ಅ) ಹೌದು

ಆ) ಉತ್ತಮ ಕ್ರೀಡಾ ಪಟುಗಳಿಗೆ ಕರ್ನಾಟಕ ರಾಜ್ಯದಲ್ಲಿಯೇ ಒಳ್ಳೆಯ ಉದ್ಯೋಗಾವಕಾಶಗಳನ್ನು ಒದಗಿಸದೇ ಇರುವುದರಿಂದ.

ಇ) ಉತ್ತಮ ಕ್ರೀಡಾಪಟುಗಳಿಗೆ ನೇರನೇಮಕಾತಿ ಮೂಲಕ ಉದ್ಯೋಗಾವಕಾಶ ಕಲ್ಪಿಸಿಕೊಡುವ ಯೋಜನೆ ಸರ್ಕಾರದ ಪರಿಶೀಲನೆಯಲ್ಲಿದೆ.

**ರಾಜ್ಯದಲ್ಲಿರುವ ಅನುದಾನಿತ ಹಾಗೂ ಅನುದಾನ ರಹಿತ ಪ್ರೌಢಶಾಲೆಗಳ ಸಂಖ್ಯೆ ಕುರಿತು**

1030 - ಶ್ರೀ ರಾಮಲಿಂಗ ರೆಡ್ಡಿ (ಜಯನಗರ) : ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ರಾಜ್ಯದಲ್ಲಿರುವ ಅನುದಾನಿತ ಹಾಗೂ ಅನುದಾನ ರಹಿತ ಪ್ರೌಢಶಾಲೆಗಳ ಸಂಖ್ಯೆ ಎಷ್ಟು?*

*ಆ) ಸರ್ಕಾರವು ಎಸ್.ಎಸ್. ಎಲ್.ಸಿ. ಪರೀಕ್ಷೆಯಲ್ಲಿ ಅತೀ ಹೆಚ್ಚಿನ ಸಂಖ್ಯೆಯ ರ್‍ಯಾಂಕಗಳನ್ನು ಪಡೆದ ಅನುದಾನಿತ ಅಥವಾ ಅನುದಾನ ರಹಿತ ಶಾಲಾ ಆಡಳಿತ ಮಂಡಳಿಯನ್ನು ಗೌರವಿಸುತ್ತಿದೆಯೇ?*

*ಇ) ಇಲ್ಲದಿದ್ದರೆ, ಸರ್ಕಾರವು ಯೋಜನೆ ಯೊಂದನ್ನು ರೂಪಿಸಿ ಎಸ್. ಎಸ್. ಎಲ್.ಸಿ. ಪರೀಕ್ಷೆಯಲ್ಲಿ ಅತೀ ಹೆಚ್ಚಿನ ಸಂಖ್ಯೆಯ ರ್‍ಯಾಂಕ್‌ಗಳನ್ನು ಪಡೆದ ಶಾಲೆಯ ಆಡಳಿತ ಮಂಡಳಿಯನ್ನು ಗೌರವಿಸಲು ಕ್ರಮಕೈಗೊಳ್ಳುವುದೇ?*

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು):

| | | |
|---|---|---|
| ಅ) | ಅನುದಾನಿತ ಪ್ರೌಢಶಾಲೆಗಳು | 2528 |
| | ಅನುದಾನ ರಹಿತ ಶಾಲೆಗಳು | 223 |
| | ಶಾಶ್ವತ ಅನುದಾನ ರಹಿತ ಪ್ರೌಢಸಾಲೆಗಳು | 2452 |

ಆ) ಇಲ್ಲ

ಇ) ಪರಿಶೀಲಿಸಲಾಗುವುದು.

**ಬೆಂಗಳೂರು ನಗರದಲ್ಲಿರುವ ಅನುದಾನಿತ ಪ್ರೌಢಶಾಲೆಗಳ ಬಗ್ಗೆ**

1034 - ಶ್ರೀ ರಾಮಲಿಂಗರೆಡ್ಡಿ (ಜಯನಗರ) : ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಬೆಂಗಳೂರು ನಗರದಲ್ಲಿರುವ ಅನುದಾನಿತ ಪ್ರೌಢಶಾಲೆಗಳು ಎಷ್ಟು?*

*ಆ) ಈ ಶಾಲೆಗಳಲ್ಲಿ ಎಷ್ಟು ಶಿಕ್ಷಕರು ಕೆಲಸ ನಿರ್ವಹಿಸುತ್ತಿದ್ದಾರೆ.*

*ಇ) ಈ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳೆಷ್ಟು (ಶಾಲಾವಾರು ಮಾಹಿತಿ ನೀಡುವುದು)*

*ಈ) ಈ ಖಾಲಿ ಹುದ್ದೆಗಳನ್ನು ತುಂಬದಿರಲು ಕಾರಣವೇನು?*

*ಉ) ಬೆಂಗಳೂರು ನಗರದ ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ಅನುಮತಿ ನೀಡಿದೆಯೇ?*

ಶ್ರೀ ಹೆಚ್. ಜಿ. ಗೋವಿಂದೇಗೌಡ (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು):

ಅ) 232

ಆ) 2602

ಇ) 314 (ಶಾಲಾವಾರು ಮಾಹಿತಿಯನ್ನು ತದ ನಂತರದಲ್ಲಿ ಒದಗಿಸಲಾಗುವುದು)

ಈ) ಖಾಸಗಿ ಶಾಲಾ ಕಾಲೇಜುಗಳಲ್ಲಿನ ಹುದ್ದೆ ತುಂಬುವುದು ಸಂಬಂಧಪಟ್ಟ ಶಾಲಾ ಕಾಲೇಜುಗಳ ಆಡಳಿತ ಮಂಡಳಿಗೆ ಸಂಬಂಧಿಸಿದ ವಿಷಯವಾಗಿದೆ.

ಉ) ಅನುದಾನಿತವಾಗಿ ಮಂಜೂರಾದ ಶಿಕ್ಷಕರ ಹುದ್ದೆಗಳನ್ನು ಭರ್ತಿ ಮಾಡುವುದಕ್ಕೆ ಆಡಳಿತ ಮಂಡಳಿಯು ಪ್ರಸ್ತಾವನೆ ಸಲ್ಲಿಸಿದ್ದರೆ ನೇಮಕಾತಿ ನಿಯಮ ಮತ್ತು ಮೀಸಲಾತಿ ನಿಯಮಗಳನ್ವಯ ಅಂತಹ ಹುದ್ದೆಗಳನ್ನು ತುಂಬಿಕೊಳ್ಳಲು ಸರ್ಕಾರವು ಅನುಮತಿಯನ್ನು ನೀಡುತ್ತದೆ.

**ಜಯನಗರದಲ್ಲಿರುವ ಬಿಇಎಸ್‌ಕಾಲೇಜಿಗೆ ಅನುದಾನ ನೀಡುವುದರ ಬಗ್ಗೆ**

689 - ಶ್ರೀ ರಾಮಲಿಂಗರೆಡ್ಡಿ (ಜಯನಗರ) :ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಬೆಂಗಳೂರಿನ ಜಯನಗರದಲ್ಲಿರುವ ಬಿ.ಇ. ಎಸ್. ಸಂಜೆ ಕಾಲೇಜು ಯಾವಾಗ ಪ್ರಾರಂಭವಾಯಿತು?*

*ಆ) ಈ ಕಾಲೇಜನ್ನು ಪ್ರಾರಂಭಿಸಿದ ನಂತರ ಪ್ರಾರಂಭವಾದ ಹಲವಾರು ಕಾಲೇಜುಗಳಿಗೆ ಸರ್ಕಾರ ಅನುದಾನ ನೀಡುತ್ತಿರುವುದು ನಿಜವೆ?*

*ಇ) ಈ ಕಾಲೇಜಿನವರು ಅನುದಾನ ನೀಡಬೇಕೆಂಬ ಕೋರಿಕೆ ಸಲ್ಲಿಸಿದ್ದಾರೆಯೇ*

*ಈ) ಯಾವಾಗ ಕೋರಿಕೆ ಸಲ್ಲಿಸಲಾಗಿದೆ?*

*ಉ) ಈ ಕಾಲೇಜನ್ನು ಅನುದಾನ ಸಂಹಿತೆಗೆ ಒಳಪಡಿಸಲು ಸರ್ಕಾರ ಕ್ರಮ ಕೈಗೊಳ್ಳುವುದೆ?*

ಶ್ರೀ ಡಿ ಮಂಜುನಾಥ (ಉನ್ನತ ಶಿಕ್ಷಣ ಸಚಿವರು) :

ಅ) ಬಿ. ಇ. ಎಸ್. ಸಂಜೆ ಕಾಲೇಜು 1971-72ರಲ್ಲಿ (ಪಿ.ಯು.ಸಿ) ಮತ್ತು 1984-85ರಲ್ಲಿ (ಬಿ.ಎ.ಮತ್ತು ಬಿ. ಎಸ್. ಸಿ. ಪದವಿ) ಪ್ರಾರಂಭವಾಯಿತು.

ಆ) 1984-85 ಅಥವಾ ಅದರಿಂದೀಚೆಗೆ ಪ್ರಾರಂಭಸಿದ ಯಾವುದೇ ಸಂಜೆ ಪ್ರಥಮ ದರ್ಜೆ ಕಾಲೇಜಿಗೂ ಅನುದಾನ ನೀಡಿಲ್ಲ.

ಇ) ಹೌದು

ಈ) 03-08-1989

ಉ) ಸರ್ಕಾರದ ಹಣಕಾಸು ಪರಿಸ್ಥಿತಿಯನ್ನು ಮತ್ತು ಇತರೆ ಸುಸಂಬದ್ಧ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಪರಿಶೀಲಿಸಲಾಗುವುದು.

**ರಾಜ್ಯದ ದೈಹಿಕ ಶಿಕ್ಷಕರ ಬಗ್ಗೆ**

1202 - ಶ್ರೀ ಕೆ.ಎಸ್. ಈಶ್ವರಪ್ಪ (ಶಿವಮೊಗ್ಗ) : ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ದೈಹಿಕ ಶಿಕ್ಷಕರನ್ನು ಸಹಾಯಕ ಶಿಕ್ಷಕರೆಂದು ಪರಿಗಣಿಸಲಾಗಿಲ್ಲಗಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ.*

*ಆ) ಹಾಗಿದ್ದಲ್ಲಿ ದೈಹಿಕ ಶಿಕ್ಷಕರನ್ನು ಸಹಾಯಕ ಶಿಕ್ಷಕರೆಂದು ಪರಿಗಣಿಸಲು ಸರ್ಕಾರದವರಿಗೆ ಇರುವ ತೊಂದರೆಗಳೇನು ಹಾಗೂ ಯಾವಾಗ ಪರಿಗಣಿಸಲಾಗುವುದು.*

ಶ್ರೀ ಹೆಚ್.ಜಿ. ಗೋವಿಂದೋಗೌಡ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು):

ಅ) ಬಂದಿದೆ.

ಆ) ಪ್ರೌಢ ಹಾಗೂ ಪ್ರಾಥಮಿಕ ಶಾಲೆಗಳಲ್ಲಿ ದೈಹಿಕ ಶಿಕ್ಷಕರಿಗೆ ಪ್ರತ್ಯೇಕವಾದ ವೃಂದವಿದೆ. ದೈಹಿಕ ಶಿಕ್ಷಣವು ಪಠ್ಯೇತರ ವಿಷಯವಾಗಿದ್ದು ಪರೀಕ್ಷಾ ವಿಷಯವಾಗಿಲ್ಲದಿರುವುದರಿಂದ ದೈಹಿಕ ಶಿಕ್ಷಕರನ್ನು ಸಹಾಯಕ ಶಿಕ್ಷಕರೆಂದು ಪರಿಗಣಿಸಲು ಬರುವುದಿಲ್ಲ. ದೈಹಿಕ ಶಿಕ್ಷಣವನ್ನು ಪಠ್ಯ ವಿಷಯ ಹಾಗೂ ಪರೀಕ್ಷಾ ವಿಷಯವಾದ ನಂತರ ಪರಿಗಣಿಸಲು ಪರಿಶೀಲಿಸಲಾಗುವುದು.

**ಮಂಡಳಗಳಲ್ಲಿ ಗ್ರಂಥಾಲಯಗಳನ್ನು ಪ್ರಾರಂಭಿಸುವುದರ ಬಗ್ಗೆ**

1200 - ಶ್ರೀ ಕೆ.ಎಸ್. ಈಶ್ವರಪ್ಪ (ಶಿವಮೊಗ್ಗ) : ಮಾನ್ಯ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ರಾಜ್ಯದಲ್ಲಿ 5300 ಮಂಡಲ ಪಂಚಾಯಿತಿಗಳಿದ್ದು ಅದರಲ್ಲಿ 1051 ಮಂಡಲಗಳಲ್ಲಿ ಈಗಾಗಲೇ ಗ್ರಂಥಾಲಯಗಳನ್ನು ಪ್ರಾರಂಭಿಸಲಾಗಿದೆ. ಉಳಿದ ಮಂಡಲಗಳಲ್ಲಿ ಗ್ರಂಥಾಲಯಗಳನ್ನು ಪ್ರಾರಂಭಿಸಲು ಸರ್ಕಾರಕ್ಕೆ ಎಷ್ಟು ವರ್ಷಗಳು ಬೇಕಾಗುತ್ತದೆ?*

*ಆ) 1994-95ನೇ ಸಾಲಿನಲ್ಲಿ ಎಷ್ಟು ಮಂಡಲ ಗ್ರಂಥಾಲಯಗಳನ್ನು ಪ್ರಾರಂಭಿಸಲು ಸರ್ಕಾರ ಮಂಜೂರಾತಿ ನೀಡಿವೆ. ಮಂಜೂರಾಗಿ ನೀಡದಿದ್ದಲ್ಲಿ ವಿಳಂಬತೆಗೆ ಕಾರಣವೇನು?*

*ಇ) ವಾರ್ಷಿಕವಾಗಿ ಮಂಡಲ ಗ್ರಂಥಾಲಯಗಳನ್ನು ಹಂತ ಹಂತವಾಗಿ ಪ್ರಾರಂಭಿಸಲು ಸರ್ಕಾರದವರು ಯೋಜನೆ ರೂಪಿಸಿರುವರೆ?*

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು):

ಅ) 1995-96ರ ಸಾಲಿನಿಂದ ಪ್ರತಿ ವರ್ಷ 607 ಗ್ರಾಮ ಪಂಚಾಯಿತಿ (ಮಂಡಲ) ಗ್ರಂಥಾಲಯಗಳನ್ನು ಪ್ರಾರಂಭಿಸಿದರೆ, ಇನ್ನು 7 ವರ್ಷಗಳಲ್ಲಿ ಎಲ್ಲಾ ಗ್ರಾಮ ಪಂಚಾಯಿತಿಗಳಲ್ಲಿ ಗ್ರಂಥಾಲಯಗಳನ್ನು ಒದಗಿಸಬಹುದು.

ಆ) ಗ್ರಂಥಾಲಯಗಳ ಸ್ಥಾಪನೆ ಮತ್ತು ಉಸ್ತುವಾರಿಯನ್ನು ಇನ್ನು ಮುಂದೆ ಜಿಲ್ಲಾ ಪಂಚಾಯತಿಗಳಿಗೆ ವಹಿಸಬೇಕೆಂಬ ವಿಷಯವನ್ನು ಸರ್ಕಾರವು ಪರಿಶೀಲಿಸುತ್ತಿರುವ ಕಾರಣ 1994-95ರಲ್ಲಿ ಮಂಡಲ ಗ್ರಂಥಾಲಯಗಳನ್ನು ಸ್ಥಾಪಿಸಲಿಲ್ಲ.

ಇ) ಜಿಲ್ಲಾ ಪಂಚಾಯಿತಿಗಳು ಈ ಕಾರ್ಯಕ್ರಮ ಕೈಗೊಳ್ಳಲು ಕಾರ್ಯಕ್ರಮ ರೂಪಿಸಲಾಗುವುದು.

**ಶಿವಮೊಗ್ಗ ಮಹಿಳಾ ಪಾಲಿಟೆಕ್ನಿಕ್ ಕಟ್ಟಡ ಕಾಮಗಾರಿ ಕೆಲಸ ಕುರಿತು**

751 - ಶ್ರೀ ಕೆ.ಎಸ್. ಈಶ್ವರಪ್ಪ (ಶಿವಮೊಗ್ಗ) : ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಶಿವಮೊಗ್ಗ ಮಹಿಳಾ ಪಾಲಿಟೆಕ್ನಿಕ್ ಕಟ್ಟಡದ ಕಾಮಗಾರಿ ಕೆಲಸವು ಯಾವ ಹಂತದಲ್ಲಿದೆ? ಯಾವಾಗ ಪೂರ್ಣಗೊಳ್ಳಬಹುದು?*

*ಆ) ಕಟ್ಟಡ ನಿರ್ಮಾಣದ ಟೆಂಡರ್ ಯಾವ ಕಂಪನಿಗೆ ಒಪ್ಪಿಸಲಾಗಿದೆ? ಹಾಗೂ ಕಟ್ಟಡದ ಪೂರ್ಣ ಕಾಮಗಾರಿಯನ್ನು ಪೂರ್ಣಗೊಳಿಸಲು ಎಷ್ಟು ಕಾಲಾವಧಿ ವಿಧಿಸಲಾಗಿದೆ?*

ಶ್ರೀ ಡಿ. ಮಂಜುನಾಥ್ (ಉನ್ನತ ಶಿಕ್ಷಣ ಸಚಿವರು) :

ಅ)

1) ಕಟ್ಟಡದ ಕಾರ್ಯ ಇನ್ನೂ ಪ್ರಾರಂಭಗೊಂಡಿಲ್ಲ.

2) ಜೂನ್‌ತಿಂಗಳ 1996ರ ಅವಧಿಯೊಳಗೆ ಮುಗಿಯುತ್ತದೆ.

ಆ) ಮೆಸರ್ಸ್ ರಾವ್ ಕನ್‌ಸ್ಟ್ರಕ್ಷನ್ ಕಂಪನಿ, ಬೆಂಗಳೂರು ಇವರಿಗೆ ನಿರ್ಮಾಣದ ಕೆಲಸವನ್ನು ಒಪ್ಪಿಸಲಾಗಿದೆ.

ನಿರ್ಮಾಣ ಕಾರ್ಯದ ಕೆಲಸವನ್ನು ಏಪ್ರಿಲ್ 1995ರ ಮೊದಲನೆ ವಾರದಲ್ಲಿ ಪ್ರಾರಂಭಿಸುತ್ತಾರೆ. ಮತ್ತು ಕಾಮಗಾರಿಯನ್ನು ಪೂರ್ಣಗೊಳಿಸಲು 15 ತಿಂಗಳ ಅವಧಿ ನಿಗದಿಪಡಿಸಲಾಗಿದೆ.

**ಗುರುಮಿಠಕಲ್ ನಗರಕ್ಕೆ ಕ್ರೀಡಾಂಗಣವನ್ನು ಮಂಜೂರು ಮಾಡುವ ಬಗ್ಗೆ**

1047 - ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ (ಗುರುಮಿಠಕಲ್) : ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಯಾದ್‌ಗೀರ್ ತಾಲ್ಲೂಕಿನ ಗುರುಮಿಟಕಲ್ ನಗರದಲ್ಲಿ ಕ್ರೀಡಾಂಗಣವನ್ನು ಸರ್ಕಾರ ಮಂಜೂರು ಮಾಡಿದೆಯೇ?*

*ಆ) ಹಾಗಿದ್ದಲ್ಲಿ ಇದಕ್ಕಾಗಿ ಒದಗಿಸಿರುವ ಹಣ ಎಷ್ಟು? ಮತ್ತು ನಿರ್ಮಾಣದ ಹಂತವೇನು?*

ಶ್ರೀ ಅಜಯಕುಮಾರ್ ಸರ್. ನಾಯಕ್ (ಯುವಜನ ಸೇವಾ ಮತ್ತು ಕ್ರೀಡಾ ಸಚಿವರು) :

ಅ) ಹೌದು

ಆ) ಸರ್ಕಾರದಿಂದ ರೂ 5.00 ಲಕ್ಷಗಳನ್ನು ಒದಗಿಸಲಾಗಿದೆ. ನೆಲ ಸಮತಟ್ಟು ಮಾಡುವ ಕೆಲಸವನ್ನು ಕಾರ್ಯಗತಗೊಳಿಸಲಾಗುತ್ತಿದೆ.

**ರೋಣ ನಗರದಲ್ಲಿ ಕ್ರೀಡಾಂಗಣ ಅಭಿವೃದ್ಧಿ ಕುರಿತು**

685 - ಶ್ರೀ ಶೈಲಪ್ಪ ಬಿದರೂರು (ರೋಣ) : ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ರೋಣ ನಗರದಲ್ಲಿ ತಾಲ್ಲೂಕು ಪಂಚಾಯಿತಿ ಸಮಿತಿ ಸ್ವಾಮ್ಯದಲ್ಲಿರುವ ಸುಮಾರು 4 ಎಕರೆ ಸ್ಥಳವನ್ನು ತಾಲ್ಲೂಕು ಮಟ್ಟದ ಕ್ರೀಡಾಂಗಣವನ್ನಾಗಿ ಅಭಿವೃದ್ಧಿಪಡಿಸಲು ಸ್ಥಳ ಕಾಯ್ದಿರುಸಲಾಗಿದ್ದು ಈ ಕ್ರೀಡಾಂಗಣವನ್ನು ಅಭಿವೃದ್ಧಿ ಪಡಿಸುವ ಆಲೋಚನೆ ಸರ್ಕಾರದವರಿಗೆ ಇದೆಯೇ?

ಆ) ಹಾಗಿದ್ದಲ್ಲಿ ಈ ವರ್ಷ ಕೊಡತಕ್ಕಂತ ಅನುದಾನ ಎಷ್ಟು?

ಇ) ಗ್ರಾಮೀಣ ಪ್ರದೇಶದಲ್ಲಿನ ಕ್ರೀಡಾ ಪ್ರತಿಭೆಯನ್ನು ಗುರುತಿಸಲು ಮತ್ತು ಅವುಗಳಿಗೆ ತರಬೇತಿ ನೀಡುವುದಕ್ಕೆ ಸರ್ಕಾರದವರ ಯೋಜನೆಗಳು ಯಾವುದು?

ಈ) ಯುವಕರ ಚಟುವಟಿಕೆಗಳನ್ನು ಬಲಗೊಳಿಸುವ ನಿಟ್ಟಿನಲ್ಲಿ ಸರ್ಕಾರದವರು ಕೈಗೊಂಡಿರುವ ಕಾರ್ಯಕ್ರಮಗಳೇನು?

ಶ್ರೀ ಅಜಯಕುಮಾರ್ ಸರ್. ನಾಯಕ್ (ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರು) :

ಅ) ರೋಣ ನಗರದಲ್ಲಿ ಕ್ರೀಡಾಂಗಣ ಕಟ್ಟುವ ಪ್ರಸ್ತಾವನೆ ಸರ್ಕಾರದ ಮುಂದೆ ಇಲ್ಲ.

ಆ) ಉದ್ಭವಿಸುವುದಿಲ್ಲ

ಇ) ಗ್ರಾಮೀಣ ಪ್ರದೇಶದಲ್ಲಿನ ಕ್ರೀಡಾ ಪ್ರತಿಭೆಯನ್ನು ಗುರುತಿಸಿ ತರಬೇತಿ ನೀಡಲು ಇಲಾಖೆಯು ಕ್ರೀಡಾ ಶಾಲೆ ಹಾಗೂ ಕ್ರೀಡ್ ನಿಲಯಗಳನ್ನು 1981-82ನೇ ಸಾಲಿನಿಂದ ಕಾರ್ಯಗತ ಗೊಳಿಸುತ್ತಿದೆ: ಹಾಗೂ 16 ವರ್ಷದೊಳಗಿನ ಕ್ರೀಡಾಪಟುಗಳಿಗೆ ಗ್ರಾಮೀಣ ಕ್ರೀಡಾಕೂಟವನ್ನು ತಾಲ್ಲೂಕು ಮಟ್ಟದಿಂದ ರಾಜ್ಯ ಮಟ್ಟದವರೆಗೂ ನಡೆಸುತ್ತಿದೆ.

ಈ) ಇಲಾಖೆಯು ರಾಜ್ಯದಲ್ಲಿ ಯುವ ಚಟುವಟಿಕೆಗಳನ್ನು ಬಲಗೊಳಿಸುವ ನಿಟ್ಟಿನಲ್ಲಿ ವಿವಿಧ ಯೋಜನೆಗಳನ್ನು ಕಾರ್ಯಗತಗೊಳಿಸುತ್ತಿವೆ. ಅವುಗಳಲ್ಲಿ ಮುಖ್ಯವಾಗಿ ಯುವಕ ಸಂಘಗಳ ಸಂಘಟನೆ, ಯುವ ಮುಂದಾಳತ್ವ, ಯುವ ಚೇತನ ತರಬೇತಿ ಶಿಭಿರ, ಕರ್ನಾಟಕ ಯುವಜನ ಸ್ವಯಂ ಸೇವಾದಳ, ಯುವಜನ ಮೇಳ ಮತ್ತು ರ್‍ಯಾಲಿಗಳು, ಯುವ ಪ್ರಶಸ್ತಿ ಸಾಹಸ ಕ್ರೀಡೆಗಳು ಇಲಾಖೆಯ ವತಿಯಿಂದ ನಡೆಸಲಾಗುವ ಸ್ವಯಂ ಸಂಸ್ಥೆಗಳು ಮುಂತಾದವು.

**ರೋಣ ತಾಲ್ಲೂಕಿನಲ್ಲಿರುವ ಅರಣ್ಯ ಇಲಾಖೆ ಕುರಿತು**

681 - ಶ್ರೀ ಶೈಲಪ್ಪ ಬಿದರೂರು (ರೋಣ) : ಮಾನ್ಯ ಅರಣ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ರೋಣ ತಾಲ್ಲೂಕಿನಲ್ಲಿ ಅರಣ್ಯ ಇಲಾಖೆ ಸ್ವಾಮ್ಯಕ್ಕೆ ಒಳಪಟ್ಟಂತೆ ಇರುವ ಒಟ್ಟು ಕ್ಷೇತ್ರ ಎಷ್ಟು

ಆ) ಇರತಕ್ಕಂತಹ ಕ್ಷೇತ್ರವನ್ನು ಅಭಿವೃದ್ಧಿ ಪಡುಸಲು ವಿಶೇಷ ಯೋಜನೆ ಹಾಕಿದೆಯೇ?

ಇ) ಕಳೆದ ನಾಲ್ಕು ವರ್ಷಗಳಿಂದ ಕ್ಷೇತ್ರವನ್ನು ಅಭಿವೃದ್ಧಿಪಜಡಿಸಲು ವಿನಿಯೋಗಿಸಿದ ಹಣವೆಷ್ಟು? (ಸಂಪೂರ್ಣ ವಿವರಗಳೊಂದಿಗೆ ತಿಳಿಸುವುದು)

ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) :

ಅ) 276.5 ಹೆಕ್ಟೇರುಗಳು

ಆ) ಅಭಿವೃದ್ಧಿ ಕೆಲಸಗಳನ್ನು ಕೆಲವು ಯೋಜನೆಗಳಡಿಯಲ್ಲಿ ಕೈಗೊಳ್ಳಲಾಗುತ್ತಿದೆ.

ಇ) ಖರ್ಚು ಮಾಡಿದ ಹಣದ ವಿವರ ಈ ಕೆಳಕಂಡಂತಿರುತ್ತದೆ

| | ವರ್ಷ | ರೂ. ಲಕ್ಷಗಳಲ್ಲಿ |
|---|---|---|
| 1. | 1991-92 | 1.020 |
| 2. | 1992-93 | 4.430 |
| 3. | 1993-94 | 5.710 |
| 4. | 1994-95 | 7.347 |

**ಉತ್ತರ ಪತ್ರಿಕೆಗಳ ಮೌಲ್ಯ ಮಾಪನದ ಬಗ್ಗೆ**

599 - ಶ್ರೀ ಜೆ.ಟಿ. ಪಾಟೀಲ್ (ಬೀಳಗಿ) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಪದವಿ ಪೂರ್ವ ಶಿಕ್ಷಣ ಪರೀಕ್ಷೆಗಳ ಉತ್ತರ ಪತ್ರಿಕೆಗಳ ಮೌಲ್ಯಮಾಪನಕ್ಕಾಗಿ ಉಪಮುಖ್ಯ ಪರಿವೀಕ್ಷಕರ ಮತ್ತು ಸಹಾಯಕ ಪರಿವೀಕ್ಷಕರ ನೇಮಕಾತಿ ಆದೇಶಗಳನ್ನು ಒಂದು ವಾರ ಮುಂಚಿತರಾಗಿ ಮಾತ್ರ ಕಳುಹಿಸುತ್ತಿರುವುದು ಸರ್ಕಾರದವರ ಗಮನಕ್ಕೆ ಬಂದಿದೆಯೇ?

ಆ) ಹೆಚ್ಚಿನ ಸಂಖ್ಯೆಯಲ್ಲಿ ಪರೀಕ್ಷಕರು ಬಾರದಿದ್ದಲ್ಲಿ ಕ್ಯಾಂಪಿನ ಅವಧಿಯನ್ನು ವಿಸ್ತರಿಸದೇ ಮೌಲ್ಯ ಮಾಪನ ಕಾರ್ಯವನ್ನು ಪೂರ್ತಿಗೊಳಿಸಲು ಸರ್ಕಾರದವರು ಯಾವ ಕ್ರಮಗಳನ್ನು ಕೈಗೊಂಡಿದ್ದಾರೆ.

ಇ) ಶಿಕ್ಷಕ ವರ್ಗದ ಒಂದು ಗುಂಪಿನವರು ಸತ್ಯಾಗ್ರಹದಲ್ಲಿ ನಿರತರಾದರೆ ಮೌಲ್ಯಮಾಪನ ಕಾರ್ಯದಲ್ಲಾಗುವ ವಿಳಂಬವನ್ನು ತಪ್ಪಿಸಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಈ) ಪದವಿ ಮಹಾವಿದ್ಯಾಲಯಗಳ ಶಿಕ್ಷಕರ 20 ಬೇಡಿಕೆಗಳು ಇನ್ನೂ ಇತ್ಯರ್ಥಗೊಳ್ಳದೆ ಬಾಕಿ ಇರುವ ಹಿನ್ನೆಲೆಯಲ್ಲಿ ಮೌಲ್ಯಮಾಪನ ಕಾರ್ಯ ಸುಗಮವಾಗಿ ಸಾಗುವುದೆಂಬ ಭರವಸೆ ಸರ್ಕಾರಕ್ಕಿದೆಯೇ?

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು):

ಅ) ಸಾಮಾನ್ಯವಾಗಿ ಪರೀಕ್ಷೆಗಳ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಕಾರ್ಯ ಪ್ರಾರಂಭವಾಗುವ 20 ದಿವಸಗಳ ಮುಂಚಿತವಾಗಿ ನೇಮಕಾತಿ ಆದೇಶಗಳನ್ನು ಕಳುಹಿಸಲಾಗುವುದು.

ಆ) ನಿಗದಿಪಡಿಸಿದ ಸಂಖ್ಯೆಯ ಮೌಲ್ಯಮಾಪಕರು ಬಾರದಿದ್ದಲ್ಲಿ ಕೆಲವು ಸಂದರ್ಭಗಳಲ್ಲಿ ಹೆಚ್ಚುವರಿ ಮೌಲ್ಯಮಾಪಕರನ್ನು ನೇಮಿಸಲಾಗುವುದು. ಕೆಲವು ಸಂದರ್ಭಗಳಲ್ಲಿ ಕ್ಯಾಂಪಿನ ಅವಧಿಯನ್ನು ವಿಸ್ತರಿಸಲಾಗುವುದು.

ಇ) ಒಂದು ಗುಂಪಿನ ಮೌಲ್ಯಮಾಪನ ಬೇಡಿಕೆಗಳು ಸಮಂಜಸವಾಗಿದ್ದಲ್ಲಿ ಬೇಡಿಕೆಗಳನ್ನು ಪರಿಶೀಲಿಸಿ ಅಗತ್ಯ ಕ್ರಮಕೈಗೊಂಡು ಮೌಲ್ಯಮಾಪನ ಕಾರ್ಯವನ್ನು ಮುಗಿಸಲಾಗುತ್ತಿದೆ. ಇಲ್ಲದಿದ್ದ ಪಕ್ಷದಲ್ಲಿ ಪ್ರಶ್ನೆ 'ಆ' ಗೆ ನೀಡಿರುವ ಉತ್ತರದಲ್ಲಿ ತಿಳಿಸಿರುವಂತೆ ಅದೇ ವಿಷಯದ ಅರ್ಹ ಉಪನ್ಯಾಸಕರನ್ನು ನೇಮಕ ಮಾಡಿಕೊಂಡು ಮೌಲ್ಯಮಾಪನ ಕಾರ್ಯವನ್ನು ಮುಗಿಸಲಾಗುವುದು.

ಈ) ಭರವಸೆ ಇದೆ.

**ಪ್ರಾಥಮಿಕ ಶಾಲಾ ಗೌರವ ಶಿಕ್ಷಕರಾಗಿ ಸೇವೆಸಲ್ಲಿಸುತ್ತಿರುವವರ ಬಗ್ಗೆ**

967 - ಶ್ರೀ ಜೆ.ಟಿ. ಪಟೀಲ್ (ಬೀಳಗಿ) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು. ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಬಿಜಾಪುರ ಜಿಲ್ಲೆಯಲ್ಲಿ ಪ್ರಾಥಮಿಕ ಶಾಲಾ ಗೌರವ ಶಿಕ್ಷಕರಾಗಿ 1988 ರಿಂದ ಸೇವೆ ಸಲ್ಲಿಸುತ್ತಿರುವ ಶಿಕ್ಷಕರ ಸಂಖ್ಯೆ ಎಷ್ಟು?

ಆ) ಸದರಿ ಶಿಕ್ಷಕರಿಗೆ ಸರ್ಕಾರದಿಂದ ಗೌರವಧನ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?

ಇ) ಹಾಗಿದ್ದಲ್ಲಿ ಗೌರವಧನ ನೀಡುವ ಬಗ್ಗೆ ಮತ್ತು ಖಾಯಂ ಮಾಡುವ ಬಗ್ಗೆ ಸರ್ಕಾರದವರು ಕೈಗೊಂಡ ಕ್ರಮಗಳೇನು?

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು):

ಅ) ಮಂಡಲ ಪಂಚಾಯಿತಿಯವರು 225 ಗೌರವ ಶಿಕ್ಷಕರನ್ನು ನೇಮಕ ಮಾಡಿಕೊಂಡಿರುತ್ತಾರೆ. ಈ ನೇಮಕಾತಿಗಳನ್ನು ಸರ್ಕಾರದ ವತಿಯಿಂದಾಗಲೀ ಅಥವಾ ಜಿಲ್ಲಾ ಪಂಚಾಯಿತ್‌ಗಳ ವತಿಯಿಂದಾಗಲೀ ಮಾಡಿರುವುದಿಲ್ಲ.

ಆ) ಇಲ್ಲ.

ಇ) ಮಂಡಲ ಪಂಚಾಯಿತಿಯವರು ನೇಮಕಾತಿ ಹಾಗೂ ಮೀಸಲಾತಿ ನಿಯಮಗಳನ್ನು ಅನುಸರಿಸದೇ ಗೌರವ ಶಿಕ್ಷಕರನ್ನು ನೇರವಾಗಿ ನೇಮಕ ಮಾಡಿಕೊಂಡಿರುವುದರಿಂದ, ಸದರಿಯವರಿಗೆ ಸರ್ಕಾರವು ಗೌರವಧನ ನೀಡುವ ಹಾಗೂ ಅವರನ್ನು ಖಾಯಂ ಮಾಡುವ ಪ್ರಶ್ನೆ ಉದ್ಭವಿಸುವುದಿಲ್ಲ.

**ಯಡಹಳ್ಳಿ ಗ್ರಾಮದಲ್ಲಿ ಪಕ್ಷಿಧಾಮ ಅಭಿವೃದ್ಧಿ ಕುರಿತು**

1260 - ಶ್ರೀ ಜಿ.ಬಿ. ಪಾಟೀಲ್ (ಬೀಳಗಿ) : ಮಾನ್ಯ ಅರಣ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವವೆ?

*ಅ) ಬಿಜಾಪುರ ಜಿಲ್ಲೆಯ ಬೀಳಗಿ ತಾಲ್ಲೂಕಿನ ಯಡಹಳ್ಳಿ ಗ್ರಾಮದಲ್ಲಿ ಪಕ್ಷಿಧಾಮ ಅಭಿವೃದ್ಧಿ ಪಡಿಸಲು ಯೋಜನೆ ಮಂಜೂರುಮಾಡಿರುವುದು ಪರಿಶೀಲನೆಯಲ್ಲಿದೆಯೆ?*

*ಆ) ಹಾಗಿದ್ದಲ್ಲಿ ಈ ಪಕ್ಷಿಧಾಮವನ್ನು ಅಭಿವೃದ್ಧಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳಾವುವು?*

*ಇ) ಈ ಪಕ್ಷಿಧಾಮದ ಬೆಳವಣಿಗೆಗೆ ಬಿಡುಗಡೆ ಮಾಡಿದ ಹಣವೆಷ್ಟು?*

*ಈ) ಈ ವರ್ಷದ ಆಯವ್ಯಯದಲ್ಲಿ ಈ ಪಕ್ಷಿಧಾಮದ ಅಭಿವೃದ್ಧಿಗೆ ಎಷ್ಟು ಹಣ ನಿಗದಿಗೊಳಿಸಲಾಗಿದೆ?*

ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) :

ಅ) ಇಲ್ಲ

ಆ) ಉದ್ಭವಿಸುವುದಿಲ್ಲ

ಇ) ಉದ್ಭವಿಸುವುದಿಲ್ಲ

ಈ) ಉದ್ಭವಿಸುವುದಿಲ್ಲ

**ನಾಗರಹೊಳೆ ಅರಣ್ಯದಲ್ಲಿರುವ ಗಿರಿಜನರನ್ನು ಸ್ಥಳಾಂತರಗೊಳಿಸುವ ಬಗ್ಗೆ**

925 - ಶ್ರೀ ಹೆಚ್.ಡಿ. ಬಸವರಾಜು (ವೀರಾಜಪೇಟೆ) : ಮಾನ್ಯ ಅರಣಣ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ನಾಗರಹೊಳೆ ಅರಣ್ಯದಲ್ಲಿರುವ ಗಿರಿಜನರನ್ನು ಸ್ಥಳಾಂತರಗೊಳಿಸುವ ಬಗ್ಗೆ ಸರ್ಕಾರ ಯಾವುದಾದರೂ ನಿರ್ದಿಷ್ಟ ಯೋಜನೆ ಹಾಕಿಕೊಂಡಿದೆಯೇ, ಹಾಗಿದ್ದರೆ ಇದರ ಬಗ್ಗೆ ಅನುಷ್ಠಾನಕ್ಕೆ ಏನಾದರೂ ಸಮಯವನ್ನು ನಿಗದಿಪಡಿಸಿದೆಯೇ ಹಾಗಿದ್ದಲ್ಲಿ ಅವುಗಳ ಬಗ್ಗೆ ವಿವರಣೆ ನೀಡುವುದು.*

ಆ) ಸ್ಥಳಾಂತರಗೊಳಿಸುವುದಕ್ಕೆ ಆಯ್ಕೆ ಮಾಡಿಕೊಂಡಿರುವ ಸ್ಥಳ ಯಾವುದು ಹಾಗೂ ಅವುಗಳ ವಿವರಣೆ ನೀಡುವುದು?

ಇ) ಗಿರುಜನರು ಸ್ಥಳಾಂತರಕ್ಕೆ ವಿರೋಧಿಸುತ್ತಿದ್ದಾರೆ ಎನ್ನುವ ಅಭಿಪ್ರಾಯವಿದೆ: ಇದನ್ನು ಸರ್ಕಾರ ಮಾನ್ಯತೆ ಮಾಡಲಾಗುತ್ತಿದೆಯೇ,ಹಾಗಿಲ್ಲದಿದ್ದಲ್ಲಿ ಕಾರಣಗಳೇನು?

ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) :

ಅ) ನಿರ್ಧಿಷ್ಟ ಯೋಜನೆಯನ್ನು ತಯಾರಿಸಲಾಗಿದೆ. ಇದರ ಅನುಷ್ಠಾನಕ್ಕೆ ಸಮಯ ನಿಗದಿಗೊಳಿಸಲಾಗಿಲ್ಲ. ನಾಗರಹೊಳೆ ರಾಷ್ಟ್ರೀಯ ಉದ್ಯಾನವನದಲ್ಲಿ 1575 ಗುಡ್ಡಗಾಡು ಜನಾಂಗದ ಕುಟುಂಬಗಳಿದ್ದು, ಇವರುಗಳನ್ನು ಸದರಿ ರಾಷ್ಟ್ರೀಯ ಉದ್ಯಾನವನಗ ಅಂಚಿನಲ್ಲಿ ಸುಮಾರು 1931 ಹೆಕ್ಟೇರುಗಳಲ್ಲಿ ಪುನರ್‌ವಸತಿಗೊಳಿಸಲು ಯೋಜಿಸಲಾಗಿದೆ.

ಆ) ಪುನರ್ವಸತಿ ಯೋಜನೆಯ ಒಟ್ಟು ಅಂದಾಜು ವೆಚ್ಚ ರೂ.7.21ಕೋಟಿಗಳಾಗಿದ್ದು, ಈ ಬಗ್ಗೆ ಕೇಂದ್ರ ಸರ್ಕಾರದ ನೆರವನ್ನು ಕೋರಲಾಗಿದೆ.

ಯೋಜನೆಯ ರೂಪರೇಖೆಯನ್ವಯ ಹಾಗೂ ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ, ಪ್ರತಿ ಕುಟುಂಬಕ್ಕೆ, ತಲಾ ಒಂದು ಹೆಕ್ಟೇರ್ ಪ್ರದೇಶವನ್ನು ಸಾಗುವಳಿಗಾಗಿ ಹಂಚಲಾಗುವುದು : ಉಳಿದ ಪ್ರದೇಶವನ್ನು ಕಾಲೋನಿ ಕಟ್ಟಲು, ಇತರೇ ನಾಗರೀಕ ಸೌಲಭ್ಯ ಕಲ್ಪಿಸಲು ಉಪಯೋಗಿಸಲಾಗುವುದು.

ಆ) ಸ್ಥಳಾಂತರಿಸಲು ಆಯ್ಕೆ ಮಾಡಿರುವ ಸ್ಥಳಗಳು ಈ ಕೆಳಕಂಡಂತಿವೆ.

| | | |
|---|---|---|
| 1. | ವೀರನಹೊಸಳ್ಳಿ ಮನ್ನಾಜಂಗಲ್ | 401 ಹೆಕ್ಟೇರ್ |
| 2. | ಸೊಳ್ಳೇಪುರ ಮನ್ನಾಜಂಗಲ್ | 330 ಹೆಕ್ಟೇರ್ |
| 3. | ಮುದ್ದುನಹಳ್ಳಿ ಮನ್ನಾಜಂಗಲ್ | 500 ಹೆಕ್ಟೇರ್ |
| 4. | ಸೊಳ್ಳೇಪುರ ಮನ್ನಾಜಂಗಲ್ | 700 ಹೆಕ್ಟೇರ್ |
| | **ಒಟ್ಟು** | **1931 ಹೆಕ್ಟೇರ್** |

ಇ) ಈ ವಿಷಯ ಸರ್ಕಾರದ ಗಮನಕ್ಕೆ ಬಂದಿದೆ. ಈ ಬಗೆಗಿನ ಎಲ್ಲಾ ಸಮಸ್ಯೆಗಳನ್ನು ಬುಡಕಟ್ಟು ಜನಾಂಗದ ಪ್ರತಿನಿಧಿಗಳೊಡನೆ ಹಾಗೂ ಸಾರ್ವಜನಿಕ ಸಂಘ ಸಂಸ್ಥೆಗಳೊಂದಿಗೆ ಚರ್ಚಿಸಿ, ಸರ್ವಸಮ್ಮತ ಪರಿಹಾರ ಕಂಡುಹಿಡಿಯಲು ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಗಿದೆ. ಸಮಿತಿಯ ವರದಿ ಬಂದ ನಂತರ ಮುಂದಿನ ಸೂಕ್ತ ಕ್ರಮಕೈಗೊಳ್ಳಕಾಗುವುದು. ಬಹಳಷ್ಟು ಗಿರಿಜನರು ಪುನರ್ವಸತಿಯನ್ನು ಬೇಗ ಮಾಡಿ ಎಂದು ಒತ್ತಾಯಿಸುತ್ತಿದ್ದಾರೆ.

**ಅರಣ್ಯ ಉತ್ಪನ್ನಗಳನ್ನು ಸಾಗಿಸಲು ಪರವಾನಿಗೆ ನೀಡುವುದರ ಬಗ್ಗೆ**

1181 - ಶ್ರೀ ಹೆಚ್.ಡಿ. ಬಸವರಾಜು (ವೀರಾಜಪೇಟೆ) : ಮಾನ್ಯ ಅರಣ್ಯ ಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಯಾವ್ಯಾವ ಅರಣ್ಯ ಉತ್ಪನ್ನಗಳನ್ನು ಅರಣ್ಯದಿಂದ ನೀಡಲಾಗುತ್ತಿವೆ?

ಆ) ಈ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಲು ಪರಿಶಿಷ್ಟ ಪಂಗಡದವರಿಗೆ ಆದ್ಯತೆ ನೀಡಬೇಕೆಂಬುದರ ಬಗ್ಗೆ ಸರ್ಕಾರದ ಆದೇಶ ಇದೆಯಾ. ಹಾಗಿಲ್ಲದಿದ್ದರೆ ಪರಿಶಿಷ್ಟ ಪಂಗಡದವರ ಅಭಿವೃದ್ಧಿಯ ದೃಷ್ಟಿಯಿಂದ ಹೊಸದಾಗಿ ಸರ್ಕಾರಿ ಆದೇಶ ಹೊರಡಿಸಲಾಗುವುದೆ?

ಇ) ಅರಣ್ಯದಿಂದ ಬೊಂಬುಗಳನ್ನು ಸಾಗಿಸಲು ಪರಿಶಿಷ್ಟ ಪಂಗಡದವರಿಗೆ ಆದ್ಯತೆ ನೀಡಲಾಗುತ್ತಿದೆಯೆ?

ಈ) ಬೊಂಬುಗಳಿಂದ ಉತ್ಪನ್ನ ಮಾಡಿದ ವಸ್ತುಗಳನ್ನು ಸಾಗಿಸಲು ಪರವಾನಿಗೆ ಅಗತ್ಯವಿದೆಯೇ?

ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) :

ಅ) ಸರ್ಕಾರದ ಪ್ರಸ್ತುತ ನೀತಿಯಂತೆ ಅರಣ್ಯದಲ್ಲಿ ಹಸಿರು ಮರಗಳನ್ನು ಕಡಿಯಲು ನಿಷೇಧವಿರುವುದರಿಂದ ಮುಖ್ಯ ಅರಣ್ಯ ಉತ್ಪನ್ನಗಳನ್ನು ಅರಣ್ಯದಿಂದ ಹೊರ ಸಾಗಿಸಲು ಪರವಾನಗಿ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಅರಣ್ಯದಲ್ಲಿ ಸ್ವಾಭಾವಿಕವಾಗಿ ಒಣಗಿ ಗಾಳಿಗೆ ಬಿದ್ದ ಮರಗಳನ್ನು ಮಾತ್ರ ಇಲಾಖಾ ವತಿಯಿಂದ ಸಂಗ್ರಹಿಸಿ ಅವುಗಳನ್ನು ಹತ್ತಿರದ ಸರ್ಕಾರಿ ಮರ ಸಂಗ್ರಹಾಲಯಕ್ಕೆ ಸಾಗಿಸಿ ಬಹಿರಂಗ ಹರಾಜು ಮಾಡಲಾಗುತ್ತಿದೆ. ಹರಾಜಿನಲ್ಲಿ ಖರೀದಿಸಿದ ಮರವನ್ನು ಸಾಗಿಸಲು ಮಾತ್ರ ಪರವಾನಗಿ ನೀಡಲಾಗುತ್ತಿದೆ.

ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣಾ ಗುತ್ತಿಗೆಯನ್ನು ಗಿರಿಜನರ ಸಂಘಗಳಿಗೆ (ಲ್ಯಾಂಪ್ ಸೊಸೈಟಿಗಳಿಗೆ) ನೀಡುತ್ತಿದ್ದು ಸದರಿ ಸಂಘಗಳು ಅರಣ್ಯದಲ್ಲಿ ಸಂಗ್ರಹಿಸಿದ ಕಿರು ಅರಣ್ಯ ಉತ್ಪನ್ನಗಳ ಸಾಗಾಣಿಕೆಗೆ ಮಾತ್ರ ಪರವಾನಗಿಯನ್ನು ನೀಡಲಾಗುತ್ತಿದೆ.

ಆ) ರಾಜ್ಯ ಸರ್ಕಾರಿ ಆದೇಶ ಸಂಖ್ಯೆ:ಎಫ್ಎಫ್‌ಡಿ 264 ಎಫ್‌ಣಡಿ 75, ದಿನಾಂಕ: 7-1-1976ರ ಪ್ರಕಾರ ರಾಜ್ಯದಲ್ಲಿ ಎಲ್ಲೆಲ್ಲಿ ಗಿರಿಜನರ ಸಂಘಗಳು (ಲ್ಯಾಂಪ್ ಸೊಸೈಟಿಗಳು) ಅಸ್ತಿತ್ವದಲ್ಲಿದೆಯೋ ಅವುಗಳಿಗೆಲ್ಲಾ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣಾ ಗುತ್ತಿಗೆಯನ್ನು ನಿಗದಿತ ತಗ್ಗು ಬೆಲೆಗೆ ನೀಡಬೇಕೆಂದು ಆದೇಶವಿರುತ್ತದೆ. ಗಿರಿಜನರ ಸಂಘಗಳು ಅಸ್ತಿತ್ವದಲ್ಲಿ ಇಲ್ಲದೆಯಿರುವ ಕಡೆಯಲ್ಲಿ ಮಾತ್ರ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣಾ ಗುತ್ತಿಗೆಯನ್ನು ಟೆಂಡರ್-ಕಂ-ಹರಾಜು ಮೂಲಕ ವಿಲೇವಾರಿ ಮಾಡಲಾಗುತ್ತಿದೆ. ಆದ್ದರಿಂದ ಈ ಬಗ್ಗೆ ಹೊಸದಾಗಿ ಸರ್ಕಾರಿ ಆದೇಶ ಹೊರಡಿಸುವ ಅವಶ್ಯ ಕಂಡುಬರುವುದಿಲ್ಲ.

ಇ) ಅರಣ್ಯದಿಂದ ನೇರವಾಗಿ ಬೊಂಬುಗಳನ್ನು ಸಾಗಿಸಲು ಪರವಾನಿಗೆ ನೀಡಲು ಅವಕಾಶವಿರುವುದಿಲ್ಲ. ಆದರೆ ಸರ್ಕಾರಿ ಬೊಂಬು ಸಂಗ್ರಹಾಲಯಗಳಿಂದ ಮಾತ್ರ ಬೊಂಬುಗಳನ್ನು ಮೇದಾರರಿಗೆ ಹಾಗೂ ಇತರರಿಗೆ ಪರವಾನಿಗೆ ನೀಡಲಾಗುತ್ತಿದೆ. ಪರಿಶಿಷ್ಟ ಪಂಗಡದವರಿಗೆ ಟ್ರೈಬಲ್ ಸಬ್ ಪ್ಲಾನ್ ಅಡಿಯಲ್ಲಿ ಉಚಿತವಾಗಿ ಬೊಂಬುಗಳನ್ನು ನೀಡಲಾಗುತ್ತಿದೆ.

ಈ) ಬಿದಿರು ಬೊಂಬುಗಳಿಂದ ತಯಾರಿಸಿದ ವಸ್ತುಗಳನ್ನು ಸಾಗಿ ಸಲು ಯಾವುದೇ ರೀತಿಯ ಪರವಾನಿಗೆಯನ್ನು ಆಗ್ರಹಪಡಿಸಬಾರದೆಂದು ಅರಣ್ಯ ಇಲಾಖೆ ಆದೇಶ ಸಂಖ್ಯೆ ಎ 7.ಬಿಎಂಬಿ.21:87-88: ದಿನಾಂಕ 18-05-1989ರಲ್ಲಿ ಇಲಾಖಾ ಅಧಿಕಾರಿಗಳಿಗೆ ಸೂಚನೆಯನ್ನು ನೀಡಲಾಗಿದೆ.

**ಅರಣ್ಯ ಇಲಾಖೆಯಲ್ಲಿನ ಮೀಸಲಾತಿ ಕುರಿತು**

1181 ಎ - ಶ್ರೀ ಹೆಚ್.ಡಿ. ಬಸವರಾಜು (ವೀರಾಜಪೇಟೆ) : ಮಾನ್ಯ ಅರಣ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಅರಣ್ಯ ಇಲಾಖೆಗೆ ಸೇರಿದ ಸರ್ಕಾರಿ ಕೆಲಸಕ್ಕೆ ಸರ್ಕಾರ ನಿಗದಧಿಪಡಿಸಿದ ಮೀಸಲಾತಿಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡದವರನ್ನು ನೇಮಕ ಮಾಡುತ್ತಿದ್ದೀರಾ ಅಥವಾ ಇಲ್ಲವಾ:

ಆ) ನೇಮಕಾತಿಯಲ್ಲಿ ಪರಿಶಿಷ್ಟ ಪಂಗಡದವರಿಗೆ ಮೀಸಲಾತಿಯನ್ನು ಹೆಚ್ಚಿಸುವ ಆಲೋಚನೆ ಇದೆಯೇ?

ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) :

ಅ) ಅರಣ್ಯ ಇಲಾಖೆಯಲ್ಲಿ ಈ ಕೆಳಗಿನ ಎರಡು ಹುದ್ದೆಗಳಲ್ಲಿ ಮಾತ್ರ ಮೀಸಲಾತಿಗಿಂತ ಹೆಚ್ಚಿನ ಪರಿಶಿಷ್ಟ ಪಂಗಡದವರ ನೇಮಕಾತಿಯಾಗಿದೆ.

| | ಒಟ್ಟು ಸಿಬ್ಬಂದಿಗಳು | ಪರಿಶಿಷ್ಟ ಪಂಗಡದವರು |
|---|---|---|
| ಆನೆ ಮಾಹುತರು | 49 | 45 |
| ಆನೆ ಕಾವಡಿ | 40 | 34 |

ಆ) ಇಲ್ಲ

**ವೀರಾಜಪೇಟೆ ತಾಲ್ಲೂಕಿನ ಸರ್ಕಾರಿ ಆಸ್ಪತ್ರೆಗಳಿಗೆ ಉಚಿತ ಔಷಧಿ ಸರಬರಾಜು ಕುರಿತು**

924 ಎ - ಶ್ರೀ ಹೆಚ್.ಡಿ. ಬಸವರಾಜು (ವೀರಾಜಪೇಟೆ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ವೀರಾಜಪೇಟೆ ತಾಲ್ಲೂಕಿನಲ್ಲಿರುವ ಎಲ್ಲಾ ಸರ್ಕಾರಿ ಆಸ್ಪತ್ರೆಗಳಿಗೆ ಉಚಿತ ಔಷಧಿ ಸರಬರಾಜು ಆಗುತ್ತಿದೆಯಾ? ಹಾಗಿದ್ದರೆ ವರ್ಷಕ್ಕೆ ಸರ್ಕಾರ ಈ ಬಾಬ್ತುನಲ್ಲಿ ವೆಚ್ಚ ಮಾಡುತ್ತಿರುವ ಹಣವೆಷ್ಟು?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ವೀರಾಜಪೇಟೆ ತಾಲ್ಲೂಕಿನಲ್ಲಿರುವ ಎಲ್ಲಾ ಆಸ್ಪತ್ರೆಗಳಿಗೆ ಜಿಲ್ಲಾ ಪಂಚಾಯತ್ ಹಾಗೂ ಸರ್ಕಾರಿ ಔಷಧಿ ಮಳಿಗೆ, ಬೆಂಗಳೂರಿನಿಂದ ಉಚಿತ ಔಷಧಿಗಳ ಪೂರೈಕೆಗಾಗಿ ವರ್ಷಕ್ಕೆ ಒಟ್ಟು ರೂ. 18,70,000-00 ಗಳನ್ನು ವೆಚ್ಚ ಮಾಡಲಾಗುತ್ತಿದೆ (1994-95ನೇ ಸಾಲಿನ ಅಂಕಿ).

**ತಾಯಿ ಮಕ್ಕಳ ಆರೋಗ್ಯ ಕುರಿತು**

728 - ಶ್ರೀ ಕುಂಬ್ಳೆ ಸುಂದರರಾವ್ (ಸೂರತ್ಕಲ್ ಕ್ಷೇತ್ರ) : ಮಾನ್ಯ ಆರೋಗ್ಯ ಮತ್ತುಕುಂಟುಂಬ ಕಲ್ಯಾಣಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ರಾಜ್ಯದಲ್ಲಿ ಜಾರಿಯಲ್ಲಿರುವ ತಾಯಿ ಮತ್ತು ಮಕ್ಕಳ ಆರೋಗ್ಯದ ಕುರಿತಾದ ವಿವಿಧ ಯೋಜನೆಗಳು ಯಾವುವು?*

*ಆ) ಅನಾರೋಗ್ಯದ ವಿವಿಧ ಕಾರಣಗಳಿಂದಾಗಿ ಸಾಯುತ್ತಿರುವ ತಾಯಿ ಮತ್ತು ಮಕ್ಕಳ ಸಂಖ್ಯೆ ಎಷ್ಟು?*

*ಇ) ಅನಾರೋಗ್ಯದಿಂದ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ತಾಯಿ ಮಕ್ಕಳ ಸಾವುಗಳು ಆಗುತ್ತಿರುವುದರಿಂದ ಜನರಲ್ಲಿ ಈ ಕುರಿತಾದ ಅರಿವನ್ನು ಮೂಡಿಸಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ತಾಯಿ ಮತ್ತು ಮಕ್ಕಳ ಆರೋಗ್ಯ ಸೇವೆಗಳ ವಿವರ ಈ ಕೆಳಗಿನಂತಿವೆ.

1. ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ

ಅ) ಅದರಡಿಯಲ್ಲಿ ಒಂದು ವರ್ಷದ ಒಳಗಿನ ಎಲ್ಲಾ ಮಕ್ಕಳಿಗೂ ಆರು ಮಾರಕ ರೋಗದ ವಿರುದ್ಧ ಲಸಿಕೆ ನೀಡುವುದು.
ಲಸಿಕೆ ಬಿ.ಸಿ.ಜಿ., ಡಿ.ಪಿ.ಟಿ. ,ಪೋಲಿಯೋ ಮತ್ತು ದಡಾರ

ಆ) 'ಎ'ಜೀವಸತ್ವದ ಕೊರತೆಯ ಬಗ್ಗೆ 'ಎ' ಅನ್ನಾಂಗ ಕೊಡಿಸುವುದು.

ಇ) ಗರ್ಭಿಣಿ ತಾಯಂದಿರಿಗೆ ಧನುರ್ವಾಯು ವಿರುದ್ಧ ಲಸಿಕೆ ನೀಡುವುದು.

2. ಶಿಶು ಉಳಿವು ಮತ್ತು ಸುರಕ್ಷಿತ ತಾಯ್ತನದ ಕಾರ್ಯಕ್ರಮ :
ಸಾರ್ವತ್ರಿಕ ಲಸಿಕಾ ಕಾರ್ಯಕ್ರಮದಜೊತೆಗೆ ಈ ಕೆಳಕಂಡ ರಕ್ಷಣಾ ಕ್ರಮ ತೆಗೆದುಕೊಳ್ಳಲಾಗಿದೆ :

ಅ) ರಕ್ತಹೀನತೆ ತಡೆಗಟ್ಟಲು ಶಕ್ತಿದಾಯಕ ಕಬ್ಬಿಣಾಂಶದ ಮಾತ್ರೆಗಳನ್ನು ತಾಯಿ ಹಾಗೂ ಮಗುವಿಗೆ ಕೊಡಲಾಗುತ್ತದೆ.

ಆ) ಮಕ್ಕಳಲ್ಲಿ ನಿಮೋನಿಯಾ ಕಾಯಿಲೆ ತಡೆ ಗಟ್ಟಲು ಕೋಟ್ರೈ ಮಾಕ್ಸ್ಯಜಾಲ್‌ಮಾತ್ರೆಗಳನ್ನು ಕೊಡಲಾಗುವುದು.

ಇ) ನಿರ್ಜಲತೆಯನ್ನು ತಡೆಗಟ್ಟಲು ಓ.ಆರ್. ಎಸ್. ಪಾಕೆಟ್‌ಗಳನ್ನು ಕೊಡಲಾಗುವುದು.

ಈ) ನವಜಾತ ಶಿಶುವಿನ ಮರಣ ತಡೆಗಟ್ಟಲು ತಾಯಿಗೆ ಧನುರ್ವಾಯು ವಿರುದ್ಧ ಟಿ.ಟಿ.ಚುಚ್ಚುಮದ್ದು ಕೊಡುವುದು.

ಉ) ಎಲ್ಲಾ ಹಂತದಲ್ಲೂ ಸುರಕ್ಷಿತ ಹೆರಿಗೆ ವಿಧಾನ ಸುಧಾರಣೆ ಕೈಗೊಳ್ಳಲಾಗಿದೆ.

ಊ) ವೈದ್ಯಾಧಿಕಾರಿಗಳಿಗೆ ಮತ್ತು ಕ್ಷೇತ್ರ ಕಾರ್ಯಕರ್ತರಿಗೆ ತರಬೇತಿ ಕಾರ್ಯಕ್ರಮ.

3. ಸುರಕ್ಷಾ:

ಸರುಕ್ಷಾ ಇದೊಂದು ಹೊಸ ಕಾರ್ಯಕ್ರಮ. ಕರ್ನಾಟಕ ಸರ್ಕಾರವು ರಾಜ್ಯದ ಹಿಂದುಳಿದ ಆರು ಉತ್ತರ ಜಿಲ್ಲೆಗಳಾದ ಬೀದರ, ಬೆಳಗಾಂವ, ಬಿಜಾಪುರ,ಬಳ್ಳಾರಿ, ರಾಯಚೂರು, ಮತ್ತುಧಾರವಾಡ ಜಿಲ್ಲೆಗಳಲ್ಲಿ ತಾಯಿ ಮತ್ತು ಶಿಶು ಮರಣ ಪ್ರಮಾಣ ಕಡಿಮೆ ಮಾಡಲು ಈ ಕಾರ್ಯಕ್ರಮ ಹಮ್ಮಿಕೊಂಡಿದೆ.

ಬಳ್ಳಾರಿ ರಾಯಚೂರು ಮತ್ತು ಧಾರವಾಡ ಜಿಲ್ಲೆಗಳಲ್ಲಿ ತಾಯಿ ಮತ್ತು ಶಿಶು ಮರಣ ಪ್ರಮಾಣ ಕಡಿಮೆ ಮಾಡಲು ಈ ಕಾರ್ಯಕ್ರಮ ಹಮ್ಮಿಕಂಡಿದೆ.

1. ಚುಚ್ಚು ಮದ್ದಿನ ಕಾರ್ಯಕ್ರಮ
2. ಅತಿಸಾರ ಭೇದಿ ತಡೆಗಟ್ಟುವಿಕೆ
3. ತರಬೇತಿ ಹೊಂದಿದ ದಾಯಿಗಳಿಗೆ ಬಳೆಸೂಗೆದ (ಡಿಸ್ಪೋಸಬಲ್) ಹೆರಿಗೆ ಕಿಟ್ಟು ವಿತರಿಸುವುದು
4. ಉಪಕೇಂದ್ರದ ಔಷಧಿಗಳನ್ನು ದಾದಿಯರಿಗೆ ಕೊಡುವುದು
5. ನಿಮೋನಿಯಾ ತಡೆಗಟ್ಟುವಿಕೆ
6. ಹೈಪೋಥರ್ಮಿಯಾ ತಡೆಗಟ್ಟಲು 200 ವೋಲ್ಟ್ ಬಲ್ಬ್ ಸರಬರಾಜು ಮಾಡುವುದು.
7. ಸ್ವಚ್ಛವಾದ ಟವಲ್ ಕೊಡುವುದು.
8. ಮಗುವನ್ನು ತೂಕ ಮಾಡುವ ಯಂತ್ರ ಕೊಡುವುದು.

ಅ) ಇಡೀ ರಾಜ್ಯದಲ್ಲಿ ಅನಾರೋಗ್ಯದ ವಿವಿಧ ಕಾರಣಗಳಿಂದ ಸಾಯುತ್ತಿರುವ ತಾಯಂದಿರ ಸಂಖ್ಯೆ 687 ಮತ್ತು 1 ವರ್ಷದೊಳಗಿನ ಮಕ್ಕಳ ಸಂಖ್ಯೆ : 17028 (93-94ನೇ ಸಾಲಿನಲ್ಲಿ)

1. ಗ್ರಾಮೀಣ ಪ್ರದೇಶದಲ್ಲಿ 5127 ಮಹಿಳಾ ಆರೋಗ್ಯ ಸಂಘಗಳನ್ನು ಸ್ಥಾಪಿಸಿದ್ದು ಈ ಸಂಘಗಳ ಮೂಲಕ ಗರ್ಭಿಣಿಯರಿಗೆ ಮತ್ತು ತಾಯಂದಿರಿಗೆ ತಾಯಿ ಮತ್ತು ಮಗುವಿನ ಆರೋಗ್ಯದ ಬಗ್ಗೆ ಅರಿವು ಮೂಡಿಸಲು ಆರೋಗ್ಯ ಶಿಕ್ಷಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

2. ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು ಮನೆಗಳಿಗೆ ಭೇಟಿ ನೀಡಿ, ಗರ್ಭಿಣಿಯನ್ನು ನೋಂದಾಯಿಸಿಕೊಂಡು ಸುರಕ್ಷಿತ ತಾಯ್ತನ ಹಾಗೂ ಶಿಶು ಸಂರಕ್ಷಣೆಗೆ ತಿಳುವಳಿಕೆ ನೀಡುತ್ತಿದ್ದಾರೆ.
3. ಸಮೂಹ ಮಾಧ್ಯಮಗಳಾದ ದೂರದರ್ಶನ, ಆಕಾಶವಾಣಿ, ವಸ್ತುಪ್ರದರ್ಶನ, ಪತ್ರಿಕೆಗಳು ಮತ್ತು ಚಲನಚಿತ್ರ ಪ್ರದರ್ಶನ ಮೂಲಕ ಸಾರ್ವಜನಿಕರಿಗೆ ತಾಯಿ ಮತ್ತು ಮಗುವಿನ ಆರೋಗ್ಯದ ಬಗ್ಗೆ ಅರಿವು ಮೂಡಿಸಲು ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ. ತಾಯಿ ಮಗುವಿನ ಆರೋಗ್ಯ ಕುರಿತಂತೆ ಕರಪತ್ರ ಮಡಿಕೆ ಪತ್ರ,ಭಿತ್ತಿ ಪತ್ರ ಇತ್ಯಾದಿ ಸಾಹಿತ್ಯಗಳನ್ನು ಹಂಚಲಾಗುತ್ತಿದೆ.

**ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ವಾಣಿಜ್ಯ ಪರೀಕ್ಷೆಗಳ ಬಗ್ಗೆ**

1023 - ಶ್ರೀ ಕುಂಬ್ಳೆ ಸುಂದರರಾವ್ (ಸುರತ್ಕಲ್) : ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು .ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುತ್ತಿರುವ ವಾಣಿಜ್ಯ ಪರೀಕ್ಷೆಗಳಾದ ಕನ್ನಡ ಮತ್ತು ಇಂಗ್ಲೀಷ್ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಗಳಿಗೆ ಕಳೆದ 3 ವರ್ಷಗಳಲ್ಲಿ ಹಾಜರಾದ ವಿದ್ಯಾರ್ಥಿಗಳ ಸಂಖ್ಯೆ ಎಷ್ಟು? ವರ್ಷವಾರು ಫಲಿತಾಂಶಗಳೇನು?*

*ಆ) ಈ ಪರೀಕ್ಷೆಯ ಮುಖ್ಯ ಪರೀಕ್ಷಕರನ್ನು ಆಯ್ಕೆ ಮಾಡುವಲ್ಲಿ ಅನುಸರಿಸುವ ವಿಧಾನಗಳು ಯಾವುವು? ಆ ನಿಯಮಗಳನ್ನು ಕಟ್ಟುನಿಟ್ಟಾಗಿ ಅನುಸರಿಸಲಾಗುತ್ತಿದೆಯೇ? ಇಲ್ಲವಾದಲ್ಲಿ ಕಾರಣಗಳೇನು? (ಮೌಲ್ಯಮಾಪನ ಪ್ರಶ್ನೆಪತ್ರಿಕೆ ತಯಾರಿಕೆ : ಉಕ್ತಲೇಖನ ಓದುಗರು-ಸೇರಿದಂತೆ)*

*ಇ) ಕಳೆದ ಐದು ವರ್ಷಗಳಲ್ಲಿ ಪರೀಕ್ಷಾ ವಿಷಯ ಪ್ರಮುಖರುಗಳ ಆಯ್ಕೆಯಲ್ಲಿ ಕೆಲವೇ ವ್ಯಕ್ತಿಗಳು ಪುನಃ ಪುನಃ ಆಯ್ಕೆಯಾಗುತ್ತಿರಲು ಕಾರಣಗಳೇನು? ಮಂಡಳಿಗೆ ಅಂಥ ಅರ್ಹ ವ್ಯಕ್ತಿಗಳ ಕೊರತೆ ಇದೆಯೇ?*

*ಈ) ಇಲ್ಲವಾದಲ್ಲಿ ಅರ್ಹ ವ್ಯಕ್ತಿಗಳೆಲ್ಲರೂ ಅವಕಾಶಗಳನ್ನು ಒದಗಿಸಲು ಕ್ರಮ ಜರುಗಿಸುವರೆ?*

ಶ್ರೀ ಹೆಚ್. ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು):

ಅ) ಮೂರು ವರ್ಷದ ವಿದ್ಯಾರ್ಥಿಗಳ ಸಂಖ್ಯೆ ಹಾಗೂ ವರ್ಷವಾರು ಫಲಿತಾಂಶದ ಪಟ್ಟಿಯನ್ನು ಲಗತ್ತಿಸಲಾಗಿದೆ.

ಆ) ಮುಖ್ಯ ಪರೀಕ್ಷಕರನ್ನು ಆಯ್ಕೆ ಮಾಡುವಲ್ಲಿ ಮಂಡಳಿಯ ನಿಯಮಾನುಸಾರ ವಿಷಯಗಳಲ್ಲಿ ಅತ್ಯಂತ ಹಿರಿಯರನ್ನು ಮುಖ್ಯ ಪರೀಕ್ಷಕರನ್ನಾಗಿ ನೇಮಕ ಮಾಡಲಾಗುತ್ತದೆ. ಒಂದು ಅವಧಿಯಲ್ಲಿ ಮುಖ್ಯ ಪರೀಕ್ಷಕರನ್ನಾಗಿ ನೇಮಕಗೊಂಡವರನ್ನು ಮೂರು ವರ್ಷಗಳ ಅವಧಿಯ ಅಂತರದ ನಂತರ ನೇಮಕ ಮಾಡಿಕೊಳ್ಳಲಾಗುತ್ತಿದೆ. ವಾಣಿಜ್ಯ ಪರೀಕ್ಷೆಯು ಮೇ ಹಾಗೂ ನವೆಂಬರ್ ತಿಂಗಳಲ್ಲಿ ನಡೆಯುವುದರಿಂದ ಈ ಎರಡೂ ಪರೀಕ್ಷೆಗಳಿಗೂ ಒಬ್ಬರೇ ಮುಖ್ಯಪರೀಕ್ಷಕರು ಇರುತ್ತಾರೆ.

**ಪ್ರಶ್ನೆಪತ್ರಿಕೆ ತಯಾರಿಕೆ ಬಗ್ಗೆ :**

ಪ್ರಶ್ನೆಪತ್ರಿಕೆ ತಯಾರಿಸಲು ಆ ವಿಷಯಗಳಲ್ಲಿ ಪರಿಣಿತ ಹೊಂದಿದ ಹಿರಿಯರನ್ನೇ ನೇಮಕ ಮಾಡಿ ಕೊಳ್ಳಲಾಗುತ್ತದೆ. ಕನಿಷ್ಟ ಅವರು10ವರ್ಷಗಳ ಸೇವೆ ಸಲ್ಲಿಸಿದವರಾಗಿರಬೇಕು ಮತ್ತು ನಾಲ್ಕು ಅಥವಾ ಐದು ಬಾರಿ ಸಹಾಯಕ ಪರೀಕ್ಷಕರು ಅಥವಾ ಉಪ ಮುಖ್ಯ ಪರೀಕ್ಷಕರಾಗಿ ಕರ್ತವ್ಯ ನಿರ್ವಹಿಸಿರಬೇಕು. ಅವರ ವಿದ್ಯಾರ್ಹತೆ ಈ ಕೆಳಗೆ ಕಂಡಂತಿರುತ್ತದೆ.

1. ಪಧವೀಧರರಾಗಿದ್ದಲ್ಲಿ ಪ್ರೌಢ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಅಥವಾ ಎಸ್. ಎಸ್. ಎಲ್.ಸಿ. ಪಾಸಾಗಿದ್ದು ಪ್ರವೀಣ ದರ್ಜೆಯಲ್ಲಿ ಉತ್ತೀರ್ಣರಾಗಿರಬೇಕು.

**ಉಕ್ತಲೇಖನ ಓದುಗರ ಬಗ್ಗೆ :**

ಆಯ್ಕೆ ಸಮಿತಿಯಿಂದ ಆಯ್ಕೆ ಹೊಂದಿದ ಅಭ್ಯರ್ಥಿಗಳನ್ನು ಮಾತ್ರ ಉಕ್ತಲೇಖನನ ಓದುಗರನ್ನಾಗಿ ನೇಮಕ ಮಾಡಲಾಗುತ್ತದೆ. ಆಯ್ಕೆ ಸಮಿತಿಯಲ್ಲಿ ಅತ್ಯಂತ ಹಿರಿಯ ವಿಷಯ ತಜ್ಞರು ಇದ್ದು ವಿದ್ಯಾರ್ಥಿಗಳ ಅರ್ಹತೆಗಳನ್ನು ಪರೀಕ್ಷಿಸಿ, ಆಯ್ಕೆ ಪಟ್ಟಿ ತಯಾರಿಸುತ್ತಾರೆ. ಈ ಆಯ್ಕೆ ಪಟ್ಟಿಯನ್ನು ಪ್ರತಿ ಮೂರು ವರ್ಷಕ್ಕೊಮ್ಮೆ ಮಾಡಲಾಗುವುದು.

ಈ ನಿಯಮವನ್ನು ಕಟ್ಟುನಿಟ್ಟಾಗಿ ಅನುಸರಿಸಲಾಗುತ್ತಿದೆ.

ಉದ್ಭವಿಸುವಲುದಿಲ್ಲ.

ಇ) ಇಲ್ಲ.

ಈ) ಹೌದು.

**ವಾಣಿಜ್ಯ ಪರೀಕ್ಷೆಗಳಲ್ಲಿ ಕಳೆದ ಮೂರು ವರ್ಷಗಳ ಮತ್ತು ತೇರ್ಗಡೆಯಾದದ ವಿದ್ಯಾರ್ಥಿಗಳ ಪಟ್ಟಿ.**

| | 1993 | | | | 1994 | |
|---|---|---|---|---|---|---|
| ವಿಷಯ | ಪರೀಕ್ಷೆಗೆ ಕುಳಿತವರು | ತೇರ್ಗಡೆ ಯಾದವರು | ಪರೀಕ್ಷೆಗೆ ಕುಳಿತವರು | ತೇರ್ಗಡೆ ಯಾದವರು | ಪರೀಕ್ಷೆಗೆ ಕುಳಿತವರು | ತೇರ್ಗಡೆ ಯಾದವರ |
| ಆಂಗ್ಲ ಬೆರಳಚ್ಚು | 87,671 | 32,152 | 73,906 | 36,642 | 86,246 | 44,442 |
| ಕನ್ನಡ ಬೆರಳಚ್ಚು | 33,489 | 21,178 | 12.674 | 5,476 | 33,094 | 20,810 |
| ಆಂಗ್ಲ ಶೀಘ್ರಲಿಪಿ | 7,883 | 2,095 | 8,117 | 3,475 | 8,542 | 2,042 |
| ಕನ್ನಡ ಶೀಘ್ರಲಿಪಿ | 2,947 | 1,260 | 2,740 | 1,261 | 2,742 | 1,258 |

**ಅನಧಿಕೃತವಾಗಿ ಟಿ.ಸಿ. ಹೆಚ್. ಶಾಲೆಗಳು ಪ್ರಾರಂಭವಾಗಿರುವುದರ ಬಗ್ಗೆ**

1261 - ಶ್ರೀ ಟಿ. ಹೆಚ್. ಬಸವರಾಜ್ (ಹೊಸದುರ್ಗ) : ಶ್ರೀ ವಿ.ನಂಜಾಮರಿ (ತಿಪಟೂರು) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು. ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ಪಟ್ಟಣ ಹಾಗೂ ತಾಲ್ಲೂಕಿನಲ್ಲಿ ಕಳೆದ 2-3 ವರ್ಷಗಳಿಂದ ಅನಧಿಕೃತವಾಗಿ ಟಿ.ಸಿ.ಹೆಚ್. ಶಾಲೆಗಳು ಪ್ರಾರಂಭವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ?*

*ಆ) ಹಾಗಿದ್ದಲ್ಲಿ, ಈ ಶಾಲೆಗಳ ಬಗ್ಗೆ ಸರ್ಕಾರದ ನಿಲುವೇನು?*

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು):

ಅ) ಬಂದಿದೆ.

ಆ) 8ನೇ ಪಂಚವಾರ್ಷಿಕ ಯೋಜನೆಯ ಅವಧಿಯ ಅಂತ್ಯದವರೆಗೆ ರಾಜ್ಯದಲ್ಲಿ ಯಾವುದೇ ಹೊಸ ಶಿಕ್ಷಕರ ತರಬೇತಿ ಕೇಂದ್ರಗಳನ್ನು ಪ್ರಾರಂಭಿಸಲು ಅನುಮತಿಯನ್ನು ನೀಡಬಾರದೆಂಬುದು ಸರ್ಕಾರದ ನೀತಿಯಾಗಿರುತ್ತದೆ. ಅಲ್ಲದೆ ಕರ್ನಾಟಕ ಮಾನ್ಯತೆ ಪಡೆಯದ ಮತ್ತು ಸಂಯೋಜಿತವಾಗಿಲ್ಲದ ಶಿಕ್ಷಣಸಂಸ್ಥೆಗಳಿಗೆ ವಿದ್ಯಾರ್ಥಿಗಳ ಪ್ರವೇಶ ಅಧಿನಿಯಮ 1992 (ಸಂ : 7: 1993ರ) ಪ್ರಕಾರ ಅನಧಿಕೃತ ಶಿಕ್ಷಕರ ತರಭೇತಿಯಕೇಂದ್ರಗಳಲ್ಲಿ ವ್ಯಾಸಂಗ ಮಾಡಿರುವ ವಿದ್ಯಾರ್ಥಿಗಳನ್ನು ಪರೀಕ್ಷೆಗೆ ಕೂರಿಸಲು ಸಾಧ್ಯವಾಗುವುದಿಲ್ಲ.

ಅಂತಹ ಅನಧಿಕೃತ ಶಿಕ್ಷಕರ ತರಭೇತಿ ಕೇಂದ್ರಗಳ ವಿರುದ್ಧ ನಿಯಮಗಳ ಪ್ರಕಾರ ಕ್ರಮವನ್ನು ತೆಗೆದುಕೊಳ್ಳಲಾಗುತ್ತಿದೆ.

**ಹೊಸದುರ್ಗ ತಾಲ್ಲೂಕಿನಲ್ಲಿರುವ ಸರ್ಕಾರಿ ಆಸ್ಪತ್ರೆಗಳಿಗೆ ವೈದ್ಯರುಗಳನ್ನು ನೇಮಕಮಾಡುವ ಬಗ್ಗೆ**

920 - ಶ್ರೀ ಟಿ.ಹೆಚ್. ಬಸವರಾಜ್ (ಹೊಸದುರ್ಗ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಹೊಸದುರ್ಗ ನಗರ ತಾಲ್ಲೂಕಿನಲ್ಲಿರುವ ಸರ್ಕಾರಿ ಆಸ್ಪತ್ರೆಗಳಲ್ಲಿ ವೈದ್ಯರ ಕೊರತೆ ಇದೆಯೇ?*

*ಆ) ಹಾಗಿದ್ದಲ್ಲಿ ಸದರಿ ಹುದ್ದೆಗಳನ್ನು ತುಂಬಲು ಕೈಗೊಂಡ ಕ್ರಮಗಳೇನು?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಹೌದು

ಆ) ದಿನಾಂಕ 10-2-95ರ ಅಧಿಸೂಚನೆಯಲ್ಲಿ 2 ವೈದ್ಯಾಧಿಕಾರಿಗಳನ್ನು ಗುತ್ತಿಗೆ ಆಧಾರದ ಮೇಲೆ ಪ್ರಾಥಮಿಕ ಆರೋಗ್ಯ ಕೇಂದ್ರ ಕೆ.ಕೆ. ಪುರ ಹಾಗೂ ಜಿ.ಎಸ್.ಪುರ ಇಲ್ಲಿಗೆ ನೇಮಕ ಮಾಡಲಾಗಿದೆ. ಇನ್ನುಳಿದ ಹುದ್ದೆಗಳಿಗೆ ಸಾರ್ವತ್ರಿಕ ವರ್ಗಾವಣೆಯ ಸಮಯದಲ್ಲಿ ತುಂಬಲು ಕ್ರಮ ಕೈಗೊಳ್ಳಲಾಗುವುದು.

**ಹೊಸದುರ್ಗ ತಾಲ್ಲೂಕಿನಲ್ಲಿರುವ ಸರ್ಕಾರಿ ಆಸ್ಪತ್ರೆಗಳಲ್ಲಿ ತಜ್ಞರ ಕೊರತೆ ಕುರಿತು**

920ಎ - ಶ್ರೀ ಟಿ.ಹೆಚ್. ಬಸವರಾಜ್ (ಹೊಸದುರ್ಗ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು. ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಹೊಸದುರ್ಗ ನಗರದಲ್ಲಿ ಇರುವ ಸರ್ಕಾರಿ ಆಸ್ಪತ್ರೆಯಲ್ಲಿ ತಜ್ಞರ ಕೊರತೆ ಇದೆಯೇ? ಹಾಗಿದ್ದಲ್ಲಿ ಯಾವ ತಜ್ಞರ ಕೊರತೆ ಇದೆ?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಹೌದು

**ಕೊರತೆ ಇರುವ ತಜ್ಞರು**

ಅ) ವೈದ್ಯಕೀಯ

ಆ) ಸರ್ಜರಿ

ಇ) ಮಕ್ಕಳ ತಜ್ಞತೆ

ಈ) ಅರೆವಳಿಕೆ

**ಮಂಗಳೂರಿನ ಸರ್ಕಾರಿ ವೆನ್‌ಲಾಕ್ ಆಸ್ಪತ್ರೆಯ ಬಗ್ಗೆ**

1164 - ಶ್ರೀ ಎಸ್. ಯೋಗೀಶ್ ಭಟ್ (ಮಂಗಳೂರು) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಮಂಗಳೂರಿನ ಸರ್ಕಾರಿ ವೆನ್‌ಲಾಕ್ ಆಸ್ಪತ್ರೆಯಲ್ಲಿ ಕಳೆದ ಎರಡು ವರ್ಷಗಳಿಂದ ಬೇಡಿಕೆ ಇರುವ 2 ಆಟೋಕ್ಲೇವ್ ಹೈ ಪ್ರಶರ್ ಮಾಡಲು ಶಸ್ತ್ರಕ್ರಿಯೆ ನಿಲ್ಲದಂತೆ ಮಾಡಲು ಸರ್ಕಾರವು ಆಲೋಚಿಸಿದೆಯೆ?

ಆ) ಖಾಲಿ ಇರುವ ಕ್ಷ-ಕಿರಣ ತಂತ್ರಜ್ಞರನ್ನು ನೇಮಕಾತಿ ಮಾಡಲು ಸರ್ಕಾರಕ್ಕಿರುವ ತೊಂದರೆ ಏನು?

ಇ) ಖಾಲಿ ಇರುವ 'ಡಿ' ದರ್ಜೆ ಹಾಗೂ ಡ್ರೈವರ್ ನರ್ಸ್‌ಗಳು ಹಾಗೂ ಇತರೇ ಸಿಬ್ಬಂದಿಗಳ ನೇಮಕಾತಿ ಎಂದು ಮಾಡಲಾಗುವುದು.

ಈ) ತಕ್ಷಣ ಉದರ ದರ್ಶಕ ಯಂತ್ರ ದುರಸ್ತಿಗೊಳಿಸಲು ಕ್ರಮ ಕೈಗೊಳ್ಳಲಾಗುವುದೇ?

ಉ) ರೋಗಿಗಳನ್ನು ಮೇಲಿನ ಮಹಡಿಯಲ್ಲಿ ಕೊಂಡೊಯ್ಯಲು ಬೇಕಾದ ಲಿಫ್ಟ್ ಹಲವು ವರ್ಷಗಳಿಂದ ಹಾಳಾಗಿದ್ದು ತಕ್ಷಣ ದುರಸ್ಥಿ ಮಾಡಿಸಲು ಅಥವಾ ಹೊಸ ಲಿಫ್ಟ್ ಅಳವಡಿಸಲು ಕ್ರಮ ಕೈಗೊಳ್ಳಲಾಗುವುದೇ?

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) ಖಾಸಗಿ ವೈದ್ಯಕೀಯ ಕಾಲೇಜು ಮಂಗಳೂರು ಇವರಿಂದ ಚಿಕಿತ್ಸಾ ಸೌಲಭ್ಯದ ಶುಲ್ಕದ ರೂಪದಲ್ಲಿ ವಸೂಲು ಮಾಡಿರುವ ಹಣದಿಂದ ಖರೀದಿ ನಿಯಮದಂತೆ 2 ಆಟೋಕ್ಲೇವ್ ಹೈ ಪ್ರಶರ್ ಸ್ಟೆರಿಲೈಸರ್‌ನ್ನು ಖರೀದಿಸಲಾಗುತ್ತದೆ. ಈಗ ಹಾಲಿ ಇರುವ ಸ್ಟೆರಿಲೈಸರ್‌ನ್ನು ಸಹ ದುರಸ್ಥಿಗೊಳಿಸಿ ಉಪಯೋಗಿಸಲಾಗುವುದು.

ಆ) ಸರ್ಕಾರ ಮೀಸಲಾತಿ ಬಗ್ಗೆ ಆದೇಶ ಹೊರಡಿಸಿದ ನಂತರ ಹುದ್ದೆಗಳನ್ನು ತುಂಬಲು ಕ್ರಮ ತೆಗೆದುಕೊಳ್ಳಲಾಗುವುದು.

ಇ) ಪ್ರಶ್ನೆ (ಆ) ಗೆ ಉತ್ತರಿಸಿದಂತೆ

ಈ) ಚಿಕಿತ್ಸಾ ಸೌಲಭ್ಯದ ಶುಲ್ಕದ ರೂಪದಲ್ಲಿ ದೊರೆಯುವ ಹಣವನ್ನು ಲೆಪ್ರೊಸ್ಕೋಪಿಕ್ ಯಂತ್ರದ ತಕ್ಷಣ ದುರಸ್ಥಿಗೆ ಉಪಯೋಗಿಸಿಕೊಳ್ಳಲಾಗುವುದು.

ಉ) ಹಾಲಿ ಇರುವ ಲಿಫ್ಟ್‌ನ್ನು ತಕ್ಷಣ ದುರಸ್ಥಿಗೊಳಿಸಿ ಉಪಯೋಗಿಸಲು ಕ್ರಮ ಕೈಗೊಳ್ಳಲಾಗುವುದು.

**ಹುಬ್ಬಳ್ಳಿಯ ವೈದ್ಯಕೀಯ ಕಾಲೇಜನ್ನು ಸ್ವಾಯುಕ್ತ ಸಂಸ್ಥೆಯನ್ನಾಗಿ ಪರ್ರಿವರ್ತನೆ ಮಾಡುವ ಬಗ್ಗೆ**

907 - ಶ್ರೀ ಬಿ.ಆರ್. ಯಾವಗಲ್ (ನರಗುಂದಾ) : ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಹುಬ್ಬಳ್ಳಿಯಲ್ಲಿ ಕರ್ನಾಟಕ ವೈದ್ಯಕೀಯ ಕಾಲೇಜನ್ನು ಸ್ವಾಯುತ್ಥ ಸಂಸ್ಥೆಯಾಗಿ ಪರಿವರ್ತಿಸುವ ವಿಚಾರ ಸರ್ಕಾರಕ್ಕಿದೆಯೇ?

ಆ) ಹಾಗಿದ್ದಲ್ಲಿ ಎಂದು ವಹಿಸಿಕೊಡಲಾಗುವುದು

ಶ್ರೀ ಎ.ಬಿ. ಪಾಟೀಲ್ (ವೈದ್ಯಕೀಯ ಶಿಕ್ಷಣ ಸಚಿವರು) :

ಅ) ಹೌದು

ಆ) ಸ್ವಾಯತ್ಥ ಸಂಸ್ಥೆಯನ್ನಾಗಿ ಈಗಾಗಲೇ ಪರಿಗಣಿಸಿ ಆದೇಶ ಹೊರಡಿಸಲಾಗಿದೆ. ಸದರಿ ಕಾಲೇಜಿನ ಪ್ರಾಂಶುಪಾಲರನ್ನು ಪ್ರಭಾರ ನಿರ್ದೇಶಕರನ್ನಾಗಿ ಸರ್ಕಾರ ನೇಮಿಸಿದೆ.

ಈ ಸಂಸ್ಥೆಯ ಆಡಳಿತ ಮಂಡಳಿಯ ಸಭೆಯನ್ನು ಕರೆಯಲಾಗಿದ್ದು ಅದರಲ್ಲಿ ತೆಗೆದುಕೊಳ್ಳುವ ನಿರ್ಣಯನ್ನಾಗಿ ಕಾರ್ಯಗತಗೊಳಿಸಲಾಗುವುದು.

**ಮಲೆನಾಡು ಅಭಿವೃದ್ಧಿ ಮಂಡಲಿ ಕುರಿತು**

828 - ಶ್ರೀ ಆಯನೂರು ಮಂಜುನಾಥ (ಹೊಸನಗರ) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಮಲೆನಾಡು ಅಭಿವೃದ್ಧಿ ಮಂಡಳಿಯ ವ್ಯಾಪ್ತಿಗೆ ಸೇರಿಸಿರುವ ಬಯಲು ಸೀಮೆಯ ತಾಲ್ಲೂಕುಗಳು ಯಾವುವು? ಹಾಗೂ ಯಾವ ಉದ್ದೇಶದಿಂದ ಸೇರಿಸಲಾಗಿದೆ.*

*ಆ) ಅಭಿವೃದ್ಧಿಗೆ ಹಣವನ್ನು ಕ್ಷೇತ್ರಾವಾರು ನೀಡುವ ಬದಲಾಗಿ ಕ್ಷೇತ್ರದ ವಿಸ್ತಾರ ಅಲ್ಲಿಯ ಮಲೆನಾಡು ಭಾಗದ ಸ್ಥಿತಿಗಳಿಗೆ ಅನುಗುಣವಾಗಿ ವಿತರಿಸಲು ಸರ್ಕಾರದವರು ಪರಿಶೀಲಿಸುವರೇ:*

*ಇ) ಈ ಮಂಡಳಿಯ ವ್ಯಾಪ್ತಿಗೆ ಸೇರಿದ ಬಯಲು ಸೀಮೆ ತಾಲ್ಲೂಕುಗಳನ್ನು ತೆಗೆದು ಹಾಕಲು ಸರ್ಕಾರದವರು ಪರಿಶೀಲಿಸುವರೆ?*

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ ಸಚಿವರು) :

ಅ) ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿಯು 1991ನೇ ಅಧಿನಿಯಮಕ್ಕೆ ಅನುಬಂಧಿಸಲಾದ ಅನುಸೂಚಿಯಲ್ಲಿ ಮಲೆನಾಡು ಪ್ರದೇಶವನ್ನು ನಿಗದಿಪಡಿಸಿದೆ. ಈ ಅನೂಸೂಚಿಯಲ್ಲಿ ಮಲೆನಾಡು ಪ್ರದೇಶಕ್ಕೆ ಸೇರಿಸಲಾದ ತಾಲ್ಲೂಕುಗಳನ್ನು ತೋರಿಸಿದೆ. ಈ ಅಧಿನಿಯಮವು ಯಾವುದೇ ತಾಲ್ಲೂಕನ್ನು ಬಯಲುಸೀಮೆ ತಾಲ್ಲೂಕ್ಕೆಂದು ವಿಂಗಡಿಸಿಲ್ಲ.

ಆ) ಜಿಲ್ಲೆ ಮತ್ತು ತಾಲ್ಲೂಕುಗಳನ್ನು ಘಟಕ ಮತ್ತು ಉಪ ಘಟಕ ಎಂದು ಪರಿಗಣಿಸಿ ಕ್ರಿಯಾ ಯೋಜನೆಯನ್ನು ತಯಾರಿಸಲು ಮಾರ್ಗ ಸೂಚಿಯನ್ನು ಹೊರಡಿಸಲಾಗಿದೆ.

ಇ) (ಅ)ಕ್ಕೆ ನೀಡಿದ ಉತ್ತರದ ಪ್ರಕಾರ ಈ ಪ್ರಶ್ನೆ ಉದ್ಭವಿಸುವುದಿಲ್ಲ.

**ಅರಣ್ಯ ಇಲಾಖೆ ಅಧಿಕಾರಿಗಳ ದೌರ್ಜನ್ಯ ಕುರಿತು**

829 - ಶ್ರೀ ಆಯನೂರು ಮಂಜುನಾಥ (ಹೊಸನಗರ) : ಮಾನ್ಯ ಅರಣ್ಯ ಮಂತ್ರಿಗಳು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಶಿವಮೊಗ್ಗ ತಾಲ್ಲೂಕಿನ ವೀರಣ್ಣನ ಭೆಳವಳ್ಳಿ ಹತ್ತಿರ ದಿನಾಂಕ: 25-12-94ರಂದು ಅರಣ್ಯ ಇಲಾಖೆಯವರು ರಾತ್ರಿ 8-30ಕ್ಕೆ ಅಂಬಾಸಿಡರ್ ಕಾರ್ ನಂ. ಕೆಎ-14-ಎಂ-4715 ಧಾಳಿ ನಡೆಸಿದ್ದು ಸರ್ಕಾರದವರ ಗಮನಕ್ಕೆ ಬಂದಿದೆಯೇ?*

*ಆ) ಹಾಗಿದ್ದಲ್ಲಿ ಧಾಳಿಯ ಫಲಿತಾಂಶವೇನು?*

*ಇ) ಇಲಾಖೆಯವರು ಹಾರಿಸಿದ ಗುಂಡಿನಿಂದ ಉಂಟಾದ ಹಾನಿ ಏನು?*

*ಈ) ಘಟನೆಯ ಬಗ್ಗೆ ತನಿಖೆ ಮಾಡಿ ವರದಿ ಸಲ್ಲಿಸಲು ಸರ್ಕಾರದವರು ಆದೇಶ ನೀಡಿದ್ದಾರೆಯೇ?*

*ಉ) ತನಿಖೆ ನಡೆದಿದ್ದಲ್ಲಿ, ತಪ್ಪಿತಸ್ಥರ ಮೇಲೆ ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?*

ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) :

ಅ) ಬಂದಿದೆ

ಅ) ದಿನಾಂಕ 25-12-94ರಂದಿ ರಾತ್ರಿ, ಶ್ರೀಗಂಧ ಕಳ್ಳ ಸಾಗಾಣಿಕೆ ಆಗುತ್ತದೆ ಎಂಬ ಮಾಹಿತಿಯ ಆಧಾರದ ಮೇಲೆ, ಶಿವಮೊಗ್ಗ ವನ್ಯಜೀವಿ ವಿಭಾಗದ ಅರಣ್ಯ ಸಿಬ್ಬಂದಿಯವರು, ವೀರಣ್ಣನ ಬೆನವಳ್ಳಿಯ ಹತ್ತಿರ ಕಾಯುತ್ತಿದ್ದಾಗ, ಅಲ್ಲಿಗೆ ಬಂದ ಅಂಬಾಸಿಡರ್ ಕಾರನ್ನು ಸಿಬ್ಬಂದಿಯವರು, ನಿಲ್ಲಿಸಲು ಸೂಚಿಸಿದರೂ. ಅದರ ಚಾಲಕ ನಿಲ್ಲಿಸದೇ ಓಡಿಸಿಕೊಂಡು ಹೋಗಿದ್ದರಿಂದ, ಸಿಬ್ಬಂದಿಯವರು ಸದರಿ ವಾಹನವನ್ನು ಹಿಂಬಾಲಿಸಿ, ಗಾಳಿಯಲ್ಲಿ ಒಂದು ಸುತ್ತು ಗುಂಡು ಹಾರಿಸಿ, ಕಾರನ್ನು ತಡೆದು ತಪಾಸಣೆ ಮಾಡಲಾಯಿತು.. ಕಾರಿನಲ್ಲಿ ಯಾವುದೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯು ಪತ್ತೆಯಾಗಲಿಲ್ಲ. ಕಾರಿನ ಚಾಲಕನ ಅನುಮಾನಾಸ್ಪದ ನಡೆವಳಿಕೆಯೇ ಈ ಘಟನೆಗೆ ಕಾರಣವಾಯ್ತು.

ಇ) ಯಾರಿಗೂ ಯಾವ ವಿಧವಾದ ಹಾನಿಯು ಉಂಟಾಗಿರುವುದಿಲ್ಲ.

ಈ) ಇಲ್ಲ.

ಉ) ಉದ್ಭವಿಸುವುದಿಲ್ಲ.

**ಹೊಸನಗರ ತಾಲ್ಲೂಕಿನಲ್ಲಿರುವ ಆಸ್ಪತ್ರೆಗಳ ಸಂಖ್ಯೆ ಕುರಿತು**

788 - ಶ್ರೀ ಆಯನೂರು ಮಂಜುನಾಥ (ಹೊಸನಗರ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಹೊಸನಗರ ತಾಲ್ಲೂಕಿನಲ್ಲಿರುವ ಆಸ್ಪತ್ರೆಗಳ ಸಂಖ್ಯೆ ಎಷ್ಟು?*

*ಆ) ಅವುಗಳಲ್ಲಿ ವೈದ್ಯರು ಇಲ್ಲದೆ ಖಾಲಿ ಇರುವ ಆಸ್ಪತ್ರೆಗಳು ಎಷ್ಟು ಹಾಗೂ ಎಷ್ಟು ದಿನಗಳಿಂದ ಖಾಲಿ ಇವೆ?*

*ಇ) ಈ ಖಾಲಿ ಇರುವ ವೈದ್ಯರುಗಳ ಹುದ್ದೆಗಳನ್ನು ತುಂಬಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು):

ಅ) 10

ಆ) ಪ್ರಾಥಮಿಕ ಆರೋಗ್ಯ ಕೇಂದ್ರ :

| | | | |
|---|---|---|---|
| ಯದೂರು | - | ಜುಲೈ | 1992 ರಿಂದ |
| ಕೂಡೂರು | - | ಜೂನ್ | 1993 ರಿಂದ |
| ಸಂಪೇಕಟ್ಟೆ | - | | 1990 ರಿಂದ |
| ಸೋನಲ್ | - | ಮೇ | 1992 ರಿಂದ |

ಇ) ದಿ: 10-2-95ರ ಅಧಿಸೂಚನೆಯಲ್ಲಿ ಈ ಹುದ್ದೆಗಳನ್ನು ಗುತ್ತಿಗೆ ಆಧಾರದ ವೈದ್ಯರುಗಳಿಂದ ತುಂಬಲಾಗಿದೆ.

**ಶಿವಮೊಗ್ಗ ಜಿಲ್ಲೆಯಲ್ಲಿರುವ ಕ್ರೀಡಾ ತರಬೇತಿದಾರರ ಬಗ್ಗೆ**

792 - ಶ್ರೀ ಆಯನೂರು ಮಂಜುನಾಥ (ಹೊಸನಗರ) : ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಶಿವಮೊಗ್ಗ ಜಿಲ್ಲೆಯಲ್ಲಿ ಎಷ್ಟು ಜನ ಕ್ರೀಡಾ ತರಬೇತುದಾರರಿದ್ದಾರೆ?*

*ಆ) ತಾಲ್ಲೂಕಿಗೊಬ್ಬರಂತೆ ಕ್ರೀಡಾ ತರಬೇತುದಾರರನ್ನು ನಿಯುಕ್ತಿಗೊಳಿಸುವ ಆಲೋಚನೆ ಸರ್ಕಾರಕ್ಕಿದೆಯೇ? ಇದ್ದರೆ ಯಾವಾಗಿನಿಂದ ನಿಯುಕ್ತಿಗೊಳ್ಳಲಾಗುವುದು?*

*ಇ) ಗ್ರಾಮಾಂತರದಲ್ಲಿರುವ ಯುವ ಕ್ರೀಡಾ ಘಟಕಗಳನ್ನು ಗುರುತಿಸಿ ಅವರ ಪ್ರತಿಭೆಯನ್ನು ಹೊರ ತೆಗೆಯಲು ಸರ್ಕಾರದ ಯೋಜನೆ ಏನು?*

ಶ್ರೀ ಅಜಯಕುಮಾರ್ ಸರ್ ನಾಯಕ್ (ಯುವಜನ ಸೇವಾ ಮತೇತು ಕ್ರೀಡಾ ಸಚಿವರು) :

ಅ) 4 ತರಬೇತುದಾರರು

ಆ) ಹೌದು, ಸರ್ಕಾರದ ಪರಿಶೀಲನೆಯಲ್ಲಿದೆ.

ಇ) ಸರ್ಕಾರವು, ಗ್ರಾಮೀಣ ಕ್ರೀಡಾ ಪ್ರತಿಭೆಗಳನ್ನು ಗುರುತಿಸುವ ಸಲುವಾಗಿಯೇ ಈ ಕೆಳಗಿನ ಯೋಜನೆಗಳ ಕಾರ್ಯಕ್ರಮಗಳನ್ನು ಪ್ರಾರಂಭಿಸಿ ಕಾರ್ಯರೂಪಕ್ಕೆ ತಂದಿದೆ.

**1. ಬೇಸಿಗೆ ತರಬೇತಿ ಶಿಬಿರ:**

ಬೇಸಿಗೆ ರಜಾ,ಕಾಲಾವಧಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಹುದುಗಿರುವ ಕ್ರೀಡಾ ಪ್ರತಿಭೆಗಾಗಿಯೇ ವಿವಿಧ ಕ್ರೀಡೇಗಳಲ್ಲಿ ತರಬೇತಿಯನ್ನು ನೀಡಲಾಗುತ್ತಿದೆ. ಈ ತರಬೇತಿ ಶಿಬಿರದಲ್ಲಿ ಗುರುತಿಸಲ್ಪಟ್ಟ ಕ್ರೀಡಾ ಪ್ರತಿಭೆಗಳಿಗೆ ಸೂಕ್ತ ಮಾರ್ಗದರ್ಶನ ನೀಡಿ ಗ್ರಾಮಾಂತರ ಕ್ರೀಡಾ ಸ್ಪರ್ಧೆಯಲ್ಲಿ ಭಾಗವಹಿಸುವಂತೆ ಪ್ರೇರೇಪಿಸಲಾಗುತ್ತಿದೆ. ಮತ್ತು ಕ್ರೀಡಾ ಶಾಲೆ, ಕ್ರೀಡಾ ನಿಲಯಗಳಲ್ಲಿ ಅಯ್ಕೆಯಲ್ಲಿ ಭಾಗವಹಿಸಲು ಸೂಚಿಸಲಾಗುತ್ತಿದೆ.

**2. ಗ್ರಾಮೀಣ ಕ್ರೀಡಾ ಕೂಟ :**

ಗ್ರಾಮೀಣ ಪ್ರದೇಶದ ಕ್ರೀಡೇ ಪಟುಗಳಗಾಗಿಯೇ ತಾಲ್ಲೂಕು ಮಟ್ಟದಿಂದ ರಾಷ್ಟ್ರ ಮಟ್ಟದವರೆಗೂ ಗ್ರಾಮೀಣ ಕ್ರೀಡಾ ಕೂಟವನ್ನು ನಡೆಸಲಾಗುತ್ತಿದೆ. ಆಯ್ಕೆಯಾದ ಪ್ರತಿಭೆಗಳಿಗೆ, ರಾಜ್ಯ ರಾಷ್ಟ್ರ ಮತ್ತು ಅಂತರ ರಾಷ್ಟ್ರ ಮಟ್ಟದ ಕ್ರೀಡೆಗಳಲ್ಲಿ ಭಾಗವಹಿಸಲು ವಿಶೇಷ ತರಬೇತಿಯನ್ನು ನಿಡಲಾಗುತ್ತಿದೆ ಮತ್ತು ಸಾಧನೆ ಮಾಡಿದ ಕ್ರೀಡಾ ಪ್ರತಿಭೆಗಳಿಗೆ ಮುಂದುವರೆದ ತರಬೇತಿಯನ್ನು ನೀಡಿ ವಿವಿಧ ಉತ್ತಮ ಕ್ರೀಡಾ ಸ್ಪರ್ಧೆಗಳಲ್ಲಿ ಭಾಗವಹಿಸಲು ಪ್ರೋತ್ಸಾಹ ನೀಡಲಾಗುತ್ತಿದೆ.

**3. ಗ್ರಾಮೀಣ ಕ್ರೀಡಾ ಪ್ರತಿಭೆಗಳನ್ನು ಕ್ರೀಡಾ ಶಾಲೇ ಕ್ರೀಡಾ ನಿಲಯಗಳಿಗಾಗಿ ಆಯ್ಕೆ :**

ಪ್ರತಿಭಾನ್ವಿತ ಕ್ರೀಡಾಪಟುಗಳಿಗಾಗಿ ಕ್ರೀಡಾ ಶಾಲೇ ಕ್ರೀಡಾ ನಿಲಯಗಳನ್ನು ನಡೆಸಲಾಗುತ್ತಿದೆ. ಉತ್ತಮ ಪ್ರತಿಭೆ ಉಳ್ಳಂತ ಪ್ರತಿಭೆಗಳಿಗೆ ಪರೀಶೀಲನಾ ತರಬೇತಿ ಶಿಬಿರ ನಡೆಸಿ ಸೂಕ್ತ ಪ್ರತಿಭೆಗಳನ್ನು ವಿವಿಧ ಕ್ರೀಡಾ ಶಾಲೆ ಹಾಗೂ ಕ್ರೀಡಾ ನಿಲಯಗಳಿಗೆ ಪ್ರವೇಶ ನೀಡಲಾಗುತ್ತಿದೆ. ಈ ಯೋಜನೆಯಡಿಯಲ್ಲಿ ಆಯ್ಕೆಯಾದ ಕ್ರೀಡಾ ಪಟುಗಳಿಗೆ ಕ್ರೀಡಾ ಶಾಲೆ, ಕ್ರೀಡಾ ನಿಲಯದಲ್ಲಿ ತರಬೇತಿ ನೀಡಲಾಗುತ್ತಿದೆ.

**ಜಯಮಹಲ್ ವಿಧಾನಸಭಾ ಕ್ಷೇತ್ರದಲ್ಲಿರತಕ್ಕ ಕ್ರೀಡಾಂಗಣಗಳ ಬಗ್ಗೆ**

866 - ಶ್ರೀ ಆರ್. ಕೃಷ್ಣಪ್ಪ (ಜಯಮಹಲ್) : ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಬೆಂಗಳೂರು ಜಯಮಹಲ್ ವಿಧಾನ ಸಭಾ ಕ್ಷೇತ್ರದಲ್ಲಿರತಕ್ಕ ಕ್ರೀಡಾಂಗಣಗಳು ಎಷ್ಟು?*

*ಆ) ಈ ಕ್ಷೇತ್ರದಲ್ಲಿ ಹೊಸದಾಗಿ ಕ್ರೀಡಾಂಗಣ ನಿರ್ಮಿಸಲು ಕ್ರಮಕೈಗೊಳ್ಳಲಾಗಿದೆಯೇ?*

*ಇ) 1994-95 ರಲ್ಲಿ ಎಷ್ಟು ಕ್ರೀಡಾಂಗಣಗಳನ್ನು ಅಭಿವೃದ್ಧಿಗೊಳಿಸಲಾಯಿತು?*

ಈ) 1995-96 ರಲ್ಲಿ ಈ ಕ್ಷೇತ್ರದಲ್ಲಿ ಹೊಸದಾಗಿ ಕ್ರೀಡಾಂಗಣಗಳನ್ನು ನಿರ್ಮಿಸುವ ಕಾರ್ಯಕ್ರಮ ಸರ್ಕಾರದ ಮುಂದಿದೆಯೇ?

ಶ್ರೀ ಅಜಯಕುಮಾರ್ ಸರ್. ನಾಯಕ್ (ಯುವಜನ ಸೇವಾ ಮತ್ತು ಕ್ರೀಡಾ ಸಚಿವರು) :

ಅ) ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆಯ ವ್ಯಾಪ್ತಿಯಲ್ಲಿ ಯಾವ ಕ್ರೀಡಾಂಗಣವು ಇರುವುದಿಲ್ಲ.

ಆ) ಇಲ್ಲ

ಇ) ಯಾವುದೂ ಇಲ್ಲ

ಈ) ಇಲ್ಲ

**ಮಳವಳ್ಳಿ ಪಟ್ಟಣದಲ್ಲಿ ಕ್ರೀಡಾಂಗಣ ನಿರ್ಮಿಸುವುದುರ ಬಗ್ಗೆ**

692 - ಶ್ರೀ ಕೆ.ಎನ್. ನಾಗೇಗೌಡ (ಕಿರುಗಾವಲು) : ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಮಂಡ್ಯ ಜಿಲ್ಲೆ ಮಳವಳ್ಳಿ ಪಟ್ಟಣದಲ್ಲಿರುವ ಹಳೆಯ ಮಾಧ್ಯಮಿಕ ಶಾಲಾ ಆವರಣದಲ್ಲಿ ಕ್ರೀಡಾಂಗಣವನ್ನು ಮಾಡುವ ಬಗ್ಗೆ ಸರ್ಕಾರದವರಿಗೆ ಮನವಿ ಬಂದಿದೆಯೇ?

ಆ) ಹಾಗಿದ್ದಲ್ಲಿ, ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಅಜಯ ಕುಮಾರ್ ಸರ್ ನಾಯಕ್ (ಯುವಜನನ ಸೇವಾ ಮತ್ತು ಕ್ರೀಡಾ ಸಚಿವರು) :

ಅ) ಇಲ್ಲ

ಆ) ಉದ್ಭವಿಸುವುದಿಲ್ಲ

**ಖಾಸಗಿ ವೈದ್ಯಕೀಯ ಕಾಲೇಜುಗಳಿಂದ ಸರ್ಕಾರಕ್ಕೆ ಬರಬೇಕಾದ ಕ್ಲಿನಿಕಲ್ ಫೀ ಬಗ್ಗೆ**

641 - ಶ್ರೀ ಗುರುಪಾದಪ್ಪ ನಾಗಮಾರಪಲ್ಲಿ (ಔರದ್) : ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರ?

ಅ) ರಾಜ್ಯದಲ್ಲಿರುವ ಖಾಸಗೀ ವೈದ್ಯಕೀಯ ಕಾಲೇಜುಗಳಿಂದ ಸರ್ಕಾರಕ್ಕೆ ಬರಬೇಕಾದ ಕ್ಲಿನಿಕಲ್‌ಶುಲ್ಕದ ಮೊತ್ತವೆಷ್ಟು? (ಕ್ಲಿನಿಕಲ್ ಶುಲ್ಕವನ್ನು ಬಾಕಿ ಕೊಡಬೇಕಾದ ಕಾಲೇಜುಗಳ ಹೆಸರು ಬರಬೇಕಾದ ಬಾಕಿ ಮೊತ್ತ ಹಾಗೂ ಇತರೆ ವಿವರಗಳನ್ನು ಪೂರ್ಣವಾಗಿ ಒದಗಿಸುವುದು.

ಆ) ಎಷ್ಟು ಅವಧಿಯಿಂದ ಈ ಬಾಕಿಯು ವಸೂಲು ಆಗದೆ ಉಳಿದಿದೆ?

ಇ) ಬಾಕಿ ವಸೂಲಿ ಮಾಡುವಲ್ಲಿ ವಿಳಂಬವಾಗುತ್ತಿರಲು ಕಾರಣಗಳೇನು?

ಈ) ಬಾಕಿಯನ್ನು ವಸೂಲಿ ಮಾಡಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?

ಶ್ರೀ ಎ.ಬಿ. ಪಾಟೀಲ್ (ವೈದ್ಯಕೀಯ ಶಿಕ್ಷಣ ಸಚಿವರು) :

1993 ಡಿಸೆಂಬರ್ ತಿಂಗಳವರೆಗೆ ಬಾಕಿ ಬರಬೇಕಾಗಿರುವ ಮೊತ್ತ ರೂ. 67,85, 663-00 ಕ್ಲಿನಿಕಲ್ ಶುಲ್ಕದ ಪೂರ್ಣ ವಿವರ ಅನುಬಂಧ-1 ಪಟ್ಟಿಯನ್ನು ಲಗತ್ತಿಸಲಾಗಿದೆ. 1994 ರ ಜನವರಿಯಿಂದ 1994 ರ ಡಿಸೆಂಬರ್‌ವರೆಗೆ ಕ್ಲಿನಿಕಲ್ ಶುಲ್ಕವನ್ನು ವಸೂಲಿ ಮಾಡಲುಕ್ರಮ ತೆಗೆದುಕೊಳ್ಳಲಾಗುತ್ತಿದೆ.

ಆ) ಕೆಲವು ಶುಲ್ಕಗಳಿಂದ 1 ರಿಂದ2 ವರ್ಷದ ಅವಧಿಗೆ ಸಂಬಂಧಪಟ್ಟ ಬಾಕಿ ಇರುತ್ತದೆ.

ಇ) ವಸೂಲಿ ಮಾಡಲು ಹಿಂದೆ ಸ್ವಲ್ಪ ವಿಳಂಬವಾಗಿರವುದು ನಿಜ. ವಸೂಲಿಯಲ್ಲಿ ಈಗಪ್ರಗತಿ ಯಾಗಿರುತ್ತದೆ.

ಈ)

1) ಈಗಾಗಲೇ ಸರ್ಕಾರಿ ಆಸ್ಪತ್ರೆಗಳಲ್ಲಿ ಕ್ಲನಿಕಲ್ ಸೌಲಭ್ಯವನ್ನು ಉಪಯೋಗಿಸಿಕೊಳ್ಳತ್ತಿರುವ ಖಾಸಗೀ ವೈದ್ಯಕೀಯ ಕಾಲೇಜಿನ ಸಂಸ್ಥೆಯವರಿಗೆ ಸರ್ಕಾರಿ ಆಸ್ಪತ್ರೆಯ ಅಧೀಕ್ಷಕರು ಜಿಲ್ಲಾ ಶಸ್ತ ಚಿಕಿತ್ಸಕರು, ಇವರುಗಳ ಮೂಲಕ ಬಾಕಿ ಇರುವ ಕ್ಲಿನಿಕಲ್ ಶುಲ್ಕವನ್ನು ವಸೂಲಿ ಮೂಡಲು ಕ್ರಮವನ್ನು ತೆಗೆದುಕೊಳ್ಳಲು ಸೂಚಿಸಲಾಗಿದೆ.
2) ಖಾಸಗೀ ವೈದ್ಯಕೀಯ ಕಲೇಜಿನವರಿಗೆ ಬಾಕಿ ಕೊಡಬೇಕಾಗಿರುವ ಹಣವನ್ನು ಪಾವತಿಮಾಡಲು ಹಾಗೂ ಸಕಾಲದಲ್ಲಿ ಕ್ಲಿನಿಕಲ್ ಶುಲ್ಕವನ್ನು ಪಾವತಿಸದಿದ್ದರೆ, ಸರ್ಕಾರಿ ಆಸ್ಪತ್ರೆಗಳಲ್ಲಿ ಕ್ಲಿನಿಕಲ್ ಸೌಲಭ್ಯವನ್ನು ನಿಲ್ಲಿಸಲಾಗುವುದೆಂದು ಸೂಚಿಸಲಾಗಿದೆ.

## ಅನುಬಂಧ - 1

### ಖಾಸಗೀ ವೈದ್ಯಕೀಯ ಶಿಕ್ಷಣ ಕಾಲೇಜುಗಳಿಗಂದ ಬಾಕಿ ಬರಬೇಕಾಗಿರುವ ಕ್ಲಿನಿಕಲ್ ಶುಲ್ಕದವಿವರಗಳು (1993 ಡಿಸೆಂಬರ ವರೆಗೆ)

| ಕ್ರಮ ಸಂಖ್ಯೆ | ಖಾಸಗೀ ಸಂಸ್ಥೆಗಳ ಹೆಸರು | ಪಾವತಿ ಮಾಡಬೇಕಾಗಿರುವ ಶುಲ್ಕ(ಹಣ) ರೂ. ಗಳಲ್ಲಿ |
|---|---|---|
| 1. | ಡಾ॥ ಅಂಬೇಡ್ಕರ್ ವೈದ್ಯಕೀಯ ಕಾಲೇಜು, ಬೆಂಗಳೂರು | 16,21,432-00 |
| 2. | ಶ್ರೀ ಸಿದ್ದಾರ್ಥ ವೈದ್ಯಕೀಯ ಕಾಲೇಜು, ತುಮಕೂರು | 6,83,000-00 |
| 3. | ಜೆ.ಜೆ. ಎಂ. ವೈದ್ಯಕೀಯ ಕಾಲೇಜು, ದಾವಣಗೆರೆ | 22,05,000-00 |
| 4. | ಜೆ.ಎಸ್. ವೈದ್ಯಕೀಯ ಕಾಲೇಜು, ಬೆಳಗಾಂ | 17,21,250-00 |
| 5. | ಕಸ್ತೂರಬಾ ವೈದ್ಯಕೀಯ ಕಾಲೇಜು, ಮಂಗಳೂರು | 15,981-00 |
| 6. | ಜೆ.ಎಸ್.ಎಸ್. ವೈದ್ಯಕೀಯ ಕಾಲೇಜು, ಮೈಸೂರು | 5,39,000-00 |
| | ಒಟ್ಟು | ರೂ. 67,85,663-00 |

(ರೂಪಾಯಿ ಅರವತ್ತೇಳು) ಲಕ್ಷದ ಎಂಬತ್ತೈದು ಸಾವಿರದ ಆರುನೂರ ಅರವತ್ತಮೂರು ಮಾತ್ರ)

## ರಾಜ್ಯದಲ್ಲಿ ಹೊಸದಾಗಿ ಸ್ನಾತ್ತಕೋತ್ತರ ಕೇಂದ್ರಗಳನ್ನು ತೆರೆದಿರುವ ಬಗ್ಗೆ

639 - ಶ್ರೀ ಗುರುಪಾದಪ್ಪ ನಾಗಮಾರಪಳ್ಳಿ (ಔರದ್) :ಮಾನ್ಯ ವೈದ್ಯಕೀಯಯ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಪ್ರಸ್ತುತ ರಾಜ್ಯದ ಯಾವ ಯಾವ ಜಿಲ್ಲೆಗಳಲ್ಲಿ ಸ್ನಾತಕೋತ್ತರ ಕೇಂದ್ರಗಳು ಕಾರ್ಯಾರಂಭ ಮಾಡುತ್ತಿವೆ?*

*ಆ) ಹೊಸದಾಗಿ ಯಾವ ಸ್ಥಳಗಳಲ್ಲಿ ಇಂತಹ ಕೇಂದ್ರಗಳನ್ನು ಸರ್ಕಾರದವರರು ಪ್ರಾರಂಭಿಸುವರು?*

ಇ) ಹೊಸ ಕೇಂದ್ರಗಳನ್ನು ಪ್ರಾರಂಭಿಸುವಾಗ ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ ಪ್ರಾಶಸ್ತ್ಯ ನೀಡಲಾಗುವುದೇ?

ಈ) ಹಾಗಿದ್ದಲ್ಲಿ ಈ ಭಾಗದ ಯಾವ ಜಿಲ್ಲೆಯಲ್ಲಿ ಹೊಸದಾಗಿ ಪಿ.ಜಿ.ಸೆಂಟರನ್ನು ಪ್ರಾರಂಭಿಸಲಾಗುವುದು?

ಶ್ರೀ ಎ.ಬಿ. ಪಾಟೀಲ್ (ವೈದ್ಯಕೀಯ ಶಿಕ್ಷಣ ಸಚಿವರು) :

ಅ)

| | ಸ್ಥಳ | ಜಿಲ್ಲೆ | ವಿಶ್ವವಿದ್ಯಾಲಯ |
|---|---|---|---|
| 1) | ಹಾಸನ | ಹಾಸನ | ಮೈಸೂರು |
| 2) | ಮಂಡ್ಯ | ಮಂಡ್ಯ | ಮೈಸೂರು |
| 3) | ಬೆಳಾಗಾಂ | ಬೆಳಗಾಂ | ಕರ್ನಾಟಕ |
| 4) | ಬಿಜಾಪುರ | ಬಿಜಾಪುರ | ಕರ್ನಾಟಕ |
| 5) | ಕಾರವಾರ | ಉತ್ತರಕನ್ನಡ | ಕರ್ನಾಟಕ |
| 6) | ಸಂಡೂರು | ಬಳ್ಳಾರಿ | ಗುಲ್ಬರ್ಗಾ |
| 7) | ಬಳ್ಳಾರಿ | ಬಳ್ಳಾರಿ | ಗುಲ್ಬರ್ಗಾ |
| 8) | ರಾಯಚೂರು | ರಾಯಚೂರು | ಗುಲ್ಬರ್ಗಾ |
| 9) | ಮಡಿಕೇರಿ | ಕೊಡಗು | ಮಂಗಳೂರು |
| 10) | ದಾವಣಗೆರೆ | ಚಿತ್ರದುರ್ಗ | ಕುವೆಂಪು |

ಆ) ಬೀದರ್‌ನಲ್ಲಿ ಸಕ್ಕರೆ ತಂತ್ರಜ್ಞಾನದಲ್ಲಿ ಮತ್ತು ಇಂಜಿನಿಯರಿಂಗನಲ್ಲಿ ಸ್ನಾತಕೋತ್ತರ ಡಿಪ್ಲೊಮೋ ಕೋರ್ಸುಗಳು.

ಇ) ಈಗಾಗಲೇ ಬಳ್ಳಾರಿ, ಸಂಡೂರು ಮತ್ತು ರಾಯಚೂರು ನಗರಗಳಲ್ಲಿ ಸ್ನಾತಕೋತ್ತರ ಕೇಂದ್ರಗಳಿವೆ. ಬೀದರ್‌ನಲ್ಲಿ ಸಕ್ಕರೆ ತಂತ್ರಜ್ಞಾನದ ಮತ್ತು ಇಂಜಿನಿಯರಿಂಗ್ ಸ್ನಾತಕೋತ್ತರ ಡಿಪ್ಲೊಮೋ ಕೋರ್ಸಗಳನ್ನು ಸ್ಥಾಪಿಸಲಾಗುತ್ತಿದೆ.

ಈ) ಬೀದರ್‌ನಲ್ಲಿ

**ಮೈಸೂರು ಜಿಲ್ಲೆಯಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರ ವರ್ಗಾವಣೆ ಕುರಿತು**

1085 - ಶ್ರೀ ಎ. ರಾಮರಾವ್ (ಕೃಷ್ಣರಾಜ್) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

ಅ) ಮೈಸೂರು ಜಿಲ್ಲೆಯಲ್ಲಿ ಡಿಸೆಂಬರ್ 1994 ರಿಂದ ಎಷ್ಟು ಪ್ರಾಥಮಿಕ ಶಾಲಾ ಶಿಕ್ಷಕರ ವರ್ಗಾವಣೆ ಆಗಿದೆ?

ಆ) ಮೈಸೂರು ನಗರಕ್ಕೆ ವರ್ಗಾವಣೆ ಆಗಿರುವ ಶಿಕ್ಷಕರ ಸಂಖ್ಯೆ ಎಷ್ಟು?

ಇ) ಯಾವ ಕಾರಣದಿಂದ ವರ್ಗಾವಣೆ ಮಾಡಲಾಗಿದೆ?

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಡಶಿಕ್ಷಣ ಸಚಿವರು):

ಅ) 85

ಆ) 21

ಇ) ಸಾರ್ವಜನಿಕ ಶಿಕ್ಷಣ ಆಯುಕ್ತರ ಕಛೇರಿಯ ಆದೇಶದನ್ವಯ ಮೇಲಿನ ವರ್ಗಾವಣೆಯನ್ನು ಮಾಡಿದೆ.

**ಭಾರತೀ ನಗರದಲ್ಲಿ ಕ್ರೀಡಾಂಗಣ ಅಭಿವೃದ್ಧಿ ಕುರಿತು**

884 - ಶ್ರೀ .ಎಸ್. ರಾಜಣ್ಣ (ಭಾರತಿನಗರ) : ಮಾನ್ಯ ಯುವಜನ ಸೇವಾ ಮತ್ತು ಕ್ರೀಡಾ ರಾಜ್ಯ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಭಾರತೀನಗರ ವಿಧಾನಸಭಾ ಕ್ಷೇತ್ರದಲ್ಲಿ ಎಷ್ಟು ಕ್ರೀಡಾಂಗಣಗಳು ಇವೆ?*

*ಆ) ಈ ಕ್ಷೇತ್ರದಲ್ಲಿ ಇರುವ ಕ್ರೀಡಾಂಗಣಗಳ ಅಭಿವೃದ್ಧಿಗೆ 94-95ನೇ ಸಾಲಿನಲ್ಲಿ ಭರಿಸಿದ ವೆಚ್ಚವೆಷ್ಟು?*

*ಇ) 1996ರ ರಾಷ್ಟ್ರೀಯ ಕ್ರೀಡೆಗಳ ಸಂಬಂಧ ಈ ಕ್ಷೇತ್ರದಲ್ಲಿ ಹೊಸ ಕ್ರೀಡಾಂಗಣಗಳ ನಿರ್ಮಾಣ ಕಾರ್ಯವನ್ನು ಸರ್ಕಾರ ಕೈಗೆತ್ತಿಕೊಂಡಿದೆಯೇ?*

*ಈ) ಹಾಗಿದ್ದಲ್ಲಿ ವಿವರಗಳು?*

ಶ್ರೀ ಅಜಯಕುಮಾರ್ ಸರ್. ನಾಯಕ್ (ಯುವಜನ ಸೇವಾ ಮತ್ತು ಕ್ರೀಡಾ ಸಚಿವರು) :

ಅ) ಭಾರತಿನಗರ ವಿಧಾನಸಭಾ ಕ್ಷೇತ್ರದಲ್ಲಿ ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆಯ ಅಧಿಕಾರ ವ್ಯಾಪ್ತಿಯಲ್ಲಿ ಯಾವುದೇ ಕ್ರೀಡಾಂಗಣವೂ ಇರುವುದಿಲ್ಲ.

ಆ) 1994-95ನೇ ಸಾಲಿನಲ್ಲಿ ಸದರಿ ಕಾರ್ಯಕ್ರಮಕ್ಕಾಗಿ ಯುವಜನ ಸೇವಾ ಹಾಗೂ ಕ್ರೀಡಾ ಇಲಾಖೆ ಯಾವುದೇ ಹಣ ಬಿಡುಗಡೆ ಮಾಡಿರುವುದಿಲ್ಲ.

ಇ) ಇಲ್ಲ.

ಈ) ಉದ್ಭವಿಸುವುದಿಲ್ಲ.

**ದಾವಣಗೆರೆ ಪಟ್ಟಣದ ಆಸ್ಪತ್ರೆಗಳ ಕುರಿತು ಹಾಗೂ ಖರ್ಚುಮಾಡಿರುವ ಹಣದ ಬಗ್ಗೆ**

929 - ಶ್ರೀ ಶ್ಯಾಮನೂರು ಶಿವಶಂಕರಪ್ಪ (ದಾವಣಗೆರೆ) : ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ದಾವಣಗೆರೆ ಸಿಟಿಯಲ್ಲಿ ಸರ್ಕಾರಿ ಸಿಟಿ ಆಸ್ಪತ್ರೆ ಮತ್ತು ಹಳೆಯ ಸರ್ಕಾರಿ ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆಗೆ ಸರ್ಕಾರವು ಖರ್ಚು ಮಾಡಿರುವ ಮೊತ್ತವೆಷ್ಟು?*

*ಆ) ಹಳೆಯ ಪಟ್ಟಣದ ಪ್ರದೇಶದಲ್ಲಿ ಮತ್ತೊಂದು ಆಸ್ಪತ್ರೆಯನ್ನು ಸರ್ಕಾರವು ಕಟ್ಟುತ್ತದೆಯೆ?*

*ಇ) ಸಿಟಿಯ ಹಳೆಯ ಆಸ್ಪತ್ರೆಯ ಸುತ್ತ ಇರುವ ಎಲ್ಲಾ ಅನಧಿಕೃತ ಕಟ್ಟಡವನ್ನು ಕೆಡವಲು ಸರ್ಕಾರವು ಕ್ರಮ ಕೈಗೊಳ್ಳುವುದೇ?*

ಶ್ರೀ ಎ.ಬಿ. ಪಾಟೀಲ್ (ವೈದ್ಯಕೀಯ ಶಿಕ್ಷಣ ಸಚಿವರು) :

ಅ) ದಾವಣಗೆರೆಯಲ್ಲಿರುವ ಸರ್ಕಾರಿ ಸಿ.ಬಿ. ಆಸ್ಪತ್ರೆ ಮತ್ತು ಹಳೆಯ ಸರ್ಕಾರಿ ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆಗಳಿಗೆ ಸರ್ಕಾರವು ಖರ್ಚು ಮಾಡಿರುವುದು 1994-95ನೇ ಸಾಲಿನಲ್ಲಿ ಈ ಕೆಳಕಂಡಂತಿರುತ್ತದೆ.

| | ಸಿಟಿ ಆಸ್ಪತ್ರೆ ದಾವಣಗೆರೆ | ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ, ದಾವಣಗೆರೆ |
|---|---|---|

| | | (ರೂ.ಲಕ್ಷಗಳಲ್ಲಿ) | |
|---|---|---|---|
| ಯೋಜನೇತರ: | | | |
| 1. | ವೇತನ ಅಧಿಕಾರಿಗಳು ಮತ್ತು ಸಿಬ್ಬಂದಿ | 2,65,510 | 41.470 |
| 2. | ಪ್ರಯಾಣ ವೆಚ್ಚ | 00.600 | 0.300 |
| 3. | ಕಛೇರಿ ವೆಚ್ಚ(ವಿದ್ಯುತ್ ಮತ್ತು ನೀರಿನ ಸರಬರಾಜು ಇತ್ಯಾದಿ ಸೇರಿದಂತೆ) | 35.450 | 4.950 |
| 4. | ಔಷಧ ಮತ್ತು ರಸಾಯನಿಕಗಳು | | |
| | ಅ) ಸರ್ಕಾರಿ ಔಷಧ ಮಳಿಗೆ | 44.000 | 4.510 |
| | ಆ) ನೇರವಾಗಿ | 28.840 | 3.500 |
| 5. | ಪಥ್ಯಾಹಾರ ವೆಚ್ಚ | 24.970 | 2.590 |
| 6. | ಸಾಧನ ಮತ್ತು ಸಲಕರಣೆಗಳು | 5,526 | 0.175 |
| 1994-95ರ ಅನುದಾನದ ಮೊತ್ತ ಒಟ್ಟು ಹೆಚ್ಚುವರಿ ಅನುದಾನವು ಹಳೆಯ ಬಿಲ್ಲುಗಳನ್ನು ಪಾವತಿಗಾಗಿ | | 404.946 | 57.495 |
| 1) ಸಾಧನ ಸಲಕರಣೆಗಳು | | 10.460 | - |
| 2) ಪಥ್ಯಾಹಾರ ವೆಚ್ಚ | | 12.00 | - |
| 3) ಔಷಧ ಮತ್ತು ರಾಸಾಯನಿಕಗಳು | | 7.65 | - |
| | ಒಟ್ಟು | 435.059 | 57.495 |
| | ರೂ. | 492.555. | |

ಆ) ಪ್ರಸ್ತುತ ಯಾವ ಪ್ರಸ್ತಾವನೆಯು ಈ ಬಗ್ಗೆ ಪರಿಶೀಲನೆಯಲ್ಲಿಲ್ಲ.

ಇ) ಅಧೀಕ್ಷಕರು, ಸಿ.ಜಿ. ಆಸ್ಪತ್ರೆ ದಾವಣಗೆರೆ. ಇವರು ಸುತ್ತಮುತ್ತ ಇರುವ ಅನಧಿಕೃತ ಶೆಡ್‌ಗಳನ್ನು ತೆಗೆಯಲು ಸ್ಥಳೀಯ ಮುನಿಸಿಪಲ್ ಅಧಿಕಾರಿಗಳಿಗೂ ಮತ್ತು ಜಿಲ್ಲಾಧಿಕಾರಿಗಳಿಗೂ ಚಿತ್ರದುರ್ಗ ಇವರೊಂದಿಗೆ ಪತ್ರ ವ್ಯವಹಾರವು ನಡೆಸಲಾಗಿದೆ. ಅವರಿಂದ ವರದಿ ಬಂದ ನಂತರ ಈ ಬಗ್ಗೆ ಮುಂದಿನ ಕ್ರಮ ತೆಗೆದುಕೊಳ್ಳುವುದು.

**ಬಿನ್ನಿಪೇಟೆ ಕ್ಷೇತ್ರದಲ್ಲಿರುವ ಸರ್ಕಾರಿ ಪ್ರಥಮದರ್ಜೆ ಕಾಲೇಜು ಕಟ್ಟಡದ ಬಗ್ಗೆ**

1012 - ಶ್ರೀ ವಿ. ಸೋಮಣ್ಣ (ಬಿನ್ನಿಪೇಟೆ) : ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಬಿನ್ನಿಪೇಟೆ ಕ್ಷೇತ್ರದಲ್ಲಿ ಸರ್ಕಾರಿ ಪದವಿ ಕಾಲೇಜು ಯಾವಾಗ ಪ್ರಾರಂಭವಾಯಿತು?*

*ಆ) ಈ ಕಾಲೇಜನ್ನು ಖಾಸಗಿ ಕಟ್ಟಡದಲ್ಲಿ ನಡೆಸಲಾಗುತ್ತಿದೆಯೇ?*

*ಇ) ಇದಕ್ಕೆ ಕೊಡತಕ್ಕ ಬಾಡಿಗೆ ಎಷ್ಟು?*

*ಈ) ಸರ್ಕಾರಿ ಈ ಕಾಲೇಜಿಗೆ ಸ್ವಂತ ಕಟ್ಟಡ ಕಟ್ಟಲು ಕಾರ್ಯಕ್ರಮ ಹಮ್ಮಿಕೊಂಡಿದೆಯೇ? :*

ಶ್ರೀ ಡಿ. ಮಂಜುನಾಥ್ (ಉನ್ನತ ಶಿಕ್ಷಣ ಸಚಿವರು) :

ಅ) 1985-86ನೇ ಸಾಲಿನಲ್ಲಿ

ಆ) ಹೌದು

ಇ) ಮಾಹೆಯಾನ 15,650 ರೂ.ಗಳು

ಈ) ಹೌದು

**ಬಿ.ಎಸ್.ಹಾಗೂ ಟಿ.ಸಿ. ಕಾಲೇಜುಗಳಿಗೆ ಅನುದಾನ ನೀಡುವ ಬಗ್ಗೆ**

1130 - ಶ್ರೀ ಎ.ಎಂ. ಉದಾಸಿ (ಹಾನಗಲ್) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಕರ್ನಾಟಕ ರಾಜ್ಯದಲ್ಲಿ ಬಿ.ಎಡ್. ಟಿ.ಸಿ.ಹೆಚ್. ಕಾಲೇಜುಗಳನ್ನು ಪ್ರಾರಂಭಿಸಿ 7 ವರ್ಷಗಳಾಗಿದ್ದರೂ ಅನುದಾನ ಪಡೆಯದಿದ್ದ ಕಾಲೇಜುಗಳೆಷ್ಟು?*

*ಆ) ಕಳೆದ 5 ವರ್ಷಗಳಲ್ಲಿ ಅನುದಾನಕ್ಕೆ ಒಳಪಟ್ಟ ಕಾಲೇಜುಗಳೆಷ್ಟು?*

*ಇ) ಅನುದಾನ ಪಡೆಯದಿದ್ದ ಕಾಲೇಜುಗಳ ನೌಕರರ ಸಂಬಳದ ಸಮಸ್ಯೆಗಳ ಬಗ್ಗೆ ಸರಕಾರ ಕೈಗೊಂಡ ಕ್ರಮಗಳೇನು?*

ಶ್ರೀ ಹೆಚ್.ಡಿ. ಗೋವಿಂದೇಗೌಡ (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು):

ಅ) ಟಿ.ಸಿ.ಹೆಚ್. 55

ಬಿ.ಇಡಿ. 36

ಆ) ಟಿ.ಸಿ.ಹೆಚ್. ಇಲ್ಲ

ಬಿ.ಇಡಿ. 07

ಇ) ಸದರಿ ಸಂಸ್ಥೆಗಳಿಗೆ ಅನುದಾನ ರಹಿತವಾಗಿ ಮಾನ್ಯತೆ ನೀಡಿರುವುದರಿಂದ ಈ ಪ್ರಶ್ನೆ ಉದ್ಭವಿಸುವುದಿಲ್ಲ.

**ದೈಹಿಕ ಶಿಕ್ಷಕರನ್ನು ನೇಮಿಸುವುದರ ಬಗ್ಗೆ**

915 - ಶ್ರೀ ಹೆಚ್.ಕೆ. ಕುಮಾರಸ್ವಾಮಿ (ಬೇಲೂರು) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ರಾಜ್ಯದಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಇರುವ ದೈಹಿಕ ಶಿಕ್ಷಕರ ಸಂಖ್ಯೆ ಎಷ್ಟು?*

*ಆ) ರಾಜ್ಯದ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಒಟ್ಟು ದೈಹಿಕ ಶಿಕ್ಷಕರ ಸಂಖ್ಯೆ ಎಷ್ಟು?*

*ಇ) ಈ ಖಾಲಿ ಸ್ಥಾನಗಳನ್ನು ಯಾವಾಗ ತುಂಬಲಾಗುವುದು? ಭರ್ತಿ ಮಾಡಲು ಅನುಸರಿಸುತ್ತಿರುವ ನಿಯಮಗಳೇನು?*

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು):

ಅ) 3995

ಆ) 369

ಇ) ಪ್ರಸ್ತುತ ಖಾಲಿ ಇರುವ ಹುದ್ದೆಗಳನ್ನು ಮುಂದಿನ ಶೈಕ್ಷಣಿಕ ವರ್ಷದಲ್ಲಿ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕ್ರಮ ಕೈಗೊಳ್ಳಲಾಗುವುದು.

**ಪದವಿ ಮಹಾ ವಿದ್ಯಾಲಯಗಳ ಅನುದಾನ ಮಂಜೂರಾತಿ ಕುರಿತು**

119 - ಶ್ರೀ ಮಂಜುನಾಥ್ ಸಿ.ಕುನ್ನೂರ್(ಶಿಗ್ಗಾಂವ) : ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಧಾರವಾಡ ಜಿಲ್ಲಾ ಶಿಗ್ಗಾಂವ್ ಜಗದ್ಗುರು ರೇಣುಕಾಚಾರ್ಯ ಪದವಿ ಮಹಾ ವಿದ್ಯಾಲಯದ ಸಿಬ್ಬಂದಿಗೆ ವೇತನ ಅನುದಾನ ಎಂದು ಮಂಜೂರಾಗಿದೆ ಹಾಗೂ ಅದನ್ನು ಎಂದಿನಿಂದ ಕೊಡಲಾಗುವುದು.*

*ಆ) ರಾಜ್ಯದಲ್ಲಿ 94-95ನೇ ಸಾಲಿನಲ್ಲಿ ಎಷ್ಟು ಕಾಲೇಜುಗಳಿಗೆ ಅನುದಾನ ಮಂಜೂರು ಮಾಡಲಾಗಿದೆ.*

*ಇ) ಅವುಗಳ ಅನುದಾನ ಬಿಡುಗಡೆ ಮಾಡಲು ಸರ್ಕಾರದವರು ಕೈಗೊಂಡಿರುವ ಕ್ರಮಗಳೇನು?*

ಶ್ರೀ ಡಿ. ಮಂಜುನಾಥ್ (ಉನ್ನತ ಶಿಕ್ಷಣ ಸಚಿವರು) :

ಅ) ಆದೇಶ ಸಂಖ್ಯೆ ಇಡಿ 389 ಯುಪಿಸಿ 93, ದಿನಾಂಕ 18-10-94ರಲ್ಲಿ ಧಾರವಾಡ ಜಿಲ್ಲಾ ಶಿಗ್ಗಾಂವ ಜಗದ್ಗುರು ರೇಣುಕಾಚಾರ್ಯ ಪದವಿ ಕಾಲೇಜನ್ನು ದಿನಾಂಕ 01-01-95ರಿಂದ ಜಾರಿಗೆ ಬರುವಂತೆ ಕೆಲವು ಷರತ್ತಿಗೊಳಪಟ್ಟು ವೇತನ ಅನುದಾನ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಆ) ಅಕ್ಟೋಬರ್ 1994ರಲ್ಲಿ ಕಾಲೇಜು ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಒಟ್ಟು 11 ಪ್ರಥಮ ದರ್ಜೆ ಕಾಲೇಜುಗಳನ್ನು ವೇತನ ಅನುದಾನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಇ) ವೇತನನುದಾನದ ವ್ಯಾಪ್ತಿಗೆ ಒಳಪಡಿಸಿರುವ ಪ್ರಕರಣಗಳು ಪುನರ್ ಪರಿಶೀಲನೆಯಲ್ಲಿದೆ.

**ಬಿಜಾಪುರ ಜಿಲ್ಲೆಯ ಸಂಪೂರ್ಣ ಸಾಕ್ಷರತಾ ಆಂದೋಲನದ ಬಗ್ಗೆ**

875 - ಶ್ರೀ ಬಿ.ಡಿ. ಚಿಮ್ಮನಕಟ್ಟಿ (ಬಾದಾಮಿ) : ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಬಿಜಾಪುರ ಜಿಲ್ಲೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಂಪೂರ್ಣ ಸಾಕ್ಷರತಾ ಆಂದೋಲನ ಯಶಸ್ವಯಾಗಿದೆಯೇ?*

*ಆ) ಬಿಜಾಪುರ ಜಿಲ್ಲೆಯ ಪ್ರತಿ ತಾಲ್ಲೂಕಿಗೆ ಖರ್ಚಾಗುವ ಹಣವೆಷ್ಟು?*

*ಇ) ಈ ಯೋಜನೆಯಿಂದ ನಿಜವಾಗಿ ಅನಕ್ಷರಸ್ಥರಿಗೆ ಸಹಾಯವಾಗಿದೆಯೇ?*

*ಈ) ಹಾಗಿದ್ದಲ್ಲಿ ಈ ಯೋಜನೆಯನ್ನು ಮುಂದುವರೆಸುವುದಕ್ಕೆ ಸರ್ಕಾರ ಕೈಕೊಂಡ ಕ್ರಮಗಳೇನು?*

ಶ್ರೀ. ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರು):

ಅ) ಭಾಗಶ: ಯಶಸ್ವಿಯಾಗಿದೆ

ಆ) ಸಾಕ್ಷರತಾ ಆಂದೋಲನ ಒಂದು ಜನಾಂದೋಲನ ಜಿಲ್ಲೆಯಲ್ಲಿರುವ ಎಲ್ಲಾ ಅನಕ್ಷರಸ್ಥರನ್ನು ಗುರುತಿಸಿ ಅವರಿಗೆ ಮೂಲ ಶಿಕ್ಷಣವನ್ನು ಸ್ವಯಂ ಸೇವಕರ ಸ್ವಯಂ ಸೇವಾ ನೆಲೆಯಲ್ಲಿ ನೀಡುವಂತಹ ಕಾರ್ಯಕ್ರಮ. ಎಲ್ಲಾ ಅನಕ್ಷರಸ್ಥರಿಗೆ ಕಲಿಕಾ ವಸ್ತುಗಳು ಸ್ವಯಂ ಸೇವಕರಿಗೆ ಕೈಪಿಡಿ ಹಾಗೂ ವಾತಾವರಣ ನಿರ್ಮಾಣಕ್ಕಾಗಿ ಕಲಾಜಾತಾ ಪ್ರೇರಣೆ ಮೇಲ್ವಿಚಾರಣೆ ಇಂತಹವುಗಳಿಗೆ ಜಿಲ್ಲಾ ಮಟ್ಟದಲ್ಲಿಯೇ ಖರ್ಚು ಮಾಡಲಾಗುವುದು. ಆದ್ದರಿಂದ ಅನಕ್ಷರಸ್ಥರ ಸಂಖ್ಯೆಗನುಗುಣವಾಗಿ ತಾಲ್ಲೂಕಿನಿಂದ ತಾಲ್ಲೂಕಿಗೆ ಖರ್ಚು ವೆಚ್ಚಗಳು ಬದಲಾಗುತ್ತವೆ. ಜಿಲ್ಲೆಗೆ ಒಟ್ಟು ರೂ. 300.4 ಲಕ್ಷ ಹಣ ಕೇಂದ್ರ ಸರ್ಕಾರದಿಂದ ಬಿಡುಗಡೆ ಆಗಿದ್ದು ಇವರಲ್ಲಿ ತಾಲ್ಲೂಕುಗಳಿಗೆ ತಾಲ್ಲೂಕಿನ ಅನಕ್ಷರಸ್ಥರ ಸಂಖ್ಯೆಗೆ ಅನುಸಾರವಾಗಿ ಖರ್ಚು ಮಾಡಲಾಗುತ್ತದೆ.

ಇ) ಆಗಿದೆ.

ಈ) ಕೇಂದ್ರ ಸರ್ಕಾರದ ರಾಷ್ಟ್ರೀಯ ಸಾಕ್ಷರತಾ ಮಿಷನ್ ಮಾರ್ಗದರ್ಶನದಂತೆ ಸಾಕ್ಷರತಾ ಆಂದೋಲನ ಮೂಲ ಶಿಕ್ಷಣ ಒಂದು ವರ್ಷ ಕಾಲಮಿತಿ ಕಾರ್ಯಕ್ರಮ ಇದರ ನಂತರ ಕಲಿತಿರುವುದನ್ನು ಉಳಿಸಿ ಬಳಸಿಕೊಳ್ಳಲು 2 ವರ್ಷದ ಸಾಕ್ಷರೋತ್ತರ

ಹಾಗೂ ಮುಂದುವರೆದ ಶಿಕ್ಷಣ ಕಾರ್ಯಕ್ರಮವನ್ನು ನಡೆಸಲಾಗುವುದು. ಸಾಕ್ಷರತಾ ಆಂದೋಲನಾ ಮುಗಿಸಿರುವ ಜಿಲ್ಲೆಗಳಲ್ಲಿ ಸಾಕ್ಷರೋತ್ತರ ಹಾಗೂ ಮುಂದುವರೆದ ಶಿಕ್ಷಣ ಕಾರ್ಯಕ್ರಮ ಹಮ್ಮಿಕೊಳ್ಳಲು ಕ್ರಮ ಕೈಗೊಳ್ಳಲಾಗುತ್ತಿದೆ.

**ಅರಣ್ಯ ಅಭಿವೃದ್ಧಿ ನಿಗಮದಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಬಗ್ಗೆ**

736 - ಶ್ರೀ ಎಸ್. ಅಂಗಾರ (ಸುಳ್ಯ) : ಮಾನ್ಯ ಅರಣ್ಯ ಮಂತ್ರಿಗಳು ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮದಲ್ಲಿ ಎಷ್ಟು ಜನ ಕಾರ್ಮಿಕರನ್ನು ತಾತ್ಕಾಲಿಕ ಗುತ್ತಿಗೆದಾರರ ಆಧಾರದಲ್ಲಿ ನಿಯಮಿಸಿ ದುಡಿಯುತ್ತಿದ್ದಾರೆ: ಈ ಕಾರ್ಮಿಕರ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವು ಏನು?*

*ಆ) ಕೈಗಾರಿಕಾ ವಿವಾದಗಳ ಅಧಿನಿಯಮ 1947ರ ಪ್ರಕಾರಣ 'ಯು ' ರ ಪ್ರಕಾರ ಉಲ್ಲಂಘಿಸಿ, ದುಡಿಸುತ್ತಿದ್ದ ಆ ನಿತಿಯ ಧೋರಣೆಯನ್ನು ಹೊಂದಿರುವ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಯಮದ ನಿಯೋಜಕರ ವಿರುದ್ಧ ಸರಕಾರ ಯಾವ ಕ್ರಮ ಕೈಗೊಂಡಿದೆ?*

ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) :

ಅ) ಈ ನಿಗಮದಲ್ಲಿ ಯಾವುದೆ ಕಾರ್ಮಿಕರನ್ನು ತಾತ್ಕಾಲಿಕ ಗುತ್ತಿಗೆದಾರರ ಆಧಾರದ ಮೇಲೆ ನಿಯಮಿಸಿಕೊಂಡಿಲ್ಲ.

ಆ) ಪ್ರಶ್ನೆ 'ಅ'ಗೆ ನೀಡಿರುವ ಉತ್ತರದನ್ವಯ ಕರ್ನಾಟಕ ಅರಣ್ಯ ವಿವಾದಗಳ ಅಧಿನಿಯಮ 1947 ಪ್ರಕರಣ 'ಯು' ರ ಉಲ್ಲಂಘನೆಯನ್ನು ಮಾಡಿರುವುದಿಲ್ಲ.

**ಸುಳ್ಯ ತಾಲ್ಲೂಕಿನ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿರುವ ಕ್ಷ-ಕಿರಣ ಘಟಕ ಕುರಿತು**

742 - ಶ್ರೀ ಎಸ್. ಅಂಗಾರ (ಸುಳ್ಯ) : ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ?

*ಅ) ಸುಳ್ಯ ತಾಲ್ಲೂಕಿನ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಎಕ್ಸ್-ರೇ ಯೂನಿಟ್ ಪ್ರಾರಂಭಿಸಲಾಗಿದೆಯೇ, ಹಾಗಿದ್ದಲ್ಲಿ ಯಾವ ಆಸ್ಪತ್ರೆಯಲ್ಲಿ,*

*ಆ) ಅದು ಕಾರ್ಯ ನಿರ್ವಹಿಸುತ್ತಿದೆಯೇ, ಹಾಗೂ ಅದಕ್ಕೆ ಎಕ್ಸ್-ರೇ ತಾಂತ್ರಿಕರು ಇದ್ದಾರೆಯೇ?*

*ಇ) ಸುಳ್ಯ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಆಂಬುಲೆನ್ಸ್ (ಸಂಚಾರಿ ವಾಹನ) ಮಂಜೂರಾಗಿದೆಯೇ? ಮಂಜೂರಾಗಿದ್ದರೆ ಸೂಳ್ಯ ಕೇಂದ್ರಕ್ಕೆ ಒದಗಿಸಲಾಗಿದೆಯೇ? ಒದಗಿಸಲಾಗಿದ್ದರೆ ಯಾವ ವರ್ಷದಲ್ಲಿ.*

ಶ್ರೀ ಹೆಚ್.ಸಿ. ಮಹದೇವಪ್ಪ (ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸತಿವರು):

ಅ) ಸುಳ್ಯ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಒಂದು ಕ್ಷ-ಕಿರಣ ಘಟಕವು ಮಂಜೂರಾಗಿದೆ.

ಆ) ಕ್ಷ-ಕಿರಣ ಯಂತ್ರವು ಪೂರೈಕೆಯಾಗದ ಕಾರಣದಿಂದಲೂ ಹಾಗೂ ಕ್ಷ-ಕಿರಣ ತಂತ್ರಜ್ಞರ ಹುದ್ದೆ ಖಾಲಿ ಇರುವುದರಿಂದ ಅದು ಕಾರ್ಯ ನಿರ್ವಹಿಸುತ್ತಿಲ್ಲ. ಕ್ಷ-ಕಿರಣ ಯಂತ್ರವನ್ನು ಸರಬರಾಜು ಮಾಡಲು ಹಾಗೂ ಖಾಲಿ ಇರುವ ಕ್ಷ-ಕಿರಣ ತಂತ್ರಜ್ಞರ ಹುದ್ದೆಯನ್ನು ಸರ್ಕಾರದ ಮೀಸಲಾತಿ ಆದೇಶ ಹೊರಡಿಸಿದ ನಂತರ ತುಂಬಲು ನಂತರ ಕ್ಷ-ಕಿರಣ ಘಟಕವನ್ನು ಪ್ರಾರಂಭ ಮಾಡಲು ಸೂಕ್ತ ಕ್ರಮ ಕೈಗೊಳ್ಳಲಾಗುವುದು.

ಇ) 1) ಸುಳ್ಯ ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಅಂಬುಲೆನ್ಸ್ (ಸಂಚಾರಿ ವಾಹನ) ಮಂಜೂರಾಗಿರುವುದಿಲ್ಲ.

(ii) ಉದ್ಭವಿಸುವುದಿಲ್ಲ.

(iii) ಉದ್ಭವಿಸುವುದಿಲ್ಲ

**ಸರ್ಕಾರಿ ಕಾಲೇಜು ಕಟ್ಟಡದ ಬಗ್ಗೆ**

743 - ಶ್ರೀ ಎಸ್. ಅಂಗಾರ (ಸುಳ್ಯ) : ಮಾನ್ಯ ಉನ್ನತ ಶಿಕ್ಷಣ ಸಚಿವರು ಈ ಕೆಳಕಂಡ ಪ್ರಶ್ನೆಗಳಿಗೆ ದಯವಿಟ್ಟು ಉತ್ತರಿಸುವರೆ

*ಅ) 1993-94ನೇ ಸಾಲಿನಲ್ಲಿ ಸುಳ್ಯ ತಾಲ್ಲೂಕಿನ ಸರಕಾರಿ ಪ್ರಥಮ ದರ್ಜೆ ಕಾಲೇಜು ಬೆಳ್ಳಾರಿಯ ಕಾಲೇಜು ಕಟ್ಟಡಕ್ಕೆ ಎಷ್ಟು ಮೊತ್ತವನ್ನು ಮಂಜೂರು ಮಾಡಲಾಗಿದೆ?*

*ಆ) ಕಟ್ಟಡವನ್ನು ಎಷ್ಟು ವರ್ಷಗಳಲ್ಲಿ ಪೂರ್ತಿಗೊಳಿಸಲಾಗುವುದು?*

*ಇ) ಈ ಕಟ್ಟಡ ಪೂರ್ತಿಗೊಂಡಾಗ ಎಷ್ಟು ವಿದ್ಯಾರ್ಥಿಗಳಿಗೆ ಪ್ರಯೋಜನವಾಗುವುದು?*

ಶ್ರೀ ಡಿ. ಮಂಜುನಾಥ (ಉನ್ನತ ಶಿಕ್ಷಣ ಸಚಿವರು) :

ಅ) 1993-94ನೇ ಸಾಲಿನಲ್ಲಿ ಸುಳ್ಯ ತಾಲ್ಲೂಕಿನ ಬೆಳ್ಳಾರಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡದ ಒಟ್ಟು ರೂ. 6.60 ಲಕ್ಷಗಳ ಅಂದಾಜು ಮೊತ್ತಕ್ಕೆ ರೂ. 2.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ರೂ.2.00 ಲಕ್ಷಗಳನ್ನು ಸಂಪೂರ್ಣವಾಗಿ ಲೋಕೋಪಯೋಗಿ ಇಲಾಖೆಗೆ ಬಿಡುಗಡೆ ಮಾಡಲಾಗಿದೆ.

ಸರ್ಕಾರದ ಆರ್ಥಿಕ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಸಾಧ್ಯವಾದಷ್ಟು ಜಾಗ್ರತೆಯಾಗಿ ಕಟ್ಟಡವನ್ನು ಪೂರ್ತಿಗೊಳಿಸಲು ಕ್ರಮ ಕೈಗೊಳ್ಳಲಾಗುವುದು.

ಇ) ಈ ಕಟ್ಟಡದ ಪೂರ್ಣಗೊಂಡಿರದ ಸದರಿ ಕಾಲೇಜಿನಲ್ಲಿ ಈಗ ವಿದ್ಯಾಭ್ಯಾಸ ಮಾಡುತ್ತಿರುವ ಸುಮಾರು 310 ವಿದ್ಯಾರ್ಥಿಗಳಿಗೆ ಪ್ರಯೋಜನವಾಗುವುದು.

**ಪ್ರಕಟಣೆ**

ಅಧ್ಯಕ್ಷರು : ಪಟ್ಟಿಯನ್ನು ಮಂಡಿಸಲಾಯಿತು. ಈಗ ಒಂದು ಪ್ರಕಟಣೆ ಇದೆ. ಅದನ್ನು ಓದಿ ಬರುತ್ತೇನೆ. ದಿನಾಂಕ 4-4-95ರಂದು ಸಂಜೆ 6.10 ಸಮಯದಲ್ಲಿ ವಿಧಾನ ಸಭೆಯಲ್ಲಿ ಸಾರ್ವಜನಿಕ ಪ್ರೇಕ್ಷಕರ ಗ್ಯಾಲರಿಯಲ್ಲಿ ಶ್ರೀ ಆಲಿಬಾಬಾ, ಶ್ರೀ ಕೆ.ಹೆಚ್.ಗೌರ, ಶ್ರೀಮತಿ ಮಂಜುಳಾ ಮೋಹನ್, ಶ್ರೀಮತಿ ಗಾಯತ್ರಿ ಹಾಗೂ ಶ್ರೀಮತಿ ಗಂಗಮ್ಮ ಇವರುಗಳು ಸಭೆ ನಡೆಯುತ್ತಿರುವ ಸಮಯದಲ್ಲಿ ಪ್ರೇಕ್ಷಕರ ಗ್ಯಾಲರಿಯಲ್ಲಿ ಘೋಷಣೆಗಳನ್ನು ಕೂಗುತ್ತಾ ಕರ ಪತ್ರಗಳನ್ನು ಸಭೆಯೊಳಕ್ಕೆ ಎಸೆದು ಸಭೆಯ ಕಾರಯ ಕಲಾಪಗಳಿಗೆ ಅಡಚಣೆಯನ್ನು ಉಂಟುಮಾಡಿರುತ್ತಾರೆ. ವಿಧಾನ ಸಭೆಯ ದಂಡನಾಯಕರು ಅವರನ್ನು ತಕ್ಷಣ ದಸ್ತಗಿರಿ ಮಾಡಿ ವಿಧಾನಸೌದದ ಮೇಲಿನ ಠಾಣೆಯ ಸುಪರ್ಧಿಗೆ ವಹಿಸಿಕೊಟ್ಟಿದ್ದು ನಂತರ ಅವರಿಗೆ ಎಚ್ಚರಿಕೆ ಕೊಟ್ಟು ಬಿಡುಗಡೆ ಮಾಡಲು ಆದೇಸಿಸಿದೆ. ಆಮೇಲೆ ದಂಡನಾಯಕರು ಅವರಿಗೆ ಎಚ್ಚರಿಕೆ ನಿಡುವ ಮೂಲಕ ಬಿಡುಗಡೆ ಮಾಡಿದ್ದಾರೆ.

ಶ್ರೀ ವಾಟಾಳ್ ನಾಗರಾಜ್ (ಚಾಮರಾಜ) : ಮಾನ್ಯ ಅಧ್ಯಕ್ಷರೆ, ಇವತ್ತು ಎರಡು ವಿಚಾರಗಳನ್ನು ತಮ್ಮ ಗಮನಕ್ಕೆ ತರಬೇಂದು ತಮ್ಮ ಕೊಠಡಿಗೆ ಬಂದು ಮಾತನಾಡಿದ್ದೇನೆ. ಮೊದಲನೆಯ ಆಶ್ಚರ್ಯಕರವಾದ ಘಟನೆ, ಎಂದರೆ, ಹೆಬ್ಬಾರು ಸಿಕ್ಕಿರತಕ್ಕದ್ದು. ಇವತ್ತು ಒಂದು ಹೆಬ್ಬಾವು ಸಿಕ್ಕಿದೆ ಎಂದು ಹೇಳಿದ್ದಾರೆ. ಇನ್ನೊಂದು

ಹೆಬ್ಬಾವನ್ನು ಹಿಡಿಯುತ್ತೇವೆಂದು ಹೇಳುತ್ತಿದ್ದಾರೆ. ಒಂದು ಹೆಬ್ಬಾವನ್ನು ಹಿಡಿಯಬೇಕಾದರೆ 4 ದಿನಗಳ ಹಿಂದೆ ಇವರಿಗೆ ಸುಳಿವು ಸಿಕ್ಕಿತಂತೆ, 4 ದಿನದ ಸುಳಿವಿನ ನಂತರ ಇವರು ಹೆಬ್ಬಾವನ್ನು ಹಿಡಿದಿದ್ದಾರೆ. ಈ ಹೆಬ್ಬಾವು ಸಿಕ್ಕಿರುವ ವಿಚಾರವನ್ನು ತಾವು ವಿಧಾನ ಪರಿಷತ್ತಿನಲ್ಲಿ ಪ್ರಕಟ ಮಾಡಿದ್ದೀರಿ. ಇಲ್ಲಿ ಎರಡು ವಿಚಾರ ಬರುತ್ತದೆ. ಮೊದಲನೆಯದಾಗಿ, ನಾನು ಮಾನ್ಯ ಅರಣ್ಯ ಸಚಿವರ ಮೇಲೆ ಹಕ್ಕುಚ್ಯುತಿಯನ್ನು ತರುತ್ತೇನೆ. ಏಕೆಂದರೆ, ಅವರು ನನ್ನ ಪ್ರಶ್ನೆಗೆ ಈ ಉತ್ತರವನ್ನು ಕೊಡಬೇಕಾಗಿತ್ತು. ಅದನ್ನು ಬಿಟ್ಟು ನೀವು ಮೇಲ್ಮನೆಯಲ್ಲಿ ಉತ್ತರ ಕೊಟ್ಟಿರುವುದು ನಮ್ಮ ಹಕ್ಕಿಗೆ ಚ್ಯುತಿಯಾಗಿದೆ. ಇದು ಹಕ್ಕುಚ್ಯುತಿ ಆಗುತ್ತದೋ ಅಥವಾ ಇಲ್ಲವೋ ಎಂಬುದು ತಮಗೆ ಬಿಟ್ಟಿದ್ದು. ಮಾನ್ಯ ಮಂತ್ರಿಯವರನ್ನು ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಸಿಕ್ಕಿಸಿ ತೊಂದರೆ ಕೊಡಬೇಕೆಂಬ ಉದ್ದೇಶ ನನಗಿಲ್ಲ. ಇದು ನಿಜವಾಗಿ ಹಕ್ಕು ಚ್ಯುತಿಯಾಗುತ್ತದೆ. ಕಾರಣ ಈ ಸದನದಲ್ಲಿ ಹೆಬ್ಬಾವಿನ ಪತ್ತೆಯ ಬಗ್ಗೆ ನಾವು ಅಧ್ಯಕ್ಷರ ಅನುಮತಿ ಕೋರಿ ಪ್ರಸ್ತಾಪಿಸಲಾದ ವಿಷಯಗಳು.

## ಅಧ್ಯಕ್ಷರ ಅನುಮತಿ ಕೋರಿ ಪ್ರಸ್ತಾಪಿಸಲಾದ ವಿಷಯಗಳು.

**ಮೈಸೂರು ಮೃಗಾಲಯದಲ್ಲಿ ಎರಡು ಹೆಬ್ಬಾವುಗಳು ತಪ್ಪಿಸಿಕೊಂಡಿರುವ ಬಗ್ಗೆ**

ಪ್ರಸ್ತಾಪ ಮಾಡಿದಾಗ ನಾವು ಹಿಡಿಯುತ್ತೇವೆಂದು ತಾವು ಉತ್ತರವನ್ನು ಕೊಟ್ಟಿರಿ. ನಾವು ಅದಕ್ಕೆ ಸುಮ್ಮನೆ ಕೂತೆವು. ಈ ಹೆಬ್ಬಾವು ಮೈಸೂರು ಮೃಗಾಲಯದ್ದು ಅಲ್ಲ. ಇವರೇ ಹೊರಗಡೆಯಿಂದ ಈ ಹೆಬ್ಬಾವನ್ನು ತಂದು ನಾವು ಹಿಡಿದಿದ್ದೇವೆಂದು ಸಾಬೀತು ಮಾಡುತ್ತಿದ್ದಾರೆಂದು ನನ್ನ ಆಕ್ಷೇಪಣೆ ಈಗ ಹೆಬ್ಬಾವು ಸಿಕ್ಕಿದ್ದಿದ್ದರೆ 2 ಹೆಬ್ಬಾವುಗಳೂ ಸಿಕ್ಕಬೇಕಾಗಿತ್ತು. ಒಂದೇ ಜೋಡಿ ಹೆಬ್ಬಾವುಗಳು ತಪ್ಪಿಸಿಕೊಂಡು ಹೋಗಿರುವುದರಿಂದ ತಾವು ಯೋಚನೆ ಮಾಡಬೇಕು. ಎರಡು ಹೆಬ್ಬಾವುಗಳೂ ಒಟ್ಟಿಗೇ ಹೋಗುತ್ತಿರುತ್ತವೆ. ಇವರಿಗೆ ಒಂದು ಹೆಬ್ಬಾವು ಸಿಕ್ಕಿರಬೇಕಾದರೆ ನನಗನ್ನಿಸುತ್ತದೆ, ಇವರು ಹೊರಗಡೆಯಿಂದ ಈ ಹೆಬ್ಬಾವನ್ನು ತಂದು ನಾವು ಹಿಡಿದಿದ್ದೇವೆ ಎಂದು ಶಹಭಾಸ್ ಗಿರಿಯನ್ನು ಪಡೆದುಕೊಳ್ಳುವ ವ್ಯವಸ್ಥೆ ಇದಾಗಿದೆ.

ಅಧ್ಯಕ್ಷರು : ಇನ್ನೊಂದು ವಿರಹದಿಂದ ಹೊರಟು ಹೋಗಿರಬಹುದು.

ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ (ಸಣ್ಣ ನೀರಾವರಿ ರಾಜ್ಯ ಸಚಿವರು): ಹೆಬ್ಬಾವುಗಳಿಗೆ ಮಾನ್ಯ ವಾಟಾಳ್ ನಾಗರಾಜ್‌ರವರಂತೆ ಮಾತನಾಡುವ ಶಕ್ತಿ ಇದ್ದಿದ್ದರೆ ಅವೇ ಉತ್ತರವನ್ನು ಹೇಳುತ್ತಿದ್ದುವೋ ಏನೋ?

ಶ್ರೀ ವಾಟಾಳ್ ನಾಗರಾಜ್ : ನಾನಾದರೂ ಕೇಳುತ್ತೇನೆ. ಮೊದಲು ಮೃಗಾಲಯದಲ್ಲಿದ್ದ ಹೆಬ್ಬಾವಿನ ಉದ್ದ ಎಷ್ಟು? ನಮ್ಮಲ್ಲಿ ಅನೇಕ ಹೆಬ್ಬಾವುಗಳ ಸಿಕ್ಕುತ್ತವೆ. ಅವರು ಅರಣ್ಯ ಸಚಿವರಾಗಿರುವುದರಿಂದ ಯಾವ ಅರಣ್ಯಕ್ಕೆ ಕಳುಹಿಸಿದರೂ ಅವರಿಗೆ ಹೆಬ್ಬಾವು ಸಿಕ್ಕುತ್ತವೆ. ನಮ್ಮ ಕರ್ನಾಟಕದಲ್ಲಿ ಇರತಕ್ಕ ಹೆಬ್ಬಾವುಗಳು ಎರಡು ಮಾತ್ರ ಎಂದು ಏನೂ ಇಲ್ಲ. ಹೆಬ್ಬಾವುಗಳು ಕರ್ನಾಟಕದ ಎಲ್ಲ ಅರಣ್ಯಗಳಲ್ಲೂ ಇರುತ್ತವೆ. ಮಾನ್ಯ ಸಚಿವರು ಈ ಸದನವನ್ನು ತಪ್ಪುದಾರಿಗೆಳೆದಿದ್ದಾರೆ ಎಂದ ನನಗನ್ನಿಸುತ್ತದೆ, ಖಂಡಿತವಾಗಿ ಇವರು ಹೆಬ್ಬಾವನ್ನು ಹಿಡಿದಿಲ್ಲ. ಹೊಸ ಹೆಬ್ಬಾವನ ಹಿಡಿದು ತಂದು ಅಲ್ಲಿಟ್ಟಿದ್ದಾರೆಂದು ನನ್ನ ನೇರವಾದ ಆಪಾದನೆ ತಾವು ನಮ ದಯವಿಟ್ಟು ರಕ್ಷಣೆ ಕೊಡಬೇಕು.

ಮಾನ್ಯ ಅರಣ್ಯ ಸಚಿವರು ಈ ಬಗ್ಗೆ ಸ್ಪಷ್ಟವಾಗಿ ಪ್ರಾಮಾಣಿಕವಾಗಿ ಒಂದ ಆತ್ಮ ಚಿಂತನೆಯಿಂದ ತಾವು ಉತ್ತರವನ್ನು ಹೇಳಬೇಕು. ಇದನ್ನು ಹಿಡಿಯುವುದ ಇವರು 4 ದಿವಸ ತೆಗೆದುಕೊಂಡರು ಎಂದು ಹೇಳುತ್ತಿದ್ದಾರೆ. ಯಾವ ಸಿಬ್ಬಂದಿ ಎ

ವ್ಯವಸ್ಥೆ ಮಾಡಿದ್ದೀರಿ? ಹೇಗೆ ಹಿಡಿದಿರಿ? ಹೇಗೆ ಸಿಕ್ಕಿತು? ನಾಲ್ಕು ದಿವಸ ಅದರ ಆಹಾರ ಏನು? ಹೊರಗಡೆ ಹೋಗಬೇಕಾದರೆ ಆಹಾರ ಬೇಕಲ್ಲ. ಇವು ಒಂದಕ್ಕೊಂದು ಅನುಮಾನಾಸ್ಪದವಾದ ವಿಚಾರಗಳಾಗಿವೆ. ಇದು ಒಂದು ರೀತಿ ನಗು ಬರುತ್ತದೆ. ಇದರಲ್ಲಿ ನಗತಕ್ಕ ಪ್ರಶ್ನೆ ಇದೆ. ಆದರೆ ಇದರ ಹಿಂದೆ ಇರತಕ್ಕ ವಸ್ತು ಸ್ಥಿತಿ ಪ್ರತಿ ದಿನ ಮೃಗಾಲಯದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಪ್ರಾಣಿಗಳು ಸಾಯುತ್ತಿವೆ. ಅದಕ್ಕೆ ಕಾರಣ, ಮಂತ್ರಿಗಳು ಕಾರಣ ಎಂದು ಹೇಳುವುದಕ್ಕೆ ಹೋಗುವುದಿಲ್ಲ. ಅವತ್ತು ಮಂತ್ರಿತಗಳು ಏನು ಹೇಳಿದರು ಎಂದರೆ ಹೆಬ್ಬಾವು ಮರೆ ಹತ್ತಿದೆ ಎಂದರು, ಹತ್ತಬಹುದು ಎಂದರು. ಮರದಿಂದ ಕೆಳಕ್ಕೆ ಇಳಿಯಿತೆ? ಅಥವಾ ಯಾವ ಮರ ಹತ್ತಿತ್ತು? ಅಲ್ಲಿ ಎಷ್ಟು ಮರಗಳು ಇವೆ? ಇದನ್ನು ತನಿಖೆ ಮಾಡುವುದಕ್ಕೆ, ಹಿಡಿಯುವುದಕ್ಕೆ ಎಷ್ಟು ಸಿಬ್ಬಂದಿ ನೇಮಕ ಮಾಡಿದ್ದೀರಿ? ತನಿಖಾ ದಳ ಯಾವುದು? ಅದಕ್ಕೆ ಆದ ಖರ್ಚುಗಳು ಎಷ್ಟು, ಇದರ ವಿವರ ಬೇಕು. ಇದನ್ನು ನಾನು ತಮ್ಮ ಮೂಲಕ ಅವರನ್ನು ಕೇಳುತ್ತಿದ್ದೇನೆ.

ಅಧ್ಯಕ್ಷರು : ತಾವು ವಿಷಯ ಪ್ರಸ್ತಾಪ ಮಾಡಿದ್ದೀರಿ. ಅಷ್ಟೆಲ್ಲ ಮಾಹಿತಿ ತಕ್ಷಣಕ್ಕೆ ಎಲ್ಲಿ ಸಿಗುತ್ತದೆ? ನಾನು ಅದನ್ನು ತರಿಸಿಕೊಡುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅರಣ್ಯ ಸಚಿವರು ಇಲ್ಲೇ ಇದ್ದಾರೆ. ಅವರು ಉತ್ತರ ಹೇಳುವುದಕ್ಕೆ ತಯಾರಿದ್ದಾರೆ.

ಶ್ರೀ ಹೆಚ್.ವೈ. ಮೇಟಿ (ಅರಣ್ಯ ಸಚಿವರು) : ಮಾನ್ಯ ಅಧ್ಯಕ್ಷರೇ, ಮಾನ್ಯ ವಾಟಾಳ್‌ನಾಗರಾಜು ಅವರು ಎತ್ತಿದ ವಿಷಯ ಹೆಬ್ಬಾವು ಸಲುವಾಗಿ. ಆ ಸದನದಲ್ಲಿ ಕೂಡ ಈ ವಿಷಯವನ್ನು ಎತ್ತಿದ್ದರು. ಅದಕ್ಕಾಗಿ ಅಲ್ಲಿ ಉತ್ತರವನ್ನು ಹೇಳಿದೆ. ಆದುದರಿಂದ ಇಲ್ಲಿ ಹಕ್ಕುಚ್ಯುತಿ ಪ್ರಶ್ನೆ ಬರುವುದಿಲ್ಲ. ಅಲ್ಲಿ ಅವರು ಎತ್ತಿದ್ದರು ಅದಕ್ಕೆ ಉತ್ತರ ಹೇಳಿದ್ದಾಗಿದೆ. ಹೆಬ್ಬಾವುನ್ನು ಹೊರಗಿನಿಂದ ತರುವುದಕ್ಕೆ ಸಾಧ್ಯವಿಲ್ಲ. ಅಲ್ಲಿ 250ಎಕರೆ ಜಮೀನು ಇದೆ, ಗಿಡಗಳು ಇವೆ. ಅಲ್ಲಿ ಹೆಬ್ಬಾವು ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯತೆ ಇದೆ. ಹೆಬ್ಬಾವನ್ನು ಹೊರಗಿನಿಂದ ತರುವುದಕ್ಕೆ ಸಾಧ್ಯವಿಲ್ಲ. ಅದೇ ಅಲ್ಲೇ ಇದೆ, ಅಲ್ಲಿ ಇರಬೇಕು. ಅದನ್ನು ಸಹ ಹುಡುಕಿಸುತ್ತೇನೆ. ಹೆಬ್ಬಾವು ಹೊರಗಿನಿಂದ ತಂದದ್ದು ಅಲ್ಲ.

ಶ್ರೀ ವಾಟಾಳ್ ನಾಗರಾಜ್ : ಹೊರಗಿನಿಂದ ತಂದಿಲ್ಲವೆಂದು ಇವರು ಹೇಳತಕ್ಕದ್ದು ಸರಿಯಲ್ಲ. ವೀರಪ್ಪನ್ ಅನ್ನು ಹಿಡಿಯುವುದಕ್ಕೆ ಆಗದಿದ್ದರೆ ಹೆಬ್ಬಾವನ್ನಾದರೂ ಹಿಡಿದರಲ್ಲ. ಅದು ನಿಮಗೆ ಉಸಿರು ಬಿಟ್ಟ ಹಾಗೆ. ನಾನು ಈಗಲೇ ಒತ್ತಾಯ ಮಾಡುವುದಿಲ್ಲ. ಈ ಸಭೆ ಮುಗಿಯುವುದರೊಳಗಾಗಿ ತನಿಖೆ ಮಾಡಿಸುತ್ತೀರಾ ಸ್ವಾಮಿ?

ಶ್ರೀ ಹೆಚ್.ವೈ. ಮೇಟಿ : ತನಿಖೆ ಮಾಡಿಸೋಣ.

**ಕೋಲಾರ ಜಿಲ್ಲೆಯಲ್ಲಿ ಕುಡಿಯುವ ನೀರಿನ ಸಮಸ್ಯೆ ಉಂಟಾಗಿರುವ ಬಗ್ಗೆ**

SRI RAJENDRAN (K.G.F) : Sri, I thank you for having given me an opportunity to speak about the problems of Kolar Gold Field and kolar district. The hon. Members have spoken about the problems of almost each and evary district. However, many hon. Members who are here from Kolar have not spoken about the problems of the district. I think they could have explained the problems of Kolar better than me. Sir, Satellite pictures show that Kolar has become dry and dark area.

MR. SPEAKER : what is the problem?

SRI S. RAJENDRAN sir, there is acute problem water in Kolar and in my constituency. Totally it has become dry area. The Government has not done anything for supply of drinking water. There is growing unemployment. The atrocities are incrasing and there is no law and order. in KGF.

MR.SPEAKER : That we can take it up later. This is Zero Hour. You can mention some specific important matter of public importance. Since had not given an opportunity I permitted you to speak during the Zero Hour you kindly restrict to the problem of drinking water. You will have enough opportunities subsequently to raise the other issues. Kindly co-operate with me.

ಶ್ರೀ ಡಿ. ಮಂಜುನಾಥ : ಈಗಾಗಲೇ ಜಿಲ್ಲಾಧಿಕಾರಿಗಳಿಗೆ ನಾವು ಹಣ ಬಿಡುಗಡೆ ಮಾಡಿದ್ದೇನೆ. ಈ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಜವಾಬ್ದಾರಿ ವಹಿಸಿದ್ದೇವೆ.

ಅಧ್ಯಕ್ಷರು : ಸ್ಟೀರಿಯೋ ಟೈಪ್ ಆನ್ಸರ್‌ಬೇಡ. ಅಲ್ಲಿ ಸ್ಯಾಟಲೈಟ್ ಪಿಕ್ಚರ್ ಕೂಡ ತೋರಿಸುತ್ತದೆ. ಅಂದರೆ ಗ್ರಾಂಡ್ ವಾಟರ್ ಇಲ್ಲ ಬಹಳ ತೀವ್ರವಾ ಸಮಸ್ಯೆ ಇದೆ ಎಂದು ಹೇಳುತ್ತಾರೆ. ಪಕ್ಕದಲ್ಲಿ ಬಂಗಾರಪೇಟೆಯ ಬೇತಮಂಗ ಕರೆಯಿಂದ ಏನಾದರೂ ವ್ಯವಸ್ಥೆ ಮಾಡುತ್ತೀರಾ ಎಂಬುದನ್ನು ಆಲೋಚನೆ ಮಾ ಹೇಳಬೇಕಾಗುತ್ತದೆ. ಅದು ಎರಡು ಲಕ್ಷ ಜನ ಸಂಖ್ಯೆ ಇರತಕ್ಕ ಜಾಗ. ಅ ಎಲ್ಲ ಕಾರ್ಮಿಕರು ಇದ್ದಾರೆ. ಪಾಪ,ಸದಸ್ಯರು ಹೊಸಬರು ಇದ್ದಾರೆ ಅವರಿಗೆ ಸರಿಯ ಹೇಳುವುದಕ್ಕಾಗಲಿಲ್ಲ. ಕುಡಿಯುವ ನೀರಿನ ವ್ಯವಸ್ಥೆಗೆ ನೀವು ತಕ್ಷಣ ನೀವು ಅ ಗಮನ ಹರಿಸಬೇಕು. D.C.ಯವರಿಗೆ ಹಣ ಕೊಟ್ಟಿದ್ದೇವೆಂದು ಹೇಳುವುದು ಉ ಸರಿಯಲ್ಲ. ದಯಮಾಡಿ on war footing you please attend to that work

ಶ್ರೀ ಡಿ. ಮಂಜುನಾಥ : ಆಯಿತು ಸ್ವಾಮಿ, ಅದನ್ನು ಮಾಡುತ್ತೇವೆ.

**ಕೋರಮಂಗಲದ ಈಜಿಪುರಂ ಸ್ಲಂನಲ್ಲಿ 300 ಗುಡಿಸಲು ಸುಟ್ಟು ಹೋಗಿರ ಬಗ್ಗೆ**

ಶ್ರೀ ಎಂ. ಶ್ರೀನಿವಾಸ (ಉತ್ತರಹಳ್ಳಿ) : ಮಾನ್ಯ ಅಧ್ಯಕ್ಷರೆ, ಕೋರಮಂ ಈಜಿಪುರ ಸ್ಲಂನಲ್ಲಿ ಮೊನ್ನೆ ಶುಕ್ರವಾರ ಆದಂಥ ಬೆಂಕಿ ಅನಾಹುತದಲ್ಲಿ ಗುಡಿಸಲುಗಳು ಸುಟ್ಟುಹೊಗಿವೆ. ಸುಟ್ಟು ಹೋದಾಗ ರಾತ್ರಿ ಹತ್ತು ಗಂಟೆಗೆ ಫೋನ್ ಮಾಡಿದ್ದೆ. ಜಿಲ್ಲಾಧಿಕಾರಿಗಳು ಬಂದಿದ್ದರು. ಅಲ್ಲಿ ಏನಾಗಿದೆ ಎಂದರೆ ಸ ಹೋದ ಮೇಲೆ ಅಲ್ಲಿ ಅವರುಗಳಿಗೆ ಊಟದ ವ್ಯವಸ್ಥೆಗೆ ಮತ್ತೊಂದಕ್ಕಾಗಲಿ ಯಾ ಒಂದು ಇಂಡಿವಿಜ್ಯುಯಲ್ ಆದ ಸಂಘ ಸಂಸ್ಥೆಗೆ ಕೊಟ್ಟಿದ್ದಾರೆ. ಆದರೆ ಯಾವುದೇ ರೀತಿಯ ಸಹಾಯ ಅವರಿಗೆ ಆಗಲಿಲ್ಲ. ಅಲ್ಲಿರತಕ್ಕ ದಲಿತರು ಬೇರೆಯವರು ಅಲ್ಲಿಗೆ ಬಂದಂತವರಿಗೆ ಅನುಕೂಲವಾಯಿತು. ಆದಾದಮೇಲೆ ಮಾನ್ಯ ಮುಖ್ಯ ಮಂತ್ರಿಗಳು ಹೇಳಿದರು, ನಾವು ಬೇರೆ ಕಡೆ ಷಿಫ್ಟ್ ಮಾಡುವ ರಾಷ್ಟ್ರೀಯ ಕ್ರೀಡಾಂಗಣಕ್ಕೆ ಬೇಕಾದ ಮನೆಗಳನ್ನು ಕಟ್ಟುವಾಗಲೂ ಕೂಡ ಬೇರೆ ಷಿಫ್ಟ್ ಮಾಡುವುದಿಲ್ಲವೆಂದು ಸದನದಲ್ಲಿ ಹೇಳಿದ್ದರು. ಆ ಭಾಗದಲ್ಲಿ ಮೊ ಸುಟ್ಟು ಹೋದವರಿಗೆ ಮನೆ ಕಟ್ಟಿಕೊಡುತ್ತೇವೆಂಬ ಮಾತನ್ನು ಹೇಳಿದ್ದರು. ಬೇರೆ ಕಡೆ ಷಿಫ್ಟ್ ಮಾಡುವುದಿಲ್ಲ ಅಂದಮೇಲೆ ಜಿಲ್ಲಾಧಿಕಾರಿಗಳು ಹೋಗಿ, ಹೋಗುವುದಕ್ಕೆ 15 ದಿನಗಳಿಗೆ ಮೊದಲೇ ಅವರಿಗೆ ಗುರುತಿನ ಚೀಟಿ ಕೊ ಮತ್ತು ನಿಮಗೆ ಬೇರೆ ಕಡೆ ಸ್ಥಳಾವಕಾಶ ಮಾಡಿಕೊಡುತ್ತೇವೆಂದು ಹೇಳಿದ್ದಾರೆ.

ಅರ್ಥ ಏನಿದೆ ಇವತ್ತಿನ ದಿವಸ ನಾವು ಅಲ್ಲ ರಾಷ್ಟ್ರೀಯ ಕ್ರೀಡಾಂಗಣದ ಮನೆಗಳನ್ನು ಕಟ್ಟುವುದಕ್ಕೋಸ್ಕರ ಗುಡಿಸಲುಗಳನ್ನು ಬೇರೆ ಕಡೆ ಷಿಫ್ಟ್ ಮಾಡುವುದಿಲ್ಲ. ಅವರೇ ಬೆಂಕಿಯಿಂದ ಸುಟ್ಟುಕೊಂಡರು, ಆದ್ದರಿಂದ ಆ ಕಡೆ ಕಟ್ಟಿಕೊಡುತ್ತಿದ್ದೇವೆಂಬ ಮಾತನ್ನು ಹೇಳಿದರು. ನಾನು ಒಂದು ಮಾತು ಹೇಳಿದೆ, ಮಾನ್ಯ ಗೃಹ ಮಂತ್ರಿಗಳು ಅವತ್ತೂ ಇದ್ದರು. ಅಲ್ಲಿ ಇನ್ನೊಂದು ಕಡೆಯ ಜನರು ನನ್ನ ಮನೆಗೆ ಬಂದು ಬಹಳ ಭಯದಿಂದ ಅಲ್ಲಿ ಗೂಂಡಾಗಳು ನಿಮ್ಮ ಗುಡಿಸಲುಗಳಿಗೆ ಬೆಂಕಿ ಹಾಕುತ್ತೇವೆಂದು ಹೇಳುತ್ತಿದ್ದಾರೆ. ಅದಕ್ಕೆ ರಕ್ಷಣೆ ಕೊಡಬೇಕೆಂಬ ಮಾತನ್ನು ಹೇಳಿದಾಗ ಮಾನ್ಯ ಗೃಹ ಮಂತ್ರಿಗಳು ಹೇಳಿದರು. ಮಾನ್ಯ ಶ್ರೀನಿವಾಸ ಅವರು ಹೇಳಿದ್ದು ಅರ್ಧ ಸತ್ಯ ಇದೆ, ಅರ್ಧ ಸುಳ್ಳು ಇದೆ ಎಂದು ಇರಬಹುದು. ಇವತ್ತಿನ ದಿವಸ ನಿಜಾಂಶ ಗೊತ್ತಾಯಿತು. ಇವತ್ತು ಅವರು ಹೇಳಿರತಕ್ಕ ಪ್ರಕಾರ ಗುಡಿಸಲುಗಳಿಗೆ ಏನು ಬೆಂಕಿ ಹಾಕುತ್ತೇವೆಂದು ಹೆದರಿಸಿದರು ಅಲ್ಲಿ ಅದೇ ರೀತಿ ಒಂದು ಗುಂಪು ಸಂಘ ಸಂಸ್ಥೆ ಆ ಸಂಘ ಸಂಸ್ಥೆಯವರೇ ಗುಡಿಸಲುಗಳಿಗೆ ಬೆಂಕಿ ಹಾಕಿ ಸುಟ್ಟಿದ್ದಾರೆಂಬ ಮಾತು ನೇರವಾಗಿ ಸ್ಥಳ ಪರೀಕ್ಷೆ ಮಾಡಿದಾಗ ಗೊತ್ತಾಗುತ್ತದೆ. ಇವತ್ತು ಇನ್ನೊಂದು ಏನಾಗಿದೆ ಎಂದರೆ ಯಾರು ಅಲ್ಲಿ ಬೆಂಕಿಯಲ್ಲಿ ಸುಟ್ಟು ಬೆಂದಿದ್ದಾರೆ ಅವರು ದೂರು ಕೊಟ್ಟರೆ ಅಲ್ಲಿರತಕ್ಕ ಸರ್ಕಲ್ ಇನ್ಸ್‌ಪೆಕ್ಟರ್ ಆಗಲಿ, ಕೋರಮಂಗಲ ಪೊಲೀಸ್ ಠಾಣೆಯವರಾಗಲಿ ಕಂಪ್ಲೆಟ್ ತೆಗೆದುಕೊಳ್ಳಲಿಲ್ಲ. ಯಾರು ಇದಕ್ಕೆ ಬೆಂಕಿ ಹಚ್ಚಿದ್ದಾರೆಂದು ಜನರು ಹೇಳಿಕೆ ಕೊಟ್ಟಿದ್ದಾರೆ ಅವರ ಕಂಪ್ಲೆಂಟ್‌ನ್ನು ತೆಗೆದುಕೊಳ್ಳದೇ ಯಾರು ನಿರ್ಗತಿಕರಾಗಿದ್ದಾರೆ ಅವರನ್ನು ಅರೆಸ್ಟ್ ಮಾಡಿ ಅವರನ್ನು ಕೋರ್ಟಿಗೆ ಕಳುಹಿಸಿದ್ದಾರೆ.

ಹಕ್ಕುಪತ್ರ ಚೀಟಿ ಕೊಟ್ಟು ಅವರುಗಳನ್ನು ಬೇರೆ ಕಡೆ ವರ್ಗಾವಣೆ ಮಾಡಬೇಕೆಂದು ಆ ಕಡೆ ಜಿಲ್ಲಾಧಿಕಾರಿಗಳು ಹೇಳುತ್ತಾರೆ. ಸದನದಲ್ಲಿ ಸರ್ಕಾರದ ಪರವಾಗಿ ಹೇಳುತ್ತಾರೆ. ಇಲ್ಲ ನಾವು ಬೇರೆ ಕಡೆ ಕಳುಹಿಸುವುದಿಲ್ಲ, ರಾಷ್ಟ್ರೀಯ ಕ್ರೀಡಾಂಗಣ ಕಟ್ಟುವುದಕ್ಕೂ ಅದಕ್ಕೂ ಯಾವುದೇ ತೊಂದರೆಯಾಗುವುದಿಲ್ಲವೆಂದು ಹೇಳುತ್ತಾರೆ. ಆದರೆ ಇವತ್ತಿನ ದಿವಸ ಈ ಸಭೆಯಲ್ಲಿ ಹೇಳತಕ್ಕ ಮಾತು ಒಂದಾದರೆ ಅಲ್ಲಿ ಸುಡುತ್ತಿರುವುದು, ಇನ್ನೊಂದು ಸುಡುವುದಕ್ಕೆ ಒಂದು ವಾರ ಮೊದಲು, ಸುಟ್ಟು ಒಂದು ವಾರ ಆದಮೇಲೆ ತಿರುಗಿ ಬೆಂಕಿ ಬಿದ್ದು ಕಂಪ್ಲೀಟ್ ಸುಟ್ಟು ಹೋಯಿತು. ಎಲ್ಲಾ ಕಡೆ ಬೆಂಕಿ ಬಿದ್ದರೆ 300 ಗುಡಿಸಲುಗಳಲ್ಲಿ 50-100 ಸುಡುತ್ತವೆ. ಇವತ್ತಿನ ದಿವಸ ಅಲ್ಲ ಯಾವುದೇ ರೀತಿಯ ಕ್ರಮ ತೆಗೆದುಕೊಂಡಿಲ್ಲ, ಅವರನ್ನು ಬಂಧಿಸಿಲ್ಲ.

10.50 ಎ,ಎಂ

ಶ್ರೀ ಜಿ. ಬಿ. ಶಿವಕುಮಾರ್ : ಮಾನ್ಯ ಅಧ್ಯಕ್ಷರೆ, ನನಗೆ ತಮ್ಮಿಂದ ಸ್ಪಷ್ಟವಾದ ನಿರ್ದೇಶನ ಬೇಕು. ನಾನು ಕೇಳುತ್ತಾ ಇರುವುದು ಇಷ್ಟೆ, ಏಕೆಂದರೆ ಇದೊಂದು ಸಂಪ್ರದಾಯ ಬೆಳೆದುಕೊಂಡು ಬಂದಿದೆ. ಜೀರೋ ಅವರ್ ಜೀರೋ ಅವರ್ಸ್. ಇದು ಕಾಲವನ್ನು ನುಂಗಿಕೊಂಡು....

ಶ್ರೀ ವಾಟಾಳ್ ನಾಗರಾಜ್ : ಇದೇನೂ ಹೊಸದಾಗಿ ಬಂದಿಲ್ಲ. ಲೋಕಸಭೆಯಲ್ಲೂ ಇದೆ, ಬೇರೆ ಶಾಸನಸಭೆಗಳಲ್ಲೂ ಇದೆ. ಇದೇನೂ ಹೊಸದಲ್ಲ, ಮೊದಲಿನಿಂದ ನಡೆದುಕೊಂಡು ಬಂದಿರುವುದು.

ಶ್ರೀ ಎಚ್.ಎನ್. ನಂಜೇಗೌಡ : ಮಾನ್ಯ ಅಧ್ಯಕ್ಷರೆ, ಸನ್ಮಾನ್ಯ ಸದಸ್ಯರ ಕಳವಳಿ ನಾವು ಅರ್ಥ ಮಾಡಿಕೊಳ್ಳಬಹುದು. ನಾಗೇಗೌಡರು ಸುಮ್ಮನೆ ಬುಸುಗುಟ್ಟುತ್ತಾ ಇದ್ದಾರೆ. ಇಲ್ಲಿ ಏನಾಗಿದೆ ಕಥೆ ಅಂದರೆ, ಅವರು ಆ ಕ್ಷೇತ್ರದಿಂದ ಬಂದಿದ್ದರೆ ಅವರಿಗೆ ಆ ನೋವು ಗೊತ್ತಾಗುತ್ತಿತ್ತು. ಮುಖ್ಯಮಂತ್ರಿಗಳು ಹೇಳುತ್ತಾರೆ, ನಮಗೆ ಅವರು ಅಪ್ರೂವ್ಡ್ ಲೇ ಔಟ್ ಬೇರೆ ತೋರಿಸಿದರು ಅಲ್ಲೇ ಮನೆ ಕಟ್ಟುತ್ತೇವೆ ಅಂತ

ಹೇಳಿ ಏನು ನಾವು ಮುಖ್ಯಮಂತ್ರಿಗಳನ್ನು ನಂಬಬೇಕೋ? ಅಥವಾ ಡಿ. ಸಿ. ಹೋಗುತ್ತಾರೆ 198 ಜನಕ್ಕೋ 200 ಜನಕ್ಕೋ ಐಡೆಂಟಿಫಿಕೇಷನ್ ಸ್ಲಿಪ್‌ಕೊಡುತ್ತೇನೆ, ಇಂಥ ಸ್ಟೇಟಿಗೆ ಹೋಗಿ ಅಂತ ಹೇಳಿ. ಆದರೆ ಅದು ಅಷ್ಟಕ್ಕೇ ನಿಲ್ಲುವುದಿಲ್ಲ.

ಶ್ರೀ ಕೆ.ಎನ್. ನಾಗೇಗೌಡ : ಮಾನ್ಯ ಅಧ್ಯಕ್ಷರೆ, ಈಗ ಮಾನ್ಯ ಮುಖಂಡರಾದಂಥ ನಂಜೇಗೌಡರು ಪಾರ್ಲಿಮೆಂಟಿನಲ್ಲಿ ಬಹಳ ವರ್ಷಗಳ ಕಾಲ ಕೆಲಸ ಮಾಡಿದ್ದಾರೆ. ಬಲರಾಂ ಜಾಖರ್ ಅವರು ಜೀರೋ ಅವರ್ ಬಗ್ಗೆ ಒಂದು ರೂಲಿಂಗ್ ಕೊಟ್ಟಿದ್ದಾರೆ. ಅದು ಅವರಿಗೆ ಗೊತ್ತಿರಬೇಕು ಅಂತ ಕಾಣುತ್ತದೆ. ಜೀರೋ ಅವರ್ಸ್‌ನಲ್ಲಿ ಯಾರನ್ನು ಎತ್ತಬೇಡಿ ಅಂತ ಹೇಳುತ್ತೇವೆ ನಾವು, ಅವರ್ ಕಾನ್‌ಸ್ಟಿಟುಂಯೆನ್ಸಿ ನೋವೆಲ್ಲಾ ಎತ್ತಲಿ, ಏನೆಲ್ಲಾ ಚರ್ಚೆ ಮಾಡಲಿ, ನಿಯಮಾವಳಿ ಒಳಗಡೆ ಚರ್ಚೆ ಮಾಡಲಿ ಅಂತ ಹೇಳಿ. ಜೀರೋ ಅವರ್‌ನಲ್ಲಿ ಶಾರ್ಟ್ ಅವರ್ ಕ್ವೆಶ್ಚನ್ಸ್ ಗಂಟೆಗಟ್ಟಲೆ ಚರ್ಚೆ ಮಾಡುವುದು ಸರಿಯೇ ಎಂದು. ಈ ಸದನದಲ್ಲಿ ಅವರು ಪಾರ್ಲಿಮೆಂಟರಿ ಅಫೇರ್ಸ್ ಗುರುಗಳು. ಕೃಷ್ಣ ಅವರು ಮತ್ತು ನಂಜೇಗೌಡರು. ಪಾರ್ಲಿಮೆಂಟಿನಲ್ಲಿ ಜೀರೋ ಅವರ್ಸ್ ಬಗ್ಗೆ ಬಲರಾಮ್ ಜಾಖದ್ ಅವರು ಏನು ರೂಲಿಂಗ್ ಕೊಟ್ಟಿದ್ದಾರೆ ಎನ್ನುವುದು ಅವರಿಗೆ ಚೆನ್ನಾಗಿ ಗೊತ್ತಿದೆ. ಈ ರೀತಿ ಸಾಮಾನ್ಯವಾದಂಥ ವಿಚಾರಗಳ ಬಗ್ಗೆ ಜೀರೋ ಅವರ್ಸ್‌ನಲ್ಲಿ ಗಂಟೆಗಟ್ಟಲೆ ಮಾತನಾಡುಬಹುದು ಅಂತ ಹೇಳಿದರೆ ನಾವೂ ಮಾತನಾತ್ತೇವೆ, ಅವರೂ ಮಾತನಾಡಲಿ, ತಪ್ಪೇನಿಲ್ಲ.

ಶ್ರೀ ಎಚ್.ಎನ್. ನಂಜೇಗೌಡ : ಹಾಗಲ್ಲ, ಇದಕ್ಕೆ ನಾವು ನೋಟೀಸ್ ಕೊಟ್ಟಿದ್ದೆವು.

ಶ್ರೀ ಕೆ.ಎನ್. ನಾಗೋಗೌಡೆ : ಜೀರೋ ಅವರ್ಸ್ ಯಾವ ರೂಲ್ಸ್? ಜೀರೋ ಅವರ್‌ಗೆ ರೂಲ್ಸ್ ಎಲ್ಲಿದೆ? ಮಂಜುನಾಥ್ ಅವರನ್ನು ಕೇಳಿ.

ಶ್ರೀ ಜಿ.ಬಿ. ಶಿವಕುಮಾರ್ : ಪ್ರಿಲಿಮಿನರಿ ಸಬ್‌ಮಿಷನ್‌ಗೆ ಅವಕಾಶ ಇದೆ ಅಷ್ಟೆ, ಇಂತಹ ಸಂದರ್ಭಗಳಲ್ಲಿ ಬೇರೆ ಕಲಾಪಗಳನ್ನು ಬದಿಗೊತ್ತಿರುವ ಸನ್ನಿವೇಶಗಳನ್ನು ನಾವು ನೋಡಿದ್ದೇವೆ.

ಅಧ್ಯಕ್ಷರು : ಸನ್ಮಾನ್ಯ ನಾಗೇಗೌಡರು ಮತ್ತು ಶಿವಕುಮಾರ್ ಅವರೇ ಈ ಕಡೆ ತಿರುಗಿ ದಯಮಾಡಿ ಮಾತನಾಡಿ.

ಶ್ರೀ ಜಿ.ಬಿ. ಶಿವಕುಮಾರ್ : ನನಗೇನು ಕೆಟಲಿಸ್ಟೆ ನಾಗೇಗೌಡರು? ಕೆಟಲಿಸ್ಟ್ ಅಂತಾರೆ ಒಂದು ವರ್ಡ್ ಗೊತ್ತೆ? ನನಗೇನೂ ಯಾರೂ ಚುಚ್ಚಬೇಕಾಗಿಲ್ಲ. ನನ್ನದೂ ನರನಾಡಿಗಳೆಲ್ಲಾ ಚೆನ್ನಾಗಿಯೇ ಕೆಲಸ ಮಾಡುತ್ತವೆ. ಯಾವಯಾವುದೋ ವಿಚಾರಗಳಾಗಿ ಹೊಸ ಸದಸ್ಯರಿಗೆ ಅವಕಾಶ ವಂಚಿತವಾಗುತ್ತಿದೆ, ಈ ವೇಳೆ ನುಂಗಿಕೊಳ್ಳತ್ತಿದೆ ಎನ್ನತಕ್ಕ ಕಳವಳಿಯೇ ಹೊರತು ನನಗೆ ಯಾರೂ ಚುಚ್ಚಬೇಕಾಗಿಲ್ಲ. ನನ್ನ ಪಂಚೇಂದ್ರಿಯಗಳೆಲ್ಲಾ ಚೆನ್ನಾಗಿ ಕೆಲಸ ಮಾಡುತ್ತವೆ.

ಅಧ್ಯಕ್ಷರು : ಒಂದು ನಿಮಿಷ ತಾವು ಕುಳಿತುಕೊಳ್ಳಿ.

ಶ್ರೀ ವಾಟಾಳ್ ನಾಗರಾಜ್ : ತಮ್ಮ ಕಾರ್ಯಾಲಯಕ್ಕೆ ಬಂದು ತಮ್ಮ ಅಪ್ಪಣೆಯನ್ನು ಪಡೆದು ಹೇಳಿದ್ದೇವೆ. ಇಲ್ಲಿ ನಾವು ಇದ್ದಕ್ಕಿದ್ದಹಾಗೆ ಎದ್ದು ಕುಳಿತುಕೊಳ್ಳುತ್ತಿಲ್ಲ. ಅದು ತಮಗೆ ಗೊತ್ತಿದೆ.

ಶ್ರೀ ಕೆ.ಎನ್. ನಾಗೇಗೌಡ : ಸಾರ್, ಹಾಗಾದರೆ ನಮಗೆ ಒಂದು ಹೇಳಿಬಿಡಿ ಸಾರ್. ತಮ್ಮ ಅನುಮತಿಯೊಳಗಡೆ ಜೀರೋ ಅವರ್ಸ್‌ನಲ್ಲಿ ಒಂದು ಗಂಟೆಗಳ ಕಾಲ ಚರ್ಚೆ ಮಾಡವುದಕ್ಕೆ ನಮ್ಮ ನಿಯಮಾವಳಿಗಳಲ್ಲಿ ಅವಕಾಶ ಇದೆ. ಅದ್ಯಕ್ಷರಿಗೆ ಆ ಪವರ್ ಇದೆ ಎಂದು ಅಧ್ಯಕ್ಷರು ಹೇಳಿಬಿಡಿ. ನಾವು ಅದಕ್ಕೆ ಒಬ್ಬೈಜ್ ಮಾಡುತ್ತೇವೆ.

ರೂಲ್ಸ್ ಬಹಳ ಮುಖ್ಯವಾದುದು ಈ ಮನೆಯಲ್ಲಿ ನಾವು ಬಹಳ ದಿವಸದಿಂದ ನೋಡುತ್ತಿದ್ದೇವೆ ಅಧ್ಯಕ್ಷರೆ, ರೂಲ್ಸ್ ನಿಯಮಮಾವಳಿ ಗಳನ್ನು ಬಿಟ್ಟು ಹೋಗುವುದಾದರೆ ನಾವು ಬಹಳ ದಿವಸದಿಂದ ನೋಡುತ್ತಿದ್ದೇವೆ ಅಧ್ಯಕ್ಷರೆ, ರೂಲ್ಸ್ ನಿಯಮಾವಳಿಗಳನ್ನು ಬಿಟ್ಟು ಹೋಗುವುದಾದರೆ ನಾವು ರೂಲ್ಸ್ ಬಗ್ಗೆಯೇ ಚರ್ಚೆ ಮಾಡಬೇಕಾಗುತ್ತದೆ. ಕಾಲ ಬರುತ್ತದೆ. ಅಧ್ಯಕ್ಷರಿಗೂ ಸಹ ಜೀರೋ ಅವರ್ಸ್‌ನಲ್ಲಿ ಲಿಮಿಟೇಷನ್ಸ್ ಇದೆ. ಅಧ್ಯಕ್ಷರು ಪರ್ಮಿಷನ್ ಕೊಡಬೇಕಾದರೂ ರೂಲ್ಸ್ ಇದೆ. ರೂಲ್ಸ್ ಯಾರಿಗೂ ದೊಡ್ಡದಲ್ಲ ಈ ರೂಲ್ಸ್ ಅಧ್ಯಕ್ಷರಿಗೂ ದೊಡ್ಡದಲ್ಲ. ನನಗೂ ದೊಡ್ಡದಲ್ಲ.

SRI H.N. NANJA GOWDA : I am sorry, The Hon'ble Member is not correct when he says that.

MR. SPEAKER : I will explaiant it.

(INTERRUPTIONS)

ಶ್ರೀ ಎಚ್.ಎನ್. ನಜೋಗೌಡ : ಸ್ಪೀಕರ್ ರೂಲ್ಸ್ ಡಿಫೈನ್ ಮಾಡಿಲ್ಲ ನಾವು.

Speaker can suspend all the Rules, ಅದು ಏತಕ್ಕೆ ಹಾಗೆ ಹೇಳುತ್ತಾರೋ ನನಗೆ ಗೊತ್ತಾಗುತ್ತಿಲ್ಲ.

SRI K.N. NANJA GOWDA : Show me the Rules where the speaker can suspend all the Rules. You quote the Rule number.

ಶ್ರೀ ಎಚ್.ಎನ್. ನಂಜೇಗೌಡ : ತೋರಿಸಬೇಕೇನು?

ಅಧ್ಯಕ್ಷರು : ಸನ್ಮಾನ್ಯ ನಾಗೇಗೌಡರಿಗೆ, ಶಿವಕುಮಾರ್ ಅವರಿಗೆ ನಾನು ಇಷ್ಟೇ ಹೇಳುವುದಕ್ಕೆ ಪ್ರಯತ್ನ ಪಡುತ್ತೇನೆ. ಸನ್ಮಾನ್ಯ ಸದಸ್ಯರುಗಳು ಅನೇಕ ಗಂಭೀರ ವಿಷಯಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಸ್ತಾಪ ಮಾಡಬೇಕು ಅಂತ ಹೇಳಿ ಅನುಮತಿ ಕೋರಿ ವಿವಿಧ ನಿಯಮಾವಳಿಗಳ ಅಡಿ ನನಗೆ ಸೂಚನೆ ಕೊಟ್ಟಿರುತ್ತಾರೆ. ನಾವು ಈಗಾಗಲೇ ಸದನ ಕಾರ್ಯಕಲಾಪ ಸಮಿತಿಯೊಳಗೆ ಬಿಸಿನೆಸ್‌ಎಲ್ಲಾ ಷೆಡ್ಯೂಲ್ ಮಾಡಿರುವುದರಿಂದ ಅವರು ಕೊಟ್ಟಿರತಕ್ಕ ಎಲ್ಲಾ ವಿಷಯಗಳನ್ನು ನಾವು ಪ್ರಸ್ತಾಪ ಮಾಡುವುದಕ್ಕೆ ಅವಕಾಶ ಮಾಡಕೊಡುವುದಕ್ಕಾಗುವುದಿಲ್ಲ. ನೆನ್ನೆ ಪ್ರತಾಪಚಂದ್ರ ಶೆಟ್ಟಿಯವರು ಒಂದು ಕೊಲೆ ವಿಚಾರಕ್ಕೆ ಸಂಬಂಧಪಟ್ಟಹಾಗೆ ನಿಲುವಳಿ ಸೂಚನೆಯನ್ನು ಕೊಟ್ಟಿದ್ದರು. ನಾನು ಅವರಿಗೆ ಹೇಳಿದೆ ನಿಲುವಳಿ ಸೂಚನೆ ಬೇಡ, ನೀವು ಜೀರೋ ಅವರ್‌ನಲ್ಲಿ ಪ್ರಸ್ತಾಪ ಮಾಡಿ ಎಂದು ಹೋಮ್ ಮಿನಿಸ್ಟರ್‌ಗೂ ಕೂಡ ಸದನದ ಸಮಯ ಉಳಿಯುತ್ತದೆ ಎಂದು ಹೇಳಿದೆ. ಇದು ಅವರ ಕ್ಷೇತ್ರದಲ್ಲಿ ಪದೇಪದೇ ಆಗುತ್ತಾ ಇರತಕ್ಕ ಘಟನೆ. ಅವರು ಮೂರು ನಾಲ್ಕು ದಿವಸಗಳಿಂದ ಬಂದು ನನ್ನ ಹತ್ತಿರ ಹೇಳಿದ್ದರು. ಅವರು ನಿಯಮ 69ರ ಕೆಳಗೆ ತೆಗೆದುಕೊಳ್ಳಬೇಕು ಎಂದು ಹೇಳಿದ್ದಾರೆ. ನಮಗೆ ಸಮಯ ಇಲ್ಲ. ಆದ್ದರಿಂದ ಬಹಳ ಪರಿಷ್ಕೈ ಮಾಡಿಕೊಂಡು ಪ್ರಶ್ನೋತ್ತರಗಳನ್ನು ಸ್ವಲ್ಪ ಬೇಗ ಮುಗಿಸಿಕೊಂಡೆವು ನಿನ್ನೆ ಕೂಡ ರೂಲ್ಸನ್ನು ನಾವೆಲ್ಲರೂ ಗೌರವಿಸಬೇಕು, ನಿಜ. ರೂಲ್ಸ್‌ನ್ನು ನಾವು ಯಶಸ್ವಿಯಾಗಿ ಪರಿಣಾಮಕಾರಿಯಾಗಿ ಕೆಲಸ ಮಾಡುವುದಕ್ಕೆ ಇಟ್ಟುಕೊಂಡಿದ್ದೇವೆಯೇ ಹೊರತು ಬೆದರಿಸುವುದಕ್ಕೆ ಇಟ್ಟುಕೊಂಡಿಲ್ಲ. ಆದ್ದರಿಂದ ರೂಲ್ಸನ್ನು ಗೌರವಿಸಿ ನಾವು ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ಮಾಡುವುದಕ್ಕೆ ಸದಾ ಕಾಲ ಅಧ್ಯಕ್ಷರು ಸಿದ್ಧವಾಗಿರುತ್ತಾರೆ ಎಂಬ ಆಶ್ವಾಸನೆಯನ್ನು ಕೊಡುತ್ತಾ ಇದ್ದೇನೆ. ದಯಮಾಡಿ ಯಾರಿಗೂ ಅನುಮಾನ ಬೇಕಾಗಿಲ್ಲ. ಹೊಸ ಸಂಪ್ರದಾಯವನ್ನು ನಾವು ಹಾಕುತ್ತಿಲ್ಲ. ಕೆಲವು ಪ್ರಾಧಾನವಾದಂಥ ವಿಷಯಗಳನ್ನು ನಾವು ಇಲ್ಲಿ ಪ್ರಸ್ತಾಪ ಮಾಡಲೇಬೇಕು.

ಅದಕ್ಕೆ ಅವಕಾಶ ಕೊಟ್ಟಿದೆ. ಯಾರೂ ಅನ್ಯಥಾ ಭಾವಿಸುವುದು ಬೇಕಾಗಿಲ್ಲ.ತಾವು ಬೇಗ ಮುಗಿಸಬೇಕು. ಜೀರೊ ಅವರ್‌ನಲ್ಲಿ ಮೆನ್‌ಷನ್ ಮಾಡಬಹುದು. ತಾವು ಮೆನ್‌ಷನ್ ಮಾಡಿದ್ದೀರಿ. ತಾವು ಎಲ್ಲಾ ವಿಷಯ ಹೇಳಿದ್ದೀರಿ. ಆದರೆ ಭಾಷಣ ಬೇಡ.

ಶ್ರೀ ಎಂ. ಶ್ರೀನಿವಾಸ್ : ತಾವು ಹೇಳಿದಹಾಗೆ ಮೂರು ದಿವಸದಿಂದ.....

ಅಧ್ಯಕ್ಷರು : ಉತ್ತರ ಏನು ಹೇಳುತ್ತಾರೆ ನೋಡೋಣ.

ಶ್ರೀ ಬಿ. ಎಸ್. ಯಡಿಯೂರಪ್ಪ : ಇಲ್ಲಿ ತಾವು ಗಮನಿಸರಬಹುದು. ನಾವು ಪ್ರಸ್ತಾಪವನ್ನೂ ಮಾಡುವುದಿಲ್ಲ. ಕ್ರೀಡಾಂಗಣ ಸಮುಚ್ಚಯ ಆಗುವ ಕಡೆ ನಿರಂತರವಾಗಿ ಅಲ್ಲಿ ಇದರಲ್ಲಿ ವ್ಯವಸ್ಥಿತವಾದಂಥ ಪದ್ಯಂತ್ರ ಇರಬಹುದು ಎಂಬ ಭಯವನ್ನು ಸರ್ಕಾರದ ಗಮನಕ್ಕೆ ನಾವು ತಂದಿದ್ದೇವೆ. ಇನ್ನು ಎಲ್ಲೂ ಆಗದೇ ಇರುವುದು ಇಲ್ಲಿ ನಡೆಯುತ್ತಿರಬೇಕಾದರೆ, ಸದನ ನಡೆಯುತ್ತಿರಬೇಕಾದರೆ ಈ ರೀತಿ ಬೆಂಕಿ ಹಚ್ಚಿ ಒಕ್ಕಲೆಬ್ಬಿಸಿರುವುದಕ್ಕಾಗಿ ಪ್ರಸ್ತಾಪ ಮಾಡುತ್ತಿದ್ದೇವೆ, ಬೇರೆ ಏನೂ ಇಲ್ಲ.

ಶ್ರೀ ಎಂ. ಶ್ರೀನಿವಾಸ್ : ಒಂದು ನೋಟೀಸನ್ನು ಕೂಡ ಸನ್ಮಾನ್ಯ ಗೃಹಮಂತ್ರಿಗಳಿಗೆ ಕಳುಹಿಸಿಕೊಡುತ್ತೇನೆ. ಅಲ್ಲೇನಾಗಿದೆ....

ಅಧ್ಯಕ್ಷರು : ಭಾಷಣ ಬೇಕಾಗಿಲ್ಲ.

ಶ್ರೀ ಎಂ. ಶ್ರೀನಿವಾಸ್ : ಸ್ವಲ್ಪದರಲ್ಲಿ ಮುಗಿಸಿಬಿಡುತ್ತೇನೆ. ಜಿಲ್ಲಾಧಿಕಾರಿಗಳು ಬೇರೆ ಕಡೆಗೆ ಹೋಗಿ ಅಂತ ಹೇಳಿ ಕೊಟ್ಟಿದ್ದಾರೆ ತಮಗೆ ಗೊತ್ತಿದೆ, ಅವರು ಕೊಟ್ಟಿರಬೇಕಾದರೆ ಬೇರೆ ಕಡೆಗೆ ಅವರು ಹೋಗಲಿಲ್ಲ ಎನ್ನುವ ಉದ್ದೇಶದಿಂದ ಇದಕ್ಕೆ ಬೆಂಕಿ ಹಾಕಿದ್ದಾರೆ.

ಅಧ್ಯಕ್ಷರು : ನಾಗೇಗೌಡರೆ, ಹಾಗೆ ಮಾತನಾಡಿಕೊಳ್ಳುವುದಕ್ಕೆ ರೂಲ್ಸ್‌ನಲ್ಲಿ ಅವಕಾಶ ಇಲ್ಲ. ಹಾಗೆ ಪರಸ್ಪರ ಮಾತನಾಡಿಕೊಳ್ಳುವಹಾಗಿಲ್ಲ ನೀವು ವಾಟಾಳ್‌ನಾಗರಾಜ್ ಅವರು ಪರಸ್ಪರ ಹಾಗೆ ಮಾತನಾಡಿಕೊಳ್ಳುವುದಕ್ಕೆ ರೂಲ್ಸ್‌ನಲ್ಲಿ ಅವಕಾಶ ಇಲ್ಲ.

ಶ್ರೀ ಕೆ.ಎನ್. ನಾಗೇಗೌಡ : ಸಾರ್, ಒಂದು ಸಬ್ಜೆಕ್ಟನ್ನು ಒಂದು ಸೆಕ್ಷನ್‌ನಲ್ಲಿ ಮೂರು ಸಾರಿ ಎತ್ತಬಹುದಾ ಸಾರ್? ಅದಕ್ಕೆ ರೂಲ್ಸ್‌ನಲ್ಲಿ ಅವಕಾಶ ಇದೆಯೆ?

ಶ್ರೀ ಕೆ.ಎಸ್. ಈಶ್ವರಪ್ಪ : ಮೂರು ಸಾರಿ ಬೆಂಕಿ ಇಟ್ಟರೆ ಮೂರು ಸಾರಿ ಎತ್ತಬಹುದು. ಬೇಕು ಅಂತ ಬೆಂಕಿ ಹಚ್ಚಿ ಓಡಿಸುವ ಪ್ರಯತ್ನ ನಡೆಯುತ್ತಿದೆ.

(ಗೊಂದಲ)

ಶ್ರೀ ವಾಟಾಳ್ ನಾಗರಾಜ್ : ಸ್ವಾಮಿ ಅಧ್ಯಕ್ಷರೆ, ನಾನು ಈ ಸದಸಕ್ಕೆ ಬರುವಾಗ ತಮ್ಮ ಕಾರ್ಯಾಲಯದ ಮೂಲಕ ಇಲ್ಲಿಗೆ ಬರಬೇಕು. ಯಾರೋ ಒಬ್ಬಬಂದು ನನಗೆ ಎರಡು ಏಟು ಹೊಡೆಯುತ್ತಾನೆ. ನಾನು ಬಂದ ತಕ್ಷಣ ಆಕಸ್ಮಿಕವಾಗಿ. ನಾನು ಒಳಗಡೆ ಬಂದು ತಮ್ಮನ್ನು ಕೇಳಿ ರೂಲ್ಸ್ ಯಾವುದು ಎಷ್ಟನೇ ಸೆಕ್ಷನ್ ಎಂದು ಹೇಳುವಷ್ಟರ ಹೊತ್ತಿಗೆ ನನ್ನ ಕಥೆ ಮುಗಿದಿರುತ್ತದೆ. ಆದ್ದರಿಂದ ಈ ಸದನದಲ್ಲಿ ಇಂಥ ಸಂದರ್ಭ ಬಂದಾಗ ತಮ್ಮನ್ನು ಕೇಳತಕ್ಕದ್ದು ನಡೆಯುತ್ತಲೇ ಇದೆ. ಇಲ್ಲ ನೀನು ಏಟು ತಿಂದರೂ ಚಿಂತೆಯಿಲ್ಲ, ಈ ಸದನದಲ್ಲಿ ನೀವು ಏನೂ ಪ್ರಸ್ತಾಪ ಮಾಡುವುದಕ್ಕಾಗುವುದಿಲ್ಲ, ನಿಯಮದ ಪ್ರಕಾರವೇ ನೀವು ಬರಬೇಕು, ನಿಲುವಳಿ ಸೂಚನೆ ಆಗುತ್ತದೋ ಬಿಡುತ್ತದೋ ಅಂತ ಇನ್ನೂ ಲೆಕ್ಕಾಚಾರ ಹಾಕಿಕೊಂಡು ಕುಳಿತುಕೊಂಡರೆ ನಮ್ಮ ಉಸಿರು ಹೊರಟುಹೋಗಿರುತ್ತದೆ. ಆದ್ದರಿಂದ ತಮಗೆ ದಯಮಾಡಿ ಹೇಳುತ್ತೇನೆ, ಇದು ಇವತ್ತಲ್ಲ, 1956ರಿಂದಲೂ ಇದು

ನಡೆದುಕೊಂಡು ಬಂದಿದೆ. ಇದೇನೂ ಹೊಸದಲ್ಲ ತಮಗೆ ಗೊತ್ತಿದೆ. ಆದ್ದರಿಂದ ನಾಗೇಗೌಡರಿಗೂ ಅದು ಗೊತ್ತಿದೆ, ಆದರೆ ಆ ಕಡೆ ಸೇರಿದಮೇಲೆ ಸ್ವಲ್ಪ ಬದಲಾವಣೆ ಆಗುತ್ತಿದ್ದಾರೆ, ಸರಿಯಲ್ಲ ಅದು.

ಶ್ರೀ ಕೆ.ಎನ್. ನಾಗೇಗೌಡ : ಸಾರ್ ಇಲ್ಲೇ ನಾಣಯ್ಯನವರು ಕುಳಿತಿದ್ದಾರೆ.ತ ಕೌನ್ಸಿಲ್‌ನಲ್ಲಿ ಇವರು ವಿರೋಧಪಕ್ಷದಲ್ಲಿದ್ದರು, ನಾನು ಆಡಳಿತ ಪಕ್ಷದಲ್ಲಿದ್ದೆ . ಮಂಜುನಾಥ್ ಅವರೂ ಸಭಾಪತಿಯಾಗಿದ್ದರು, ಅವರು ಸಹ ಇಲ್ಲೇ ಕುಳಿತಿದ್ದಾರೆ ಕೇಳಿ. ಒಂದು ಏನೆಂದರೆ ಈ ವಿಚಾರ ಚರ್ಚೆ ಯಾಗಿದೆ ಸದನದಲ್ಲಿ, ಮತ್ತೆ ಚರ್ಚೆ ಮಾಡುವುದಕ್ಕೆ ರೂಲ್ಸ್‌ನಲ್ಲಿ ಬರುವುದಿಲ್ಲ ಎನ್ನತಕ್ಕಂಥದ್ದೇ ನನ್ನ ಪಾಯಿಂಟ್ ಅಷ್ಟೆ.

ಶ್ರೀ ಎಂ. ಶ್ರೀನಿವಾಸ್ : ಇದು ಎರಡನೇ ಸಾರಿ ಎತ್ತಿರುವುದು. ನೋಡಿಕೊಂಡು ಬಂದಿಲ್ಲ ಹೋಗಿ ಅಷ್ಟೆ ನೀವು. ಇದು ಎರಡನೆಯ ಸಾಲಿ ಅಲ್ಲಿ 300 ಗುಡಿಸಲು ಸುಟ್ಟಿರುವುದು. ಸ್ವಾಮಿ ಏನು ಜಿಲ್ಲಾಧಿಕಾರಿಗಳು ಚೀಟಿಯನ್ನು ಕೊಟ್ಟು ನೀವು ಬೇರೆ ಕಡೆ ಹೋಗಿ ಎಂದಾಗ ಅವರು ಹೋಗಲಿಲ್ಲ, ಹೋಗಲಿಲ್ಲ ಎಂಬ ಕಾರಣಕ್ಕಾಗಿ ಉದ್ದೇಶ ಪೂರ್ವಕವಾಗಿಯೇ ಅಲ್ಲಿ ಕಟ್ಟಿರತಕ್ಕ ಕಟ್ಟಡಗಳನ್ನು ಕಟ್ಟುವುದಕ್ಕಾಗುವುದಿಲ್ಲ. ಎಂದು ಉದ್ದೇಶ ಪೂರ್ವಕವಾಗಿ ಗೂಂಡಾಗೊಳಿಂದ ಬೆಂಕಿ ಹಚ್ಚಿದ್ದಾರೆಂದು ನೇರವಾಗಿ ಹೇಳುತ್ತಾ ಇದನ್ನು ಇಲ್ಲಿ ಕೊಟ್ಟಿದ್ದಾರೆ. ಏನು ಕೊಟ್ಟಿದ್ದಾರೆ? ವಿಶೇಷ ಜಿಲ್ಲಾಧಿಕಾರಿಗಳು ತಮ್ಮ ಅಪ್ಲಿಕೇಷನನ್ನು ವಜಾ ಮಾಡಿದ್ದಾರೆ ಆ ಜಾಗವನ್ನು ಬೇರೆಯವರಿಗೆ ಕೊಡುವುದಕ್ಕೆ ಎನ್ನುವ ಮಾತನ್ನು ಕೂಡ ಹೇಳಿದ್ದಾರೆ. ಇವತ್ತೂ ನನ್ನ ಮನೆಗೆ ಬಂದಿದ್ದರು. ಇನ್ನೊಂದು ಕಡೆ 400 ಗುಡಿಸಲು ಇದೆ. ಸ್ವಾಮಿ ಈ 400 ಗುಡಿಸಲವರೂ ಸಹ ನಮ್ಮ ಗುಡಿಸಲುಗಳಿಗೆ ಬೆಂಕಿ ಹೊತ್ತಿಸುತ್ತಾರೆ ಅಂತ ತಮ್ಮ ಭಯವನ್ನು ವ್ಯಕ್ತಿಪಡಿಸಿ ಹೇಲುತ್ತಿದ್ದಾರೆ. ಅಲ್ಲೇ ಕೋರಮಂಗಲ ನಿವಾಸಿಗಳು ಈ ಕಡೆ ಆ ಕಡೆ ಸುಮಾರು 60 ಸಾವಿರ ಜನ ಇದ್ದಾರೆ. ಇವತ್ತು ಬೆಳಿಗ್ಗೆ ಅಲ್ಲಿನ ನಿವಾಸಿಗಳು ಎರಡು ಟೆಂಪೋಗಳಲ್ಲಿ ನಮ್ಮ ಮನೆಯ ಹತ್ತಿರ ಬಂದ ಸಾರ್ ನಮ್ಮ ಗುಡಿಸಲುಗಳಿಗೆ ಬೆಂಕಿ ಹಚ್ಚಿಸುತ್ತಾರೆ, ಮುಖ್ಯಮಂತ್ರಿಗಳಿಗೆ ಹೇಳಿ, ಅವರಿಗೆ ಹೇಳಿ ಅದು ಹಚ್ಚಿಸದಹಾಗೆ ಸಹಾಯ ಮಾಡಿ ಎಂದು ಹೇಳಿದರು. ನಾನು ಇಲ್ಲಿ ಹೇಳಿದೆ. ಇಲ್ಲ ಅದು ಆಗುವುದಿಲ್ಲ ಎಂದು ಹೇಳಿದರು. ನಾವು ರಕ್ಷಣೆ ಕೊಡುತ್ತೇವೆ ಎಂದು ಹೇಳಿದರು. ಇವತ್ತು ಇಲ್ಲಿರತಕ್ಕ 300-400 ಗುಡಿಸಲುಗಳನ್ನು ಇನ್ನೊಂದು ವಾರದೊಳಗೆ ಅದೇ ಗೂಂಡಾಗಳು ಬೆಂಕಿ ಹೊತ್ತಿಸುತ್ತಾರೆ ಎಂದು ಹೇಳುತ್ತಿದ್ದಾರೆ.

ಶ್ರೀ ಹೆಚ್.ಎನ್. ನಂಜೇಗೌಡ : ಮಾನ್ಯ ಅಧ್ಯಕ್ಷರೆ ನಾನು ಭಾಷಣ ಮಾಡುವುದಿಲ್ಲ, ಸರ್ಕಾರಧಿಂದ ಒಂದು ವಿವರಣೆ ಬೇಕು. ಅವತ್ತು ಮುಖ್ಯಮಂತ್ರಿಗಳು ಅಲ್ಲೇ ಆ ಸ್ಥಳದಲ್ಲೇ ಕಟ್ಟಿಬಿಡುತ್ತೇವೆ ಅಂತ ಹೇಳಿದರು. ಈಗ ಅವರನ್ನು ಸ್ಥಳಾಂತರಿಸುವುದು ಇದ್ದರೆ ಧೈರ್ಯವಾಗಿ ಸರ್ಕಾರದವರು ಹೇಳಿಬಿಡಲಿ. "For thc following reasons we are shifting them ".

ಇಲ್ಲ ಅಲ್ಲೇ ಮನೆ ಕಟ್ಟಿಸಿಕೊಡುತ್ತೇವೆ ಅಂತ ಹೇಳುವರು. ದಿನ ಬೆಳಗಾದರೆ, 300 ಗುಡಿಸಲುಗಳನ್ನು ಸುಡುವುದು. ಇನ್ನೊಂದು ದಿವಸ 100 ಗುಡಿಸಲು ಸುಡುವುದು, ಆಮೇಲೆ ಅದರ ಪಕ್ಕದಲ್ಲಿ ಇನ್ನೊಂದು 100 ಗುಡಿಸಲುಗಳಿಗೆ ಬೆಂಕಿ ಹಾಕುವುದು ಜಯನಗರ ಸ್ಲಂ ಡ್ವೆಲ್ಲರ್ಸ್ ವೆಲ್‌ಫೇರ್ ಕಮಿಟಿ ಅಂತ ಇದೆ. ಇವರ ಮುಖಾಂತರ ಡಿ.ಸಿ. ಫಂಕ್ಷನ್ ಮಾಡುತ್ತಾನೆ. ಡಿ.ಸಿ. ಯವರು ಈ ರೀತಿ ತೀರ್ಮಾನ ಮಾಡಿದ್ದಾರೆ, ನೀವು ದುಡ್ಡು ಕಟ್ಟುವುದರಲ್ಲಿ ತಡ ಮಾಡಿದ್ದೀರಿ ಬೇರೆ ಕಡೆಗೆ ಹೋಗುವುದಕ್ಕೆ ಒಪ್ಪುತ್ತಾ ಇಲ್ಲ, ನಿಮಗೆ ಕೊಟ್ಟಿರುವ ಸೈಟನ್ನು ಕ್ಯಾನ್ಸಲ್ ಮಾಡಿದ್ದೇವೆ. ಅಂತ

ಅವರೇ ವರದಿ ಕೊಟ್ಟು ಬಿಡುವುದು ಏನಿದೆ ಇದು ಸರಿಯಲ್ಲ. ಸರ್ಕಾರ ನೇರವಾಗಿ ಏನು ಮಾಡುತ್ತಾರೆಂಬುದನ್ನು ಹೇಳಲಿ ಇಲ್ಲಿ ಸತ್ಯಕ್ಕೆ ದೂರವಾದ ಸಂಗತಿಯನ್ನು ಹೇಳುವಂತಹ ಅವಶ್ಯಕತೆ ಇಲ್ಲ. ಅಲ್ಲೇ ಇರಿಸುವುದಾದರೆ ಇರಿಸುತ್ತೇನೆ ಅಂತ ಹೇಳಿ. ಬಿಡಿಸುವುದಾದರೆ ಎಲ್ಲರನ್ನೂ ಬಿಡಿಸಿ ಬೆಂಕಿ ಹಾಕುವುದಿಲ್ಲ ಅಂತ ಹೇಳಿ. ಅವರನ್ನು ಅಲ್ಲಿಂದ ಗೌರವದಿಂದ ತೆಗೆಸುದಕ್ಕಾದರೂ ನೋಡಿ. ಸುಮ್ಮನೆ ಬೆಂಕಿ ಹಾಕಿ ಪರೋಕ್ಷವಾಗಿ ಸ್ಥಳ ಬಿಡಿಸತಕ್ಕಂತಹ ವ್ಯವಹಾರ ಮಾಡುವುದು ಬೇಡ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಮಾನ್ಯ ಸಭಾಧ್ಯಕ್ಷರೆ ಅಲ್ಲಿ ಸೆಂಟ್ ಮೇರಿಸ್ ಚರ್ಚೆ ಇದೆ.ಅಲ್ಲಿ ಒಂದು ಮಾಸ್ಕ ಇದೆ ಹಾಗೂ ಸುಬ್ರಮ್ಮಣ್ಯ ಮಾರಿಯಪ್ಪ ದೇವಸ್ಥಾನವಿದೆ. ಹೀಗೆ ಅಲ್ಲಿ ಈ ಮೂರು ದೇವಸ್ಥಾನಗಳಿವೆ. ಇವುಗಳನ್ನು ಸಹ ಒಡೆಯುತ್ತಾರೆಂದು ಅಲ್ಲಿರತಕ್ಕ ಎಲ್ಲ ಜನರು ನನ್ನ ಹತ್ತಿರ ಬಂದಿದ್ದರು ಇವತ್ತು ಒಡೆಯುತ್ತಾರೆ, ಅಥವಾ ನಾಳೆ ಒಡೆಯುವವರು ಇದ್ದಾರೆ. ದೇವಸ್ಥಾನಗಳನ್ನು ಚರ್ಚನ್ನು ಮತ್ತು ಮಾಸ್ಕನ್ನ ರಕ್ಷಣೆ ಮಾಡಿ ಮೇಡಂ ಅಂತ ನನ್ನ ಹತ್ತಿರ ಬಂದಿದ್ದರು ಇಂಥ ವಿಚಾರಗಳನ್ನು ತಮ್ಮ ಮುಖಾಂತರವಲ್ಲದೆ ಇನ್ಯಾರ ಮುಖಾಂತರ ಕೇಳಬೇಕು? ದಯವಿಟ್ಟು ಹೇಳಬೇಕು. ಇಲ್ಲಿ ಏನಾಗಿದೆ ಅಂದರೆ ಸನ್ಮಾನ್ಯ ಗೃಹ ಸಚಿವರಿಗೆ ತಿಳಿಸುವುದು ಅಂದರೆ, ಇಲ್ಲಿ ಒಂದು ಆರ್ಗನೈ ಜೇಷನ್ ಇದೆ. ತಿರುಪತ್ತೂರಿಂದ ಬಂದಿದ್ದಾರೆ. ತಿರುಪತ್ತೂರಿಂದ ಬಂದು ಶ್ರೀಮತಿ ಅನಿತಾ ರೆಡ್ಡಿ, ಮತ್ತು ಇನ್ನೊಬ್ಬರು ವೆಂಕಟಸ್ವಾಮಿ ಎಂಬುವರು ದಲಿತ ಸಂಘ ಅಂತ ಹೆಸರನ್ನು ಇಟ್ಟು ಅಲ್ಲಿಂದ ಜನರನ್ನು ಕರೆದುಕೊಂಡು ಬಂದು ಅಲ್ಲಿ ಸ್ಲಮ್‌ಗಳನ್ನು ಹಾಕಿಕೊಂಡಿದ್ದಾರೆ. ಅವರುಗಳಿಗೆ ಸ್ಲಮ್‌ಗಳನ್ನು ಕೊಡಿಸುವುದಕ್ಕೋಸ್ಕರ ಈ ವ್ಯವಸ್ಥೆ ಮಾಡಿಕೊಂಡಿದ್ದಾರೆ. ಅವರು ಸುಡುತ್ತಾ ಇದ್ದಾರೆ. ಅವರ ಮೇಲೆ 3 ದಿವಸಕ್ಕೆ ಮುಂಚೆ ಕಂಪ್ಲೇಂಟ್ ಕೊಟ್ಟಿದ್ದಾರೆ, ಅವರನ್ನು ಹಿಡಿದಿಲ್ಲ. ಆದರೆ ಪೋಲೀಸ್‌ನವರು ಯಾರು ಕಂಪ್ಲೇಟ್ ಕೊಟ್ಟರೋ ಅವರನ್ನೇ ಹಿಡಿದುಕೊಂಡು ಹೋಗಿದ್ದಾರೆ. ಅದಕ್ಕೋಸ್ಕರ ದಯವಿಟ್ಟು ಕ್ರಮ ತೆಗೆದುಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಪಿ.ಜಿ.ಆರ್. ಸಿಂಧ್ಯ (ಗೃಹ ಸಚಿವರು) : ದಿನಾಂಕ 31-3-95ರಂದು ರಾತ್ರಿ 8-30 ಗಂಟೆಗೆ ಎ.ಎಸ್.ಐ. ಎಂ.ಕೆ. ಲಿಂಗಯ್ಯ ಹೆಡ್‌ಕಾನ್ಸ್‌ಟೇಬಲ್ ಪೋಲಿ ಸೆಟ್ಟರ್, ಪೇದೆ, ಹೆಚ್.ಆರ್. ಹನುಮಂತಪ್ಪ ಇವರುಗಳು, ಅಲ್ಲಿಯ ಸ್ವಯಂ ಸೇವಕರುಗಳ ಜೊತೆ ಈಜಿಪುರ ಇಂದಿರಾನಗರ ಗುಡಿಸಲುಗಳ ಈಶಾನ್ಯ ಮೂಲೆಯಲ್ಲಿ ಬೆಂಕಿ ಕಾಣಿಸಿಕೊಂಡಿತು. ಪೋಲೀಸ್‌ನವರು ಅದನ್ನು ಆರಿಸುವುದಕ್ಕೆ ಪ್ರಯತ್ನ ಮೂಡಿದರು. ಆ ಗುಡಿಸಲುಗಳ ಪಶ್ಚಿಮ ದಿಕ್ಕಿನಲ್ಲಿ ಬೆಂಕಿ ಕಾಣಿಸಿಕೊಂಡಿತು. ಜೋರಾಗಿ ಗಾಳಿ ಬೀಸುತ್ತಿದ್ದ ಕಾರಣ ಗುಡಿಸಲುಗಳಿಗೆ ಹಾಗೂ ಪಕ್ಕದಲ್ಲಿ ಬೆಳೆದಿದ್ದ ತೆಂಗಿನ ಮರಗಳಿಗೆ ಬೆಂಕಿ ಹತ್ತಿಕೊಂಡು, ಬೆಂಕಿಯಲ್ಲಿ ಸುಮಾರು 300 ಗುಡಿಸಲುಗಳು ಸುಟ್ಟು ಹೋದವು. ಬೆಂಕಿಯನ್ನು ಆರಿಸಲು ತಕ್ಷಣ ಸ್ಥಳೀಯ ಪೋಲೀಸರು, ಅಗ್ನಿ ಶಾಮಕ ದಳಕ್ಕೆ ತಿಳಿಸಿ ಸುಮಾರು 12 ಅಗ್ನಿಶಾಮಕ ವಾಹನಗಳು ಧಾವಿಸಿ ಬಂದು ಬೆಂಕಿಯನ್ನು ಆರಿಸುವ ಪ್ರಯತ್ನವನ್ನು ಮಾಡಲಾಯಿತು. ಆದರೆ ಈ ದುರ್ಘಟನೆಯಲ್ಲಿ ಯಾರಿಗೂ ಪ್ರಾಣ ಹಾನಿ ಯಾಗಲಿ ಅಥವಾ ಗಾಯಗಳಾಗಲಿ ಆಗಿರುವುದಿಲ್ಲ. ಈ ದುರ್ಘಟನೆಯಿಂದ ಸುಮಾರು 1 ಲಕ್ಷದ 50 ಸಾವಿರ ರೂಪಾಯಿಗಳು ನಷ್ಟವಾಗಿದೆ ಎಂದು ಅಂದಾಜು ಮಾಡಲಾಗಿದೆ. ಈ ಗುಡಿಸಲುಗಳು ತೆಂಗಿನ ಮತ್ತು ಈಚಲ ಗರಿಗಳಿಂದ ಕಟ್ಟಲ್ಪಟ್ಟಿದ್ದವು. ಈ ಘಟನೆಗೆ ಸಂಬಂಧಸಿದಂತೆ ಅಲ್ಲಿಯ ಗುಡಿಸಲು ನಿವಾಸಿಗಳಾದ ಸಂಪತ್, ತಮಿಳು ಮಣಿ, ಎಸ್.ರಮೇಶ್ ರಾಜನ್, ಭೀಮಣ್ಣ, ಪಾತಿಯನ್, ಪಾತಿಯಮ್ಮಾಳ್, ಅಂಜನ್, ಕೆ.ಬಿ. ಮಣಿ, ಎಂಬುವವರು ಸಹಿ ಮಾಡಿ ರಾತ್ರಿ ಸುಮಾರು 11-55 ಗಂಟೆ ಸಮಯದಲ್ಲಿ ವಿವೇಕನಗರ ಪೋಲೀಸ್ ಠಾಣೆಗೆ

ಬಂದು ಒಂದು ದೂರನ್ನು ನೀಡಿದ್ದು, ಅದನ್ನು ದಾಖಲು ಮಾಡಿಕೊಳ್ಳಲಾಗಿದೆ. ಈ ಸ್ಥಳಕ್ಕೆ ಬೆಂಗಳೂರು ನಗರ ಜಿಲ್ಲಾಧಿಕಾರಿಯವರು ಪೋಲೀಸ್ ಆಯುಕ್ತರ ಜೊತೆ ರಾತ್ರಿ 10-00 ಗಂಟೆಗೆ ಭೇಟಿ ನೀಡಿ ಬೆಂಕಿ ಆರುಸುವ ಕ್ರಮದ ಉಸ್ತುವಾರಿಯನ್ನು ವಹಿಸಿದ್ದರು. ಈ ಕೆಳಕಂಡಂತೆ ಪರಿಹಾರ ಕ್ರಮಗಳನ್ನು ಕೈಗೊಳ್ಳಲಾಗಿದೆ. 1.4.95 ಮತ್ತು 2.4.95 ರಂದು ಆಹಾರದ ಪ್ಯಾಕೆಟ್‌ಗಳನ್ನು ಹಂಚಲಾಗಿದೆ. ಈಗ ಇರುವ ಟಿನ್‌ಷೀಟ್ ಶೆಡ್ಡಿನ ಜೊತೆಗೆ ಇನ್ನೊಂದು ಶಾಮಿಯಾನವನ್ನು ಹಾಕಲಾಗಿದೆ. ಮತ್ತೊಂದು ತಾತ್ಕಾಲಿಕ ಟಿನ್‌ಷೆಡ್‌ನ್ನು ಕಟ್ಟಲು ಕ್ರಮ ತೆಗೆದುಕೊಳ್ಳಲಾಗಿದೆ. ಈ ಪ್ರದೇಶದಲ್ಲಿ ತುಂಬಾ ನೀರು ಬರುತ್ತಿರುವ ಕೊಳವೆ ಬಾವಿ ಇದ್ದು ಕುಡಿಯುವ ನೀರಿಗೆ ಯಾವ ತೊಂದರೆಯೂ ಆಗಿಲ್ಲ.

ನಿಯಮಾವಳಿ ಪ್ರಕಾರ ಪರಿಹಾರವನ್ನು ಒದಗಿಸಲು ಕ್ರಮ ಕೈಗೊಳ್ಳಲಾಗಿದೆ. ಈ ಕೆಳಕಂಡ 17 ಜನ ಆರೋಪಿಗಳನ್ನು ದಸ್ತಗಿರಿ ಮಾಡಲಾಗಿದೆ. ಇವರುಗಳನ್ನು 1.4.95ರಂದು ಮಾನ್ಯ 10ನೇ ಅಪರ ಮುಖ್ಯ ನ್ಯಾಯಾಲಯದ ದಂಡಾಧಿಕಾರಿಗಳ ಮುಂದೆ ಹಾಜರುಪಡಿಸಿದ್ದು, ನ್ಯಾಯಾಧೀಶರು ಆರೋಪಿಗಳನ್ನು 3-4-95ರವರೆಗೆ ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿರುತ್ತಾರೆ. ತಲೆಮರೆಸಿಕೊಂಡಿರುವ ಆರೋಪಿಗಳಾದ ಡ್ಯಾನಿಯಲ್ ಹಾಗೂ ಇತರೆ ಆರೋಪಿಗಳ ಪತ್ತೆಗಾಗಿ ತನಿಖೆ ಕಾರ್ಯ ಮುಂದುವರಿದಿದೆ. ಮೂರನೆ ದಿವಸ ನಾನು ಅಲ್ಲಿಗೆ ಭೇಟಿ ನೀಡಿದ್ದೆ. ಅಲ್ಲಿ ಕೈಗೊಂಡಿರುವ ಪರಿಹಾರದ ಕಾರ್ಯಕ್ರಮಗಳನ್ನು ವೀಕ್ಷಿಸಿದ್ದೇನೆ. ಪರಿಸ್ಥಿತಿ ಈಗ ಶಾಂತವಾಗಿದೆ. 31ನೇ ತಾರೀಖು ಈ ಘಟನೆಯಾದ ಮೇಲೆ ತಕ್ಷಣ ನನಗೆ ಪೋಲೀಸ್ ಆಯುಕ್ತರು ಈ ವಿಚಾರವನ್ನು ನನ್ನ ಗಮನಕ್ಕೆ ತಂದರು. ಬೆಂಗಳೂರು ನಗರ ಪೋಲೀಸ್‌ಕಮೀಷನರ್ ರವರು, ರಾತ್ರಿ ಸುಮಾರು 10-30 ಗಂಟೆ ಸಮಯದಲ್ಲಿ ಮೂರನೆಯ ದಿವಸ ಯುಗಾದಿ ಹಬ್ಬ. ಆದರೂ ಸಹ ನಾನು ಸ್ವತಃ ಹೋಗಿ ಅವರಿಗೆ ಊಟ ಕೊಡುವುದಕ್ಕೆ ಶಾಮಿಯಾನ ಹಾಕಿಸಲಿಕ್ಕೆ, ಆರೋಗ್ಯ ತಪಾಸಣೆ ಮಾಡಿಸಲಿಕ್ಕೆ, ಎಲ್ಲದಕ್ಕೂ ವ್ಯವಸ್ಥೆ ಮಾಡಿರತಕ್ಕಂತಹದ್ದನ್ನು ಮಾನ್ಯ ಶ್ರೀನಿವಾಸ್‌ರವರು ಸಹ ಭೇಟಿಯನ್ನು ಕೊಟ್ಟಿದ್ದರು. ಅವರು ನೋಡಿದ್ದಾರೆ. ಒಂದೆರಡು ವಿಚಾರಗಳನ್ನು ಮಾನ್ಯ ಶ್ರೀನಿವಾಸ್‌ರವರು,

ಮಾನ್ಯ ನಂಜೇಗೌಡರು ಹಾಗೂ ಶ್ರೀಮತಿ ಪ್ರಮೀಳರವರು ಏನು ಪ್ರಸ್ತಾಪ ಮಾಡಿದ್ದಾರೆ, ಅದಕ್ಕೆ ಸ್ಪಷ್ಟವಾದ ಉತ್ತರವನ್ನು ತಮ್ಮ ಮೂಲಕ ಕೊಡುವುದಕ್ಕೆ ಬಯಸುತ್ತೇನೆ. ಮೊದಲನೆಯದಾಗಿ ಯಾವುದೇ ಕಾರಣದಿಂದ ಸಹಿತ ಅಲ್ಲಿರತಕ್ಕ ಕೊಳಚೆ ನಿವಾಸಿಗಳನ್ನು ಬೇರೆ ಕಡೆಗೆ ಸ್ಥಳಾಂತರವನ್ನು ಮೂಡುವುದಿಲ್ಲ. ಇದು ಸರ್ಕಾರದ ಧೃಡವಾದ, ಅಚಲವಾದ ನಿರ್ಧಾರ. ಗುರುತಿನ ಚೀಟಿಯನ್ನು ಮಾನ್ಯ ಡೈಪುಟಿ ಕಮೀಷನರ್‌ರವರು ಹಂಚಿರುವುದಕ್ಕೆ ಕಾರಣ, ಬೇರೆಯವರು ಸಹಿತ ಅಲ್ಲಿಗೆ ಬಂದು ನನ್ನ ಮನೆಯೂ ಸುಟ್ಟು ಹೋಯಿತು ಅಂತ ಹೇಳಿ ಹೇಳಬಾರದು ಅನ್ನುವ ಒಂದೇ ಕಾರಣಕ್ಕೋಸ್ಕರ ಗುರುತಿನ ಚೀಟಿಗಳನ್ನು ಅಲ್ಲಿರತಕ್ಕಂತಹವರು ಯಾರು ಎಂಬುದನ್ನು ತಿಳಿದು ಕೊಳ್ಳುವುದಕ್ಕೆ ಡೈಪುಟಿ ಕಮೀಷನರ್‌ರವರು ಕೊಟ್ಟಿರತಕ್ಕಂತಹದ್ದು ಮಾನ್ಯ ಶ್ರೀನಿವಾಷ್‌ರವರಿಗೆ ನಾನು ಭರವಸೆ ಕೊಡುತ್ತಿದ್ದೇನೆ. ಯಾವುದೇ ಕಾರಣದಿಂದಲೂ ಸಹಿತ ಗೂಂಡಾಗಳ ಕಾಟದಿಂದ ರಕ್ಷಣೆಯನ್ನು ಕೊಡತಕ್ಕಂಥ ವಿಚಾರದಲ್ಲಿ ಈ ಸರ್ಕಾರ ಹಿಂದೆ ಬೀಳುವುದಿಲ್ಲ.ಎಲ್ಲ ರೀತಿಯ ಪ್ರಯತ್ನವನ್ನೂ ಸಹ ನಾವು ಮಾಡುತ್ತೇವೆ. ಮಾನ್ಯ ನಂಜೇಗೌಡರು ಏನು ಹೇಳಿದ್ದಾರೆ ಅಂದರೆ ಮುಖ್ಯಮಂತ್ರಿಗಳು, ಅವತ್ತಿನ ದಿವಸ ಸದನದಲ್ಲಿ ಏನು ಭರವಸೆಯನ್ನು ಕೊಟ್ಟಿದ್ದಾರೆ, ಮಾತನ್ನು ಕೊಟ್ಟಿದ್ದಾರೆ, ಅವರಿಗೆ ಅದೇ ಜಾಗದಲ್ಲಿ ಮನೆಗಳನ್ನು ಕಟ್ಟಿಕೊಡತಕ್ಕಂತಹ ವಿಚಾರದಲ್ಲಿ ನಾನು ಮತ್ತೊಮ್ಮೆ ಅದನ್ನೇ ಪುನರಾವರ್ತನೆ ಮಾಡುತ್ತಿದ್ದೇನೆ. ಯಾವುದೇ ಕಾರಣದಿಂದ ಸಹಿತ ಅದೇ ಜಾಗದಲ್ಲಿ ಅವರಿಗೆ ಮನೆಗಳನ್ನು ಕಟ್ಟಿ ಕೊಡುತ್ತೇವೆ. ಉಳಿದ ಗುಡಿಸಲುಗಳಿಗೆ

ಬೆಂಕಿ ಹಾಕಿರತಕ್ಕ ವಿಚಾರ ಏನು ಇದೆ, 3ದೇವಸ್ಥಾನಗಳನ್ನು ಸುಟ್ಟು ಹಾಕತಕ್ಕ ವಿಚಾರ ಏನು ಇದೆ, ಕಿತ್ತು ಹಾಕತಕ್ಕಂತಹ ವಿಚಾರ ಏನು ಇದೆ, ಈ ಬಗ್ಗೆ ನಾನೇ ಬೇಕಾದರೆ ಅಧಿವೇಶನದ ನಂತರ ಹೋಗಿಬರುತ್ತೇನೆ.

ಏಕೆಂದರೆ ಅಲ್ಲಿರತಕ್ಕ ಎಲ್ಲ ಪರಿಸ್ಥಿತಿ ನನಗೆ ಗೊತ್ತಿದೆ. ನಾನು ಅಲ್ಲಿಗೆ ಹೋದಂತಹ ಸಂದರ್ಭದಲ್ಲಿ ಅಲ್ಲಿರತಕ್ಕ ಗುಡಿಸಲು ನಿವಾಸಿಗಳಿಗೆ ಕೆಲವು ಭರವಸೆಯನ್ನು ಮುಖ್ಯಮಂತ್ರಿಗಳ ಪರವಾಗಿ ಕೊಟ್ಟಿದ್ದೇನೆ. ನಾನು ಬರುತ್ತೇನೆ ಎನ್ನತಕ್ಕಂತಹ ಭರವಸೆಯನ್ನು ಕೊಟ್ಟಿದ್ದೇವೆ. ಇವರು ಹೇಳಿರತಕ್ಕ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಯಾವುದೇ ಧಾರ್ಮಿಕ ಮನೋಭಾವನೆಗಳಿಗೆ ಧಕ್ಕೆ ಬರದೆ ಇರುವ ರೀತಿಯಲ್ಲಿ ರಕ್ಷಣೆ ಕೊಡುವಂಥ ಕಲಸವನ್ನು ಮಾಡುತ್ತೇನೆ. ಕೊನೆಯದಾಗಿ, ಕೆಲವು ಸಮಾಜಘಾತಕ ಶಕ್ತಿಗಳು, ಮತ್ತು ಕೆಲವು ಜನ ಈ ಗುಡಿಸಲುಗಳಿಗೆ ಬೆಂಕಿ ಹಾಕತಕ್ಕಂತಹ ಪ್ರಯತ್ನವನ್ನು ಮಾಡುತ್ತಿರತಕ್ಕಂಥದ್ದುನಿಜ.

ಅವತ್ತೂ ಈ ಮಾತನ್ನು ಹೇಳಿದ್ದೇನೆ. ಮಾನ್ಯ ಪೋಲೀಸ್ ಕಮೀಷನರ್ ರವರು ಮತ್ತು ನಮ್ಮ ಸರ್ಕಾರ ಘಟನೆಯಾದ 20 ನಿಮಿಷದ ಒಳಗಡೆ ಅಲ್ಲಿಗೆ ಹೋಗಿದ್ದಾರೆ. ಸ್ವತಃ ಅವರೇ. ಕೆಲವರ ಬಾಯಲ್ಲಿ ಸೀಮೆಎಣ್ಣೆ, ಪೆಟ್ರೋಲ್ ಇದ್ದದ್ದು, ಕೈಯಲ್ಲಾ ಪೆಟ್ರೋಲ್ ಆಗಿದ್ದುದು ಅವರೇ ಅಲ್ಲೊಂದು ಗುಡಿಸಲಿಗೆ ಬೆಂಕಿ ಹಾಕಿ ಕೊಂಡಿರತಕ್ಕಂತಹದ್ದು, ಇದನ್ನೆಲ್ಲಾ ಸಹಿತ ನೋಡಿದ್ದಾರೆ. ದಸ್ತಗಿರಿ ಮಾಡಿದ್ದಾರೆ. ಕೆಲವರು ತಲೆತಪ್ಪಿಸಿಕೊಂಡು ಹೋಗಿದ್ದಾರೆ. ಇಂತಹ ಜನಗಳನ್ನು ಗೂಂಡಾ ಆಕ್ಟ್ ಒಳಗಡೆ ಅರೆಸ್ಟ್ ಮಾಡಬೇಕೆಂಬ ಉದ್ದೇಶ ನಮ್ಮ ಪೋಲೀಸ್ ಕಮೀಷನರ್ ರವರಿಗೆ ಇದೆ. ಅವರಿಗೆ ಸಂಪೂರ್ಣವಾದ ಸ್ವಾತಂತ್ರವನ್ನು ಕೊಟ್ಟಿದ್ದೇವೆ. ಅಲ್ಲಿರತಕ್ಕ ಜನಗಳಿಗೆ ರಕ್ಷಣೆ ಕೊಡತಕ್ಕಂತಹದ್ದು, ಅದರ ಜೊತೆಗೆ ಗೂಂಡಾಗಳಿಂದ ಯಾವುದೇ ರೀತಿಯ ಚಟುವಟಿಕೆಗಳು ಅಲ್ಲಿ ಆಗದೇ ಇರುವ ರೀತಿಯಲ್ಲಿ ಕ್ರಮ ತೆಗೆದುಕೊಳ್ಳುತ್ತೇವೆ. ಶ್ರೀಮತಿ ಪ್ರಮೀಳರವರು ಯಾವುದೋ ಒಂದು ಸಂಘಟನೆಯ ಬಗ್ಗೆ ಹೇಳಿದ್ದಾರೆ. ಬಹಳಷ್ಟು ಸಂಘಟನೆಗಳು ಒಳ್ಳೆಯ ಕೆಲಸವನ್ನು ಮಾಡುತ್ತಿವೆ. ಕೆಲವರು ಸಂಘಟನೆಯ ಹೆಸರಿನಲ್ಲಿ ದುರುಪಯೋಗ ಸಹ ಮಾಡಿಕೊಳ್ಳುತ್ತಿರಬಹುದು. ಅಂತಹವರಿಗೆ ಈ ಸರ್ಕಾರ ಯಾವುದೇ ಪುರಸ್ಕಾರವನ್ನು ಕೊಡುವುದಿಲ್ಲ ಗುಡಿಸಲು ನಿವಾಸಿಗಳು ಯಾರು ಇದ್ದಾರೆ, ಅವರ ರಕ್ಷಣೆ ವಿಚಾರದಲ್ಲಿ ರಾಜಕೀಯವನ್ನು ಬೆರಸದೆ,ನಾವು ಅವರ ರಕ್ಷಣೆಗೆ ಬರುತ್ತೇವೆ ಎನ್ನತಕ್ಕಮಾತನ್ನು ಮತ್ತೊಮ್ಮೆ ತಮ್ಮ ಮೂಲಕ ಹೇಳುತ್ತೇನೆ.

**ವಿಧಾನ ಸೌಧದ ಸುತ್ತ ಮತ್ತ ಆಟೋರಿಕ್ಷಾಗಳ ಓಡಾಟಕ್ಕೆ ನಿರ್ಭಂದನೆಯನ್ನು ಹಾಕಬೇಕೆಂದು ಟ್ರಾಫಿಕ್ ಪೋಲೀಸ್‌ನವರು ಸರ್ಕಾರಕ್ಕೆ ಸಲಹೆ ನೀಡಿರುವ ಬಗ್ಗೆ**

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಮಾನ್ಯ ಅಧ್ಯಕ್ಷರೆ, ಮಾರ್ಚ್ 12ನೇ ತಾರೀಖು ಒಂದು ಸುದ್ದಿ ಇದೆ. ವಿಧಾನ ಸೌಧದ ಸುತ್ತಲೂ 3 ಕಿ.ಮೀ ಆಸುಪಾಸಿನಲ್ಲಿ ಆಟೋರಿಕ್ಷಾಗಳು ಓಡಾಡಬಾರದು ಎನ್ನುವ ಒಂದು ತೀರ್ಮಾನವನ್ನು ತೆಗೆದುಕೊಂಡು ಟ್ರಾಫಿಕ್ ಪೋಲಿಸರು ಸರ್ಕಾರಕ್ಕೆ ಒಂದು ವರದಿಯನ್ನು ಸಲ್ಲಿಸಿದ್ದಾರೆ. ಆ ವರದಿಯನ್ನು ಸರ್ಕಾರ ಒಪ್ಪಿಕೊಂಡಿದೆ ಎನ್ನತಕ್ಕ ಸುದ್ಧಿ ಇದೆ. ಆ ಸುದ್ಧಿ ನಿಜ ಆದರೆ ಬೆಂಗಳೂರಿಗೆ ಬರತಕ್ಕ ನಾಗರಿಕರಿಗೆ ತೊಂದರೆಯಾಗುತ್ತದೆ. ಅದು ಆಗಬಾರದು. ಈಗ ಪರಿಸ್ಥಿತಿ ಏನಾಗಿದೆ ಎಂಬುದನ್ನು ಸರ್ಕಾರ ಹೇಳಬೇಕಾಗುತ್ತದೆ. ಇದರ ಬಗ್ಗೆ ಸರ್ಕಾರ ಏನು ತೀರ್ಮಾನ ತೆಗೆದುಕೊಂಡಿದೆ?

ಶ್ರೀ ಬಿ.ಎಸ್. ಯಡಿಯೂರಪ್ಪ (ವಿರೋಧ ಪಕ್ಷದ ನಾಯಕರು) : ಮಾನ್ಯ ಅಧ್ಯಕ್ಷರೆ, ಈಗ ಬಂದಿರುವ ವರದಿ ಪ್ರಾಕಾರ ಇಂಡಿಯನ್ ಎಕ್ಸ್‌ಪ್ರೆಸ್‌ನಲ್ಲಿ ದಿನಾಂಕ:

12-3-95ರಲ್ಲಿ ಬಂದಿರುವ ವರದಿ ಪ್ರಕಾರ ಮಾನ್ಯ ಸದಸ್ಯರು ಹೇಳಿದಂತೆ ಇವತ್ತು ನಗರ ಸಂಚಾರಿ ಪೋಲಿಸರು ತಮ್ಮ ಉನ್ನತ ಮಟ್ಟದ ಒಂದು ಸಭೆಯಲ್ಲಿ ಈ ವರದಿಯನ್ನು ಕೊಟ್ಟಿದ್ದಾರೆ. ವಿಧಾನ ಸೌಧದ ಸುತ್ತಮುತ್ತಲು 3 ಕಿ.ಮೀ. ಆಸುಪಾಸಿನಲ್ಲಿ ಆಟೋರಿಕ್ಷಾಗಳು ಓಡಾಡಿದರೆ ತೊಂದರೆಯಾಗುತ್ತದೆಂದು ಹೇಳಿದ್ದಾರೆ. ಒಬ್ಬರು ಶಾಸಕರನ್ನು ನೋಡಬೇಕೆಂದು ಹೊರಗಡೆಯಿಂದ ಬರುವಂತಹ ಜನ 3 ಕಿ.ಮೀ. ಸುತ್ತಮುತ್ತ ಶಾಸ ಪ್ರತಿನಿಧಿಯನ್ನು ನೋಡುವುದಕ್ಕೆ ಇಂತಹ ಪರಿಸ್ಥಿತಿ ಬರುತ್ತದೆ. ಅದಕ್ಕೋಸ್ಕರ ನಾನು ಸರ್ಕಾರವನ್ನು ಒತ್ತಾಯಿಸುವುದೇನೆಂದರೆ, ಇದರಿಂದ ಸಾಮಾನ್ಯ ಜನರಿಗೆ ಕೆಟ್ಟ ಪರಿಣಾಮವಾಗುತ್ತದೆ. ಎರಡನೆಯದು ತಮಗೆ ಈಗಾಗಲೇ ಗೊತ್ತಿರುವಹಾಗೆ ಆಟೋರಿಕ್ಷಾಗಳ ಮೇಲೆ ಲೈಫ್ ಟ್ಯಾಕ್ಸ್ ಎಂದು 1500-1800 ರೂಪಾಯಿಗಳನ್ನು ಹಾಕುವುದಕ್ಕೆ ಹೊರಟಿದ್ದೀರಿ. ಆದು ಬೇರೆಯಾದರೂ ಸಹ ಇವತ್ತು ವಿದ್ಯಾವಂತ ಯುವಕರು ಜೀವನ ಮಾಡುವುದಕ್ಕೆ ಸಾಲ ಪಡೆದು ಆಟೋರಿಕ್ಷಾ ತೆಗೆದು ಕೊಂಡಿದ್ದಾರೆ. ಇದು ಸಹಜವಾಗಿ ಪ್ರಯಾಣಿಕರ ಮೇಲೆ ಭಾರ ಬೀಳುತ್ತದೆ. ಆಕಸ್ಮಾತ್ ವಿಶೇಷವಾಗಿ ಹಾ ತೀರ್ಮಾನ ತೆಗೆದುಕೊಳ್ಳಬೇಕೆಂದು ಇದ್ದರೆ ವಿರೋಧಪಕ್ಷದ ಮುಖಂಡರನ್ನು ಕರೆದು ಪೋಲೀಸ್ ಅಧಿಕಾರಿಗಳಿಂದ ನಿಮಗೆ ಏನು ವರದಿಬಂದಿದೆ. ಅದನ್ನು ತಿಳಿಸಿ ಚರ್ಚೆ ಮಾಡೋಣ ಆದ್ದರಿಂದ ದಯಮಾಡಿ ಅದನ್ನು ಕಾರ್ಯರೂಪಕ್ಕೆ ತರಬೇಡಿ. ವಿಧಾನ ಸೌಧದ 3 ಕಿ.ಮೀ. ಓಡಾಡಬಾರದು ಎನ್ನುವ ತೀರ್ಮಾನ ತೆಗೆದುಕೊಂಡಿರುವುದು ಏನಿದೆ ಅದಕ್ಕೆ ಆಟೋರಿಕ್ಷಾ ಇಲ್ಲಿ ಪತ್ರ ಕೊಟ್ಟಿದ್ದಾರೆ. ಅವರು ಸತ್ಯಾಗ್ರ ಮಾಡುವುದಕ್ಕೆ ಹೊರಟಿದ್ದಾರೆ. ಆದಕ್ಕೆ ಅವಕಾಶ ಕೊಡದೆ ದಯಮಾಡಿ ಸರ್ಕಾ ಸ್ಪಷ್ಟವಾದ ನಿಲುವು ತೆಗೆದುಕೊಳ್ಳಬೇಕು. ಸಾರ್ವಜನಿಕ ಸಮಸ್ಯೆ ಆಗಿದೆ. ಆಟೋರಿಕ ಚಾಲಕರ ಪ್ರಶ್ನೆ ಇಲ್ಲಿ ಅಡಗಿದೆ. ಲೈಫ್ ಟ್ಯಾಕ್ಸ್ ಹಾಕುವ ಬಗ್ಗ ಮರು ಪರಿಶೀಲ ಮಾಡಬೇಕೆಂದು ಇದರ ಬಗ್ಗೆ ಯೋಜನೆ ಮಾಡಬೇಕೆಂದು ನಾನು ಸರ್ಕಾರದವರ ಒತ್ತಾಯ ಮಾಡುತ್ತೇನೆ.

ಶ್ರೀ ಪಿ.ಜಿ.ಆರ್. ಸಿಂಧ್ಯ : (ಗೃಹ ಸಚಿವರು) ಮಾನ್ಯ ಅಧ್ಯಕ್ಷರೆ, ಆಟೋರಿಕ್ಷಾಗಳನ ವಿಧಾನ ಸೌಧದ 3 ಕಿ. ಮಿ. ಒಳಗಡೆ ಪ್ರವೇಶಕ್ಕೆ ಬಿಡುವುದಿಲ್ಲವೆನ್ನುವವರದಿಯ ಎಳ್ಳಷ್ಟು ಸತ್ಯಾಂಶವಿಲ್ಲ. ಯಾರೋ ಈ ಸುದ್ದಿಯನ್ನು ಹಬ್ಬಿಸುತ್ತಾರೆ. ನಾನು ವಿಚಾರ ಮಾಡುವುದಕ್ಕೆ ಪೋಲೀಸ್ ಅಧಿಕಾರಿಗಳಿಗೆ ಹೇಳಿದ್ದೇನೆ. ಪತ್ರಿಕೆಗಳಲ್ಲಿ 2-3 ಸಾ ವರದಿಯಾಗಿದೆ. ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. ಯಾವುದೇ ಕಾರಣದಿಂದಲ ಆಟೋರಿಕ್ಷಾಗಳನ್ನು ಈ ರೀತಿ ಬ್ಯಾನ್ ಮಾಡತಕ್ಕ ವಿಚಾರ ಸರ್ಕಾರದಮುಂ ಇಲ್ಲ. ಸುಮಾರು ಒಂದು ತಿಂಗಳ ಹಿಂದೆ ಬೆಂಗಳೂರಿನ ಟ್ರಾಫಿಕ್ ಇಂಪ್ರೂ ಮಾಡುವ ದೃಷ್ಟಿಯಿಂದ ನಾವು ಉನ್ನತ ಅಧಿಕಾರಿಗಳ ಒಂದು ಸಭೆಯನ್ನು ಸ್ವತ ನಾನೇ ಕರೆದಿದ್ದೇನೆ. ಬಿಡಬ್ಲ್ಯು ಎಸ್‌ಎಸ್‌ಬಿ, ಬಿಸಿಸಿ, ಬಿಡಿಎ, ಕೆಇಬಿ,ಯ ಎ ಅಧಿಕಾರಿಗಳ ಸಭೆಯನ್ನು ಕರೆದು ನಾನು ವಿವರವಾಗಿ ಚರ್ಚೆ ಮಾಡಿದ್ದೇನೆ. ಅಲ ಸಹ ಈ ವಿಚಾರ ಪ್ರಸ್ತಾಪವಾಗಲಿಲ್ಲ. ಆದ್ದರಿಂದ ಈ ಸುದ್ದಿಗೆ ಯಾವುದೇ ತರಹ ಸತ್ಯಾಂಶ ಇದರಲ್ಲಿ ಇಲ್ಲ. ಈ ರೀತಿಯ ವಿಚಾರ ಸಹ ಸರ್ಕಾರದ ಮುಂ ಇಲ್ಲ. ಆಟೋರಿಕ್ಷಾ ಡ್ರೈವರ್‌ಗಳ ಬಗ್ಗೆ ಸರ್ಕಾರಕ್ಕೆ ಅನುಕಂಪ ಇದೆ. ಅವ ಜೀವನ ಅವತ್ತೆ ಮಾಡುತ್ತಾರೆ. ಶಾಸಕರನ್ನು ನೋಡಲು ವಿಧಾನ ಸೌಧಕ್ಕೆ ಬರತಕ್ಕ ಜನರಿಗೆ ಆಟೋರಿಕ್ಷಾದಿಂದ ಉಪಯೋಗವಾಗುತ್ತಿದೆ. ಯಾವುದೇ ಕಾರಣದಿಂದ ಸರ್ಕಾರ ಈ ಕೆಲಸವನ್ನು ಮಾಡುವುದಿಲ್ಲ. ಇನ್ನು ಲೈಫ್ ಟ್ಯಾಕ್ಸ್ ಬಗ್ಗೆ ಹೇಳಿದ್ದಾ ಅದು ಹಣಕಾಸಿನ ಮಂತ್ರಿಗಳು ಹಾಗೂ ಮುಖ್ಯಮಂತ್ರಿಗಳಿಗೆ ಬರತಕ್ಕ ವಿಚಾ ನೇರವಾಗಿ ಅದು ನನಗೆ ಬರುವುದಿಲ್ಲ. ಆದ್ದರಿಂದ ಅವರು ಬಂದಮೇಲೆ ಮಾ ಯಡಿಯೂರಪ್ಪನವರು ಹೇಳಿರತಕ್ಕ ಸಲಹೆಯನ್ನು ಮಾನ್ಯ ಮುಖ್ಯಮಂತ್ರಿಗಳಿಗೆ ಮ

ಹಣಕಾಸಿನ ಮಂತ್ರಿಗಳಿಗೆ ತಿಳಿಸಿ ಒಂದು ಸಮಂಜಸವಾದ ಉತ್ತರವನ್ನು ಸರ್ಕಾರದಿಂದ ಕೊಡಲಿಕ್ಕೆ ಅವರಿಗೆ ತಿಳಿಸುತ್ತೇನೆ.

11.20 ಎ.ಎಂ

**ಉ) ಬೆಳಗಾವಿ ನಗರಕ್ಕೆ ಮಹಾರಾಷ್ಟ್ರದ ಮುಖ್ಯಮಂತ್ರಿಗಳು ಬರುತ್ತಿರುವುದರ ಬಗ್ಗೆ**

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೇ, ತಮಗೆ ನಾನು ಒಂದು ವಿಷಯವನ್ನು ಹೇಳಿದ್ದೆ.

ಅಧ್ಯಕ್ಷರು : ವಿಷಯಗಳು ಬಹಳ ಇವೆ. ಬೇಕಾದರೆ ನಾಳೆ ಪ್ರಸ್ತಾಪ ಮಾಡಿ. ಇಲ್ಲದಿದ್ದರೆ ಅವರ ಆಕ್ಷೇಪಣೆ ನಿಜವಾಗಿಬಿಡುತ್ತದೆ.

ಶ್ರೀ ವಾಟಾಳ್ ನಾಗರಾಜ್ : ಇದು ಪತ್ರಿಕೆಯಲ್ಲಿ ಬಂದಿದೆ, ರಾಜ್ಯದ ಜನತೆಗೆ ಸಂಬಂಧಪಟ್ಟಿರುವಂಥಾದ್ದು. ತಾವು ಮನಸ್ಸಿಗೆ ನೋವು ಮಾಡಿಕೊಳ್ಳುವುದಾದರೆ ಈ ವಿಷಯವನ್ನು ಎತ್ತುವುದಕ್ಕೆ ಹೋಗುವುದಿಲ್ಲ. ಏಕೆಂದರೆ ಈ ಸಂದರ್ಭದಲ್ಲಿ ಇಲ್ಲಿ ಉಪಮುಖ್ಯಮಂತ್ರಿಗಳು ಇದ್ದಾರೆ. ಬೆಳಗಾವಿ ನಗರಕ್ಕೆ ಮಹಾರಾಷ್ಟ್ರದ ಮುಖ್ಯಮಂತ್ರಿಗಳು ಬರುತ್ತಿದ್ದಾರೆ. ಇನ್ನು ಎರಡು ವಾರಗಳಲ್ಲಿ ಅವರು ಬರುತ್ತಿದ್ದಾರೆ. ಇದು ಇವತ್ತಿನ ಪತ್ರಿಕೆಯಲ್ಲಿ ಬಂದಿದೆ. ಮಹಾರಾಷ್ಟ್ರದಲ್ಲಿ ಆ ಮುಖ್ಯಮಂತ್ರಿಗಳು ಕುಳಿತುಕೊಂಡು ಬೆಳಗಾವಿಯಲ್ಲಿರತಕ್ಕ ಎಲ್ಲ ಕನ್ನಡಿಗರನ್ನು ಹೊರಗಡೆಗೆ ಕಳಿಸುತ್ತೇವೆ ಎಂದು ಹೇಳುತ್ತಿದ್ದಾರೆ. ಇದು ಬೆಳಗಾವಿ ಪ್ರಶ್ನೆ ಇದು, ಇದನ್ನು ಮತ್ತೆ ಪಡೆಯುತ್ತೀವೆಂದು ಪ್ರಚೋದನೆ ಮಾಡಿಕೊಂಡು ಹೋಗುತ್ತಿದ್ದಾರೆ. ಅವರು ಇನ್ನು ಎರಡು ವಾರಗಳಲ್ಲಿ ಬೆಳಗಾವಿಗೆ ಬರುವುದಾದರೆ ಏನು ಪರಿಸ್ಥಿತಿ ಆಗಬಹುದು? ಅವರು ಪ್ರಾಮಾಣಿಕವಾಗಿ ಬಂದು ಹೋಗುವುದಾದರೆ ನಮ್ಮ ಅಭ್ಯಂತರವಿಲ್ಲ. ಅವರು ಇಲ್ಲಿಗೆ ಬರುವ ಉದ್ದೇಶ ಏನಿದೆ ಎಂದರೆ, ಇವತ್ತು ಪ್ರಚೋದನೆ ಮಾಡುವುದಕ್ಕೆಂದು ಮಹಾರಾಷ್ಟ್ರ ಏಕೀಕರಣ ಸಮಿತಿಯವರು ಅವರನ್ನು ಕರೆಸುತ್ತಿದ್ದಾರೆ; ಮತ್ತು ಅಲ್ಲಿಯ ಮುಖ್ಯಮಂತ್ರಿಗಳು ಬರುತ್ತಿದ್ದಾರೆ.

ಇಲ್ಲಿ ಅವರು ಬಂದು ಪ್ರಚೋದನೆ ಮಾಡಿದತಕ್ಷಣ ನಾಳೆ ನಮ್ಮ ಪರಿಸ್ಥಿತಿ ಏನಾಗಬಹುದು? ಅದಕ್ಕಾಗಿ ನಾನು ತಮಗೆ ಹೇಳುವುದೇನೆಂದರೆ, ಅವರು ಸ್ನೇಹದಿಂದ ಬರುವುದಿದ್ದರೆ ಸರಿ. ಇಲ್ಲದಿದ್ದರೆ ಅವರು ಪ್ರಚೋದನೆ ಮಾಡುವುದಕ್ಕೆಂದು ಬರುತ್ತಾರೆ ಎಂದು ಹೇಳುವುದಾದರೆ ಆಗ ನಾವು ಬೇರೆ ರೀತಿಯಲ್ಲಿ ಹೇಳಬೇಕಾಗುತ್ತದೆ. ಅವರು ಬಾರದ ಹಾಗೆ ನಾವು ತಡೆಹಿಡಿಯಬೇಕಾಗುತ್ತದೆ. ಮಹಾರಾಷ್ಟ್ರದ ಮುಖ್ಯಮಂತ್ರಿಗಳು ಈ ತರಹ ಪ್ರಚೋದನೆ ಮಾಡತಕ್ಕಂಥ ವಿಚಾರಕ್ಕೆ ಬರುವುದಾದರೆ ಅದರಿಂದ ಅತ್ಯಂತ ಗಂಭೀರ ಪರಿಸ್ಥಿತಿ ರಾಜ್ಯದಲ್ಲಿ ನಿರ್ಮಾಣವಾಗುತ್ತದೆ. ಈಗ ಮಹಾರಾಷ್ಟ್ರ ಏಕೀಕರಣ ಸಮಿತಿಯವರು ಅಲ್ಲಿಗೆ ಹೋಗಿದ್ದಾರೆ. ಅದಕ್ಕಾಗಿ ನಾನೇನು ಹೇಳುತ್ತಿದ್ದೇನೆ ಎಂದರೆ ಒಂದು ಅದನ್ನು ತಡೆಹಿಡಿಯಬೇಕು, ಅವರು ಸೌಜನ್ಯಕ್ಕೆ ಬಂದರೆ ನಮ್ಮದೇನೂ ಅಭ್ಯಂತರ ಇಲ್ಲ. ಒಳ್ಳೆಯ ಉದ್ದೇಶದಿಂದ ಒಬ್ಬ ರಾಜ್ಯದ ಮುಖ್ಯಮಂತ್ರಿಗಳು ಬರುವುದಾದರೆ ಅವರನ್ನು ತಡೆಯತಕ್ಕದ್ದು ನಮ್ಮ ಉದ್ದೇಶ ಅಲ್ಲ. ಆದರೆ ಅವರು ಮಹಾರಾಷ್ಟ್ರ ಏಕೀಕರಣ ಸಮಿತಿಯವರ ಸಭೆಗೆ ಬಂದು ಪ್ರಚೋದನೆ ಮಾಡತಕ್ಕಂಥ ಪರಿಸ್ಥಿತಿಗೆ ಬರುವುದಾದರೆ ಅದು ಖಂಡಿತ ಸರಿಯಾದುದಲ್ಲ, ಆದ್ದರಿಂದ ನಾನು ಇದನ್ನು ಸ್ಪಷ್ಟವಾಗಿ ವಿರೋಧಿಸುತ್ತಿದ್ದೇನೆ. ಮತ್ತು ಈ ಸಭೆಯಲ್ಲಿ ಒಂದು ನಿರ್ಣಯವಾಗಬೇಕು. ಅದೇನೆಂದರೆ ಮುಖ್ಯಮಂತ್ರಿಯವರು ಮತ್ತು ಬಾಳಠಕ್ರೆಯವರು ಏನು ಬೇರೆ ಜನಾಂಗಗವರನ್ನು ಅಲ್ಲಿಂದ ಓಡಿಸುತ್ತೇವೆ ಎಂದು ಹೇಳಿರತಕ್ಕಂಥಾದ್ದು,

ಕನ್ನಡಿಗರ ಮೇಲೆ ಆಕ್ರಮ ಮಾಡತಕ್ಕಂಥಾದ್ದು ಇದ್ದರೆ, ಈ ಬಗ್ಗೆ ಒಂದು ನಿರ್ಣಯವನ್ನು ಸಭೆಯಲ್ಲಿ ತೆಗೆದುಕೊಳ್ಳಲೇ ಬೇಕಾಗುತ್ತದೆ.

ಇಷ್ಟು ಹೊತ್ತಿಗಾಗಲೇ ನಿರ್ಣಯ ಆಗಿಬಿಡಬೇಕಾಗಿತ್ತು. ಆದ್ದರಿಂದ ಈ ನಿರ್ಣಯ ಆಗಲಿ. ತಾವು ಹೇಳಬಹುದು ಏನು ವಾಟಾಳ್ ನಾಗರಾಜ್‌ರವರು ಸಭಾತ್ಯಾಗ ಮಾಡುತ್ತೀರಾ, ಧರಣಿ ಮಾಡುತ್ತೀರಾ ಅಂತ. ಅದು ನಮ್ಮ ಹಕ್ಕು. ನಾನು ಸಭಾತ್ಯಾಗವನ್ನೂ ಮಾಡುತ್ತೇನೆ, ಧರಣಿಯನ್ನೂ ಮಾಡುತ್ತೇನೆ. ಅಥವಾ ನಾನು ಕಪ್ಪುಬಾವುಟವನ್ನು ಹಿಡಿಯುತ್ತೇನೆ. ನನ್ನ ಹಕ್ಕನ್ನು ಯಾರೂ ಕಸಿದುಕೊಳ್ಳುವುದಕ್ಕೆ ಆಗುವುದಿಲ್ಲ. ಇಂತಹ ಪರಿಸ್ಥಿತಿ ಇದ್ದರೆ ಬೆಳಿಗ್ಗೆ ಎದ್ದರೆ ಮನಸ್ಸಿಗೆ ನೋವಾಗುತ್ತದೆ. ಈ ರೀತಿ ಅಲ್ಲಿಯ ಮುಖ್ಯಮಂತ್ರಿಗಳು ಬರುತ್ತಾರೆ ಎಂದರೆ ಇಲ್ಲಿ ನಮ್ಮ ಪರಿಸ್ಥಿತಿ ಏನಾಗಬೇಕು? ಆದ್ದರಿಂದ ನಾನು ಹೇಳುವುದೇನೆಂದರೆ ಇವತ್ತೇ ನಿರ್ಣಯ ಮಾಡಬೇಕು. ಈ ನಿರ್ಣಯವನ್ನು ಇವತ್ತು ಸಾಯಂಕಾಲದೊಳಗೆ ಬೇಕಾದರೆ ಮಾಡಿ. ನಮ್ಮದೇನೂ ಅಭ್ಯಂತರ ಇಲ್ಲ. ಮಹಾರಾಷ್ಟ್ರದ ಈ ನೀತಿಯನ್ನು ನಾವು ಖಂಡನೆ ಮಾಡಲೇಬೇಕಾಗುತ್ತದೆ.

ಅಧ್ಯಕ್ಷರು : ತಾವು ಈಗ ಪ್ರಸ್ತಾಪ ಮಾಡಿದ್ದೀರಿ.

ಶ್ರೀ ವಾಟಾಳ್ ನಾಗರಾಜ್ : ಅವರು ಸಮಾಧಾನಕರವಾದ ಉತ್ತರವನ್ನು ಕೊಟ್ಟರೆ ಸಂತೋಷ.

ಅಧ್ಯಕ್ಷರು : ಸಮಾಧಾನಕರವಾದ ಉತ್ತರವನ್ನು ಕೊಡುತ್ತಾರೆ. ಮಾನ್ಯ ಪಟೇಲರು ಇದ್ದಾರಲ್ಲ, ಅವರು ಉತ್ತರ ಕೊಟ್ಟರೆ ನಿಮಗೆ ಸಮಾಧಾನವಾಗುತ್ತದೆ.

ಶ್ರೀ ಜೆ.ಹೆಚ್. ಪಟೇಲ್ (ಉಪ ಮುಖ್ಯಮಂತ್ರಿ) : ಸನ್ಮಾನ್ಯ ಅಧ್ಯಕ್ಷರೇ, ನೆರೆ ರಾಜ್ಯದ ಮುಖ್ಯಮಂತ್ರಿಗಳು ಇಲ್ಲಿ ಬಂದು ಪ್ರಚೋದನೆ ಮಾಡುತ್ತಾರೆ ಎಂದರೆ, ಅವರು ಬರುವಾಗ ನಮ್ಮನ್ನು ಕೇಳಿಯೇ ಮಾಡುತ್ತಾರೆ. ಇದು ಶಿಷ್ಟಾಚಾರ. ಯಾವುದೇ ಮುಖ್ಯಮಂತ್ರಿಗಳು ಎಲ್ಲೋ ಹೋಗಿ ಏನೇ ಹೇಳುವುದಕ್ಕೆ ಆಗುವುದಿಲ್ಲ. ರಾಜ್ಯಾಂಗಕ್ಕೆ ನಾವೆಲ್ಲರೂ ಬದ್ದರಾಗಿದ್ದೇವೆ. ಅದರ ಜೊತೆಗೆ ನಾವು ಪ್ರಮಾಣವಚನವನ್ನು ಸ್ವೀಕಾರ ಮಾಡಿದ್ದೇವೆ. ಆ ರಾಜ್ಯಕ್ಕೂ ಅದೇ ರಾಜ್ಯಾಂಗ, ಈ ರಾಜ್ಯಕ್ಕೂ ಅದೇ ರಾಜ್ಯಾಂಗ. ಆದ್ದರಿಂದ ಅಲ್ಲಿನ ಮುಖ್ಯಮಂತ್ರಿಗಳು ಎಂ.ಇ.ಎಸ್. ಸಭೆಗೆ ಅಲ್ಲ, ಅವರು ಯಾವುದಾದರೂ ಲಗ್ನಕ್ಕೆ ಬಂದರೂ ಕೂಡ ನಮಗೆ ತಿಳಿಸಬೇಕಾಗುತ್ತದೆ. ಅವರು ಯಾವುದೇ ಸಣ್ಣ ಕಾರ್ಯಕ್ರಮಕ್ಕೆ ಬರುವುದಾದರೂ ಕೂಡ ನಮಗೆ ತಿಳಿಸಬೇಕಾದುದು, ಒಂದು ಶಿಷ್ಟಾಚಾರ. ಅವರು ಬರುವಾಗ ಪ್ರಚೋದನೆ ಮಾಡುವುದಕ್ಕೆ ಬರುತ್ತಾರೆ ಎಂದರೆ ಆಗ ನಾವು ಬರಬೇಡಿ ಎಂದು ಹೇಳುವುದಕ್ಕಾಗುತ್ತದೆ. ನಮಗೆ ಆ ಮಾಹಿತಿ ಇಲ್ಲ. ಕೇವಲ ಪತ್ರಿಕೆಯಲ್ಲಿ ಬಂದಿದೆ.

ಶ್ರೀ ವಾಟಾಳ್ ನಾಗರಾಜ್ : ಈಗ ನಾನು ತಮಗೆ ಹೇಳುತ್ತಿದ್ದೇನೆ, ಏನೆಂದರೆ ಅವರು ಬರುವಾಗ ಪ್ರಚೋದನೆ ಮಾಡಲಿಕ್ಕೇ ಬರುತ್ತಾರೆ ಎಂದಲ್ಲ. ಹಿಂದೆ ಮಾಜಿ ಮುಖ್ಯಮಂತ್ರಿಗಳಾದ ಶರದ್ ಪವಾರ್ ಅವರು ಅಲ್ಲಿ ಪ್ರತಿಬಂಧಕಾಜ್ಞೆ ಇದ್ದರೂ ಸಹ ಅವರು ಬಂದಿದ್ದರು. ಇದು ತಮಗೆ ಗೊತ್ತಿದೆ. ಅವರು ಹಾಗೆ ಬಂದು ಅಲ್ಲಿ ಏನು ನಡೆಯಿತು ಎಂಬುದು ತಮಗೆ ಗೊತ್ತು. ಇವತ್ತು ಕೂಡ ಅವರು ಬಂದು ಪ್ರಚೋದನೆ ಮಾಡಲಿಕ್ಕೆ ಅವಕಾಶ ಇದೆ. ಆದ್ದರಿಂದ ಸರ್ಕಾರದಿಂದ ಒಂದು ನಿರ್ಣಯವಾಗಬೇಕು. ಸರ್ಕಾರ ಒಂದು ಸ್ಪಷ್ಟವಾದ ಸರ್ವಾನುಮತದ ಒಂದು ನಿರ್ಣಯವನ್ನು ಮಾಡಲಿ. ಅದನ್ನು ಮಾಡಬೇಕಾದದ್ದು ಸರ್ಕಾರದ ಕರ್ತವ್ಯ.

ಶ್ರೀ ಜೆ.ಹೆಚ್. ಪಟೇಲ್ : ಸರ್ವಾನುಮತದ ನಿರ್ಣಯ ಇದೆ. ನಾವು ಮಹಾಜನ್ ಕಮೀಷನ್ ವರದಿಗೆ ಬದ್ಧರಾಗಿದ್ದೇವೆ. ಅದರ ವಿರುದ್ಧ ಯಾವುದೇ

ಸರ್ಕಾರ ಬರಲಿ, ಅದು ಬದಲಾವಣೆಯಾಗುವುದಿಲ್ಲ. ಒಬ್ಬರು ಮುಖ್ಯಮಂತ್ರಿಯವರು ಬದಲಾವಣೆ ಆದಕೂಡಲೇ ಇದು ಸಹ ಬದಲಾವಣೆ ಆಗಬೇಕು ಅಂತ ಇಲ್ಲ. ನಮ್ಮ ನಿಲುವು ಸ್ಪಷ್ಟ ಇದೆ. ಇದನ್ನು ನಾವು ಕೇಂದ್ರಸರ್ಕಾರಕ್ಕೂ ಹೇಳಿದ್ದೇವೆ, ಸಂಬಂಧಪಟ್ಟ ರಾಜ್ಯ ಸರ್ಕಾರಕ್ಕೂ ಹೇಳಿದ್ದೇವೆ. ಇದು ಯಾರೋ ಬಂದು ಹೇಳುತ್ತಾರೆ, ಅಥವಾ ಪತ್ರಿಕೆಯಲ್ಲಿ ಬಂದರೆ ಆ ಬೆದರಿಕೆಗೆ ಈ ಸದನ ಹೆದರುವುದಿಲ್ಲ. ಈ ಕರ್ನಾಟಕದಲ್ಲಿ ಯಾರೂ ಹೆದರುವುದಿಲ್ಲ. ಅವರು ಏನು ಬಂದು ಹೇಳಿಬಿಡುತ್ತಾರೆ, ಎಂ.ಇ.ಎಸ್. ನವರು ಹೇಳಿದ ಕೂಡಲೇ ಅವರು ಇಲ್ಲಿರುವ ಕನ್ನಡಿಗರನ್ನು ಓಡಿಸಬಹುದು ಎಂದು ಹೇಳುವುದು ಇದೆಯಲ್ಲ, ಅವೆಲ್ಲ ಕತೆಗಳು. ದಂತ ಕಥೆಗಳು. ಅದೆಲ್ಲದಕ್ಕೂ ಈ ಸರ್ಕಾರ ಹೆದರುವುದಿಲ್ಲ. ಇಂತಹ ಪರಿಸ್ಥಿತಿ ಬರುವುದಿಲ್ಲ. ಬಂದರೂ ಕೂಡ ಅದನ್ನು ಹೇಗೆ ನಿಭಾಯಿಸಬೇಕೋ ಅದನ್ನು ನಾವು ಮಾಡುತ್ತೇವೆ.

ಶ್ರೀ ವಾಟಾಳ್ ನಾಗರಾಜ್ : ತಮ್ಮ ಧೈರ್ಯವನ್ನು ನಾವು ಮೆಚ್ಚಿದ್ದೇವೆ. ನಾನು ಏನು ಹೇಳುತ್ತಿದ್ದೇನೆ ಎಂದರೆ, ಒಂದು ನಿರ್ಣಯವನ್ನು ತಾವು ಮಾಡಿ. ತಾವು ಒಂದು ನಿರ್ಣಯವನ್ನು ಮಾಡಿದರೆ, ಆಗ ಏನಾಗುತ್ತದೆ ಎಂದರೆ, ಸರ್ಕಾರದ ನಿಲುವು ಸ್ಪಷ್ಟವಾಗುತ್ತದೆ.

ಶ್ರೀ ಜೆ.ಹೆಚ್. ಪಟೇಲ್ : ಈ ಸದನದಲ್ಲಿ ನಿರ್ಣಯದ ಅವಶ್ಯಕತೆ ಇದ್ದರೆ, ಮಾನ್ಯ ಸದಸ್ಯರಿಗಿಂತ ಮುಂಚೆ ನಿರ್ಣಯದ ಅವಶ್ಯಕತೆ ಇದ್ದರೆ ಒಂದು ಕ್ಷಣ ಕೂಡ ನಾವು ತಡಮಾಡುವುದಿಲ್ಲ.

ಅಧ್ಯಕ್ಷರು : ಅವಶ್ಯಕತೆ ಬಗ್ಗೆ ಆಲೋಚನೆ ಮಾಡೋಣ.

ಶ್ರೀ ಜೆ.ಹೆಚ್. ಪಟೇಲ್ : ಹೌದು, ಅವಶ್ಯಕತೆ ಬಗ್ಗೆ ಆಲೋಚನೆ ಮಾಡೋಣ.

ಶ್ರೀ ವಾಟಾಳ್ ನಾಗರಾಜ್ : ಈ ಪದಗಳನ್ನು ತಮ್ಮ ಅನುಕೂಲತೆಗೆ ಅನುಗುಣವಾಗಿ ಬಳಸುತ್ತೀರಿ.

ಶ್ರೀ ಜೆ.ಹೆಚ್. ಪಟೇಲ್ : ಮಾನ್ಯ ಅಧ್ಯಕ್ಷರು ಹೇಳಿದ ಮೇಲೆ ನಾನು ಬೇಡವೆಂದು ಹೇಳುವುದಕ್ಕಾಗುತ್ತದಾ?

## ಗಮನ ಸೆಳೆಯುವ ಸೂಚನೆಗಳು

### ಅ) ಧಾರವಾಡ ಜಿಲ್ಲಾ ಕೋ-ಆಪರೇಟಿವ್ ಆಯಿಲ್ ಮಿಲ್ ಸೀಡ್ ಪ್ರೊಸೆಸಿಂಗ್ ಸೊಸೈಟಿಯು ಸರ್ಕಾರದಿಂದ ಷೇರು ಹಣ ಹಾಗೂ ಸಾಲವನ್ನು ಪಡೆದಿದ್ದರೂ ಸಹ ಆಡಳಿತದಲ್ಲಿನ ಅವ್ಯವಹಾರದ ಬಗ್ಗೆ

ಶ್ರೀ ಸಿ.ಎಂ. ಉದಾಸಿ (ಹಾನಗಲ್) : ಸನ್ಮಾನ್ಯ ಸಭಾಧ್ಯಕ್ಷರೇ, ಧಾರವಾಡ ಜಿಲ್ಲೆಯ ಗದಗ್‌ನಲ್ಲಿರುವ ಕೋ-ಆಪರೇಟಿವ್ ಆಯಿಲ್ ಮಿಲ್ ಸೀಡ್ ಪ್ರೊಸೆಸಿಂಗ್ ಸೊಸೈಟಿಯವರು ನಾಲ್ಕು ಕೋಟಿ ರೂಪಾಯಿಗಳಷ್ಟು ಶೇರು ಹಣ ಮತ್ತು ಸಾಲ ಪಡೆದು ಈ ಸಂಸ್ಥೆಯನ್ನು ಇವತ್ತು ಬಂದ್ ಮಾಡಿರುವುದರಿಂದ ಈಗಾಗಲೇ ಅನೇಕ ಜನ ನೌಕರರು ಸತ್ಯಾಗ್ರಹ ಪ್ರಾರಂಭ ಮಾಡಿದ್ದಾರೆ. ಇದರ ಬಗ್ಗೆ ಮತ್ತು ಈ ಸಂಸ್ಥೆ ಇಷ್ಟೊಂದು ಅಧಿಕ ಮೊತ್ತದ ಸರ್ಕಾರದಿಂದ ಸಹಾಯ ಪಡೆದು, ಜಾಗತಿಕ ಸಂಸ್ಥೆಯ ಸಾಲ ಪಡೆದು ಮತ್ತು ಎನ್.ಸಿ.ಡಿ.ಸಿ.ಯಿಂದ ಸಾಲ ಪಡೆದಿರುವ ಈ ಸಂಸ್ಥೆ ಇಷ್ಟೊಂದು ಹಾನಿಗೆ ಒಳಗಾಗಿ, ಇವತ್ತು ಅಲ್ಲಿಯ ನೌಕರರು ಸಂಬಳ ಇಲ್ಲದೆ ಬೀದಿಪಾಲಾಗಿರುವುದರ ಬಗ್ಗೆ ಮಾನ್ಯ ಸಹಕಾರ ಮಂತ್ರಿಗಳ ಗಮನವನ್ನು ಸೆಳೆಯುತ್ತೇನೆ

ಶ್ರೀ ಎಸ್.ಎಸ್. ಪಾಟೀಲ್ (ಸಹಕಾರ ಮಂತ್ರಿ) : ಮಾನ್ಯ ಅಧ್ಯಕ್ಷರೇ, ಸನ್ಮಾನ್ಯ ಸದಸ್ಯರಾದ ಶ್ರೀ ಉದಾಸಿಯವರು ಕೇಳಿದ ಪ್ರಶ್ನೆಗೆ ಉತ್ತರ ಈ ರೀತಿ ಇದೆ.

ಮಾನ್ಯ ಸಹಕಾರ ಸಚಿವರಿಗೆ ದಿನಾಂಕ 4-1-95ರಂದು ಸಂಘದ ನೌಕರರು ಮನವಿಯನ್ನು ಸಲ್ಲಿಸಿ ತಮ್ಮ ಸಂಘದ ಪುನಶ್ಚೇತನಕ್ಕಾಗಿ ಆರ್ಥಿಕ ಸಹಾಯವನ್ನು ನೀಡುವಂತೆ ಕೋರಿರುತ್ತಾರೆ. ಪುನಶ್ಚೇತನಗೊಳಿಸಲು ಸಾಧ್ಯವಿಲ್ಲದಿದ್ದರೆ ಸಂಘವನ್ನು ಸಮಾಪನೆಗೊಳಿಸಿ ಕಾನೂನು ಮತ್ತು ನಿಯಮದಂತೆ ನೌಕರರಿಗೆ ಸಿಗಬೇಕಾದ ವೇತನ ಬಾಕಿ ಮತ್ತು ಇತರ ಬಾಕಿ ಮೊತ್ತವನ್ನು ಇತ್ಯರ್ಥ ಮಾಡಿಸಿಕೊಡುವಂತೆ ವಿನಂತಿಸಿರುತ್ತಾರೆ.

ಈಗ ಪ್ರಭಾರ ವ್ಯವಸ್ಥಾಪಕ ನಿರ್ದೇಶಕರಾಗಿರುವ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಗದಗ್, ಇವರು ನೌಕರರು ದಿನಾಂಕ 7-3-95ರಿಂದ ಸದರಿ ಉಪವಾಸ ಸತ್ಯಾಗ್ರಹ ಹೂಡುತ್ತಿರುವುದನ್ನು ದೂರವಾಣಿಯಲ್ಲಿ ತಿಳಿಸಿರುತ್ತಾರೆ. ಹಾಲಿ ದಾಸ್ತಾನು ಇರುವ ಹಳೇ ಎಣ್ಣೆಯನ್ನು ಟೆಂಡರ್ ಮೂಲಕ ಹರಾಜು ಹಾಕಿದರೆ ರೂ. 2 ರಿಂದ 3 ಲಕ್ಷ ಬರುವ ಸಾಧ್ಯತೆ ಇರುತ್ತದೆ. ಇದರಿಂದ ಹೆಚ್ಚಿನಂಶ ವೇತನವನ್ನು ಪಾವತಿಸಬಹುದಾಗಿದೆ.

ಸರ್ಕಾರದ ಪತ್ರ ಸಂಖ್ಯೆ:ಸಿಎಂಡಬ್ಲ್ಯೂ 66 ಪಿಎಂಸಿ 95 ದಿನಾಂಕ 4-4-95ರಲ್ಲಿ ಸಂಘವು ಸ್ಥಗಿತಗೊಂಡಿದೆ ಎಂದೂ, ನೌಕರರ ವೇತನ ಪಾವತಿ ಮಾಡುವ ಚೈತನ್ಯ ಹೊಂದಿಲ್ಲವೆಂದೂ ಇದನ್ನು ತಪ್ಪಿಸಲು ಮಾನ್ಯ ಸಕ್ಕರೆ ಜವಳಿ, ಪರಿಸರ ವಿಜ್ಞಾನ ಮತ್ತು ತಾಂತ್ರಿಕ ಸಚಿವರನ್ನು ಸಂಘದ ನೌಕರರು ಸಂಪರ್ಕಿಸಿದ್ದು ತಿಳಿದು ಬರಲಾಗಿ ನಿಬಂಧಕರು ಈ ಬಗ್ಗೆ ಪ್ರತ್ಯೇಕ ಕ್ರಮ ತೆಗೆದುಕೊಳ್ಳುವವರಿದ್ದಾರೆ. ಇದನ್ನು ಪ್ರತ್ಯೇಕವಾಗಿ ಗಮನಿಸಲಾಗುತ್ತಿದೆ.

ಸಂಘವನ್ನು ಮೂಲತಃ "ಧಾರವಾಡ ಜಿಲ್ಲಾ ಎಣ್ಣೆ ಬೀಜ ಸಂಸ್ಕರಣ ಸಹಕಾರ ಸಂಘ ನಿಯಮಿತ" ಎಂದು 1959ರಲ್ಲಿ ನೋಂದಣಿ ಮಾಡಿದ್ದು 1969ರಿಂದ ಕಾರ್ಯ ಪ್ರಾರಂಭಿಸಿರುತ್ತದೆ. 1976ರವರೆಗೂ ಸಂಘವು ಲಾಭದಲ್ಲಿ ಕಾರ್ಯ ನಿರ್ವಹಿಸದೆ ನಷ್ಟದಲ್ಲಿಯೇ ಮುಂದುವರೆದು 1976ರ ನಂತರ ತನ್ನ ಕಾರ್ಯವನ್ನು ಸ್ಥಗಿತಗೊಂಡಿರುತ್ತದೆ. ಅನಂತರ ಗದಗ್ ಸಹಕಾರಿ ನೂಲಿನ ಗಿರಣಿ ನಿಯಮಿತ, ಹುಲಿಕೋಟೆ ಮತ್ತು ರೈತರ ಸಹಕಾರಿ ಎಣ್ಣೆ ಗಿರಣಿ ನಿಯಮಿತ, ಬಿಂಕದಕಟ್ಟೆ, ಈ ಎರಡೂ ಸಂಘಗಳು ಒಟ್ಟುಗೂಡಿ ಈ ಗದಗ್ ಎಣ್ಣೆ ಗಿರಣಿಯನ್ನು ಗುತ್ತಿಗೆ ಆಧಾರದ ಮೇಲೆ ವಹಿಸಿಕೊಂಡಿರುತ್ತದೆ. ಆದರೂ, ಈ ಸಂಸ್ಕರಣ ಘಟಕ ಲಾಭದಾಯಕವಾಗಿ ನಡೆಯದೆ 1994ಸೆಪ್ಟೆಂಬರ್ ತಿಂಗಳಿನಿಂದ ಸಂಪೂರ್ಣವಾಗಿ ಸಂಸ್ಕರಣ ಕಾರ್ಯವನ್ನು ಸ್ಥಗಿತಗೊಳಿಸಿರುತ್ತದೆ. ಸಂಘವು ಪ್ರಾರಂಭದಿಂದಲೂ ಹೆಚ್ಚಿನ ನಷ್ಟ ಅನುಭವಿಸುತ್ತಿದೆ. ದಿನಾಂಕ 31-3-95ಕ್ಕೆ ಸಂಘದ ಸಂಚಿತ ನಷ್ಟವು ರೂ. 8.12ಕೋಟಿಯಾಗಿರುತ್ತದೆ. ದಿನಾಂಕ 31-3-1993ರವರೆಗೆ ಒಟ್ಟು ಸಂಚಿತ ನಷ್ಟ ರೂ. 5.68 ಕೋಟಿಗಳಾಗಿರುತ್ತದೆ.

ಸಂಘಕ್ಕೆ ಭೇಟಿ ನೀಡಿ ಪರಿಸ್ಥಿತಿಯ ಬಗ್ಗೆ ವರದಿ ನೀಡಬೇಕೆಂದು ಬೆಳಗಾವಿ ವಿಭಾಗದ ಸಂಯುಕ್ತ ನಿಬಂಧಕರಿಗೆ ದೂರವಾಣಿ ಮೂಲಕ ತಿಳಿಸಲಾಗಿ ಸಂಯುಕ್ತ ನಿಬಂಧಕರು ವರದಿಯನ್ನು ಸಲ್ಲಿಸಿರುತ್ತಾರೆ. ಅದರ ಪ್ರಕಾರ ಆಡಳಿತ ಮಂಡಳಿಯು ಸಂಘವನ್ನು ಪುನಶ್ಚೇತನಗೊಳಿಸಲು ಸರ್ಕಾರ ರೂ. 2.00 ಕೋಟಿ ಬಡ್ಡಿ ರಹಿತ ಸಾಲ ಕೊಟ್ಟರೆ ಪುನಶ್ಚೇತನಗೊಳಿಸುವುದಾಗಿಯೂ, ಇಲ್ಲವಾದಲ್ಲಿ ಯಾರಿಗಾದರೂ ಗುತ್ತಿಗೆಗೆ ಕೊಡಬಹುದಾಗಿಯೂ ಅಥವಾ ಸರ್ಕಾರವೇ ವಹಿಸಿಕೊಳ್ಳಬಹುದಾಗಿಯೂ ತಿಳಿಸಿದ್ದಾರೆ. ಈ ಮಧ್ಯೆ ಈಗ ಸಂಘದಲ್ಲಿ ದಾಸ್ತಾನು ಇರುವ ಎಣ್ಣೆಯನ್ನು ಟೆಂಡರ್ ಮೂಲಕ ಮಾರಿದಲ್ಲಿ ನೌಕರರಿಗೆ ವೇತನ ಪಾವತಿ ಮಾಡಬಹುದಾಗಿ ತಿಳಿದುಬಂದಿದೆ. ಟೆಂಡರ್

ಮೂಲಕ ಮಾರಾಟವನ್ನು ದಿನಾಂಕ 5-4-95ಕ್ಕೆ ನಿಗದಿಪಡಿಸಿರುತ್ತದೆ. ಇದು ತಾತ್ಕಾಲಿಕ ಪರಿಹಾರವನ್ನು ಒದಗಿಸಬಹುದಲ್ಲದೆ, ಶಾಶ್ವತವಾಗಿ ವೇತನ ಪಾವತಿ ಮಾಡಲು ಏರ್ಪಾಡು ಮಾಡುವುದು ಸಾಧ್ಯವಾಗುವುದಿಲ್ಲ. ಸಂಘವನ್ನು ಸಮಾಪನೆಗೊಳಿಸುವುದು ಹಾಗೂ ನೌಕರರನ್ನು ಕೆಲಸದಿಂದ ಬಿಡುಗಡೆ ಮಾಡುವುದು ಶಾಶ್ವತ ಪರಿಹಾರವಾಗಬಲ್ಲುದು.

ಮೇಲೆ ಹೇಳಿದ ಸಲಹೆಗಳನ್ನು ಪರಿಶೀಲಿಸಲಾಗುತ್ತಿದೆ. ಸಂಘಕ್ಕೆ ಸರ್ಕಾರದಿಂದ ಈ ಕೆಳಗಿನಂತೆ ಹಣ ಸಹಾಯ ಮಾಡಿರುತ್ತದೆ.

| | | | |
|---|---|---|---|
| 1. | ಪಾಲು ಬಂಡವಾಳ | ರೂ. | 1,42,53,300 |
| 2. | ಸಾಲ | ರೂ. | 2,63,61,000 |

(ಎನ್‌ಸಿಡಿಸಿ ಯಿಂದ ಪಡೆದು ನೇರವಾಗಿ ಸರ್ಕಾರದಿಂದ ಕೊಡಲ್ಪಟ್ಟಿದೆ)

ಸಂಘವು ರೂ. 13,36,500 ಸುಸ್ತಿ ಬಡ್ಡಿ ಹಾಗೂ ರೂ 1,46,41,304-20 ಸರ್ಕಾರಕ್ಕೆ ಬಡ್ಡಿಯನ್ನು (ಬ್ಯಾಂಕುಗಳಿಗೆ ಪಾವತಿಸಬೇಕಾದ ಬಡ್ಡಿಯನ್ನು ಹೊರತುಪಡಿಸಿ) ಪಾವತಿಸಬೇಕಾಗಿದೆ. ಕಮಿಷನ್ ಏಜೆಂಟರುಗಳಿಗೆ ರೂ. 4,42,44,014.00 ಮತ್ತು ಇತರ ಜವಾಬ್ದಾರಿಗಳಿಗೆ ರೂ. 7.98 ಲಕ್ಷ ಪಾವತಿಸಬೇಕಾಗಿದೆ.

1982-83ರಲ್ಲಿ ಎನ್‌ಸಿಡಿಸಿಯ ಸಹಾಯದಿಂದ ಒಂದು ಪುನಶ್ಚೇತನ ಯೋಜನೆಯನ್ನು ರೂಪಿಸಿದ್ದು, ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿಸಿ 218 ಸಿಇಪಿ 81 ದಿನಾಂಕ 30-3-83ರಲ್ಲಿ ರೂ. 48.00 ಲಕ್ಷವನ್ನು ಶೇಕಡ ಹನ್ನೆರಡು ಮುಕ್ಕಾಲು ಬಡ್ಡಿ ದರದಲ್ಲಿ ಮಾರ್ಜಿನ್ ಮನಿಯಾಗಿ ಮಂಜೂರು ಮಾಡಿರುತ್ತದೆ. ಈ ಹಣ 14 ಕಂತುಗಳಲ್ಲಿ ಮರು ಪಾವತಿ ಮಾಡಬೇಕಾಗಿರುತ್ತದೆ. ಅಲ್ಲದೆ ಎನ್‌ಸಿಡಿಸಿಯವರು ರೂ. 189.15 ಲಕ್ಷವನ್ನು ಘಟಕದ ವಿಸ್ತರಣೆಗಾಗಿ ಅವರ ಪತ್ರ ಸಂಖ್ಯೆ 1.11.:82 ಪಿ(ಎಎಸ್) ದಿನಾಂಕ:7.10.86ರಂತೆ ಮಂಜೂರು ಮಾಡಿರುತ್ತಾರೆ, ಇದರಲ್ಲಿ ರೂ. 119.48 ಲಕ್ಷವನ್ನು ಬಿಡುಗಡೆ ಮಾಡಿದ್ದು ರೂ. 23.27ಲಕ್ಷವನ್ನು ವೇಸ್ ಅಂಡ್ ಮೀನ್ಸ್ ಮುಂಗಡವಾಗಿಯೂ ರೂ. 96.26 ಲಕ್ಷವನ್ನು ಮಾರ್ಜಿನ್ ಮನಿಯಾಗಿಯೂ ಮಂಜೂರು ಮಾಡಿರುತ್ತಾರೆ. ಇಷ್ಟು ಹಣ ಸಹಾಯ ಹಾಗೂ ಹೊಸ ಮಿಷನರಿಗಳನ್ನು ಅಳವಡಿಸಿದ ನಂತರವೂ ಸಂಘವನ್ನು ಪುನಶ್ಚೇತನಗೊಳಿಸುವುದು ಸಾಧ್ಯವಾಗಿಲ್ಲ.

1959ರಿಂದ ಈವರೆಗೂ ಎನ್‌ಸಿಡಿಸಿಯ ಆರ್ಥಿಕ ಸಹಾಯದೊಂದಿಗೆ ರಾಜ್ಯ ಸರ್ಕಾರವು ಹಣದ ಸಹಾಯ ಮಾಡುತ್ತಲೇ ಬಂದರೂ ಘಟಕವನ್ನು ಕೆಲಸ ಮಾಡಲು ಅಥವಾ ಪುನಶ್ಚೇತನಗೊಳಿಸುವುದು ಸಾಧ್ಯವಾಗಿಲ್ಲ. ಯಾವುದಾದರೊಂದು ಸಂಘವು ತನ್ನ ನೌಕರರಿಗೆ ವೇತನ ಕೊಡುವುದಕ್ಕೆಂದು ಅಸ್ತಿತ್ವದಲ್ಲಿರುವುದು ಸಾಧ್ಯವಿಲ್ಲ. ಇದರ ಸದಸ್ಯರ ಹಿತವನ್ನು ಗಣನೆಗೆ ತೆಗೆದುಕೊಂಡಿಲ್ಲ. ಈ ಸಂಘದಲ್ಲಿ ಸದಸ್ಯರ ಹಿತಕ್ಕೆ ಆದ್ಯತೆ ಸಿಕ್ಕಿರುವುದಿಲ್ಲ.

ಸಂಘದಲ್ಲಿ ಒಟ್ಟು 78 ನೌಕರರಿದ್ದು ಒಂದು ತಿಂಗಳಿಗೆ ಸಿಬ್ಬಂದಿ ವೇತನ ರೂ. 78,000 ಆಗಿದೆ. ಸಂಘದ ನೌಕರರು ತಮ್ಮ ಆಹಾರ, ವಸತಿ, ಮಕ್ಕಳ ವಿದ್ಯಾಭ್ಯಾಸದ ಖರ್ಚನ್ನು ಸರಿದೂಗಿಸಲು ಸಾಧ್ಯವಾಗುತ್ತಿಲ್ಲ. ದಿನಾಂಕ 31-3-95ಕ್ಕೆ ಒಟ್ಟು ಪಾವತಿ ಮಾಡಲು ಬಾಕಿ ಇರುವ ವೇತನ ರೂ. 3.65 ಲಕ್ಷಗಳಾಗಿವೆ.

ನೌಕರರ ವೇತನ ಕೂಡ ಸಂಘದ ಆಸ್ತಿಯನ್ನು ವಿಕ್ರಯಿಸಿ ಸಂದಾಯ ಮಾಡಲಾಗಿದೆ. ಇದೇ ಪರಿಸ್ಥಿತಿ ಮುಂದುವರೆದಲ್ಲಿ ಸರ್ಕಾರ ಕೊಟ್ಟಿರುವ ಪಾಲು ಬಂಡವಾಳ ಹಾಗೂ ಸಾಲ ನಶಿಸಿ ಹೋಗಿ ಅದನ್ನು ವಸೂಲಿ ಮಾಡಿಕೊಳ್ಳಲು ಯಾವ ಮೂಲವೂ

ಉಳಿಯಲಾರದು. ನೌಕರರ ವೇತನವು ಸಂಘದ ಮೊದಲ ಆದ್ಯತೆಯಾಗಿದ್ದು ಅದನ್ನು ಪಾವತಿಸಲೇಬೇಕಾಗುತ್ತದೆ. ರಾಜ್ಯ ಸರ್ಕಾರ ಸದ್ಯದಲ್ಲಿ ಇದಕ್ಕೆ ಹಣ ಸಂದಾಯ ಮಾಡುವ ಸಾಧ್ಯತೆ ಇರುವುದಿಲ್ಲ. ಏಕೆಂದರೆ ಸಂಘ ಈಗಾಗಲೇ ಕೊಟ್ಟಿರುವ ಹಣ ಸಹಾಯವನ್ನು ಹಿಂತಿರುಗಿಸಿರುವುದಿಲ್ಲ. ಸರ್ಕಾರವು ಈ ಸಂಘದ ಆಡಳಿತವನ್ನು ವಹಿಸಿಕೊಂಡು ಮುಂದಿನ ಕ್ರಮ ಜರುಗಿಸಲು ಯೋಚಿಸಲಾಗುವುದು.

ಆದರೂ ಕೂಡ ಇವತ್ತು ಆ ಒಂದು ಸಂಸ್ಥೆ ಬಹಳ ಹಾನಿಯಲ್ಲಿದೆ ಮತ್ತು ಅಲ್ಲಿಯ ನೌಕರರು ಕೂಡ ಅಲ್ಲಿ ಸತ್ಯಾಗ್ರಹ ಕೂತಿದ್ದಾರೆ. ಅವರ ಹಿತದೃಷ್ಟಿಯಿಂದ ಇವತ್ತು ಏನು ಮಾಡಬೇಕು ಎನ್ನುವುದರ ಬಗ್ಗೆ ಈಗಾಗಲೇ ಕ್ರಮ ತೆಗೆದುಕೊಂಡಿದ್ದೇವೆ. ನಮ್ಮ ಜಂಟಿ ನಿರ್ದೇಶಕರಿಗೆ ಹೇಳಿದ್ದೇನೆ. ಆಡಳಿತ ಮಂಡಳಿಯ ಬಗ್ಗೆ ಕ್ರಮ ತೆಗೆದುಕೊಂಡು ಅದನ್ನು ಏನಾದರೂ ನಾವು ಹೊಸದಾಗಿ ತೆಗೆದುಕೊಳ್ಳಬೇಕೋ ಅಥವಾ ಯಾವರೀತಿ ಸುಧಾರಿಸಬೇಕು ಎನ್ನುವುದರ ಬಗ್ಗೆ ಪ್ರಯತ್ನ ನಡೆಸಿದ್ದೇವೆ.

(ಮಾನ್ಯ ಉಪಾಧ್ಯಕ್ಷರಾದ ಶ್ರೀ ಎಂ.ಎಸ್. ಪಾಟೀಲ ಅವರು ಅಧ್ಯಕ್ಷ ಪೀಠದಲ್ಲಿ ಉಪಸ್ಥಿತರಾದರು)

**(ಆ) ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ "ಸ್ವಂತ ಮನೆ ಹೊಂದಿ" ಯೋಜನೆಯಡಿಯಲ್ಲಿ ಹಣ ದುರುಪಯೋಗವಾಗಿರುವುದರ ಬಗ್ಗೆ**

ಶ್ರೀ ಎ. ರಾಮದಾಸ್ : (ಕೃಷ್ಣರಾಜ) ಮಾನ್ಯ ಉಪಾಧ್ಯಕ್ಷರೇ, ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಸ್ವಂತ ಮನೆಹೊಂದಿ ಯೋಜನೆಯಲ್ಲಿ ಹಣ ದುರುಪಯೋಗವಾಗಿರುವುದರ ಬಗ್ಗೆ ಮಾನ್ಯ ನಗರಾಭಿವೃದ್ಧಿ ಮಂತ್ರಿಗಳ ಗಮನವನ್ನು ಸೆಳೆಯುತ್ತೇನೆ.

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಮಂತ್ರಿ) : ಮಾನ್ಯ ಉಪಾಧ್ಯಕ್ಷರೇ, ನನ್ನ ಹೇಳಿಕೆಯನ್ನು ಓದುತ್ತೇನೆ.

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಕಳೆದ ಹಲವಾರು ವರ್ಷಗಳಿಂದಲೂ ವಿವಿಧ ಬಡಾವಣೆಗಳಲ್ಲಿ ವಿವಿಧ ವರ್ಗದ ಮನೆಗಳನ್ನು "ಸ್ವಂತ ಮನೆ ಹೊಂದುವ" ಯೋಜನೆಯಲ್ಲಿ ಸಾರ್ವಜನಿಕರಿಗೆ ಹಂಚಲು ಕ್ರಮ ಕೈಕೊಂಡಿರುತ್ತದೆ.

ಈ ಯೋಜನೆಯ ಮನೆಗಳ ನಿರ್ಮಾಣದ ಕೆಲಸಗಳನ್ನು ಟೆಂಡರ್ ಮೂಲಕ ನುರಿತ ಹಾಗೂ ಅನುಭವ ಉಳ್ಳ ಗುತ್ತಿಗೆದಾರರ ಮೂಲಕ ಮಾಡಿಸಲಾಗುತ್ತಿದೆ. ಈ ಮನೆಗಳ ನಿರ್ಮಾಣದ ಕೆಲಸಗಳನ್ನು ಪ್ರಾಧಿಕಾರದ ತಜ್ಞ ಅಭಿಯಂತರರುಗಳಿಂದ ಉಸ್ತುವಾರಿ ಮಾಡಿಸಲಾಗುತ್ತಿದೆ ಹಾಗೂ ಯಾವುದೇ ಕಳಪೆ ಕಾಮಗಾರಿಗಳಿಗೆ ಅವಕಾಶವಿರುವುದಿಲ್ಲ. ಮನೆಗಳು ಪೂರ್ಣಗೊಂಡ ಕೂಡಲೇ ಪ್ರಾಧಿಕಾರದ ವತಿಯಿಂದ ಅಂತಿಮ ಬೆಲೆಯನ್ನು ನಿಗಧಿಪಡಿಸಿ ನಂತರ ಮಂಜೂರಾದವರಿಗೆ ಮನೆಯ ಅಂತಿಮ ಬೆಲೆ ಮತ್ತು ಮತ್ತಿತರ ನಿಯಮಗಳನ್ನು ಪೂರೈಸಿ ಸ್ವಾಧೀನ ಪಡೆಯುವಂತೆ ತಿಳುವಳಿಕೆ ನೀಡಲಾಗುವುದು.

ಮೈಸೂರು ಪ್ರಾಧಿಕಾರವು ಇತ್ತೀಚೆಗೆ ವಿವಿಧ ಬಡಾವಣೆಗಳಲ್ಲಿ ವಿವಿಧ ವರ್ಗದ 1772 ಮನೆಗಳಿಗೆ ಮಂಜೂರಾತಿಗಾಗಿ ಅರ್ಜಿಗಳನ್ನು ಆಹ್ವಾನಿಸಿದ್ದು, ಈ ಪ್ರಕಟಣೆ ಅನುಗುಣವಾಗಿ ಕೇವಲ 390 ಅರ್ಜಿಗಳು ಬಂದಿದ್ದು ಆಯಾಯ ಬಡಾವಣೆಗಳಲ್ಲಿ ಲಭ್ಯವಿರುವ ಮನೆಗಳನ್ನು ಅರ್ಹ ಅರ್ಜಿದಾರರಿಗೆ ಮಂಜೂರು ಮಾಡಲಾಗಿದ್ದು, ಮನೆ ಲಭ್ಯವಿಲ್ಲದ ಬಡಾವಣೆಯಲ್ಲಿ ಮನೆಬೇಕೆಂದು ಅರ್ಜಿ ಸಲ್ಲಿಸಿರುವ ಅರ್ಜಿದಾರರಿಗೆ ಲಭ್ಯವಿರುವ ಬೇರೆ ಬಡಾವಣೆಯಲ್ಲಿ ಅವರಿಂದ ಒಪ್ಪಿಗೆ ಪತ್ರ ಪಡೆದು ಮಂಜೂರಾತಿ ಮಾಡಲಾಗುತ್ತಿದೆ.



ಪ್ರಾಧಿಕಾರವು ಸ್ವಂತ ಮನೆ ಹೊಂದಿ ಯೋಜನೆಯಲ್ಲಿನ ನಿರ್ಮಾಣ ಕೆಲಸವನ್ನು ಯಾವುದೇ ಲಾಭ ಅಥವಾ ನಷ್ಟವಿಲ್ಲದೆ ನಿರ್ಮಿಸುತ್ತಿರುವ ಜೊತೆಗೆ ಸಾರ್ವಜನಿಕರು ತಾವೇ ಸ್ವಂತ ಮನೆಗಳನ್ನು ನಿರ್ಮಿಸಿಕೊಳ್ಳಲು ಸಾಧ್ಯವಾಗದೇ ಇರುವ ಹಾಗೂ ತೀವ್ರಗತಿಯಲ್ಲಿ ಬೆಳೆಯುತ್ತಿರುವ ಮೈಸೂರು ನಗರದ ವಸತಿ ಸಮಸ್ಯೆಯನ್ನು ಸಾಕಷ್ಟು ಮಟ್ಟಿಗೆ ಕಡಿಮೆ ಮಾಡುವ ದೃಷ್ಟಿಯಿಂದ ಯೋಜನೆಯನ್ನು ಕಾರ್ಯಗೊಳಿಸಲಾಗುತ್ತಿದೆ.

"ಸ್ವಂತ ಮನೆ ಹೊಂದಿ ಯೋಜನೆಯಲ್ಲಿ" ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಯಾವುದೇ ಹಣ ದುರುಪಯೋಗವಾಗಿಲ್ಲ ಹಾಗೂ ಕಳಪೆ ಕಾಮಗಾರಿಗಳು ನಡೆದಿರುವುದಿಲ್ಲ. ಸ್ವಂತ ಮನೆ ಹೊಂದಿ ಕಾರ್ಯಕ್ರಮದ ನೀತಿ ನಿಯಮಗಳನ್ನು ಅನುಸರಿಸಿ ಫಲಾನುಭವಿಗಳನ್ನು ಗುರುತಿಸಿ ಮನೆಗಳನ್ನು ಹಂಚಲಾಗುತ್ತಿದೆ.

ಈ ಯೋಜನೆಯಡಿ ಯಾವುದೇ ಹಣ ದುರುಪಯೋಗವಾಗಿರುವ ಬಗ್ಗೆಯಾಗಲೀ ಅಥವಾ ಕಳಪೆ ಕಾಮಗಾರಿಗಳು ನಡೆದಿರುವ ಬಗ್ಗೆಯಾಗಲೀ ಹಾಗೂ ಸೂಕ್ತ ಫಲಾನುಭವಿಗಳಿಗೆ ಮನೆ ದೊರಕದೆ ಇರುವ ವಿಚಾರದಲ್ಲಿಯಾಗಲೀ ಯಾವುದೇ ದೂರು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ಕಳಪೆ ದರ್ಜೆಯ ಕಾಮಗಾರಿಗಳನ್ನು ಮಾಡಿರುವುದು ಕಂಡು ಬಂದಲ್ಲಿ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು.

ಶ್ರೀ ಎ. ರಾಮದಾಸ್ : ಮಾನ್ಯ ಸಚಿವರು ಕೊಟ್ಟಿರುವ ಉತ್ತರ ಸಮರ್ಪಕವಾಗಿಲ್ಲ. ಬೇರೆಬೇರೆ ಸ್ಥಳಗಳಲ್ಲಿ ಸರ್ಕಾರ ಸುಳ್ಳು ಹೇಳುವುದನ್ನು ನೋಡಿದ್ದೇವೆ. ಆದರೆ ಮೈಸೂರು ಅಭಿವೃದ್ಧಿ ಪ್ರಾಧಿಕಾರದ ಸ್ವಂತ ಮನೆ ಹೊಂದಿ ಯೋಜನೆಯಲ್ಲಿ ಇರುವುದೇ ನೆಂದರೆ ಜನರ ಹಣಪಡೆದು ಅವರ ಹಣದಿಂದಲೇ ಮನೆಯನ್ನು ಕಟ್ಟಿಸಿಕೊಡುವ ಯೋಜನೆ. ಎರಡು ವರ್ಷಗಳಲ್ಲಿ ಮನೆಗಳನ್ನು ಕಟ್ಟಿಕೊಡುತ್ತೇವೆ ಎಂದು 1989ರಲ್ಲಿ ಒಂದು ನೋಟಿಫಿಕೇಶನ್ ಅನ್ನು ಈ ಪ್ರಾಧಿಕಾರ ಹೊರಡಿಸಿದೆ. ಅದೆಲ್ಲ ಪತ್ರಿಕೆಗಳಲ್ಲಿ ಕೂಡ ಬಂದಿದೆ. ಇದನ್ನು ತಮ್ಮ ಗಮನಕ್ಕೆ ಕೊಡುತ್ತಿದ್ದೇನೆ. ಎರಡು ವರ್ಷಗಳಲ್ಲಿ ಮನೆ ಕೊಡುತ್ತೇವೆ ಎಂದು ಹೇಳಿ ಸುಮಾರು 3125 ಜನರಿಗೆ ಸುಮಾರು 5 ಕೋಟಿ 42 ಲಕ್ಷದ 97 ಸಾವಿರ ರುಪಾಯಿಗಳನ್ನು ಪಡೆದಿದ್ದಾರೆ. ಆದರೆ ಇಲ್ಲಿ 1772 ಮನೆಗಳನ್ನು ಕಟ್ಟಿಸಿ ಬರೇ 399 ಜನರು ಮಾತ್ರ ಅರ್ಜಿಹಾಕಿದ್ದರು ಎಂದು ಸುಳ್ಳು ಮಾಹಿತಿಯನ್ನು ಕೊಡುತ್ತಿದ್ದಾರೆ. ಎರಡನೇಯದು, ಈ ಅಭಿವೃದ್ಧಿ ಪ್ರಾಧಿಕಾರದಲ್ಲಿ ಈ ಸರ್ಕಾರ ಬಂದಮೇಲೆ ಒಂದು ವರದಿಯನ್ನು ತರಿಸಿಕೊಂಡಿದ್ದಾರೆ. ಆ ವರದಿಯಲ್ಲಿ ಏನಿದೆ ಎಂದರೆ 4 ಕೋಟಿ 78 ಲಕ್ಷ ರೂಪಾಯಿಗಳು ಈಗಾಗಲೇ ಖರ್ಚಾಗಿಬಿಟ್ಟಿದೆ. ಇನ್ನು ಉಳಿದಿರುವುದು ಬರೇ 64 ಲಕ್ಷ ರೂಪಾಯಿಗಳು ಮಾತ್ರ ಎಂದು ಇದೆ. ವರದಿಯಲ್ಲಿ ಏನು ಕೊಟ್ಟಿದ್ದಾರೆ ಎಂದರೆ 3125 ಮನೆಗಳಲ್ಲಿ ಈಗಾಗಲೇ 1614 ಮನೆಗಳನ್ನು ಪೊಸಿಶನ್‌ಗೆ ಕೊಟ್ಟಿದ್ದೇವೆ ಅಂತ ಬರೆದಿದ್ದಾರೆ.

ಉಳಿದಿರುವ 1111 ಮನೆಗಳನ್ನು ಮಾತ್ರ ಕೊಡಬೇಕಾಗಿದೆ ಎಂದು ಹೇಳಿದ್ದಾರೆ. ಹಣ ಬಂದಿರುವುದು 6 ಕೋಟಿಯೊಳಗೆ 5 ಕೋಟಿ ರೂಪಾಯಿಗಳನ್ನು ಖರ್ಚುಮಾಡಿ ಕೇವಲ 64 ಲಕ್ಷ ರೂಪಾಯಿ ಮಾತ್ರ ಸರ್ಕಾರದಲ್ಲಿ ಹಣ ಇದೆ. ಇನ್ನೂ ಕಟ್ಟಬೇಕಾಗಿರುವುದು 1111 ಮನೆಗಳು ಇವೆ. ಅವರಿಂದ ಹಣ ತೆಗೆದುಕೊಂಡು ಯಾವ ಹೆಡ್‌ನಲ್ಲಿ ಹಣವನ್ನು ಖರ್ಚುಮಾಡಿದ್ದಾರೆ ಎನ್ನತಕ್ಕಂಥಾದ್ದು ಇವತ್ತು ಜನರಿಗೆ ಸಂಶಯವಾಗಿದೆ. ಆದರೆ ಇದು ಸರ್ಕಾರದ ಗಮನಕ್ಕೆ ಬಂದಿಲ್ಲವೆಂದು ಹೇಳಿದ್ದಾರೆ. ಸರ್ಕಾರಕ್ಕೆ ಎಲ್ಲ ಮಾಹಿತಿಯೂ ಬಂದು ಅನಂತರ ಅದು ನ್ಯಾಯಾಲಯ ಕಟ್ಟಳೆ ಹತ್ತಿ ನ್ಯಾಯಾಲಯದಲ್ಲಿ ನಿರ್ಧಾರವಾಗಿದೆ ಏನೆಂದರೆ ಇನ್ನು ಎರಡು ವರ್ಷಗಳಲ್ಲಿ ಹಣ ಕಟ್ಟಿರುವವರಿಗೆ ನಾಲ್ಕು ವರ್ಷಗಳ ಬಡ್ಡಿ ಕೊಡಬೇಕು ಮತ್ತು ವಾಸಕ್ಕೆ ಯೋಗ್ಯವಾಗಿರುವ ಮನೆಗಳನ್ನು ಕಟ್ಟಿ ಕೊಡಬೇಕು ಎಂದು ನ್ಯಾಯಾಲಯದ ಆಜ್ಞೆಯಲ್ಲಿದೆ

ಮೈಸೂರು ನಗರದಲ್ಲಿ ಈ ಪರಿಸ್ಥಿತಿ ಇರುವಾಗ ಮಾನ್ಯ ಮಂತ್ರಿಗಳು ಈ ತರಹ ಮಾಹಿತಿಕೊಡುವುದು ಸೂಕ್ತವಲ್ಲವೆಂದು ನಾನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಇನ್ನೊಂದು ವಿಚಾರವೆಂದರೆ ಸರ್ಕಾರದಲ್ಲಿ ಒಂದು ಕಾಂಟ್ರಾಕ್ಟ್‌ಗೆ ಸಹಿ ಹಾಕಿದ್ದಾರೆ. ಎರಡು ವರ್ಷದೊಳಗೆ ವಾಸಕ್ಕೆ ಯೋಗ್ಯವಾಗಿರುವ ನಾವು ಮನೆಗಳನ್ನು ಕಟ್ಟಿಸಿಕೊಡುತ್ತೇವೆ ಎಂದು. ಎರಡು ವರ್ಷದೊಳಗೆ ಹಣ ಕಟ್ಟದೇಹೋದರೆ 18 ಪರ್ಸೆಂಟ್‌ಬಡ್ಡಿಯನ್ನು ಸರ್ಕಾರಕ್ಕೆ ಕೊಡಬೇಕು ಎಂದು ಅವರು ಕಂಡೀಶನ್ ಅನ್ನು ಹಾಕಿದ್ದಾರೆ. ಆದರೆ ಹಣ ಸಂಪೂರ್ಣವಾಗಿ ಪಾವತಿ ಮಾಡಿರುವಂಥಾದ್ದು6 ಕೋಟಿಯಷ್ಟು.

ಅವರು ಹಣ ಪಾವತಿ ಮಾಡಿ ನಾಲ್ಕು ವರ್ಷಗಳು ಕಳೆದಿದೆ. ಆದರೆ ಇನ್ನೂ ಕೂಡ ಅವರಿಗೆ ಮನೆಗಳನ್ನು ಕೊಟ್ಟಿಲ್ಲ. ಮೂರನೇಯದು, ನೋಟಿಫಿಕೇಶನ್‌ನಲ್ಲಿ ಏನು ಹೇಳಿದ್ದಾರೆ ಎಂದರೆ 60x30 ಸೈಟಿನಲ್ಲಿ ಮನೆಕೊಡುತ್ತೇವೆ ಎಂದು. ಆದರೆ ಅವರು ಈಗ ಕಟ್ಟಿರುವುದು 15x60 ರಲ್ಲಿ. ಆ ಪ್ಲಾನ್ ಮತ್ತು ಎಸ್ಟಿಮೇಟ್ ಪ್ರತಿಯನ್ನು ತಮಗೆ ನಾನು ಕಳಿಸಿಕೊಡುತ್ತಿದ್ದೇನೆ. ಮೊದಲಿರುವ ಪ್ಲಾನ್ ಪ್ರಕಾರ ಒಂದು ಮನೆಯನ್ನೂ ಕಟ್ಟಿಲ್ಲ. ಇದಕ್ಕೆ ಯಾರು ಜವಾಬ್ದಾರರು? ಸರ್ಕಾರ ಮೋಸ ಮಾಡಿರುವುದನ್ನು ಯಾರೂ ಪ್ರಶ್ನೆ ಮಾಡುವಹಾಗಿಲ್ಲ. ಆದರೆ ಸಾರ್ವಜನಿಕವಾಗಿ ಚೀಟ್‌ಫಂಡ್ ನವರು ಮೋಸ ಮಾಡಿದ್ದಾರೆ ಎಂದು ಅವನ ಮೇಲೆ ನ್ಯಾಯಾಂಗ ತನಿಖೆಗೆ ಕೇಸನ್ನು ಹಾಕುತ್ತಾರೆ. ಇದು ಒಬ್ಬರ ಪ್ರಶ್ನೆ ಅಲ್ಲ. ಸುಮಾರು 3150 ಜನಗಳ ಪ್ರಶ್ನೆ. ತಮಗೆ ಈ ಫೋಟೋಗಳನ್ನು ಕಳುಹಿಸಿಕೊಡುತ್ತೇನೆ. ದಯಮಾಡಿ, ಮಂತ್ರಿಗಳು ಈ ಬಗ್ಗೆ ಹೇಳಲೇಬೇಕು.

ಶ್ರೀ ವೈಜನಾಥ ಪಾಟೀಲ್ : ಸನ್ಮಾನ್ಯ ಉಪಾಧ್ಯಕ್ಷರೇ,ಕೆಲವು ಮಾಹಿತಿಗಳನ್ನು ಅಧಿಕಾರಿಗಳು ಕಳುಹಿಸುತ್ತಾರೆ ಅದರ ಆಧಾರದ ಮೇಲೆ ನಾನು ಉತ್ತರ ಕೊಟ್ಟಿದ್ದೇನೆ. ಕಳಪೆ ದರ್ಜೆ ಅಥವಾ ಅದರಲ್ಲಿ ಏನೇ ಇರೆಗ್ಯುಲಾರಿಟೀಸ್ ಇದ್ದರೂ ಕ್ರಮ ತೆಗೆದುಕೊಳ್ಳುತ್ತೇನೆ.ಈಗಾಗಲೇ ಮಾನ್ಯಸದಸ್ಯರು ಕೂಡ ಕೆಲವೊಂದು ಮಾಹಿತಿಯನ್ನು ತಂದುಕೊಟ್ಟಿದ್ದಾರೆ. ಅದರ ಬಗ್ಗೆ ಯಾವರೀತಿಯ ವಿಚಾರಣೆ ಬೇಕೋ ಆ ರೀತಿಯ ವಿಚಾರಣೆ ಮಾಡುವುದಕ್ಕೆ ಸಿದ್ಧನಿದ್ದೇನೆ ಹಾಗೂ ಸಂಬಂಧಪಟ್ಟವರ ಮೇಲೆ ಕ್ರಮ ತೆಗೆದುಕೊಳ್ಳುವುದಕ್ಕೆ ಸರ್ಕಾರ ಸಿದ್ಧವಿದೆ.

(ಗೊಂದಲ)

ಶ್ರೀ ಬಿ.ಎಸ್. ಯಡಿಯೂರಪ್ಪ : ಮಾನ್ಯ ಉಪಾಧ್ಯಕ್ಷರೇ, ನಾನು ಒಂದೇ ವಿಷಯವನ್ನು ತಮ್ಮಲ್ಲಿ ಕೇಳುವುದು. ಈ ಸದನದಲ್ಲಿ ಗೌರವಾನ್ವಿತ ಸದಸ್ಯರು, ಎಲ್ಲಾ ಮಾಹಿತಿಯನ್ನು ಇಟ್ಟುಕೊಂಡು ಬಂದು, ಸಚಿವರು ಕೊಟ್ಟಿರತಕ್ಕ ಉತ್ತರ ಸರಿಯಲ್ಲ ಎಂದು ದಾಖಲೆಗಳನ್ನು ಕೊಡುತ್ತಿದ್ದಾರೆ. ಇವತ್ತು ಕ್ರಮ ತೆಗೆದುಕೊಳ್ಳುತ್ತೇನೆಂದು ಹೇಳುತ್ತಿದ್ದಾರೆ, ತುಂಬಾ ಸಂತೋಷ ಇದರ ಜೊತೆಯಲ್ಲಿ ಸಾಮಾನ್ಯ ಜನರಿಂದ ದುಡ್ಡು ತೆಗೆದುಕೊಂಡು, 4 ವರ್ಷ ಕಳೆದ ಮೇಲೆ ಅವರು ಬೀದಿಪಾಲು ಆಗತಕ್ಕ ಸ್ಥಿತಿ ಏನಿದೆ, ಇದು ಚೀಟಿಂಗ್‌ತಾನೆ. ಇದರ ಬಗ್ಗೆ ಕ್ರಮ ತೆಗೆದುಕೊಳ್ಳಬೇಕು ಅಷ್ಟೇ ಅಲ್ಲ, ಅವರಿಗೆ ಮನೆ ಕಟ್ಟಿಕೊಡತಕ್ಕ ಆಶ್ವಾಸನೆಯನ್ನು ಸಹ ಕೊಡಬೇಕು. ಒಪ್ಪಂದದಂತೆ ಸಾಮಾನ್ಯ ಜನರಿಂದ ದುಡ್ಡು ತೆಗೆದುಕೊಂಡಮೇಲೆ, ಮನೆ ಕಟ್ಟಿಕೊಡತಕ್ಕ ಜವಾಬ್ದಾರಿ ಸರ್ಕಾರದ್ದು.

ಶ್ರೀ ವೈಜನಾಥ ಪಾಟೀಲ್ : ಇದರ ಬಗ್ಗೆ ಸಂಪೂರ್ಣ ವಿಚಾರಣೆ ಮಾಡಿ, ಯಾರು ಜವಾಬ್ದಾರರು ಇದ್ದಾರೆ, ಮನೆ ಕಟ್ಟಿಕೊಡಲಾದ ಕಾರಣ ಯಾರಿದ್ದಾರೆ, ಅವರ ವಿರುದ್ಧವೂ ಕೂಡ ಕ್ರಮ ತೆಗೆದುಕೊಳ್ಳತ್ತೇನೆ.

ಉಪಾಧ್ಯಕ್ಷರು : ಕ್ರಮ ತೆಗೆದುಕೊಳ್ಳುತ್ತೇನೆ ಎಂದು ಹೇಳುವುದರಲ್ಲಿ ಎಲ್ಲಾ ಅರ್ಥ ಬರುತ್ತದೆ.

ಶ್ರೀ ವೈಜನಾಥ ಪಾಟೀಲ್ : ಇದುವರೆಗೆ ಮನೆ ಕಟ್ಟಿಕೊಡಬೇಕಾಗಿತ್ತು. ಯಾರು ಕಟ್ಟಿಕೊಟ್ಟಿಲ್ಲ ಅಥವಾ ಒಂದು ವೇಳೆ ಮಾಹಿತಿ ಕೊಡುವುದರಲ್ಲಿ ತಪ್ಪಿದ್ದರೆ ಅವರ ವಿರುದ್ಧವೂ ಕ್ರಮ ತೆಗೆದುಕೊಳ್ಳುತ್ತೇವೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ಮನೆ ಕಟ್ಟಿಕೊಡುತ್ತೇವೆಂದು ಹೇಳಿದ್ದಾರೆ, ಆದರೆ ಜನರಿಂದ ದುಡ್ಡು ಏನು ತೆಗೆದುಕೊಂಡಿದ್ದಾರೆ, ಅಂತಹ ಅಧಿಕಾರಿಗಳ ಮೇಲೂ ಕ್ರಮ ತೆಗೆದುಕೊಳ್ಳಿ. ದುಡ್ಡು ತೆಗೆದುಕೊಂಡಿರುವವರಿಗೆ, ಮನೆ ಕಟ್ಟಿಕೊಡುತ್ತೇವೆಂಬ ಆಶ್ವಾಸನೆ ಕೊಟ್ಟರೆ ಸಾಕು.

ಶ್ರೀ ವೈಜನಾಥ ಪಾಟೀಲ್ : ದುಡ್ಡು ತೆಗೆದುಕೊಂಡ ಮೇಲೆ ಮನೆಗಳನ್ನು ಕಟ್ಟಿಕೊಂಡಬೇಕಾಗಿತ್ತು. ಆ ಮನೆಗಳನ್ನು ಕಟ್ಟಿಕೊಡುತ್ತೇವೆ.

ಶ್ರೀ ಎ. ರಾಮದಾಸ್ : 1,300 ಜನಕ್ಕೆ ನೋಟೀಸ್ ಕೊಟ್ಟಿದ್ದಾರೆ. ನಾನು ಏತಕ್ಕೆ ಈ ಪ್ರಶ್ನೆಯನ್ನು ಮತ್ತೆ ಮತ್ತೆ ಕೇಳುತ್ತಿದ್ದೇನೆಂದರೆ, 23 ಸಾವಿರ ರೂಪಾಯಿಗಳನ್ನು ಕೊಟ್ಟಿದ್ದವರಿಗೆ,ಪುನಃ 23 ಸಾವಿರ ರೂಪಾಯಿ ಎಸ್ಕಲೇಷನ್ ಚಾರ್ಜ್ ಕಟ್ಟಬೇಕು, ಇಲ್ಲದೇ ಹೋದರೆ, ಮನೆ ಕ್ಯಾನ್ಸಲ್ ಮಾಡುತ್ತೇವೆಂದು ಹೇಳಿದ್ದಾರೆ. ನೀವು ಈ ರೀತಿ ಒಂದು ವಾರದೊಳಗೆ ರದ್ದು ಮಾಡುತ್ತೀರಾ?

(ಗೊಂದಲ)

ಒಬ್ಬ ಸದಸ್ಯರು : ಮಂತ್ರಿಗಳಿಂದ, ನಮಗೆ ಕೊಟ್ಟಿರತಕ್ಕ ಉತ್ತರಗಳು ತಪ್ಪಿದೆ.

ಉಪಾಧ್ಯಕ್ಷರು : ತೆಗೆದುಕೊಳ್ಳುತ್ತೇನೆಂದು ಈಗತಾನೆ ಮಂತ್ರಿಗಳು ಹೇಳಿದ್ದಾರೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ತಾವು ಸಹಕರಿಸಬೇಕು. ಈ ಸದನದ ಕಾರ್ಯಕಲಾಪ ನಡೆಯಬೇಕು, ಸರಿಯಾಗಿ ಉತ್ತರಗಳೂ ಸಿಗಬೇಕು. ಮತ್ತು ಜನರಿಗೆ ನ್ಯಾಯ ಸಿಗಬೇಕೆಂಬ ದೃಷ್ಟಿಯಿಂದ, ನಮ್ಮ ಕರ್ತವ್ಯವನ್ನು ನಾವು ಮಾಡುತ್ತಿದ್ದೇವೆ. ಯಾವುದನ್ನೂ ಹೇಳಬಾರದೆಂದು ತಾವು ಹೇಳುವುದಾದರೆ, ತಾವು ಹೇಗೆ ಬೇಕಾದರೂ ಈ ಸದನವನ್ನು ನಡೆಸಬಹುದು.

ಉಪಾಧ್ಯಕ್ಷರು : ನಾನು ಹೇಳಬಾರದೆಂದು ಹೇಳಲಿಲ್ಲ.

ಶ್ರೀ ಆರ್.ಎಲ್. ಜಾಲಪ್ಪ (ಕಂದಾಯ ಸಚಿವರು) : ಮಾನ್ಯ ಸದಸ್ಯರು ಒಂದಲ್ಲ, ಎರಡು ಸಲ ಸುಮಾರು ಅರ್ಧ ಗಂಟೆಯಿಂದ ಚರ್ಚೆ ಮಾಡುತ್ತಿದ್ದಾರೆ. ಮಾನ್ಯಮಂತ್ರಿಗಳೂ ಕ್ರಮ ತೆಗೆದುಕೊಳ್ಳುತ್ತೇವೆಂದು ಹೇಳಿದ್ದಾರೆ, ಅದರ ಮೇಲೆ ಇನ್ನೇನು ಹೇಳುವುದಕ್ಕಾಗುತ್ತದೆ?

ಶ್ರೀ ಬಿ.ಎಸ್. ಯಡಿಯೂರಪ್ಪ : ತಾವು ಕೂಡ ಗಮನಿಸುತ್ತಿದ್ದೀರಿ. ಒಂದು ಕ್ಷಣ ವ್ಯರ್ಥ ಮಾಡುವುದಕ್ಕೆ ನಾವು ಸಿದ್ಧವಿಲ್ಲ.

ಉಪಾಧ್ಯಕ್ಷರು : ತಾವು ಈಗ ಮಾಡಿದ್ದಾದರೂ ಏನು?

ಶ್ರೀ ಬಿ.ಎಸ್. ಯಡಿಯೂರಪ್ಪ : ತಾವು ಈ ರೀತಿ ಹೇಳಿದರೆ, ನಾವು ಕೆಲಸ ಮಾಡುವುದು ಕಷ್ಟವಾಗುತ್ತದೆ. ಯಾರದೋ ತಪ್ಪಿಗೆ ಎಸ್ಕಲೇಷನ್ ಚಾರ್ಜ್ ಎಂದು ಆ ಬಡವನ ಮೇಲೆ ಹಾಕುವುದು ಬೇಡ.ಕ ಹಿಂದೆ ಯಾವ ನಿಯಮದ ಮೇಲೆ, ಒಪ್ಪಂದ ಮಾಡಿಕೊಂಡು, ದುಡ್ಡು ತೆಗೆದುಕೊಂಡಿದ್ದಾರೋ, ಅದೇರೀತಿ ಮನೆ ಕಟ್ಟಿಸಿಕೊಡತಕ್ಕ ಆಶ್ವಾಸನೆ ಕೊಡಿ ಎಂದಷ್ಟೇ ಕೇಳುತ್ತಿದ್ದೇವೆ.

ಉಪಾಧ್ಯಕ್ಷರು : ಮನೆ ಕಟ್ಟಿಸಿಕೊಡುತ್ತೇವೆಂದೂ ಹೇಳಿದ್ದಾರೆ, ಕ್ರಮ ತೆಗೆದುಕೊಳ್ಳತ್ತೇವೆಂದೂ ಸಹ ಹೇಳಿದ್ದಾರೆ.

ಶ್ರೀ ವೈಜನಾಥ ಪಾಟೀಲ್ : ಮನೆ ಕಟ್ಟಿಸಿ ಕೊಡುವ ಬಗ್ಗೆ ಹೇಳಿದ್ದೇನೆ. ಇನ್ನು ಕಳಪೆ ದರ್ಜೆ ವಿಷಯದ ಬಗ್ಗೆ ಹೇಳಿದ್ದಾರೆ, ಅದರ ಬಗ್ಗೆ ವಿಚಾರಣೆ ಮಾಡಿ, ಅವರ ವಿರುದ್ಧವೂ ಕ್ರಮ ತೆಗೆದುಕೊಳ್ಳುತ್ತೇನೆಂದು ಹೇಳಿದ್ದೇನೆ.

ಶ್ರೀ ಎ. ರಾಮದಾಸ್ : ಮನೆಗಳ ಬೆಲೆಯನ್ನು ಜಾಸ್ತಿ ಮಾಡುವುದು ಬೇಡ ಎನ್ನುವ ವಿಚಾರ ಇದೆ. 23 ಸಾವಿರ ರೂಪಾಯಿಗಳಿದ್ದ ಮನೆಗಳಿಗೆ 46 ಸಾವಿರ ರೂಪಾಯಿಗಳನ್ನು ಹಾಕಿದ್ದಾರೆ. ಈಗ ನೋಟೀಸ್ ಕೊಟ್ಟಿದ್ದಾರೆ. ಇದರ ಬಗ್ಗೆ ದಯಮಾಡಿ ಹೇಳಬೇಕು.

ಶ್ರೀ ಆರ್.ಎಲ್. ಜಾಲಪ್ಪ : ಮಾನ್ಯ ಯಡಿಯೂರಪ್ಪನವರಿಗೆ, ಇದೇನು ಹೊಸದಲ್ಲ. ಕೆಲವು ಅಗ್ರಿ ಮೆಂಟ್‌ಗಳಲ್ಲಿ ಎಸ್ಕಲೇಷನ್ ಚಾರ್ಜಸ್ ಬರುತ್ತದೆ. ಆದರೆ, ಇನ್ನು ಯರೂ ಫಾಲಾನುಭವಿಗಳಿದ್ದಾರೋ ಅವರೇ ಕೊಡಬೇಕು. ಕೆಲವು ಅಗ್ರಿಮೆಂಟ್‌ನಲ್ಲಿ ಇದು ಇರುತ್ತದೆ. ಆದರೆ, ಇಲ್ಲಿ ಯಾವರೀತಿ ಇದೆ ಎನ್ನುವುದನ್ನು ಪರಿಶೀಲನೆ ಮಾಡಿ, ಕ್ರಮ ತೆಗೆದುಕೊಳ್ಳುತ್ತೇನೆಂದು ಹೇಳಿದ್ದಾರೆ. ಅದರ ಮೇಲೆ ಪುನಃ ಚರ್ಚೆ ಏಕೆ?

**ಮೈಸೂರು ಜಿಲ್ಲೆಯಲ್ಲಿ ನಾಯಕ ಜನಾಂಗದ ಪರ್ಯಾಯ ಜಾತಿಯ ಪರಿವಾರ ಜಾತಿಯವರಿಗೆ ಪರಿಶಿಷ್ಟವರ್ಗದ ಪ್ರಮಾಣ ಪತ್ರ ನೀಡದಿರುವ ವಿಚಾರದ ಬಗ್ಗೆ**

ಶ್ರೀ ವಾಟಾಳ್ ನಾಗರಾಜ್ (ಚಾಮರಾಜನಗರ) : ಮಾನ್ಯ ಅಧ್ಯಕ್ಷರೇ, ಮೈಸೂರು ಜಿಲ್ಲೆಯಲ್ಲಿ ನಾಯಕ ಜನಾಂಗದ ಪರ್ಯಾಯ ಜಾತಿಯ ಪರಿವಾರ ಜಾತಿಯವರಿಗೆ, ಪರಿಶಿಷ್ಟ ವರ್ಗದ ಪ್ರಮಾಣ ಪತ್ರವನ್ನು ನೀಡದಿರುವುದರಿಂದ ಆ ಜಾತಿಯವರಿಗೆ ಶಿಕ್ಷಣ ಹಾಗೂ ಸರ್ಕಾರಿ ಹುದ್ದೆಗಳಿಗೆ ಸೇರಲು ತುಂಬಾ ತೊಂದರೆಯಾಗುರುವ ಬಗ್ಗೆ ಸಮಾಜ ಕಲ್ಯಾಣ ಮಂತ್ರಿಗಳ ಗಮನ ಸೆಳೆಯುತ್ತೇನೆ. ಮಾನ್ಯ ಮಂತ್ರಿಗಳ ಲಿಖಿತ ಹೇಳಿಕೆಯ ಪ್ರತಿ ನಮಗೆ ಇನ್ನೂ ಬಂದಿಲ್ಲ.

ಒಬ್ಬ ಮಾನ್ಯ ಸದಸ್ಯರು : ಈ ಸದನದಲ್ಲಿ, ಪರಿಶಿಷ್ಟ ಪಂಗಡವನ್ನು ಪ್ರತಿನಿಧಿಸಿ, ವಿರೋಧ ಪಕ್ಷದಲ್ಲಿರುವವರಲ್ಲಿ ನಾನು ಒಬ್ಬ. ಆದುದರಿಂದ,ನನಗೆ ಮಾತನಾಡಲು ಅವಕಾಶ ಕೊಡಬೇಕು.

ಉಪಾಧ್ಯಕ್ಷರು : ತಾವು ಬರೆದು ಕಳುಹಿಸಿಕೊಡಿ,ತಮಗೆ ಅವಕಾಶ ಮಾಡಿಕೊಡುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ನಮಗೆ ಮಂತ್ರಿಗಳ ಹೇಳಿಕೆ ಕಾಪಿ ಬಂದಿಲ್ಲ. ಇದರ ಬಗ್ಗೆ 10 ನಿಮಿಷ ಬಿಟ್ಟು ಹೇಳಲಿ.

ಶ್ರೀ ಬಿ.ಎಸ್. ಯಡಿಯೂರಪ್ಪ : ಮಂತ್ರಿಗಳ ಹೇಳಿಕೆ ಕಾಪಿ ನಮಗೂ ಬಂದಿಲ್ಲ. ಪ್ರಮುಖವಾದ ವಿಷಯಗಳು ಪತ್ರಿಕೆಯಲ್ಲೂ ಬರಬೇಕಾಗುತ್ತದೆ. ಜೊತೆಗೆ ನೀವು ಏನು ತೀರ್ಮಾನ ತೆಗೆದುಕೊಂಡಿದ್ದೀರೆಂಬುದು ನಮಗೂ ಗೊತ್ತಾಗಬೇಕಾಗುತ್ತದೆ.

ಶ್ರೀ ವಾಟಾಳ್ ನಾಗರಾಜ್ : ಈ ಪ್ರತಿ ಬರುವವರೆಗೂ ಇದು ಹಾಗೆಯೇ ಇರಲಿ. ಇನ್ನೂ 10 ನಿಮಿಷ ಬಿಟ್ಟು ಬೇಕಾದರೂ ಹೇಳಲಿ. ನನ್ನದೇನೂ ಅಭ್ಯಂತರವಿಲ್ಲ. ಏಕೆಂದರೆ ಇದರ ಪ್ರತಿ ಯಾರಿಗೂ ಬಂದಿಲ್ಲ.

ಶ್ರೀ ಬಿ.ಎಸ್. ಯಡಿಯೂರಪ್ಪ : ಪ್ರತಿಗಳು ಬರಲಿಲ್ಲವೆಂದು ಹೇಳಿದರೆ, ಅಧಿಕಾರಿಗಳು ಏನು ಮಾಡುತ್ತಾರೆ? ಮಂತ್ರಿಗಳು ಏನು ಮಾಡುತ್ತಾರೆ? ಇದರ

ಕಾಪಿ ಸಪ್ಪೈ ಮಾಡಬೇಕೆಂಬ ಸಾಮಾನ್ಯ ಸಂಗತಿಗೂ ತಾವು ಗಮನ ಕೊಡದಿದ್ದರೆ ಹೇಗೆ? ಅದರಲ್ಲೂ ಇಂತಹ ಪ್ರಮುಖವಾದ ವಿಷಯದ ಬಗ್ಗೆ.

ಶ್ರೀ ರಮೇಶ್. ಸಿ. ಜಿಗಜಿಣಗಿ (ಸಮಾಜ ಕಲ್ಯಾಣ ಸಚಿವರು) : ಮಾನ್ಯರ ಉಪಾಧ್ಯಕ್ಷರೇ, ನಾನು ಓದಿ, ನಂತರ ಸದಸ್ಯರಿಗೆ ಕೊಡುತ್ತೇನೆ. ಇಲ್ಲವೇ ಎರಡು ನಿಮಿಷ ಬಿಟ್ಟು ಮಾನ್ಯ ಸದಸ್ಯರಿಗೆ ಕಾಪಿಗಳನ್ನು ಕಳುಹಿಸಿಕೊಡುತ್ತೇನೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಪಟ್ಟಿಗೆ ಯಾವುದೇ ಜಾತಿ ಅಥವಾ ವರ್ಗವನ್ನು ಸೇರಿಸುವ ಅಧಿಕಾರ ಕೇಂದ್ರ ಸರ್ಕಾರಕ್ಕೆ ಮಾತ್ರ ಇರುತ್ತದೆ. ರಾಜ್ಯ ಸರ್ಕಾರ ಯಾವುದೇ ಜಾತಿಗಳನ್ನು ಅಥವಾ ಪಂಗಡಗಳನ್ನು ಪರಿಶಿಷ್ಟ ಜಾತಿ ಅಥವಾ ವರ್ಗಗಳ ಪಟ್ಟಿಗೆ ಸೇರಿಸಬೇಕೆಂದು ಶಿಫಾರಸು ಮಾಡಬಹುದೇ ಹೊರತು ಕೇಂದ್ರ ಸರ್ಕರ ಪ್ರಕಟಿಸಿರುವ ಪಟ್ಟಿಗೆ ಯಾವುದೇ ವರ್ಗವನ್ನಾಗಲೀ ಅಥವಾ ಜಾತಿಯನ್ನಾಗಲೀ ಸೇರಿಸುವ ಅಧಿಕಾರವಿರುವುದಿಲ್ಲ.

ಕರ್ನಾಟಕ ರಾಜ್ಯಕ್ಕೆ ಸಂಬಂಧಿಸಿದಂತೆ ಪ್ರಕಟಿಸಿರುವ ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ನಾಯಕ (Nayaka) ನಾಯಕ್(Nayak)ನಾಯ್ಕ (Naik) ಬೇಡ, ಬೇಡರ್ ಮತ್ತು ವಾಲ್ಮೀಕಿ ಪಂಗಡಗಳನ್ನು ಈಗಾಗಲೇ ಸೇರಿಸಲಾಗಿದೆ. ಪರಿವಾರ ಮತ್ತು ತಳವಾರ ಪಂಗಡಗಳು ನಾಯಕ್‌ಜನಾಂಗದ ಪರಿಯಾಯ ಪದಗಳೆಂದು ರಾಜ್ಯ ಸರ್ಕಾರವು ಈಗಾಗಲೇ ಪರಿಗಣಿಸಿದ್ದು ನಾಯಕ, ಸಾಯಕ್, ಬೇಡ, ಬೇಡರ್, ವಾಲ್ಮೀಕಿ ಪಂಗಡಗಳ ಜಾತಿಗೆ ಈ ಪಂಗಡಗಳನ್ನು ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸಲು ರಾಜ್ಯ ಸರ್ಕಾರವು ದಿನಾಂಕ 16-8-84ರ ಪತ್ರದಲ್ಲಿ ಕೇಂದ್ರ ಸರ್ಕಾರವನ್ನು ಕೋರಲಾಗಿದ್ದು ಕೇಂದ್ರ ಸರ್ಕಾರವು ನಾಯಕ, ನಾಯಕ್,ನಾಯ್ಕ ಬೇಡ, ಬೇಡರ್, ವಾಲ್ಮೀಕಿ ಪಂಗಡಗಳನ್ನು ಮಾತ್ರ ದಿನಾಂಕ 10-4-91ರಿಂದ ಜಾರಿಗೆ ಬರುವಂತೆ ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸಿರುತ್ತಾರೆ. ಪರಿವಾರ ಮತ್ತು ತಳವಾರ ಜನಾಂಗವನ್ನು ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸುವಂತೆ ಕೇಂದ್ರ ಸರ್ಕರವನ್ನು ಮೇಲಿಂದ ಮೇಲೆ ರಾಜ್ಯ ಸರ್ಕಾರವು ನೆನಪೋಲೆಗಳ ಮೂಲಕ ಒತ್ತಡವನ್ನು ತರುತ್ತಿದೆ. ಆದರೂ ಸಹ ಈವರೆಗೆ ಈ ಜಾನಾಂಗವನ್ನು ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸಿರುವುದಿಲ್ಲ. ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸದೇ ಇರುವ ಪ್ರಯುಕ್ತ ಈ ಜನಾಂಗಗಳಿಗೆ ಸೇರಿದ ವ್ಯಕ್ತಿಗಳಿಗೆ ಪರಿಶಿಷ್ಟ ವರ್ಗದವರೆಂದು ಪರಿಗಣಿಸಿ ಜಾತಿ ದೃಢೀಕರಣ ಪತ್ರವನ್ನು ನೀಡಲು ಬರುವುದಿಲ್ಲ. ಆದಾಗ್ಯೂ ಈ ಜನಾಂಗವನ್ನು ಪರಿಶಿಷ್ಟ ವರ್ಗದ ಪಟ್ಟಿಯಲ್ಲಿ ಸೇರಿಸಬೇಕೆಂದು ಮತ್ತೊಮ್ಮೆ ಒತ್ತಾಯಿಸಲು ವಿಷಯವನ್ನು ಸಚಿವ ಸಂಪುಟದ ಮುಂದೆ ತರಲಾಗಿದೆ. ಸಚಿವ ಸಂಪುಟದ ತೀರ್ಮಾನದ ನಂತರ ಪುನಃ ಕೇಂದ್ರ ಸರ್ಕರಕ್ಕೆ ಈ ಬಗ್ಗೆ ಬರೆದು ಆದಷ್ಟು ಬೇಗ ಈ ಜನಾಂಗವನ್ನು ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸುವಂತೆ ಕೋರಲಾಗುವುದು.

ಮಾನ್ಯ ಸದಸ್ಯರಾದ ಶ್ರೀ ವಾಟಾಳ್ ನಾಗರಾಜ್ ಅವರು ಮೈಸೂರು ನಗರ ಹಾಗೂ ಜಿಲ್ಲೆಯಲ್ಲಿ ಪರಿಶಿಷ್ಟ ವರ್ಗದ ಜಾತಿ ದೃಢೀಕರಣ ಪತ್ರವನ್ನು ಪಡೆಯಲು ನಾಯಕ ಜನಾಂಗಕ್ಕೆ ಸೇರಿದ ವ್ಯಕ್ತಿಗಳು ಕಿರುಕುಳವನ್ನು ಅನುಭವಿಸುತ್ತಿರುವುದಾಗಿ ತಿಳಿಸಿರುತ್ತಾರೆ. ನಾಯಕ ಜನಾಂಗಕ್ಕೆ ಸೇರಿದ ವ್ಯಕ್ತಿಗಳು ತೊಂದರೆ ಅನುಭವಿಸುತ್ತಿರುವುದಾಗಿ ಯಾವುದೇ ದೂರು ಸರ್ಕರದ ಗಮನಕ್ಕೆ ಬಂದಿರುವುದಿಲ್ಲ. ನಾಯಕ ಜನಾಂಗವನ್ನು ಈಗಾಗಲೇ ಪರಿಶಿಷ್ಟ ವರ್ಗದ ಪಟ್ಟಿಗೆ ಸೇರಿಸಿರುವ ಪ್ರಯುಕ್ತ ಈ ಜನಾಂಗಕ್ಕೆ ಯಾವುದೇ ರೀತಿಯಲ್ಲಿ ತೊಂದರೆಯಾಗದಂತೆ ಸಕಾಲದಲ್ಲಿ ದೃಢೀಕರಣ ಪತ್ರವನ್ನು ನೀಡುವಂತೆ ಈಗಾಗಲೇ ಅನೇಕ ಸುತ್ತೋಲೆಗಳನ್ನು ಹೊರಡಿಸಿ ಜಿಲ್ಲಾಧಿಕಾರಿಗಳಿಗೆ

ಸೇರಿದ ವ್ಯಕ್ತಿಗಳಿಗೆ ಜಾತಿ ದೃಢೀಕರಣ ಪತ್ರವನ್ನು ಪಡೆಯುವಲ್ಲಿ ತೊಂದರೆ ಆಗದಂತೆ ನೋಡಿಕೊಳ್ಳಲಾಗುವುದು.

ಪರಿವಾರ ಮತ್ತು ತಳವಾರ ಜನಾಂಗವನ್ನು ಹಿಂದುಳಿದ ವರ್ಗಗಳ ಪಟ್ಟಿ-ಅ ಗುಂಪಿನಲ್ಲಿ ಸೇರಿಸಲಾಗಿದೆ. ಸದರಿ ಗುಂಪಿಗೆ ಸೇರಿದ ಎಲ್ಲಾ ಸೌಲಭ್ಯಗಳನ್ನು ಈ ಜನಾಂಗದವರು ಅನುಭವಿಸುತ್ತಿದ್ದಾರೆ. ಕೇಂದ್ರ ಸರ್ಕಾರವು ಪರಿವಾರ ಮತ್ತು ತಳವಾರ ಜನಾಂಗವನ್ನು ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸುವವರೆಗೆ ಇವರಿಗೆ ಪರಿಶಿಷ್ಟ ವರ್ಗದವರಿಗೆ ದೊರೆಯುವ ಶಿಕ್ಷಣದಲ್ಲಿ ರಿಯಾಯಿತಿ ಮತ್ತು ವೃತ್ತಿಪರ ಶಿಕ್ಷಣದಲ್ಲಿ ಪ್ರವೇಶ ಮೀಸಲಾತಿಯನ್ನು ನೀಡಲು ಸರ್ಕಾರ ಈಗಾಗಲೇ ಆದೇಶ ಸಂಖ್ಯೆ:ಸಕಇ63 ಎಸ್ಎಡಿ 85 ದಿನಾಂಕ 23-1-86ರಲ್ಲಿ ಆದೇಶವನ್ನು ನೀಡಲಾಗಿದೆ.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೇ, "ಈ ಪರಿವಾರ ಜನಾಂಗ ಇವರನ್ನು ಪರಿಶಿಷ್ಟ ವರ್ಗಕ್ಕೆ ಸೇರಿಸುವ ಬಗ್ಗೆ ರಾಜ್ಯ ಸರ್ಕಾರ ನಿರ್ಧಾರ ಕೈಗೊಂಡಿದೆ. ನಾವು ಕೇಂದ್ರ ಸರ್ಕಾರದ ಜೊತೆಯಲ್ಲಿ ಆಗಾಗ್ಗೆ ಪತ್ರಗಳನ್ನು ಬರೆದಿದ್ದೇವೆ. ಈಗಲೂ ಸಹ ಸಚಿವ ಸಂಪುಟದಲ್ಲಿ ತೀರ್ಮಾನ ಕೈಗೊಂಡು ಕೇಂದ್ರ ಸರ್ಕಾರದ ಮೇಲೆ ಒತ್ತಾಯ ತರುತ್ತೇವೆ." - ಅಂತ ಉತ್ತರದಲ್ಲಿ ಹೇಳಿದ್ದಾರೆ. ಇದು ಬರೇಪತ್ರಗಳನ್ನು ಬರೆದು ಒತ್ತಾಯ ತರತಕ್ಕಂಥಾದ್ದು ಅಲ್ಲ. ಲೋಕಸಭೆಯಲ್ಲಿ ತಿದ್ದುಪಡಿ ರೂಪದಲ್ಲಿ ತರಬೇಕಾದುದು ಒಂದು. ಅಥವಾ ತಿದ್ದುಪಡಿಯೇ ಇಲ್ಲದೇ ಸುಗ್ರೀವಾಜ್ಞೆಯನ್ನು ಅವರು ಹೊರಡಿಸಬಹುದು. ಇದರಲ್ಲಿ ಎರಡು ಮಾರ್ಗ ಇದೆ. ಆದ್ದರಿಂದ ತಾವು ಇದರ ಬಗ್ಗೆ ಪತ್ರ ಬರೆಯುವದಕ್ಕಿಂತ ಹೆಚ್ಚಾಗಿ ತಾವೇ ನೇರವಾಗಿ ಹೋಗಿ ಅಲ್ಲಿ ಕುಳಿತು ಇಷ್ಟು ದಿವಸದೊಳಗಾಗಿ ನಾನು ಆದೇಶವನ್ನು ತರುತ್ತೇನೆ ಎನ್ನತಕ್ಕಂಥ ಒಂದು ಭರವಸೆಯನ್ನು ಕೊಡಬೇಕು, ಏಕೆಂದರೆ ನೀವು, ಭರವಸೆ ಕೊಡಲಿಲ್ಲ ಅಂತಹೇಳಿದರೆ ಈಗಾಗಲೇ ತಾವು ಹೇಳಿದ್ದೀರಿ - ಅಧಿಕಾರಿಗಳಿಗೆ ಆದೇಶ ಹೊರಡಿಸಿದ್ದೇವೆ ಅಂತ ನಿಮಗೆ ಹೇಳುವುದಾದರೆ ಮೈಸೂರು ಜಿಲ್ಲೆಯಲ್ಲಿ ಈ ಜನಾಂಗ ಒಂದು ರೀತಿಯಲ್ಲಿ ನರಕದಲ್ಲಿ ಬದುಕುತ್ತಿದ್ದಾರೆ. ಒಂದು ಕಡೆ ಈ ಜನಾಂಗಕ್ಕೆ ತಹಶೀಲ್ದಾರ್ಸ್ ಸರ್ಟಿಫಿಕೇಟ್ ಕೊಡುತ್ತಾರೆ, ಜಿಲ್ಲಾಧಿಕಾರಿ ಒಂದು ಕಡೆ ಸರ್ಟಿಫಿಕೇಟ್ ಕೊಟ್ಟಂಥ ತಹಶೀಲ್ದಾರ್‌ರನ್ನು ಮನೆಗೆ ಕಳುಹಿಸಿತ್ತೇವೆ ಅಂತ ಹೇಳುತ್ತಾರೆ.

ಜಿಲ್ಲಾಧಿಕಾರಿಗೆ ನೀತಿ ಸರಿ ಇಲ್ಲ ಅಂತ ಹೇಳಿ ನಾವು ಮಾತನಾಡುವುದಕ್ಕೆ ಹೋದರೆ ನೀವು ಯಾರು ಮಾತನಾಡುವುದಕ್ಕೆ ಅಂತ ಅವರು ಹೇಳುತ್ತಾರೆ. ಇದು ನಮಗೆ ಇಕ್ಕಟ್ಟಿಗೆ ಸಿಕ್ಕಿರತಕ್ಕಂಥಾದ್ದು. ಆದ್ದರಿಂದ ನಾನು ತಮ್ಮ ಮೂಲಕ ಸರ್ಕಾರವನ್ನು ಪ್ರರ್ಥನೆ ಮಾಡತಕ್ಕಂಥಾದ್ದು ಅದೂಮೈಸೂರು ಜಿಲ್ಲಾಧಿಕಾರಿಗಳು ಇದ್ದಾರಲ್ಲ ಅವರಿಗೆ ಈ ಜನಾಂಗವನ್ನು ಕಂಡರೆ ಒಂದು ರೀತಿ ಆಗುವುದಿಲ್ಲ. ಪಾಪ ನನಗೇನೂ ವೈಯುಕ್ತಿವಾಗಿ ದ್ವೇಷ ಇಲ್ಲ ಅವರ ಮೇಲೆ. ನಾನು ಅವರ ಜೊತೆಯಲ್ಲಿ ಹೋಗಿ ಕಾದಿ ಬೇಡಿ ಕೈ ಮುಗಿಯುವುದು ಒಂದು ಬಿಟ್ಟು ಮಿಕ್ಕ ಎಲ್ಲವನ್ನು ಮಾಡಿದ್ದೇನೆ. ಆದರೆ ಈಜನಾಂಗದ ಬಗ್ಗೆ ಅವರಿಗೆ ಒಳ್ಳೆಯ ಅಭಿಪ್ರಾಯ ಇಲ್ಲ. ನಾನುಬಂದು ಒತ್ತಾಯ ಮಾಡಿ ಎರಡು ಮೂರು ಆದೇಶಗಳನ್ನು ಹೊರಡಿಸಿದೆ. ಈ ಆದೇಶಗಳನ್ನು ಅವರು ಕಾಲ ಕಸದಂತೆ ಮಾಡಿದ್ದಾರೆ. ಅದಕ್ಕೆ ನಾನು ನೇರವಾಗಿ ಈಗ ಹೇಳುತ್ತಿದ್ದೇನೆ ಎಂದರೆ ಈಗ ತಳವಾರ, ವಾಲ್ಮೀಕಿ, ಪರಿವಾರ ಈ ಜನಾಂಗಗಳ ಹೆಸರು ಏನು ಬಿಟ್ಟು ಹೋಗಿದೆ, ಇವೆಲ್ಲಾ ಪರ್ಯಾಯ ಪದಗಳು. ಇವರನ್ನು ಹೊಸದಾಗಿ ಸೇರಿಸತಕ್ಕಂಥಾದ್ದು ಅಲ್ಲ. ಈ ಪರ್ಯಾಯ ಪದಗಳು ಸೇರುವಾಗ ಬಿಟ್ಟಿರಬಹುದು ಅಥವಾ ಯಾವುದೋ ಕಾರಣದಿಂದ. ನಾನು ತಮಗೆ ಏನು ಹೇಳುತ್ತಿದ್ದೇನೆ ಅಂದರೆ ಮಾನ್ಯ ಸಚಿವರಿಗೆ ತಾವು ಕೇವಲ ಸಚಿವ ಸಂಪುಟದ ಸಭೆಯಲ್ಲಿ ಮಾತನಾಡಿದರೆ ಆಗುವುದಿಲ್ಲ. ಇಂತಹ ಪತ್ರಗಳನ್ನು ಹಿಂದಿನ ಸರ್ಕಾರ ಎಲ್ಲಾ ಬರೆದಿದ್ದಾರೆ. ಆದರಿಂದ

ಪ್ರಯೋಜನ ಆಗಿಲ್ಲ. ನೇರವಾಗಿ ನೀವು ಕೇಂದ್ರ ಸರ್ಕಾರದ ಜೊತೆಯಲ್ಲಿ ಕುಳಿತು ಮಾತನಾಡಿ ಇಷ್ಟು ದಿವಸದಲ್ಲಿ ಒಂದು ಸುಗ್ರೀವಾಜ್ಞೆಯನ್ನು ಹೊರಡಿಸುತ್ತೇವೆ ಎನ್ನತಕ್ಕಂಥ ಮಾತನ್ನು ಹೇಳಬೇಕು. ಇದರ ಜೊತೆಗೆ ಮತ್ತೊಂದು ಜನಾಂಗ ಇದೆ. ಅದನ್ನು ನಾನು ತಮಗೆ ಹೇಳುತ್ತೇನೆ. ಈ ಮೇಲು ಸಕ್ಕರೆ ಶೆಟ್ಟಿ ಜನಾಂಗ ಮತ್ತು ಉಪ್ಪಾರ ಜನಾಂಗ ಅಂತ ನಮ್ಮ ಮೈಸೂರು ಜಿಲ್ಲೆಯಲ್ಲಿ ಕೆಲವು ಕಡೆ ಇದ್ದಾರೆ. ಇವರನ್ನು ಸಹ ಪರಿಶಿಷ್ಟ ವರ್ಗಕ್ಕೆ ಸೇರಿಸುವ ಬಗ್ಗೆ ತಾವು ತೀವ್ರವಾದ ಕ್ರಮವನ್ನು ಕೈಗೊಳ್ಳಬೇಕು. ತಾವು ಒಂದು ಸಾರಿ ನನ್ನ ಜೊತೆ ಬನ್ನಿ.

ತಾವು ಬರುವುದಾದರೆ ನನ್ನ ಕ್ಷೇತ್ರ ನಂಜನಗೂಡು, ಗುಂಡ್ಲಪೇಟೆ ಮತ್ತು ಕೊಳ್ಳೆಗಾಲ ಎಳಂದೂರು ,ಈ ಪ್ರದೇಶದಲ್ಲಿ ಜಾಸ್ತಿ ಜನ ಇದ್ದಾರೆ. ಈ ಮೇಲುಸಕ್ಕರೆ ಶೆಟ್ಟರು ಎನ್ನುವ ಜನಾಂಗ ಬಹಳ ಹಿಂದುಳಿದ ಜನಾಂಗ. ಅವರು ಬಹಳ ಅತ್ಯಂತ ನೋವಿನಿಂದ ಇದ್ದಾರೆ. ಅವರು ವಾಸ ಮಾಡತಕ್ಕಂಥ ಸ್ಥಳ ಯಾವುದು.ದೊಡ್ಡ ಮೋಳೆ ಅಂದ್ರೆ ಆಸ್ಥಳದ ಹೆಸರು. ಚಿಕ್ಕಮೋಳೆ. ಅವರಿಗೆ ಶತ ಶತಮಾನಗಳಿಂದ ಮುಕ್ತಿದೊರಕಿಲ್ಲ. ಅವರ ಬಗ್ಗೆಯೂ ಸಹ ಸರ್ಕಾರದವರು ತೀವ್ರವಾದ ಕ್ರಮವನ್ನು ಕೈಗೊಳ್ಳಬೇಕು.ಸಾಧ್ಯವಾದರೆ ತಾವು ಕೂಡಲೇ ಒಂದು ಸಮಿತಿಯನ್ನು ರಚನೆ ಮಾಡಿ ಅವರ ಪರಿಸ್ಥಿತಿ ಯ ಬಗ್ಗೆ. ಒಂದು ವರದಿಯನ್ನು ತರಿಸಿ ಅವರನ್ನು ಸಹ ಪರಿಶಿಷ್ಟ ವರ್ಗಕ್ಕೆ ಸೇರಿಸತಕ್ಕಂಥ ವ್ಯವಸ್ಥೆಯನ್ನು ಮಾಡಬೇಕೆನ್ನುವ ಒತ್ತಾಯ ಮಾಡಿ ಈ ನಾಯಕ ಜನಾಂಗಕ್ಕೆ ತಾವು ಏನು ಹೇಳಿದಿರಿ ಕೊಟ್ಟಿದ್ದೇವೆ ಅಂತ ನಾನು ಸ್ಪಷ್ಟವಾಗಿ ಹೇಳುತ್ತಿದ್ದೇನೆ ಕೆಲವು ನಾಯಕ ಜನಾಂಗಕ್ಕೆ ಸರ್ಟಿಫಿಕೇಟ್ಸ್‌ನ್ನು ತಹಶೀಲ್ದಾರ್‌ರು ಕೊಟ್ಟರು. ಮೈಸೂರು ಜಿಲ್ಲಾಧಿಕಾರಿ ನೀವು ಏಕೆ ಕೊಟ್ಟಿರಿ, ಸರ್ಕಾರದ ಆದೇಶ ಏನು?

ಯಾವ ಉದ್ದೇಶ? ಸಾಧ್ಯವೇ ಇಲ್ಲ ಅಂತ ಹೇಳಿ ಇವತ್ತು ನಾಯಕ ಜನಾಂಗಕ್ಕೆ ಕೊಟ್ಟಿರತಕ್ಕಂಥ ಸರ್ಟಿಫಿಕೇಟ್ಸ್‌ನ್ನು ಕೂಡ ವೆರಿಫಿಕೇಶನ್ಸ್ ಮಾಡಿ ತೊಂದರೆ ಕೊಡುತ್ತಿದ್ದಾರೆ. ಅತ್ಯಂತ ನೋವಿನ ಪ್ರಸಂಗ ಇವತ್ತು. ಆದ್ದರಿಂದ ನಾನುತಮಗೆ ಹೇಳುತ್ತಿದ್ದೇನೆ. ಸರ್ಕರದ ಆದೇಶವನ್ನು ಅವರು ಧಿಕ್ಕರಿಸಿದ್ದಾರೆ. ಹೊರಗಡೆವಾದ ವಿವಾದ ಮಾಡತಕ್ಕಾದ್ದು ನಾವು ರಾಜಕಾರಣಿಗಳು. ಯಾರ ಬಗ್ಗೆಯೂ ಕೂಡ ನನಗೆ ವೈಯುಕ್ತಿಕ ದ್ವೇಷ ಇಲ್ಲ. ಆದ್ದರಿಂದ ನಾನು ತಮ್ಮಲ್ಲಿ ಕಳಕಳಿಯಿಂದ ಮನವಿ ಮಾಡುತ್ತಿದ್ದೇನೆ. ಕರ್ನಾಟಕ ಸರ್ಕರದ ತೀರ್ಮಾನ ಇದೆ ತಾನೆ. ಪರಿವಾರ ಜನಾಂಗವನ್ನು ಪರಿಶಿಷ್ಟ ವರ್ಗಕ್ಕೆ ಸೇರಿಸಲು ಒಪ್ಪಿಗೆ ಇದೆ ಅಂದ ಮೇಲೆ ಕೇಂದ್ರ ಸರ್ಕಾರದಿಂದ ಬರುವವರೆಗೂ ನೀವು ಒಂದು ಆದೇಶವನ್ನು ಹೊರಡಿಸುತ್ತಿರಾ? ಎಷ್ಟು ದಿವಸದಲ್ಲಿ ಆ ಒಂದು ಆದೇಶವನ್ನು ಹೊರಡಿಸುತ್ತೀರಿ ಎನ್ನುವ ಭರವಸೆ ಬೇಕು.

ಶ್ರೀ ಈ. ಮಾರುತಿ ರಾವ್ ಪವಾರ್ : ಮಾನ್ಯ ಅಧ್ಯಕ್ಷರೇ, ಇದರ ಬಗ್ಗೆ ಕೆಲವು ವಿಚಾರಗಳನ್ನು ನಾನು ತಮ್ಮ ಗಮನಕ್ಕೆ ತರಲು ಇಚ್ಛೆಪಡುತ್ತೇನೆ. ಈಗಾಗಲೇ ಮಾನ್ಯ ಮಂತ್ರಿಗಳು ಕೊಟ್ಟಿರತಕ್ಕಂಥ ಉತ್ತರದಲ್ಲಿ ನಾಯಕ್ ಜನಾಂಗಕ್ಕೆ ಸೇರಿದಂತಹ ವ್ಯಕ್ತಿಗಳು ತೊಂದರೆ ಅನುಭವಿಸುತ್ತಿರುವುದರ ಬಗ್ಗೆ ಯೂವುದೇ ದೂರು ಸರ್ಕಾರದ ಗಮನಕ್ಕೆ ಬಂದಿಲ್ಲ ಎನ್ನತಕ್ಕಂಥ ಮಾತನ್ನು ಅವರ ಉತ್ತರದಲ್ಲಿ ಕೊಟ್ಟಿದ್ದಾರೆ. ನಾನು ಈ ಸಂದರ್ಭದಲ್ಲಿ ಒಂದು ಮಾತನ್ನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಈ ನಾಯಕ್ ಜನಾಂಗಕ್ಕೆ ಸೇರಿದ ವ್ಯಕ್ತಿ ಅಂತ ಹೇಳಿ ಅವರಿಗೆ ಒಂದು ದೃಢೀಕರಣಪತ್ರ ಕೊಡಬೇಕಾದರೆ 1982ರ ಹಿಂದೆ ಅವರು ಶಾಲೆಗಳಲ್ಲಿ ಓದುವಂತಹ ಸಂದರ್ಭದಲ್ಲಿ ಆ ಶಾಲೆಯ ದಾಖಲಾತಿಗಳಲ್ಲಿ ಇರಬೇಕು ಎನ್ನತಕ್ಕಂಥಒಂದು ವಿಚಾರ ಇದೆ ಹೀಗೆ 1982ರ ಮೊದಲೇ ಎನ್.ಆರ್. ಮೊಹಲ್ಲಾದಲ್ಲಿ ವಾಸ ಮಾಡತಕ್ಕಂಥ ಕುಮಾರ್ ಎನ್ನತಕ್ಕಂಥ ಒಬ್ಬ ವ್ಯಕ್ತಿ ಪೋಲೀಸ್ ಹುದ್ದೆಗೆ ಉತ್ತೀರ್ಣನಾಗಿ ನೇಮಕ ಆಗಬೇಕಾದರೆ

ಅವನು ನೇಮಕ ಆಗಬೇಕಾದರೆ ಆತ ನಾಯಕ್ ಜನಾಂಗಕ್ಕೆ ಸೇರಿದ ವ್ಯಕ್ತಿ ಅಂತ ಸರ್ಟಿಫಿಕೇಟ್ಕ ಪಡೆಯುವುದಕ್ಕೋಸ್ಕರ ಅವನು ಜಿಲ್ಲಾಧಿಕಾರಿಗಳ ಕಛೇರಿಗೆ ಸುತ್ತಿ ಸುತ್ತಿ ಸಾಕಾಯಿತು. ಕಡೆಗೆ ಆ ಯುವಕ ಶಾಲಾ ದಾಖಲಾತಿಯಲ್ಲಿ 1982ನೇ ಇಸವಿಗಿಂತ ಹಿಂದೆ ಸೇರಿದಾಗ ನಾಯಕ ಜನಾಂಗದವನು ಅಂತ ಹೇಳಿ ದಾಖಲೆಗಳು ಇದ್ದರೂ ಸಹ ಸಂಬಂಧಪಟ್ಟಂತಹ ಅಧಿಕಾರಿಗಳು ಅವನ ಮನೆಗೆ ಹೋಗಿ ತಿಳುವಳಿಕೆ ಇಲ್ಲದೆ ಇರುವಂತಹ ಹೆಂಗಸರ ಕೈಯಲ್ಲಿ ಮನೆಯಲ್ಲಿ ಅವರ ಸಹಿಯನ್ನು ಪಡೆದು ಆ ನಿರುದ್ಯೋಗಿಗೆ ಉದ್ಯೋಗ ಸಿಗುವಂತಹ ಅವಕಾಶವನ್ನು ತಪ್ಪಿಸಿದ್ದಾರೆ. ಸರ್ಕಾರದ ಅಧಿಕಾರಿಗಳು ಅವರಿಗೆ ಸಿಗುವಂತಹ ಸೌಲಭ್ಯಗಳನ್ನು ವಂಚಿಸಿದ್ದಾರೆ. ಈ ವಿಚಾರವನ್ನು ನಾನು ಸರ್ಕಾರದ ಗಮನಕ್ಕೆ ತರಲು ಇಚ್ಛಿಪತ್ತೇನೆ. ಹಾಗೆಯೇ ಈ ನಾಯಕ ಜನಾಂಗ ಹಾಗೂ ಪರಿವಾರ ಜನಾಂಗ ಏನು ಇದೆ ಇದು ಎರಡೂ ಹೆಚ್ಚು ಕಡಿಮೆ ಒಂದಕ್ಕೊಂದು ಸಂಬಂಧ ಇರತಕ್ಕಂಥ ಜನಾಂಗವೇ.

ಆ ಎರಡೂ ಜನಾಂಗವನ್ನು ಪರಿಶಿಷ್ಟ ಜನಾಂಗ ಅಂತ ಹೇಳಿ ಶಿಫಾರಸ್ಸು ಮಾಡಬೇಕೆಂದು ನಾನು ಸರ್ಕಾರವನ್ನು ಒತ್ತಾಯ ಮಾಡುತ್ತೇನೆ. ಕಡೆಗೆ ನಾಯಕ ಜನಾಂಗಕ್ಕೆ ಈ ಸರ್ಟಿಫಿಕೇಟ್ ಕೊಡಬೇಕೆಂದು ತಹಶೀಲ್ದಾರ್‌ರನ್ನು ಒತ್ತಾಯ ಮಾಡಿದಾಗ ಇಲ್ಲ ನನಗೆ ಜಿಲ್ಲಾಧಿಕಾರಿಗಳು ಹೇಳಿದ್ದಾರೆ ಈ ಸರ್ಟಿಫಿಕೇಟ್ ಕೊಡಬಾರದು ಎನ್ನತಕ್ಕಂಥ ಮಾತನ್ನು ಹೇಳಿದರು. ನಾಯಕ ಜನಾಂಗದವರು ತಹಶೀಲ್ದಾರ್ ಕಛೇರಿಯಿಂದ ಜಿಲ್ಲಾಧಿಕಾರಿಗಳ ಕಛೇರಿಗೆ ಬರಬೇಕು ಆಗ ಅವರಿಗೆ ನಾಯಕ ಜನಾಂಗದ ಸರ್ಟಿಫಿಕೇಟ್ ಸಿಗದೆ ಅವರು ಉದ್ಯೋಗದಲ್ಲಿ ವಂಚಿತರಾಗುತ್ತಿದ್ದಾರೆ ಹಾಗೆಯೇ ಅವರಿಗೆ ಶಿಕ್ಷಣ ಕ್ಷೇತ್ರದಲ್ಲಿಯೂ ಕೂಡ ಅವಕಾಶತಪ್ಪುತ್ತಿದೆ. ಮಾನ್ಯ ಮಂತ್ರಿಗಳು ಈ ವಿಷಯ ತಮ್ಮ ಗಮನಕ್ಕೆ ಬಂದಿಲ್ಲ ಅಂತ ಹೇಳಿದ್ದಿರಿ ನಾನು ತಮಗೆ ಒಂದು ಉದಾಹರಣೆಯನ್ನು ಕೊಡುತ್ತಿದ್ದೇನೆ. ದಯಮಾಡಿ ಸರ್ಕಾರ ಈ ಬಗ್ಗೆ ಒಂದು ಆದೇಶವನ್ನು ಹೊರಡಿಸಬೇಕು. ಈ ವಿಚಾರದಲ್ಲಿ ಮೈಸೂರು ಜಿಲ್ಲೆಯಲ್ಲಿ ನಮ್ಮ ಜಿಲ್ಲೆಯ ಸಚಿವರು ಮತ್ತು ಜಿಲ್ಲಾಧಿಕಾರಿಗಳ ಪರ ಮತ್ತು ವಿರೋಧವಾಗಿ ಒಂದು ದೊಡ್ಡ ಮೆರವಣಿಗೆ ಆಯಿತು. ಮೈಸೂರು ಜಿಲ್ಲೆಯಲ್ಲಿ ನಾಯಕ ಜನಾಂಗದವರು ಜಾಸ್ತಿ ಇರುವುದರಿಂದ ಆದಷ್ಟು ಬೇಗ ಒಂದು ಅದೇಶವನ್ನು ಹೊರಡಿಸಬೇಕೆಂದು ನಾನುಒತ್ತಾಯ ಮಾಡುತ್ತೇನೆ.

+ ಶ್ರೀ ರಾಮೇಶ ಸಿ ಜಿಗಜಿಣಗಿ : ಮಾನ್ಯ ಅಧ್ಯಕ್ಷರೇ ಮೈಸೂರು ಜಿಲ್ಲೆಯಲ್ಲಿ ನಾಯಕ ಮತ್ತು ಬೇಡ ನಾಯಕ ಇವರು ಪರಿಶಿಷ್ಟ ಜಾತಿಯಲ್ಲಿ ಸೇರಿದರೂ ಸಹ ಇವರಿಗೆ ಧೃಡೀಕರಣ ಪತ್ರ ಕೊಡುತ್ತಿಲ್ಲ. ಅಂತ ಹಿರಿಯ ಸದಸ್ಯರಾದ ವಾಟಾಳ್ ನಾಗರಾಜ್ ಅವರು ತಮ್ಮ ಕಳಕಳಿಯನ್ನು ವ್ಯಕ್ತ ಮಾಡಿದ್ದಾರೆ. ಆದರೆ ಆ ರೀತಿ ಏನೂ ಆಗಿಲ್ಲ. ನಿಜವಾಗಿಯೂ ಯಾರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೋ ಅವರಿಗೆ ಯಾರೂ ಸಹ ತೊಂದರೆ ಮಾಡಿಲ್ಲ. ಯಾವ ಜಿಲ್ಲಾಧಿಕಾರಿಗಳೂ ಮಾಡಿಲ್ಲ. ಮಾಡಿದರೂನಾವು ಅದನ್ನು ಸಹಿಸುಕೊಳ್ಳುವುದಿಲ್ಲ. ಇವತ್ತು ಹಾವನೂರು ವರದಿ ಪ್ರಕಾರ.

11.50 ಎ.ಎಂ

ಈ ಪರಿವಾರ ಪಂಗಡವು ಪರಿಶಿಷ್ಟ ಪಂಗಡಕ್ಕೆ ಸೇರಿದ ಜಾತಿ ಎಂದು ಏನು ಮಾನ್ಯ ಸದಸ್ಯರು ಹೇಳುತ್ತಾರೋ ಆ ಪರಿವಾರದ ಪಂಗಡದವರು ಹಿಂದಿನ ಮಹಾರಾಜರ ಕಾಲದಲ್ಲಿ ಸೈನಿಕರಾಗಿದ್ದಂಥವರು, ಇವರು ಮುಂದುವರಿದ ಜಾನಾಂಗಕ್ಕೆ ಸೇರಿದವರೆಂದು ಹಾವನೂರ್ ವರದಿಯಲ್ಲಿ ತಿಳಿಸಲಾಗಿದೆ ಎಂದು ಮಾನ್ಯ ಸದಸ್ಯರ ಗಮನಕ್ಕೆ ತರುತ್ತಿದ್ದೇನೆ. ಈ ಪರಿವಾರ ಮತ್ತು ತಳವಾರ ಜನಾಂಗಕ್ಕೆ ನಾಯಕ ಜನಾಂಗಕ್ಕೆ ಏನು ಸವಲತ್ತುಗಳನ್ನು ಕೊಡಲಾಗುತ್ತಿದೆಯೋ ಅದನ್ನು ಕೊಡಬೇಕೆಂದು

ಮಾನ್ಯ ಸದಸ್ಯರು ಏನು ಸೂಚಿಸಿದ್ದಾರೋ ಅದನ್ನು ಯಾವ ಕಾರಣಕ್ಕೂ ಕೊಡುವುದಕ್ಕಾಗುವುದಿಲ್ಲ. ಮತ್ತು ಕೊಡತಕ್ಕಂಥ ಅಧಿಕಾರ ಕೂಡ ಈ ರಾಜ್ಯ ಸರ್ಕಾದ ಕೈಯಲ್ಲಿಲ್ಲ, ನೀವೇ ಹೋಗಿ ಕೇಂದ್ರ ಸರ್ಕಾರದ ಮೇಲೆ ಒತ್ತಾಯ ತಂದು ಈ ಕೆಲಸವನ್ನು ಮಾಡಿಕೊಂಡು ಬನ್ನಿ ಎಂದು ಮಾನ್ಯ ಸದಸ್ಯರು ಏನು ಒತ್ತಾಯ ಮಾಡುತ್ತಿದ್ದಾರೋ ಆ ಕೆಲಸ ಆಗುವುದಿಲ್ಲ. ಅಲ್ಲಿರತಕ್ಕಂಥ ಸರ್ಕಾರ ನಮ್ಮ ಪಕ್ಷದ ಸರ್ಕಾರವಲ್ಲ. ನಾವು ಒತ್ತಾಯ ಮಾಡುವುದಕ್ಕಾಗದಿದ್ದರೂ ಮಾನ್ಯ ಸದಸ್ಯರ ಒತ್ತಾಯಕ್ಕಾಗಿ ನಾವು ಪುನಃ ಕೇಂದ್ರ ಸರ್ಕಾರಕ್ಕೆ ಒಂದು ಸುತ್ತೋಲೆಯನ್ನು ಬರೆಯತಕ್ಕಂಥ ಕೆಲಸವನ್ನು ಮಾಡುತ್ತೇನೆಂದು ಮಾನ್ಯ ಸದಸ್ಯರಿಗೆ ಹೇಳಬಯಸುತ್ತೇನೆ.

ನಾನು ಮಂತ್ರಿಯಾದ ಒಂದು ತಿಂಗಳಲ್ಲೇ ಬಿಳಿಗಿರಿ ರಂಗನ ಬೆಟ್ಟಕ್ಕೆ ಭೇಟಿ ಕೊಟ್ಟಿದ್ದೆ, ನಿಜವಾದ ಪರಿಶಿಷ್ಟ ಜನಾಂಗದವರ ಪರಿಸ್ಥಿತಿಯನ್ನು ಅಲ್ಲಿ ನೋಡಿದರೆ ನಮಗೆ ಹೊಟ್ಟೆ ಉರಿಯುತ್ತದೆ. ಅಲ್ಲಿರತಕ್ಕಂಥ ಸುದರ್ಶನ ಎನ್ನುವವರು ಇಲ್ಲಿರುವ ಎಸ್.ಟಿ. ಜನಾಂಗದ ಮಕ್ಕಳಿಗೆ ನಿಮ್ಮ ಹಾಸ್ಟೆಲ್‌ಗಳಲ್ಲಿ ಸೀಟು ಸಿಗುತ್ತಿಲ್ಲ ಎನ್ನುವ ಮಾತನ್ನು ಹೇಳಿದರು. ನಿಜವಾಗಿ ಅದನ್ನು ಕೇಳಿ ನನಗೆ ಬಹಳ ಕೆಟ್ಟೆನಿಸಿತು. ಈ ಹಿಂದೆ 5 ಲಕ್ಷದಷ್ಟಿದ್ದ ಎಸ್.ಟಿ. ಜನಸಂಖ್ಯೆಗೆ 1991ರಲ್ಲಿ ಬೇರೆ ಬೇರೆ ಜಾತಿಗಳನ್ನೂ ಎಸ್.ಟಿ. ಎಂದು ಪರಿಗಣಿಸಿದ್ದಕ್ಕಾಗಿ ಇವತ್ತು ಎಸ್.ಟಿ. ಜನಸಂಖ್ಯೆ 20 ಲಕ್ಷದಷ್ಟಾಗಿದೆ. 1956 ರಲ್ಲಿ ರಾಜ್ಯಗಳ ಪುನರ್ ಮುನ್ನಡಣೆ ಯಾದಾಗ ಏನು ಎಸ್. ಟಿ. ಜನಾಂಗದವರಿದ್ದಾರೋ ಅವರಿಗೆ ಏನೂ ಸೌಲಭ್ಯ ಸಿಗದೆ ಇವತ್ತೂ ಸಹ ಅವರು ಹಾಗೇ ಇದ್ದಾರೆ. ರಾಜಕೀಯ ಒತ್ತಡಕ್ಕೋ 'ಅಥವಾ ಇನ್ನಾವು ಒತ್ತಡಕ್ಕೋ ಮಣಿದು ಬೇರೆ ಬೇರೆ ಜಾತಿಯನ್ನು ಎಸ್.ಟಿ. ಜನಾಂಗದವರೆಂದು ಮಾಡಿ ನಿಜವಾದ ಎಸ್.ಟಿ. ಜನಾಂಗದವರಿಗೆ ದ್ರೋಹ ಮಾಡಲಿಕ್ಕೆ ಹತ್ತಿದ್ದೇವೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲವೆಂದು ಭಾವಿಸುತ್ತೇನೆ. ಆಮೇಲೆ ಉಪ್ಪಾರ ಜಾತಿ ಹಾಗೂ ಸಕ್ಕರೆ ಜನಾಂಗದವರನ್ನು ಸಹಾ ಪರಿಶಿಷ್ಟ ಜಾತಿಗೆ ಸೇರಿಸಬೇಕೆಂದು ಏನು ಮಾನ್ಯ ಸದಸ್ಯರು ಹೇಳಿದ್ದಾರೋ ಅದರ ಬಗ್ಗೆ ನಾನು ಮಂತ್ರಿಯಾದ ಮೇಲೆ ಎಲ್ಲಾ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನಾಂಗದ ಸಮೀಕ್ಷೆ ಮಾಡಬೇಕೆಂದು ಆದೇಶ ಕೊಟ್ಟಿದ್ದೇನೆ. ಆ ವರದಿ ಬಂದ ಮೇಲೆ ಉಪ್ಪಾರ ಹಾಗೂ ಸಕ್ಕರಿ ಜನಾಂಗದವನ್ನು ಪರಿಶಿಷ್ಟ ಜಾತಿಗೆ ಸೇರಿಸಬೇಕೆಂದು ಏನು ಮಾನ್ಯ ಸದಸ್ಯರು ಹೇಳಿದ್ದಾರೆ. ಅದರ ಬಗ್ಗೆ ಒಂದು ನಿರ್ಣಯ ತೆಗೆದುಕೊಳ್ಳುತ್ತೇನೆ ಎನ್ನುವ ಮಾತನ್ನು ಹೇಳುತ್ತೇನೆ.

ಉಪಾಧ್ಯಕ್ಷರು : ಸರ್ಟಿಫಿಕೇಟ್ ಕೊಟ್ಟಿಲ್ಲವೆಂದು ಹೇಳಿದ್ದಾರಲ್ಲಾ ಅದರ ಬಗ್ಗೆ ಏನು ಮಾಡುತ್ತೀರಿ?

ಶ್ರೀ ರಮೇಶ್ ಸಿ. ಜಿಗಜಿಣಗಿ : ಮಾನ್ಯ ಉಪಾಧ್ಯಕ್ಷರೆ, ಮಾನ್ಯ ಶಾಸಕ ಸಹೋದರರಾದ ಮಾರುತಿ ಪವಾರ್‌ರವರು, ನಿಜವಾಗಿರತಕ್ಕಂಥ ನಾಯಕ ಒಬ್ಬ ವಿದ್ಯಾರ್ಥಿಗೆ ತೊಂದರೆಯಾಗಿದೆ ಎಂದು ಹೇಳಿದ್ದಾರೆ. ನಿಜವಾಗಿ ಆ ವಿದ್ಯಾರ್ಥಿಗೆ ತೊಂದರೆಯಾಗಿದ್ದರೆ, ಮಾನ್ಯ ಸದಸ್ಯರು ನನಗೆ ವಿವರಗಳನ್ನು ಕೊಟ್ಟರೆ, ಆ ಹುಡುಗನಿಗೆ ತೊಂದರೆಯಾಗದ ರೀತಿಯಲ್ಲಿ ನೋಡಿಕೊಳ್ಳುತ್ತೇನೆಂದು ಹೇಳಿತ್ತೇನೆ. ಮಾನ್ಯ ಉಪಾಧ್ಯಕ್ಷರೆ ಇತ್ತೀಚೆಗೆ ಕೆಲವು ಜಾತಿಗಳನ್ನು ನಾಯಕ ಜನಾಂಗಕ್ಕೆ ಸೇರಿಸಿರುವುದರಿಂದ ಪರಿವಾರದವರೂ ಆ ಜನಾಂಗಕ್ಕೆ ಸೇರಿಸಬೇಕೆಂದು ಒತ್ತಾಯ ಮಾಡುತ್ತಿದ್ದಾರೆ. ಬೇರೆ ಜಾತಿ ಯವರೂ ಸಹಾ ನಾವು ನಾಯಕರೆಂದು ಶಾಲೆಯ ಸರ್ಟಿಫಿಕೇಟ್‌ಗಳಲ್ಲಿ ದಾಖಲೆಯನ್ನು ಪಡೆಯುತ್ತಿದ್ದಾರೆ. ಪರಿವಾರದ ಹುಡುಗ ನಾಯಕ ಜನಾಂಗದವನೆಂದು ಸರ್ಟಿಫಿಕೇಟ್ ತೆಗೆದುಕೊಂಡು ನಾಯಕ ಜನಾಂಗಕ್ಕೆ ಕೊಡುವ ಸವಲತ್ತುಗಳನ್ನು ಕೊಡ್ರಿ ಎಂದರೆ ಕೊಡುವುದಕ್ಕಾಗುವುದಿಲ್ಲ.

ಶ್ರೀ ವಾಟಾಳ್ ನಾಗರಾಜ್ : ಮೈಸೂರು ಜಿಲ್ಲೆಯಲ್ಲಿ ನಾಯಕ ಜನಾಂಗ ಬೇರೆ ಅಲ್ಲ ಪರಿವಾರ ಜನಾಂಗ ಬೇರೆ ಅಲ್ಲ ಎರಡೂ ಒಂದೇ. ತಂದೆ ಹೆಸರು ಸೋಮನಾಯಕ ಎಂದು ಮಗನ ಹೆಸರು ಸೋಮಣ್ಣ. ತಂದೆ ನಾಯಕ. ಮಗ ಪರಿವಾರದವನು. ಇದು ಒಂದೇ ಮನೆಯಲ್ಲಿ ನಮ್ಮ ಮೈಸೂರು ಜಿಲ್ಲೆಯ ಅನೇಕ ಕಡೆ ನಾಯಕ - ಪರಿವಾರ ಇವೆರಡೂ ಒಂದೇ ಪದಗಳು. ಪರಿವಾರ ಎನ್ನುವುದು ಬೇರೆ ಜನಾಂಗವಲ್ಲ. ಇಲ್ಲಿ ಆ ಪರ್ಯಾಯ ಪದಗಳು ಬಿಟ್ಟುಹೋಗಿರುವುದರಿಂದ ನಿಮಗೆ ಸರಿಯಾಗಿ ಗೊತ್ತಾಗುವುದಿಲ್ಲ.

ಶ್ರೀ ಜೆ.ಹೆಚ್. ಪಟೇಲ್ : ಇದರ ಬಗ್ಗೆ ಚರ್ಚೆ ಅನಾವಶ್ಯಕ. ನಮ್ಮ ಸರ್ಕಾರವೇ 1983 ರಿಂದ 89 ರವರೆಗೆ ಇದ್ದಾಗ ಕಾನ್ಸಿಟ್ಯೂಷನಲಿ ನಾನಿವರ್ಸ್ ಎಂದು ಮಾಡಿದ್ದೇವೆ. ಅದರಲ್ಲಿ ಶೆಡ್ಯುಲ್ಡ್ ಟ್ರೈಬ್ಸ್‌ಗೇ ಒಂದು ಲಿಸ್ಟ್ ಇದೆ, ಶೆಡ್ಯುಲ್ಡ್ ಕ್ಯಾಸ್ಟ್‌ಗೇ ಒಂದು ಲಿಸ್ಟ್ ಇವೆ ಶೆಡ್ಯುಲ್ಡ ಲಿಸ್ಟ್‌ಗೆ ಮೊದಲು ನಾಯಕ ಎಂದು ಸೇರಿತ್ತು. ನಾಯಕ ಎನ್ನುವುದಕ್ಕೆ ಮತ್ತೆ ಏನು ಅರ್ಥ ಅದರಲ್ಲಿ ಅನ್ನುವುದಕ್ಕಾಗಿ ಸಾಧ್ಯ ನಾಲ್ಕೈದು ಪದಗಳನ್ನು ನಿನಾನಿವರ್ಸ್ ಅಂತ ಸೇರಿನಿದ್ದೆವು. ಅದನ್ನು ಸೇರಿಸುವಾಗ ಪಿರವಾರ ಬಿಟ್ಟು ಹೋಯಿತು. ವಾಟಾಳ್ ನಾಗರಾಜ್‌ರವರು ಹೇಳಿದ ಹಾಗೆ ಸಾಂಸ್ಕೃತಿಕವಾಗಿ ಹಾಗೂ ರಕ್ತ ಸಂಬಂಧದಿಂದ ಪಿರವಾರವೂ ನಾಯಕ ಜನಾಂಗವೆ. ಈಗ ನಾವು ಅದಕ್ಕೆ ಸಿನಾನಿವರ್ಸ್‌ನ್ನು ಅಂತ ಹೇಳಿ ಮತ್ತೆ ಕೇಂದ್ರ ಸರ್ಕಾರಕ್ಕೆ ಕಳುಹಿಸುವುದಕ್ಕೆ ಏರ್ಪಾಡು ಮಾಡಿದ್ದೇವೆ.

ಶ್ರೀ ವಾಟಾಳ್ ನಾಗರಾಜ್ : 1987 ರಂದು ಪರಿವಾರವನ್ನು ನಾಯಕ ಜನಾಂಗದ ಪರ್ಯಾಯ ಪದ ಎಂದು ತಾವು ಸೇರಿಸಿದ್ದೀರಿ. ನಾವು ಅದರ ಬಗ್ಗೆ ಹೇಳುತ್ತಿಲ್ಲ. ಇದನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಿ ಸುಮಾರು 10 ವರ್ಷಗಳಾದವು. ಹಿಂದೆ ಮಾನ್ಯ ಚಂದ್ರಶೇಖರ್ ರವರು ಪ್ರಾಧಾನಿಯಾಗಿದ್ದಾಗ ಇದನ್ನು ಕಳುಹಿಸಿದ್ದು.

ಶ್ರೀ ಜೆ.ಹೆಚ್. ಪಟೇಲ್ : ಚಂದ್ರಶೇಖರ್‌ರವರು ಪ್ರಧಾನ ಮಂತ್ರಿ ಯಾಗಿದ್ದಾಗ ಈ ಆರ್ಡರನ್ನು ಶೆಡ್ಯುಲ್ಡ್ ಟ್ರೈಬ್ ಅಂತ ಆದ ಆರ್ಡರನಲ್ಲಿ ಈ ಬಿಟ್ಟು ಹೋಯಿತು. ನಾಯಕ ಜನಾಂಗಕ್ಕೆ ಸರಿ ಅರ್ಥ ಬರುವಂಥ ಹಾಗೂ ಅದೇ ಅರ್ಥ ಬರತಕ್ಕಂಥ ಸಿನಾಸವರ್ಸ್ ಶಬ್ದಗಳನ್ನು ನಾವು ಕಳುಹಿಸಬೇಕು. ಅವರು ಸೇರಿಸಬೇಕು. ಇದಕ್ಕೆ ಏತಕ್ಕೆ ಚರ್ಚೆ ಬೇಕು?

ಶ್ರೀ ವಾಟಾಳ್ ನಾಗರಾಜ್ : ನಾನು ಉಪ ಮುಖ್ಯ ಮಂತ್ರಿಗಳ ವಾದವನ್ನು ಒಪ್ಪುತ್ತೇನೆ. ಸಂಬಂಧಪಟ್ಟ ಮಾನ್ಯ ಸಚಿವರು, ಪರಿವಾರ ಜನಾಂಗಕ್ಕೆ ನಾವು ಏನೂ ಕೊಡುವುದಕ್ಕೆ ಸಾಧ್ಯವಿಲ್ಲವೆಂದು ಕಟ್ಟುನಿಟ್ಟಾಗಿ ಹಾಗೂ ಕಠೋರವಾಗಿ ಹೇಳಿದ್ದಾರೆ. ನಾಯಕ ಯಾರು ಪರಿವಾರ ಯಾರು ಎಂದು ಮೈಸೂರು ಜಿಲ್ಲೆಯಲ್ಲಿ ವಿಂಗಡನೆ ಮಾಡುವುದಕ್ಕೆ ಸಾಧ್ಯವೇ ಇಲ್ಲ. ದೇವರಾಜ ಅರಸರ ಕಾಲದಲ್ಲಿ ನಾಯಕ ಹಾಗೂ ಪರಿವಾರ ಒಂದೇ ಜಾತಿಯಾಗಿರುವುದರಿಂದ ಎಲ್ಲಾ ಸೌಲಭ್ಯಗಳನ್ನು ಪರಿವಾರದವರಿಗೂ ಕೊಡಬೇಕೆಂದು ಹೇಳಿದ್ದಾರೆ. ಪರಿವಾರ ಅಂದರೂ ನಾಯಕ, ನಾಯಕ ಎಂದರೂ ಪರಿವಾರ. ಒಂದೇ ಜಾತಿ ಹಾಗೂ ಒಂದೇ ಮನೆಯಲ್ಲಿ ಅವರು ಇರುತ್ತಾರೆ. ಇದರ ಬಗ್ಗೆ ಮೈಸೂರು ಜಿಲ್ಲಾಧಿಕಾರಿಯವರು ವಿಂಗಡಣೆ ಮಾಡಿ ಪರಿವಾರ ಜನಾಂಗದವರಿಗೆ ನಾಯಕ ಜನಾಂಗದ ಸರ್ಟಿಫಿಕೇಟ್ ಕೊಡುವುದಕ್ಕಾಗುವುದಿಲ್ಲವೆಂದು ಹೇಳುತ್ತಿದ್ದಾರೆ.

ಉಪಾಧ್ಯಕ್ಷರು : ಉಪ ಮುಖ್ಯ ಮಂತ್ರಿಗಳೂ ತಮ್ಮ ಮಾತಿಗೆ ಒಪ್ಪುತ್ತಿದ್ದಾರೆ. ಇದರ ಬಗ್ಗೆ ಸರ್ಕಾರ ಏನಾದರೂ ಕ್ರಮ ತೆಗೆದುಕೊಳ್ಳುವುದಕ್ಕೆ ಸಾಧ್ಯವೆ?

ಶ್ರೀ ವಾಟಾಳ್ ನಾಗರಾಜ್ : ಪರಿವಾರ ಜನಾಂಗದವರು ನಾಯಕ ಜನಾಂಗದವರೆಂದು ತತ್ವಶಃ ತಾವು ಒಪ್ಪುವುದಾದರೆ, ಆ ರೀತಿ ಆದೇಶ ಬರುವವರೆಗೂ ಅವರಿಗೆ ಕೊಡಬೇಕಾದಂಥ ಸಾಲಭ್ಯಗಳನ್ನು ಕೊಡಿ.

ಶ್ರೀ ರಮೇಶ್ ಸಿ. ಜಿಗಜಿಣಗಿ : ಪರಿವಾರದವರ ಮಕ್ಕಳಿಗೆ ಶೈಕ್ಷಣಿಕವಾಗಿ ಏನು ಸೌಲಭ್ಯಕೊಡಬೇಕೆಂಬ ಬಗ್ಗೆ ಸರ್ಕಾರಿ ಆದೇಶ ಇದೆ.

ಶ್ರೀ ವಾಟಾಳ್ ನಾಗರಾಜ್ : ಇದನ್ನು ಮೈಸೂರು ಜಿಲ್ಲಾಧಿಕಾರಿಯವರು ತಳ್ಳಿಹಾಕುತ್ತಿದ್ದಾರೆ. ಪರಿವಾರದವರನ್ನು ನಾಯಕ ಜನಾಂಗದವರೆಂದು ತತ್ವಶಃ ಸರ್ಕಾರದವರು ಒಪ್ಪುವುದಾದರೆ, ಆ ಜನಾಂಗಕ್ಕೆ ಕೊಡಬೇಕಾದ ಸೌಲಭ್ಯಗಳನ್ನು ಕೊಡಿ.

ಶ್ರೀ ಜೆ.ಹೆಚ್. ಪಟೇಲ್ : ನಿನಾನಿವರ್ಸ್ ಎಂದು ಕಳುಹಿಸುವಾಗ ಪರಿವಾರ ಎಂದು ಕಳುಹಿಸಲಾಗಿತ್ತು, ಪ್ರಧಾನ ಮಂತ್ರಿಯವರು ಅದನ್ನು ಒಪ್ಪಿಕೊಂಡು ಆರ್ಡರ್ ಕೊಡುವಾಗ ಪರಿವಾರ ಎನ್ನುವುದು ಬಿಟ್ಟುಹೋಯಿತು. ಅದು ಬಿಟ್ಟು ಹೋಗಿರುವುದರಿಂದ ಪರಿವಾರ ಜನಾಂಗದವರನ್ನು ಶೆಡ್ಯುಲ್ಡ್ ಟ್ರೈಬ್ ಎಂದು ಕನ್ಸಿಡರ್ ಮಾಡುವುದಕ್ಕಾಗುವುದಿಲ್ಲ. ಅದಕ್ಕಾಗಿ ಪರಿವಾರವನ್ನೂ ಒಂದು ಸಿನಾನಿವರ್ ಆಗಿ ಸೇರಿಸಿ ಕೇಂದ್ರಕ್ಕೆ ಕಳುಹಿಸಲು ಸರ್ಕಾರ ಒಪ್ಪಿಕೊಂಡಿದೆ.

ಶ್ರೀ ವಾಟಾಳ್ ನಾಗರಾಜ್ : ಅಲ್ಲಿಯವರೆಗೂ ಪರಿವಾರ ಜನಾಂಗದವರಿಗೆ ಸೌಲಭ್ಯ ಬೇಡವಾ? ಪರಿವಾರ ಜನಾಂಗ ಮತ್ತು ನಾಯಕ ಜನಾಂಗ ಒಂದೇ ಎಂದು ಪ್ರತಿಪಾದನೆ ಮಾಡಿ ಅದನ್ನು ನೂರು ಸಾರಿ ಹೇಳುತ್ತಿದ್ದೇನೆ.

ಉಪಾಧ್ಯಕ್ಷರು : ತಮಗೆ ಆ ಜನಾಂಗದ ಬಗ್ಗೆ ಇರತಕ್ಕಂಥ ಕಳಕಳಿಯನ್ನು ಸರ್ಕಾರ ಒಪ್ಪಿಕೊಳ್ಳುತ್ತದೆ. ಸರ್ಕಾರಕ್ಕೂ ಅವರ ಬಗ್ಗೆ ಅಷ್ಟೇ ಕಳಕಳಿ ಇದೆ. ಆದರೆ, ಈ ವಿಷಯ ಈಸರ್ಕಾರದ ವ್ಯಾಪ್ತಿಯಲ್ಲಿ ಬರತಕ್ಕಂಥಾದ್ದಲ್ಲ. ಇಲ್ಲಿಂದ ಅದನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಿಕೊಡುವಂಥ ಸರ್ವ ಪ್ರಯತ್ನವನ್ನು ರಾಜ್ಯ ಸರ್ಕಾರ ಮಾಡುತ್ತಿದೆ.

ಶ್ರೀ ವಾಟಾಳ್ ನಾಗರಾಜ್ : ಸರಕಾರ ಈ ರೀತಿಯಲ್ಲಿ ತೋರಿಕೆ ಹಾರಿಕೆಯನ್ನು ಮಾಡಿದರೆ ಆಗುವುದಿಲ್ಲ. ಸರಕಾರವು ಒಂದು ಆದೇಶವನ್ನು ಹೊರಡಿಸಿ ಅದರಲ್ಲಿ ಕೇಂದ್ರ ಸರಕಾರರದ ಆದೇಶ ಬರುವವರೆಗೆ ಈ ಜನಾಂಗದವರಿಗೆ ಈ ಎಲ್ಲಾ ಸವಲತ್ತುಗಳನ್ನು ದೊರಕಿಸಿಕೊಡಬೇಕು, ಈ ಬಗ್ಗೆ ಡಿಸಿ ಯವರಿಗೆ ಸೂಕ್ತ ಆದೇಶವನ್ನು ನೀಡಬೇಕು.

ಶ್ರೀ ರಮೇಶ್ ಸಿ. ಜಗಜಿಣಗಿ : ಮಾನ್ಯ ಅಧ್ಯಕ್ಷರೇ, ಮಾನ್ಯ ಸದಸ್ಯರು ತಿಳಿಸಿದ ವಿಚಾರಗಳನ್ನು ಜಾರಿ ಮಾಡಲು ಆಗುವುದಿಲ್ಲ. ಆದರೆ ಒಂದು ವಿಚಾರವನ್ನು ಹೇಳಬಯಸುತ್ತೇನೆ, ಈಗಾಗಲೇ ಯಾರ್ಯಾರು ಖೊಟ್ಟಿ ಸರ್ಟಿಫಿಕೇಟ್‌ಗಳನ್ನು ತೆಗೆದುಕೊಂಡಿದ್ದಾರೋ ಅವರುಗಳ ಮೇಲೆ ಕೇಸ್‌ಗಳನ್ನು ಬುಕ್ ಮಾಡಿ ಎಂದು ಕೇಂದ್ರ ಸರಕಾರದವರೇ ನಮಗೆ ಪತ್ರವನ್ನು ಬರೆದಿದ್ದಾರೆ. ಆದ್ದರಿಂದ ಯಾವುದೇ ಸಹಾಯ ಸವಲತ್ತುಗಳನ್ನು ತಾತ್ಕಾಲಿಕವಾಗಿ ಕೊಡಲು ಆಗುವುದಿಲ್ಲ.

ಶ್ರೀ ವಾಟಾಳ್ ನಾಗರಾಜ್ : ಅವರು ಹೇಳಿದ ಹಾಗೆ ನೀವು ಮಾಡುವುದಕ್ಕೆ ಆಗುತ್ತದೋ? ಈ ಸರಕಾರದ ಉತ್ತರವು ಪ್ರಾಮಾಣಿಕವಾಗಿಯೂ ಇಲ್ಲ, ಪರಿಣಾಮಕಾರಿಯಾಗಿಯೂ ಇಲ್ಲ. ಆದ್ದರಿಂದ ನಾನು ಸಭಾತ್ಯಾಗವನ್ನು ಮಾಡುತ್ತಾ ಇದ್ದೇನೆ. ಇದು ಒಳ್ಳೆಯ ನಿರ್ಧಾರವಲ್ಲ. ಇದೇ ಸದನದಲ್ಲಿ ಹಿಂದೆ ಮಾನ್ಯ ಧರ್ಮಸಿಂಗ್‌ರವರು ಸಚಿವರಾಗಿದ್ದಾಗ ಅವರು ತುಂಬಾ ಪ್ರಾಮಾಣಿಕವಾಗಿ ಹೇಳಿದ್ದರು. ಮೈಸೂರು ಜಿಲ್ಲಾಧಿಕಾರಿಯನ್ನು ಕರೆಸಿ ಹೇಳಿದರು. ಪರಿವಾರ ಜನಾಂಗ ಮತ್ತು

ನಾಯಕ ಪರಿವಾರ ಎಂದರೂ ಎರಡೂ ಒಂದೇ ಪರಿವಾರ ಜನಾಂಗಕ್ಕೆ ತೊಂದರೆ ಕೊಡಬೇಡಿ, ಎಂದು ಹೇಳಿ ಒಂದಲ್ಲ ಎರಡು ಪತ್ರಗಳನ್ನು ಬರೆದು ಹೇಳಿದವರು ಚುನಾವಣೆಗಳಲ್ಲಿಯೂ ಕೂಡ ಗೆದ್ದಿದ್ದಾರೆ.

ಉಪಾಧ್ಯಕ್ಷರು : ತಾವು ಹೇಳಿದ ಹಾಗೆ ಅದರಿಂದ ಏನಾಯಿತು?

ಶ್ರೀ ವಾಟಾಳ್ ನಾಗರಾಜ್ : ಅಲ್ಲಿ ಡಿ.ಸಿ.ಯವರು ಒಪ್ಪುತ್ತಾ ಇಲ್ಲ

ಉಪಾಧ್ಯಕ್ಷರು : ಅವರು ಒಪ್ಪುತ್ತಾ ಇಲ್ಲ ಅಂದರೆ ಅದು ಕಾನೂನು ರೀತ್ಯಾ ಇಲ್ಲ ಎಂದು ಅರ್ಥ. ಈಗ ಪುನಃ ಅದೇ ತಪ್ಪನ್ನು ಇವರು ಮಾಡಬೇಕೇ?

ಶ್ರೀ ವಾಟಾಳ್ ನಾಗರಾಜ್ : ಹಿಂದಿನ ಸಹಕಾರದವರು ಇದ್ದಾಗ ಒಪ್ಪಿದ್ದರು. ನಾನೇ ಆರ್ಡರ್‌ನ್ನು ತೆಗೆದುಕೊಂಡು ಹೋಗಿ ಕೊಟ್ಟಿದ್ದೇನೆ. ತಹಶೀಲ್ದಾರ್ ಅವರು ಸರ್ಟಿಫಿಕೇಟ್‌ಗಳನ್ನು ಕೊಟ್ಟಿದ್ದಾರೆ.

ಉಪಾಧ್ಯಕ್ಷರು : ಸರಕಾರದ ವ್ಯಾಪ್ತಿಯಲ್ಲಿರದೇ ಇರತಕ್ಕ ತೀರ್ಮಾನವನ್ನು ಮಾಡಲು ಸಾಧ್ಯವೇ?

ಶ್ರೀ ವಾಟಾಳ್ ನಾಗರಾಜ್ : ಹೇಗೆ ಬರುತ್ತದೆ ಅಂದರೆ ಹೇಗೆ? ಹಾಗಾದರೆ ಸರಕಾರ ಏಕೆ ಇರಬೇಕು? ಅಂಥವರಿಗೆ ಕೊಡಲು ತಾನೇ ಸರಕಾರ ಇರುವುದು?

ಶ್ರೀ ಡಿ.ಟಿ. ಜಯಕುಮಾರ್ (ತೋಟಗಾರಿಕೆ ರಾಜ್ಯ ಸಚಿವರು) : ಮಾನ್ಯ ಅಧ್ಯಕ್ಷರೇ, ಅಲ್ಲಿ ಅಧಿಕಾರಿಗಳು ಸಮಸ್ಯೆಗಳನ್ನು ಹುಟ್ಟಿ ಹಾಕಿದ್ದಾರೆ ಅಷ್ಟೆ. ಸಮಸ್ಯೆ ಇಲ್ಲ. ಅಧಿಕಾರಿಗಳು ತಪ್ಪು ಮಾಹಿತಿಯನ್ನು ಕೊಟ್ಟಿದ್ದಾರೆ. ಆದ್ದರಿಂದ ಅದನ್ನು ಗಮನಿಸಿ ಸೂಕ್ತವಾದ ಕ್ರಮವನ್ನು ತೆಗೆದುಕೊಳ್ಳತ್ತೇವೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ಮಾನ್ಯ ಅಧ್ಯಕ್ಷರೇ, ಮಾನ್ಯ ಸಮಾಜ ಕಲ್ಯಾಣ ಸಚಿವರು ಮತ್ತು ತೋಟಗಾರಿಕೆ ಸಚಿವರು ಬೇರೆ ಬೇರೆ ರೀತಿಯಲ್ಲಿ ಹೇಳಿಕೆಗಳನ್ನು ಕೊಡುತ್ತಾ ಇದ್ದಾರೆ. ನಾವು ಯಾವುದನ್ನು ನಂಬಬೇಕು? ನಾವು ಯಾವುದನ್ನು ಆದೇಶ ಎಂದು ತೆಗೆದುಕೊಳ್ಳಬೇಕು? ಸಂಬಂಧಪಟ್ಟ ಸಚಿವರು ಆ ಸಚಿವರು ಹೇಳಿದ್ದಕ್ಕೆ ಬದ್ಧರಾಗಿದ್ದಾರೆಯೇ? ಯಾಕೆಂದರೆ ಇಬ್ಬರು ಮಂತ್ರಿಗಳು ಬೇರೆ ಬೇರೆ ಹೇಳಿಕೆಗಳನ್ನು ಕೊಟ್ಟಾಗ ಅದು ನಾಳೆ ಪತ್ರಿಕೆಗಳಲ್ಲಿ ಬರುತ್ತದೆ. ನಾವು ಸಮಾಜಕಲ್ಯಾಣ ಸಚಿವರ ಮಾತನ್ನು ನಂಬಬೇಕೋ? ತೋಟಗಾರಿಕೆ ಸಚಿವರ ಮಾತನ್ನು ನಂಬಬೇಕೋ ಎಂಬುದನ್ನು ಖಚಿತಪಡಿಸಿ. ಇಲ್ಲವಾದಲ್ಲಿ ಆ ಮಾತುಗಳನ್ನು ತಾವು ಕಡತದಿಂದ ತೆಗೆದು ಹಾಕಸಿ.

(ಈ ಹಂತದಲ್ಲಿ ಮಾನ್ಯ ಸಚಿವರಾದ ವಾಟಾಳ್ ನಾಗರಾಜ್‌ರವರು ಸರಕಾರದ ಉತ್ತರ ಸರಿಯಾಗಿಲ್ಲವೆಂದು ಪ್ರತಿಭಟಿಸಿ ಸಭಾತ್ಯಾಗ ಮಾಡಿದರು)

ಇಲ್ಲವಾದರೆ ನಾವು ಸಹ ಸಭಾತ್ಯಾಗ ಮಾಡಿ ಹೊರ ಹೋಗ ಬೇಕಾಗುತ್ತದೆ. ತೋಟಗಾರಿಕೆ ಸಚಿವರು ಸುತ್ತೋಲೆ ಕಳುಹಿಸುತ್ತೇವೆಂದು ಹೇಳಿದ್ದಾರೆ. ಯಾವುದು ಸರಿ ಎಂದು ಸ್ಪಷ್ಟಪಡಿಸ ಬೇಕು. ಈಗಾಗಲೇ ತೋಟಗಾರಿಕೆ ಇಲಾಖೆ ಸಚಿವರು ಉಂಟು ಮಾಡಿದ ಗೊಂದಲದ ಬಗ್ಗೆ ಸಾಕಷ್ಟು ಚರ್ಚೆಯಾಗುತ್ತಾ ಇದೆ. ಅಧಿಕಾರಿಗಳಿಗೆ ಸ್ಪಷ್ಟ ಆದೇಶ ಇಲ್ಲವಾದಲ್ಲಿ ಅವರು ಹೇಗೆ ಕೆಲಸ ಮಾಡುವುದಕ್ಕೆ ಆಗುತ್ತದೆ.? ಅನಾವಶ್ಯಕವಾಗಿ ಜಿಲ್ಲಾಧಿಕಾರಿಯನ್ನು ದೂರಿ ಏನು ಪ್ರಯೋಜನ? ಒಬ್ಬ ಸಂಬಂಧಪಟ್ಟ ಸಚಿವರು ಇಂಥ ವಿಚಾರದ ವಾದದಲ್ಲಿ ಸಿಕ್ಕಿ ಕೊಂಡರೆ ಇದಕ್ಕೆ ಜಿಲ್ಲಾಧಿಕಾರಿ ಜವಾಬ್ದಾರಿಯೇ?

ಶ್ರೀ ಜೆ.ಹೆಚ್. ಪಟೇಲ್ : ಮಾನ್ಯ ಅಧ್ಯಕ್ಷರೇ, ರೆಸಿಡೆನ್ಶಿಯಲ್ ಆರ್ಡರ್ ಆಗದ ಹೊರತು, ಸಿನಾನಿಮ್ಸ್ ಶೆಡ್ಯೂಲ್ಡ್ ಟ್ರೈಬ್- ನಾಯಕ, ವಾಲ್ಮೀಕಿ, ಪರಿವಾರ,

ಎಂಬ ಹೆಸರು ಬರುವವರೆಗೂ ರೆಸಿಡೆನ್ಶಿಯಲ್ ಆರ್ಡರ್ ಬರುವವರೆಗೂ ಡಿ.ಸಿ. ಯವರು ಏನೂ ಮಾಡುವುದಕ್ಕಾಗುವುದಿಲ್ಲ. ಹಿಂದಿನ ಸರಕಾರ ಸುಮ್ಮನೆ ಎಲ್ಲರನ್ನೂ ಪ್ಲೀಸ್ ಮಾಡುವುದಕ್ಕೆ ಅಂತ ಈ ಕೊಡಬಹುದು ಎಂದು ಅವರು ಆದೇಶವನ್ನು ಕೊಟ್ಟಿದ್ದರೆ ಅದು ಕಾನೂನು ಬದ್ಧವಲ್ಲ, ಅದು ಕಾನೂನಿಗೆ ವಿರುದ್ಧವಾಗುತ್ತದೆ. ಅದು ಸಂವಿಧಾನದ ವಿರುದ್ಧವಾಗುತ್ತದೆ. ಪರಿವಾರ ಎಂಬುದು ನಾಯಕ ಜನಾಂಗ ಎಂಬುದನ್ನು ಕೇಂದ್ರ ಸರಕಾರಕ್ಕೆ ಕಳುಹಿಸಿ, ಅವರಿಂದ ಒಪ್ಪಿಗೆ ಪಡೆದ ಮೇಲೆ ಅವರಿಗೆ ನಾವು ಸರ್ಟಿಫಿಕೇಟ್‌ಗಳನ್ನು ಕೊಡುತ್ತೇವೆ. ನಾವು ಚಂದ್ರಶೇಖರ್‌ರವರು ಪ್ರಾಧಾನಿಯಾಗಿದ್ದಾಗಲೇ ಕೊಟ್ಟಿದ್ದೆವು.

ಶ್ರೀ ವಾಟಾಳ್ ನಾಗರಾಜ್ : ಇಂಥ ತಾರೀಖಿನನೊಳಗಾಗಿ ಕೇಂದ್ರಸರ್ಕಾಕ್ಕೆ ಇದನ್ನು ತೆಗದುಕೊಂಡು ಹೋಗುತ್ತೇವೆ, ಇಂತಿಷ್ಟು ದಿವಸಗಳೊಳಗೆ ಇದನ್ನು ಮಾಡುತ್ತೇವೆಂಬ ಸ್ಪಷ್ಟ ಭರವಸೆಯನ್ನು ಕೊಡುತ್ತೀರಾ?

ಶ್ರೀ ಜೆ.ಹೆಚ್. ಪಟೇಲ್ : ನಾವು ಪ್ರಯತ್ನ ಮಾಡುತ್ತಾ ಇದ್ದೇವೆ. ಪರಿವಾರ ಎಂಬ ಶಬ್ದ ಬಿಟ್ಟು ಹೋಗದೆ, ಅದು ಸಿನಾನಿಮ್‌ನಲ್ಲಿ ನೇರ ಬೇಕು.

(ಗೊಂದಲ)

ಶ್ರೀ ಬಿ.ಎಸ್. ಯಡಿಯೂರಪ್ಪ : ಸಾನ್ಮಾನ್ಯ ತೋಟಗಾರಿಕಾ ಇಲಾಖೆ ಸಚಿವರಿಗೂ ಜಿಲ್ಲಾಧಿಕಾರಿಗೂ ಒಂದು ರೀತಿಯಲ್ಲಿ ತಪ್ಪು ಗ್ರಹಿಕೆಯಾಗಿದೆ. ಸುತ್ತೋಲೆಯನ್ನು ಕಳುಹಿಸಿಕ್ರಮ ತೆಗೆದುಕೊಳ್ಳುತ್ತೇವೆ ಎಂದು ಹೇಳಿದ್ದಾರೆ. ಸಮಾಜಕಲ್ಯಾಣ ಅಧಿಕಾರಿಗಳು ನಾನು ಅದಕ್ಕೆ ಬದ್ಧನಾಗಿದ್ದೇನೆ, ಜಿಲ್ಲಾಧಿಕಾರಿಗಳಿಗೆ ಆದೇಶವನ್ನು ಕೊಡುತ್ತೇನೆ ಅಂದರೆ ನನ್ನ ಅಭ್ಯಂತರವೇನೂ ಇಲ್ಲ, ಆದ್ದರಿಂದ ದಯಮಾಡಿ ತೋಟಗಾರಿಕಾ ಸಚಿವರು ಹೇಳಿದಂತಹ ಮಾತುಗಳನ್ನು ವಾಪಸ್ ತೆಗೆದುಕೊಳ್ಳಬೇಕು. ಇಲ್ಲಿ ಆ ಮಾತು ರೆಕಾರ್ಡ್‌ಗೆ ಹೋಗಿದೆ. ಈ ಬಗ್ಗೆ ಸ್ಪಷ್ಟಪಡಿಸಬೇಕು. ಇಲ್ಲವಾದರೆ ಆ ಜಿಲ್ಲಾಧಿಕಾರಿ ಏನು ಮಾಡಬೇಕು? ಸ್ವತಃ ಸಚಿವರೇ ಗೊಂದಲದಲ್ಲಿರ ಬೇಕಾದರೆ ಅವರಿಗೆ ಸರಿಯಾದಂಥ ಕಾನೂನಿನ ಮಾಹಿತಿಯು ಸಿಗದೆ ಇರುವಾಗ ಸುಮ್ಮನೆ ಜಿಲ್ಲಾಧಿಕಾರಿಯ ಮೇಲೆ ಬೀಳುವಂಥ ಕೆಲಸ ಮಾಡುವುದು ಸರಿಯಲ್ಲ, ಅದಕ್ಕಾಗಿ ಸ್ಪಷ್ಟಪಡಿಸ ಬೇಕು. ತೋಟಗಾರಿಕಾ ಸಚಿವರು ಸರಕಾರದ ಪರವಾಗಿ ಆದೇಶವನ್ನು ಕಳುಹಿಸಿಕೊಡುತ್ತೇವೆಂದು ಹೇಳಿದ್ದಾರೆ.

ಉಪಾಧ್ಯಕ್ಷರು : ಮಾನ್ಯ ಉಪ-ಮುಖ್ಯಮಂತ್ರಿಯವರು ಸಮರ್ಪಕವಾಗಿ ಉತ್ತರವನ್ನು ಕೊಟ್ಟಿದ್ದಾರೆ. ಆದ್ದರಿಂದ ಈ ವಿಷಯವನ್ನು ಇಲ್ಲಿಗೆ ಮುಕ್ತಾಯ ಮಾಡಿರುತ್ತೇನೆ, ಮುಂದಿನ ಕಲಾಪಗಳನ್ನು ತೆಗೆದುಕೊಳ್ಳುತ್ತೇನೆ.

ಶ್ರೀ ಬಿ.ಎಸ್. ಯಡಿಯೂರಪ್ಪ : ತಾವು ನಮ್ಮ ರಕ್ಷಣೆಗೆ ಬರಬೇಕಾಗುತ್ತದೆ.ಸಚಿವರು ಸುತ್ತೋಲೆ ಕಳುಹಿಸುತ್ತೇವೆಂದು ಹೇಳಿದ್ದಾರೆ.

(ಗೊಂದಲ)

ಶ್ರೀ ಕಾಗೋಡು ತಿಮ್ಮಪ್ಪ : ಸಚಿವರು ಸುತ್ತೋಲೆಯನ್ನು ಹೇಗೆ ಕಳುಹಿಸಲು ಬರುತ್ತದೆ?

(ಗೊಂದಲ)

ಶ್ರೀ ಎಚ್.ಎನ್. ನಂಜೇಗೌಡ : ನಾನು ಕ್ರಿಯಾಲೋಪವನ್ನು ಎತ್ತುತ್ತೇನೆ. ಮಾನ್ಯ ಉಪ-ಮುಖ್ಯಮಂತ್ರಿಯವರು ದಯಮಾಡಿ ಕೇಳಬೇಕು. ನಾವು ರಾಜ್ಯಾಂಗದ ಚೌಕಟ್ಟಿನಲ್ಲಿ ಕಾರ್ಯನಿರ್ವಹಣೆ ಮಾಡುತ್ತೇವೆ. ಇವಕ್ಕೆಲ್ಲಾ ಕೆಲವು ವಿಧಿನಿಯಮಗಳು

ಇದ್ದಾವೆ. ಎಸ್‌ಸಿ ಎಸ್‌ಟಿ ಯಾರು? ಅದು ಎಲ್ಲಿ ಇನ್‌ಕ್ಲೂಡ್ ಆಗಬೇಕೋ? ಕೇಂದ್ರ ಮಟ್ಟದಲ್ಲಿ ಆಗಬೇಕೋ? ಎಂಬಿತ್ಯಾದಿ ವಿಚಾರಗಳು ಇರುತ್ತವೆ. ಇಲ್ಲಿ ಏನಾಗಿದೆ ಅಂದರೆ ವಿಷಯವನ್ನು ಸರಿಯಾಗಿ ತಿಳಿದುಕೊಳ್ಳದೇನೇ ಕೆಲವು ಉತ್ಸಾಹಿಯುವಕ ಮಂತ್ರಿಯವರು ಬಾಯಿ ಹಾಕುತ್ತಾರೆ. ಅವರು ಹೇಳಿದ ಹಾಗೆ ಸುತ್ತೋಲೆಯನ್ನು ಕಳುಹಿಸಲು ಬರುವುದಿಲ್ಲ. ಇಂಥ ವಿಚಾರಗಳನ್ನು ನಿಯಮಗಳಂತೆ ಪಾಲಿಸಬೇಕಾಗುತ್ತದೆ. ಆದ್ದರಿಂದ ವಿನಾಕಾರಣ ಸಭೆಯಲ್ಲಿ ಗೊಂದಲ ಉಂಟು ಮಾಡುವುದಕ್ಕೆ ಕಾರಣವಾಗುವುದು ಬೇಡ. ಈ ಯುವಕರ ಬಗ್ಗೆ ಹಿರಿಯ ಸಚಿವರು ಮಾರ್ಗದರ್ಶನ ನೀಡಬೇಕು. ನಾನೇನು ಯುವಕರನ್ನು ತಮಾಶೆ ಮಾಡುತ್ತಾ ಇಲ್ಲ. ನಾನು ಒಂದು ಹಂತದಲ್ಲಿ ಮಾನ್ಯ ಅಧ್ಯಕ್ಷರೊಂದಿಗೆ ಕೂಡ ಅವರ ಚೇಂಬರ್‌ನಲ್ಲಿ ಸಜೆಸ್ಟ್ ಮಾಡುತ್ತಾ ಇದ್ದೆ.ಹಾಗೆ ಮಾಡುವುದರಿಂದ ಈ ಗೊಂದಲ ಆಗುವುದಿಲ್ಲ. ಆದ್ದರಿಂದ ಈ ವಿಚಾರವನ್ನು ಮಾನ್ಯ ಉಪ-ಮುಖ್ಯಮಂತ್ರಿಯವರು ಸ್ಪಷ್ಟ ಮಾಡಿಬಿಡಿ.

ಶ್ರೀ ಜೆ.ಹೆಚ್. ಪಟೇಲ್ : ತಮ್ಮ ಸಲಹೆಯು ತುಂಬಾ ಒಳ್ಳೆಯ ಸಲಹೆಯಾಗಿದೆ. ಮಾನ್ಯ ಅಧ್ಯಕ್ಷರೇ, ಈ ವಿಚಾರದ ಚರಿತ್ರೆಯು ಬಹಳ ಹಳೆಯದು ಆದ್ದರಿಂದ ಅದನ್ನೆಲ್ಲಾ ಹೇಳಲು ಹೋಗುವುದಿಲ್ಲ. ಮಾನ್ಯ ಚಂದ್ರಶೇಖರ್‌ರವರು ಪ್ರಧಾನಮಂತ್ರಿಯಾಗಿದ್ದಾಗ ನಾವು ಶೆಡ್ಯುಲ್ಡ್‌ಟ್ರೈಬ್ಸ್ ನಲ್ಲಿ ಸಿನಾನಿಮ್ಸ್ ಎಂದು ಕಳುಹಿಸಿದ್ದೆವು. ಕಳುಹಿಸಿದಾಗ ಪರಿವಾರ ಮತ್ತು ತಳವಾರ ಎರಡೂ ಬಿಟ್ಟು ಹೋಗಿದೆ. ಅದು ಯಾಕೆ ಹೀಗೆ ಆರ್ಡರ್ ಆಯಿತು ಆ ಮೇಲೆ ಅಲ್ಲಿ ಬೇರೆ ಸರಕಾರ ಬಂತು. ನಮ್ಮಲ್ಲಿಯೂ ಬೇರೆ ಸರಕಾರ ಬಂತು. ಬಂದಾಗ ಆಗಿರತಕ್ಕಂಥ ಕಾನ್ಸಿಟಿಟ್ಯೂಶನ್‌ನಲ್ಲಿ ಇದು ಸಿನಾನಿಮ್ಸ್ ಅಂತ ಬರಲಿಲ್ಲ, ಎಂಬ ಕಾರಣದಿಂದ ಈ ಒಂದು ಜನಾಂಗ ಇವೊತ್ತು ಸಫರ್ ಮಾಡಬಾರದು ಎಂದು ಆ ಸರಕಾರ ಅವರಿಗೆ ತಿಳಿದ ಹಾಗೆ ಏನೋ ಮಾಡಿರಬಹುದು. ಆದರೆ, Constitutionally, Presidential Order alone can setright the things.

ಅದಕ್ಕೋಸ್ಕರ ನಾವು ಪ್ರಯತ್ನ ಮಾಡುತ್ತಾ ಇದ್ದೇವೆ. ಆ ಜನಾಂಗದ ಬಗ್ಗೆ ನಿಮಗೆ ಎಷ್ಟು ಕಳಕಳಿ ಇದೆಯೋ ನಮಗೂ ಅಷ್ಟ ಕಳಕಳಿ ಇದೆ. ನಮಗೂ ಅಷ್ಟು ಒತ್ತಡ ಇದೆ. ನಾವೇನೂ ಅವರಿಗೆ ಕೆಡುಕು ಮಾಡಲು ತಯಾರಾಗಿಲ್ಲ. ಆದರೂ ಕೂಡ ಇದೆಲ್ಲವನ್ನೂ ಮಾಡಲು ಒಂದು ವಿಧಾನ ಇದೆಯಲ್ಲ? ಅದನ್ನು ಬಿಟ್ಟು ನಾವು ಮಾಡುವುದಕ್ಕೆ ಆಗುವುದಿಲ್ಲ, ಅದನ್ನು ಅನುಸರಿಸುತ್ತೇವೆ. ಅದರ ಪ್ರಕಾರವೇ ಹೋಗಬೇಕಾಗುತ್ತದೆ. ಮಾನ್ಯ ವಿರೋಧ ಪಕ್ಷದ ನಾಯಕರುಗಳಿಗೆ ನಾವು ಇಷ್ಟೆಲ್ಲಾ ಕಾರಣ, ಕಾನೂನು ಕಾನ್ಸಿಟಿಟ್ಯೂಶನ್, ಮುಂತಾಗಿ ಅಂದರೂ ಕೂಡ ಸಿಟ್ಟು ಮಾಡಿ ಕೊಳ್ಳುವುದಾದರೆ ನಮ್ಮ ಅಭ್ಯಂತರವಿಲ್ಲ.

ಶ್ರೀ ಬಿ.ಎಸ್. ಯಡಿಯೂರಪ್ಪ : ಜವಾಬ್ದಾರಿ ಇರುವಂತಹ ಒಬ್ಬ ಸಚಿವರು ಈ ಮಾತನ್ನು ಹೇಳಿದ್ದಾರೆ. ಅದನ್ನು ಕಡತದಿಂದ ತೆಗೆಸಿಹಾಕಿ ಇಲ್ಲದೇಇದ್ದರೆ ತಪ್ಪುಗ್ರಹಿಕೆ ಆಗುತ್ತದೆ. ಎರಡನೆಯದು ತಾವು ತಕ್ಷಣ ಪತ್ರ ಬರೆಯಿರಿ, ಈಗಾಗಲೇ ಪತ್ರ ಬರೆದಿದ್ದರೆ ನಾಳೆ ಇನ್ನೊಂದು ರಿಮೈಂಡರ್ ಪತ್ರ ಹಾಕಿ, ಸಂಬಂಧಪಟ್ಟ ಸಚಿವರು ಹೋಗಿ ಭೇಟಿ ಮಾಡಲ್.

ಶ್ರೀ ಜೆ.ಎಚ್. ಪಟೇಲ್ : ಪ್ರಯತ್ನ ಮಾಡುತ್ತೇವೆ.

ಶ್ರೀ ಕಾಗೋಡು ತಿಮ್ಮಪ್ಪ : ನಾನು ರಾಜ್ಯದ ಸಮಾಜಕಲ್ಯಾಣ ಸಚಿವನಾಗಿ ಕೇಂದ್ರದ ಸಚಿವರನ್ನು ಭೇಟಿ ಮಾಡಿ ಕಾಗದ ಪತ್ರಗಳನ್ನೆಲ್ಲ ನೀಡಿ ಹಿಂದೆಯೇ ಚರ್ಚೆ ಮಾಡಿದ್ದೀವಿ.

ಈಗ ಕೇಂದ್ರಸರ್ಕಾರ ಪ್ರಕಟಮಾಡಿರುವ ಪಟ್ಟಿಯಲ್ಲಿ ಈ ಹೆಸರುಗಳು ಸೇರದೇ ಇದ್ದರೆ ರಾಜ್ಯ ಅದನ್ನು ಪ್ರಕಟಮಾಡಲು ಬರುವುದಿಲ್ಲ. ಆಗುವುದೇ ಇಲ್ಲ. ಜೊತೆಗೆ ತಾವು ಮಂತ್ರಿಯಾಗಿರಬಹುದು ಏನೇ ಆಗಿರಬಹುದು, ಕ್ಯಾಸ್ಟ್ ಸರ್ಟಿಫಿಕೇಟ್ ಕೊಡುವ

ಅಧಿಕಾರ ಇರುವುದು ತಹಶೀಲ್ದಾರ್‌ಗೆ ಈಗ ನನ್ನ ಹತ್ತಿರವೂ ಅನೇಕರು ಬಂದಿದ್ದರು, ಆ ಜವಾಬ್ದಾರಿ ನಾನು ತೆಗೋಳೋಕ್ಕೆ ಬರುವುದಿಲ್ಲ. ಒಂದು ಸಲ ನಾವು ಅಥಾರಿಟಿಯನ್ನು ಕೇಂದ್ರಕ್ಕೆ ಕೊಟ್ಟಾದ ಮೇಲೆ ಅವರೇ ತೀರ್ಮಾನ ಕೈಗೊಳ್ಳಬೇಕು. ಅವರು ಕೈಗೊಳ್ಳುವ ತೀರ್ಮಾನದ ಮೇಲೆ ಅಪೀಲ್ ಹೋಗತಕ್ಕಂತಹ ಅಧಿಕಾರ ಇವತ್ತು ಇದೆ, ಅದಕ್ಕೆ ನಿಯಮಾವಳಿ ಕೂಡ ಇದೆ. ಇದನ್ನು ತಿಳಿದು ನಮ್ಮ ಪಾಡಿಗೆ ನಾವು ಸರ್ಟಿಫಿಕೇಟ್ ಕೊಟ್ಟುಬಿಡಿ ಎಂದರೆ ಅರ್ಥ ಇದೆಯಾ? ಅದಕ್ಕೋಸ್ಕರ ಪತ್ರಿಕೆಗಳಲ್ಲಿ ಕೂಡ ನಾವು ಓದಿದ್ದೇವೆ ಅದನ್ನು ದಯವಿಟ್ಟು ಆ ರೀತಿ ಮಾಡುವುದಕ್ಕೆ ಬರುವುದಿಲ್ಲ. ಹಿಂದೆ ಅನೇಕ ಪ್ರಕರಣಗಳು ಇದೇ ರೀತಿಯಾಗಿ ಇವತ್ತು ಹೈಕೋರ್ಟಿಗೆ ಹೋಗಿ ಪೆಂಡಿಂಗ್‌ನಲ್ಲಿವೆ. ಆದ್ದರಿಂದ ದಯವಿಟ್ಟು ಕ್ಯಾಸ್ಟ್ ಸರ್ಟಿಫಿಕೇಟ್ ಕೊಡುವ ಅಧಿಕಾರ ತಹಶೀಲ್ದಾರ್‌ರದು, ಅವರ ಅಧಿಕಾರವ್ಯಾಪ್ತಿಯಲ್ಲಿ ಯಾರೂ ಪ್ರವೇಶ ಮಾಡಕೂಡದು. He must take his own decision. If there is injustice there is scope for appeal.

ಉಪಾಧ್ಯಕ್ಷರು : ಇದನ್ನು ಇಲ್ಲಿಗೆ ಮುಕ್ತಾಯ ಮಾಡೋಣ .ಈಗ ನಿಯಮ 351ರಡಿಯಲ್ಲಿ ಬಂದಿರುವ ಸೂಚನೆಗಳನ್ನು ತೆಗೆದುಕೊಳ್ಳುತ್ತೇನೆ.

## ನಿಯಮ 351ರ ಮೇರೆಗೆ

**(ಅ) ಶಿವಮೊಗ್ಗ ತಾಲ್ಲೂಕಿನ ವೀರಣ್ಣನ ಬೆನವಳಿ ಗ್ರಾಮದ ಬಳಿ ಅರಣ್ಯ ಇಲಾಖೆಯ ವನ್ಯ ಸಂರಕ್ಷಣೆ ವಿಭಾಗದವರು ಕಾರಿನ ಮೇಲೆ ನಡೆಸಿದ ಗುಂಡಿನ ಧಾಳಿ ಕುರಿತು**

ಶ್ರೀ ಆಯನೂರು ಮಂಜುನಾಥ್ : ಅಧ್ಯಕ್ಷರೇ ಶಿವಮೊಗ್ಗ ತಾಲ್ಲೂಕಿನಿಂದ ಸುಮಾರು 10 ಕಿಮೀ. ದೂರದಲ್ಲಿ ಬಿಎಚ್ ರಸ್ತೆಯಲ್ಲಿರುವ ವೀರಣ್ಣನ ಬೆನವಳ್ಳಿ ಗ್ರಾಮದ ಬಳಿ ಡಿಸೆಂಬರ್ 94ರ ಕೊನೆಯ ವಾರದಲ್ಲಿ ಅರಣ್ಯ ಇಲಾಖೆಯ ವನ್ಯ ಸಂರಕ್ಷಣೆ ವಿಭಾಗದವರು ಕಾರಿನ ಮೇಲೆ ನಡೆಸಿದ ಗುಂಡಿನ ದಾಳಿ ಬಗ್ಗೆ ತನಿಖೆ ಮಾಡಿ ವರದಿ ಸಲ್ಲಿಸಲು ಜನವರಿ 95ರ ಮೊದಲ ವಾರದಲ್ಲಿ ಶಿವಮೊಗ್ಗಕ್ಕೆ ಬಂದಿದ್ದ ಮಾನ್ಯ ಉಪಮುಖ್ಯಮಂತ್ರಿ ಜೆಎಚ್ ಪಟೇಲ್‌ರವರು ಅಧಿಕಾರಿಗಳಿಗೆ ಆದೇಶಸಿದ್ದರು ಹಾಗೂ ಇದನ್ನೇ ಪತ್ರಕರ್ತರ ಸಮ್ಮುಖದಲ್ಲಿ ಪುನರುಚ್ಚರಿಸಿರುವುದರಿಂದ ತನಿಖೆ ನಡೆಯಿಸಿ ತಪ್ಪಿತಸ್ಥರ ಮೇಲೆ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಸಚಿವರರ ಗಮನ ಸಳೆಯುತ್ತೇನೆ:

ಶ್ರೀ ಎಚ್.ವೈ ಮೇಟಿ (ಅರಣ್ಯ ಸಚಿವರು) : ಮಾನ್ಯ ಅಧ್ಯಕ್ಷರೇ, ದಿನಾಂಕ 25-12-94 ರಂದು ಶಿವಮೊಗ್ಗ ತಾಲ್ಲೂಕು ಬಿ.ಹೆಚ್. ರಸ್ತೆಯಲ್ಲಿ ಬೆನವಳ್ಳಿ ಕ್ರಾಸ್ ಹತ್ತಿರ ಶ್ರೀಗಂಧದ ದಾಸ್ತಾನಿದೆ ಎಂಬ ಮಾಹಿತಿ ಅಂದು ಸಂಜೆ 8.00 ಘಂಟೆ ಸಮಯಕ್ಕೆ ತಿಳಿದ ಪ್ರಯುಕ್ತ ಹಾಗೂ ಅದೇ ಸ್ಥಳದ ಕಡೆಗೆ ಒಂದು ಕಾರು ಹೋಗಿದೆ ಎಂಬ ವರ್ತಮಾನದ ಮೇರೆಗೆ ಶಿವಮೊಗ್ಗ ವನ್ಯಜೀವಿ ವಿಭಾಗದ ಸಿಬ್ಬಂದಿ ವರ್ಗದವರು ಬೆನವಳ್ಳಿ ಕ್ರಾಸ್‌ಗೆ ದಾವಿಸಿ, ಸುಮಾರು 3-4 ವಾಹನಗಳನ್ನು ತಪಾಸಣೆ ಮಾಡಿದರು. ನಂತರ ಸುಮಾರು ರಾತ್ರಿ 8.30 ಘಂಟೆಗೆ ವೀರಣ್ಣನ ಬೆನವಳ್ಳಿ ರಸ್ತೆಯಿಂದ ಒಂದು ಬಿಳಿ ಬಣ್ಣದ ಕಾರು ಬರುತ್ತಿರುವುದನ್ನು ಕಂಡು, ಕಾರನ್ನು ನಿಲ್ಲಿಸಲು ಸೂಚಿಸಿದರೂ ಸಹ ಸದರಿ ಕಾರಿನ (ನಂಬರ್ ಕೆ.ಎ. 14 ಎಂ 4715 ಚಾಲಕ ಕಾರನ್ನು ನಿಲ್ಲಿಸುವಂತೆ ನಿದಾನ ಮಾಡಿ ನಿಲ್ಲಿಸದೆ ವೇಗವಾಗಿ ಓಡಿಸಿಕೊಂಡು ಹೋದನು. ಇದರಿಂದ ಅನುಮಾನಗೊಂಡ ಸಿಬ್ಬಂದಿ ಯವರು ಇಲಾಖೆ ಲಾರಿಯಲ್ಲಿ ಸದರಿ ಕಾರನ್ನು ಬೆನ್ನಟ್ಟಿ ಸ್ವಲ್ಪ ದೂರ ಹೋದ ನಂತರ ಸಿಬ್ಬಂದಿಯವರು ಒಂದು ಸುತ್ತು ಗಾಳಿಯಲ್ಲಿ ಗುಂಡು ಹಾರಿಸಿದರು. ಆದರೂ ಚಾಲಕ ಕಾರನ್ನು ವೇಗವಾಗಿ ಓಡಿಸಿಕೊಂಡು ಹೋಗಿ ಹಠಾತ್ತನೆ ನಿಲ್ಲಿಸಿದ್ದರಿಂದ,

ಅತಿ ವೇಗವಾಗಿ ಹಿಂಬಾಲಿಸುತ್ತಿದ್ದ ಇಲಾಖಾ ಲಾರಿ ಮುಂದೆ ಹೋಗಲು ಸ್ಥಳವಿಲ್ಲದೆ, ಆ ಕಾರಿಗೆ ಹಿಂದಿನಿಂದ ಡಿಕ್ಕಿ ಹೊಡೆಯಿತು. ಕಾರಿನ ತಪಾಸಣೆಯನ್ನು ಮಾಡಿದಾಗ ಯಾವುದೇ ಅರಣ್ಯ ಉತ್ಪನ್ನಗಳನ್ನು ಕಳ್ಳಸಾಗಾಣಿಕೆ ಮಾಡುತ್ತಿರುವುದು ಕಂಡು ಬರಲಿಲ್ಲ. ಸದರಿ ಕಾರಿನ ಚಾಲಕ ಇಲಾಖೆ ಸಿಬ್ಬಂದಿಯ ಅನುಮಾನಕ್ಕೆ ಆಸ್ಪದವಾಗುವಂತೆ ನಡೆದುಕೊಂಡಿದ್ದರಿಂದ ಮಾತ್ರ ಈ ಘಟನೆ ನಡೆಸಲು ಅವಕಾಶವಾಯಿತು. ಇದರಲ್ಲಿ ಯಾವುದೇ ದುರುದ್ದೇಶ ಇರುವುದಿಲ್ಲ. ಈ ಡಿಕ್ಕಿಯಿಂದ ಯಾರಿಗೂ ನೋವು ಉಂಟಾಗಿರುವುದಿಲ್ಲ. ಅದೇ ದಿನ ಬೆನವಳ್ಳಿ ಕ್ರಾಸ್‌ಹತ್ತಿರ ತನಿಖೆ ಮಾಡಿ, ಪಕ್ಕದ ಕಾಡಿನಲ್ಲಿ ಬಚ್ಚಿಟ್ಟಿದ್ದನ್ನು ಸುಮಾರು 2 ಕ್ವಿಂಟಾಲ್ ಶ್ರೀಗಂಧವನ್ನು ಇಲಾಖೆ ಸಿಬ್ಬಂದಿ ಪತ್ತೆ ಹಚ್ಚಿದ್ದು, ಇದು ಅವರ ಕರ್ತವ್ಯ ನಿಷ್ಠೆಯ ಹಾಗೂ ಈ ಘಟನೆಯ ಬಗೆಗಿನ ಉದ್ದೇಶವನ್ನು ದೃಢೀಕರಿಸುತ್ತದೆ. ಈ ಬಗ್ಗೆ ಅಂದೇ ಕೋರ್ಟಿಗೆ ಎಫ್.ಐ.ಆರ್. ಸಲ್ಲಿಸಲಾಗಿದೆ.

**ಮಲಪ್ರಭಾ ನದಿಯಿಂದ ಪ್ರತಿವರ್ಷ ಪ್ರವಾಹ ಒಂದು ಸುಮಾರು 8-10 ಹಳ್ಳಿಗಳು ಮುಳುಗಡೆಯಾಗುತ್ತಿರುವುದರ ಬಗ್ಗೆ**

ಶ್ರೀ ಬಿಬಿ ಚಿಮ್ಮನಕಟ್ಟಿ : ಮಾನ್ಯ ಅಧ್ಯಕ್ಷರೆ, ಈ ಮಲಪ್ರಭಾ ನದಿಯಿಂದ ಪ್ರತಿ ವರ್ಷ ಬಂದು ಸುಮಾರು 8-10 ಹಳ್ಳಿಗಳು ಮುಳಗಡೆಯಾಗುವುದನ್ನು ತಪ್ಪಿಸುವ ಸಲುವಾಗಿ ಸರ್ಕಾರ ಏನು ಕ್ರಮ ಕೈಗೊಂಡಿದೆ. ಎಂದು ಕೇಳಬಯಸುತ್ತೇನೆ .

ಶ್ರೀ ಡಿ. ಮಂಜುನಾಥ್ : (ಉನ್ನತ ಶಿಕ್ಷಣ ಸಚಿವರು) : ಮಾನ್ಯ ಅಧ್ಯಕ್ಷರೇ, ಮಾನ್ಯ ಕಂದಾಯಸಚಿವ ಪರವಾಗಿ ಈ ಕೆಳಕಂಡ ಹೇಳಿಕೆಯನ್ನು ನೀಡಬಯಸುತ್ತೇನೆ.

ಬಿಜಾಪುರ ಜಿಲ್ಲೆಯ 41 ಪ್ರವಾಹ ಪೀಡಿತ ಗ್ರಾಮಗಳನ್ನು (ಬಸವನ ಬಾಗೇವಾಡಿ-1 ಇಂಡಿ-26, ಹುನಗುಂದ-4 ಮತ್ತು ಬಾದಾಮಿ-10) ಸ್ಥಳಾಂತರಿಸಲು ಸರ್ಕಾರಕ್ಕೆ ಪ್ರಸ್ತಾವನೆ ಬಂದಿರುತ್ತದೆ. ಈ 41 ಗ್ರಾಮಗಳ 4140 ಕುಟುಂಬಗಳನ್ನು ಸ್ಥಳಾಂತರಿಸಿ, ಅಗತ್ಯ ನಾಗರೀಕ ಸೌಲಭ್ಯ ಒದಗಿಸಲು ರೂ. 19.15 ಕೋಟಿಗಳ ಅಗತ್ಯವಿರುತ್ತದೆಯೆಂದು ಅಂದಾಜಿಸಲಾಗಿದೆ.

ಮೇಲಿನ ಪ್ರಸ್ತಾವನೆಯಲ್ಲಿ ಬಾದಾಮಿ ತಾಲ್ಲೂಕಿನ ಕೆಳಕಂಡ 10 ಗ್ರಾಮಗಳು ಸೇರಿದೆ. 1) ನೀಲರಗಿ, 2) ಜಕನೂರು 3) ಮುಮರೆಡ್ಡಿಕೊಪ್ಪ 4) ಖ್ಯಾಡ 5) ಕಾತರಕಿ 6) ತಾವಕಿನಹಾಳ 7) ಶಿರಬಿಡ 8) ಆಲೂರು ಎಸ್. 9) ಸಬ್ಬಲಕೂಸಿ 10) ಹೆಬ್ಬಳ್ಳಿ ಅಲ್ಲಿನ ಗ್ರಾಮಗಳ 1755 ಕುಟುಂಬಗಳನ್ನು ಸ್ಥಳಾಂತರಿಸಲು 128 ಎಕರೆ ಭೂಮಿ ಸ್ವಾಧೀನ ಪಡಿಸಿಕೊಳ್ಳ ಬೇಕಾಗುತ್ತದೆಯೆಂದು ಮತ್ತು ಮನೆಗಳ ನಿರ್ಮಾಣ ಮತ್ತು ಅಗತ್ಯ ನಾಗರೀಕ ಸೌಲಭ್ಯ ಒದಿಗಿಸಲು ರೂ. 301.00 ಲಕ್ಷಗಳು ಅಗತ್ಯವಿದೆಯೆಂದು ಅಂದಾಜಿಸಲಾಗಿದೆ.

ಒಂಬತ್ತನೇ ಹಣಕಾಸು ಆಯೋಗದ ಶಿಫಾರಸ್ಸಿನೊಂದಿಗೆ 1990-91ನೇ ಸಾಲಿನಿಂದ ಅಸ್ತಿತ್ವಕ್ಕೆ ಬಂದಿರುವ ರಾಜ್ಯ ಪ್ರಕೃತಿ ವಿಕೋಪ ಪರಿಹಾರ ನಿಧಿಯು ವಾರ್ಷಿಕ ಕೇವಲ ರೂ. 27.00 ಕೋಟಿಗಳ (ಕೇಂದ್ರ ಸರ್ಕಾರದ ಪಾಲು ರೂ. 20.25 ರಾಜ್ಯ ಸರ್ಕಾರದ ಪಾಲು ರೂ. 6.75 ಕೋಟಿಗಳು) ಬಂಡವಾಳನ್ನು ಹೊಂದಿದೆ. ಈ ಅನುದಾನದಲ್ಲಿ ಗ್ರಾಮಗಳ ಸ್ಥಳಾಂತರದಂತಹ ಕಾರ್ಯಕ್ಕೆ ತಗಲುವ ಬೃಹತ್ ಮೊಬಲಗನ್ನು ಭರಿಸುವುದು ಅಸಾಧ್ಯ.

ಈ ಹಿನ್ನಲೆಯಲ್ಲಿ ಮೇಲೆ ಹೇಳಲಾಗಿರುವ ಬಾದಾಮಿ ತಾಲ್ಲೂಕಿನ ಹತ್ತು ಗ್ರಾಮಗಳನ್ನು ಒಳಗೊಂಡಂತೆ ಬಿಜಾಪುರ ಜಿಲ್ಲೆಯ 41 ಗ್ರಾಮಗಳು ಸೇರಿದಂತೆ ಒಟ್ಟಾರೆ ರಾಜ್ಯದ 126 ಗ್ರಾಮಗಳ ಸ್ಥಳಾಂತರಕ್ಕಾಗಿ ರೂ. 42.67 ಕೋಟಿಗಳ ವೆಚ್ಚದ ಯೋಜನೆಯೊಂದನ್ನು ತಯಾರಿಸಿ, ದಿನಾಂಕ 26.11.93 ರಂದು ಭಾರತ ಸರ್ಕಾರಕ್ಕೆ ಸಲ್ಲಿಸಿರುವ ಮನವಿ ಪತ್ರ ದಲ್ಲಿ ಸೇರಿಸಿ ಆರ್ಥಿಕ ನೆರವು ಕೋರಲಾಗಿದೆ.

ಶ್ರೀ ಎ. ರುಕ್ಮಯ್ಯ ಪೂಜಾರಿ : ಅಧ್ಯಕ್ಷರೇ ರಾಷ್ಟ್ರೀಯ ಹೆದ್ದಾರಿ 48ರಲ್ಲಿ ನೇತ್ರಾವತಿ ಸೇತುವೆಯ ಪಕ್ಕ ಕೆಲವರು ಚಿಪ್ಪುಸುಣ್ಣ ಬೇಯಿಸುವ ಕೆಲಸ ಮಾಡುತ್ತಾ ಇದ್ದಾರೆ. ಈ ದಂಧೆ ರಾತ್ರಿ ಹೊತ್ತಿನಲ್ಲಿ ನಡೆಯುತ್ತಾ ಇದೆ. ಚಿಪ್ಪುಸುಣ್ಣ ಬೇಯಿಸುವುದರಿಂದ ಅದರ ಹೊಗೆ ವಾತಾವರಣ ತುಂಬಿ ಅತ್ಯಂತ ದುರ್ಗಂಧ ವಾಸನೆಯಿಂದ ಕೂಡಿರುತ್ತದೆ ಅಷ್ಟು ಮಾತ್ರವಲ್ಲ ಹೊಗೆ ತುಂಬ ರಸ್ತೆಯಲ್ಲಿ ಸಂಚಾರ ಮಾಡತಕ್ಕ ವಾಹನಗಳಿಗೆ ವಾಸನೆ ಮತ್ತು ಕಣ್ಣು ಉರಿಯಿಂದ ರಸ್ತೆಗಳು ಕಾಣದೆ ಹಲವಾರು ವಾಹನಗಳು ಸೇತುವೆ ಯಿಂದ ಕೆಳಗೆ ಬಿದ್ದು ಅಪಘಾತ ಉಂಟಾಗಿ ಜೀವಹಾನಿ ಉಂಟಾಗಿದೆ. ಈ ಬಗ್ಗೆ ಸಂಬಂಧಪಟ್ಟವರ ಗಮನಕ್ಕೆ ತಂದಿದ್ದರೂ ಏನೂ ಪ್ರಯೋಜನವಾಗಿರುವುದಿಲ್ಲ. ಆದುದರಿಂದ ಈ ಪರಿಸರ ಮಾಲಿನ್ಯ ಮತ್ತು ಅಪಘಾತಕ್ಕೆ ಕಾರಣವಾಗಿರುವ ಈ ಕೆಲಸವನ್ನು ತಕ್ಷಣ ಅಲ್ಲ ನಿಲ್ಲಿಸುವಂತೆ ಸೂಕ್ತ ಕ್ರಮ ತೆಗೆದುಕೊಳ್ಳಲು ಸರ್ಕಾರದ ಗಮನ ಸೆಳೆಯುತ್ತೇನೆ.

**ರಾಷ್ಟ್ರೀಯ ಹೆದ್ದಾರಿ 48ರಲ್ಲಿ ನೇತ್ರಾವತಿ ಸೇತುವೆಯ ಪಕ್ಕ ಕೆಲವರು ಚಿಪ್ಪುಸುಣ್ಣ ಬೇಯಿಸುವುದರಿಂದ ರಸ್ತೆ ಸಂಚಾರಕ್ಕೆ ಅಡಚಣೆ ಉಂಟಾಗಿರುವ ಬಗ್ಗೆ.**

ಶ್ರೀ ಪಿ.ಸಿ. ಸಿದ್ದನ ಗೌಡರ್ (ಸಕ್ಕರೆ ಜವಳಿ, ವಿಜ್ಞಾನ ಮತ್ತು ಯಂತ್ರ ಕಲಾ ಹಾಗೂ ಪರಿಸರ ಮತ್ತು ಜೀವಶಾಸ್ತ್ರ ರಾಜ್ಯ ಸಚಿವರು) : ಮಾನ್ಯ ಅಧ್ಯಕ್ಷರೆ, ಪಾಣೆ ಮಂಗಳೂರು ಬಳಿ ನೇತ್ರಾವತಿ ನದಿಯ ದಂಡೆಯ ಮೇಲೆ ರಾಷ್ಟ್ರೀಯ ಹೆದ್ದಾರಿ 48ರ ಸಮೀಪ ಈ ಕೆಳಕಂಡ ಸುಣ್ಣದ ಭಟ್ಟಿಗಳು ಕೆಲಸ ನಿರ್ವಹಿಸುತ್ತಿವೆ.

1. ಪಿ.ಎನ್. ಇಂಡಸ್ಟ್ರೀಸ್ (ಮಾಲೀಕರು- ಶ್ರೀ ಅಹಮದ್)
2. ಕರ್ನಾಟಕ ಲೈಮ್ ಇಂಡಸ್ಟ್ರೀಸ್ ಕೆ.ಎಸ್. ಟಿ.ನಂ. 3140426 (ಮಾಲೀಕರು-ಶ್ರೀ ಸುಲೇಮಾನ್)
3. ಮುಬಾರಕ್ ಲೈಮ್ ಇಂಡಸ್ಟ್ರೀಸ್ (ಮಾಲೀಕರು-ಶ್ರೀ ಮುಬಾರಕ್)
4. ತವಕಲ್ ಲೈಮ್ ಇಂಡಸ್ಟ್ರೀಸ್ (ಮಾಲೀಕರು-ಶ್ರೀ ಅಬ್ದುಲ್ ಖಾದರ್)

ಈ ಬಟ್ಟಿಗಳು ಸಣ್ಣ ಪ್ರಮಾಣದಾಗಿದ್ದು ಸುಮಾರು 20 ವರ್ಷಗಳಿಂದ ಕಾರ್ಯನಿರ್ವಹಿಸುತ್ತಿರುವುದೆಂದು ತಿಳಿದು ಬಂದಿದೆ. ಈ ಭಟ್ಟಿಗಳಲ್ಲಿ ಕಪ್ಪೆ ಚಿಪ್ಪಿನಿಂದ ಸುಣ್ಣವನ್ನು ತಯಾರಿಸುತ್ತಿದ್ದು ಇದ್ದಿಲನ್ನು ಉರವಲಾಗಿ ಉಪಯೋಗಿಸಲಾಗುತ್ತಿದೆ. ಈ ಭಟ್ಟಿಗಳು ರಾಷ್ಟ್ರೀಯ ಹೆದ್ದಾರಿ ಸೇತುವೆಯ ಮಟ್ಟಕ್ಕಿಂತ ಬಹಳ ತಗ್ಗಿನಲ್ಲಿ ಇರುತ್ತವೆ. ಹಾಗೂ ಯಾವುದೇ ವಿಧವಾದ ವಾಯು ಮಾಲಿನ್ಯ ಸಿಯಂತ್ರಣ ಉಪಕರಣಗಳನ್ನು ಮತ್ತು ಸಮರ್ಪಕವಾದ ಹೊಗೆ ನಳಿಕೆಗಳನ್ನು ಅಳವಡಿಸಿಲ್ಲ. ಈ ಭಟ್ಟಿಗಳು ಹೆಚ್ಚಾಗಿ ರಾತ್ರಿ ಸಮಯ ಕಾರ್ಯ ನಿರ್ವಹಿಸುತ್ತಿದ್ದು ಕಾರ್ಯವನ್ನು ಹಾಗೂ ರಾಷ್ಟ್ರೀಯ ಹೆದ್ದಾರಿ ಭಾಗವನ್ನು ಆವರಿಸುತ್ತದೆ. ಇದರಿಂದ ವಾಹನ ಸಂಚಾರಕ್ಕೆ ಅಡಚಣೆ ಉಂಟಾಗುತ್ತಿದೆ. ಹಾಗೂ ಇದರಿಂದ ಸುತ್ತಮುತ್ತ ವಾಸಿಸುವ ನಗರ ಆರೋಗ್ಯಕ್ಕೆ ಹಾನಿಕರವಾಗಿದೆ. ಈ ಭಟ್ಟಿಗಳು ರಾಷ್ಟ್ರೀಯ ಹೆದ್ದಾರಿ 48ಕ್ಕೆ ಅತಿ ಸಮೀಪ ಹಾಗೂ ಸೇತುವೆಯ ಮಟ್ಟಕ್ಕಿಂತ ಬಹಳ ತಗ್ಗಿನಲ್ಲಿ ಇರುವುದರಿಂದ ಎತ್ತರವಾಗಿ ಹೊಗೆ ನಳಿಕೆಗಳನ್ನು ಅಳವಡಿಸಿದ್ದರೂ ಸಹಾ ಹೊಗೆಯು ರಾಷ್ಟ್ರೀಯ ಹೆದ್ದಾರಿ ಭಾಗವನ್ನು ಆವರಿಸಿ ವಾಹನ ಸಂಚಾರಕ್ಕೆ ಅಡಚಣೆ ಉಂಟಾಗುತ್ತದೆ. ಈಗಿರುವ ಭಟ್ಟಿಗಳಿಗೆ ಸರಿಯಾದ ವಾಯು ಮಾಲಿನ್ಯ ನಿಯಂತ್ರಣ ಉಪಕರಣಗಳನ್ನು ಅಳವಡಿಸಲು ಆಗುವುದಿಲ್ಲ.

ಈ ಭಟ್ಟಿಗಳನ್ನು ಬೇರೆ ಸೂಕ್ತವಾದ ಸ್ಥಳಕ್ಕೆ ಸ್ಥಳಾಂತರಿಸುವುದು ಸಮಂಜಸವಾಗಿರುತ್ತದೆ. ಈ ವಿಷಯವನ್ನು ದಿನಾಂಕ 10-5-94 ಮತ್ತು 16-6-94ರಂದು ಜಿಲ್ಲಾಧಿಕಾರಿಗಳ

ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ಇಪ್ಪತ್ತು ಅಂಶ ಕಾರ್ಯಕ್ರಮ ಸಮನ್ವಯ ಸಭೆಯಲ್ಲಿ ಚರ್ಚಿಸಲಾಗಿದ್ದು, ಸುಣ್ಣದ ಗೂಡುಗಳನ್ನು ಸ್ಥಳಾಂತರಿಸಲು ನಿರ್ಧರಿಸಲಾಗಿದೆ. ಮಂಡಳಿಯ ಮಂಗಳೂರು ಪ್ರಾದೇಶಿಕ ಕಛೇರಿಯ ಉಪ ಪರಿಸರ ಅಧಿಕಾರಿಗಳು ದಿನಾಂಕ 23-6-94ರಂದು ಜಿಲ್ಲಾಧಿಕಾರಿಗಳಿಗೆ ಮುಂದಿನ ಕ್ರಮ ಕೈಗೊಳ್ಳಲು ವರದಿ ಸಲ್ಲಿಸಿದ್ದು, ಜಿಲ್ಲಾಧಿಕಾರಿಗಳು ಈ ವಿಷಯವನ್ನು ಸಹಾಯಕ ಆಯುಕ್ತರು, ಮಂಗಳೂರು ಇವರಿಗೆ ಸೂಕ್ತ ಕ್ರಮಕ್ಕಾಗಿ ನಿರ್ದೇಶಿಸಿದ್ದಾರೆ. ಅಂತೆಯೆ ಸಹಾಯಕ ಆಯುಕ್ತರು ಹಾಗೂ ಉಪ-ವಿಭಾಗೀಯ ದಂಡಾಧಿಕಾರಿ, ಮಂಗಳೂರು ಇವರು ದಿನಾಂಕ 1-8-94ರಂದು ಕ್ರಿಮಿನಲ್ ಪ್ರೊಸೀಜರ್ ಕೋಡ್ ಕಲಂ 133ರ ಪ್ರಕಾರ ಸದರಿ ಸುಣ್ಣದ ಗೂಡಿನ ಮಾಲೀಕರಿಗೆ ಇನ್ನು ಏಳು ದಿನಗಳಲ್ಲಿ ಅವರ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಲು ಆದೇಶ ನೀಡಿ ಈ ಆದೇಶವನ್ನು ಏಕೆ ಖಾಯಂಗೊಳಿಸಬಾರದೆಂಬುದಕ್ಕೆ ಕಾರಣ ತೋರಿಸಲು ದಿನಾಂಕ 8-8–94ರಂದು ಅವರ ಉಪ ವಿಭಾಗ ದಂಡಾಧಿಕಾರಿ ನ್ಯಾಯಾಲಯದ ಮುಂದೆ ಹಾಜರಾಗಲು ನಿರ್ದೇಶಿಸಿರುತ್ತಾರೆ. ಸದರಿ ಪ್ರಕರಣವು ಇನ್ನು ಇತ್ಯರ್ಥವಾಗಬೇಕಾಗಿದೆ. ಈ ಪ್ರಕರಣದಲ್ಲಿ ಉಪ ಪರಿಸರ ಅಧಿಕಾರಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರ ಮಂಡಳಿ, ಮಂಗಳೂರು, ಇವರು ಫಿರ್ಯಾದಿಯಾಗುದ್ದಾರೆ. ಈ ವಿಷಯವನ್ನು ತ್ವರಿತವಾಗಿ ಇತ್ಯರ್ಥಗೊಳಿಸುವಂತೆ ನ್ಯಾಯಾಲಯದಲ್ಲಿ ಒತ್ತಾಯಿಸಲಾಗುವುದು.

**ಸುರತ್ಕಾಲ್ ನಗರ ಪ್ರದೇಶದ ಸ್ವಚ್ಛತೆ ಬಗ್ಗೆ** Sanitation

ಶ್ರೀ ಕುಂಬ್ಳೆ ಸುಂದರರಾವ್ (ಸುರತ್ಕಾಲ್) : ಮಾನ್ಯ ಅಧ್ಯಕ್ಷರೇ, ಸುರತ್ಕಾಲ್‌ನಗರ ಪ್ರದೇಶವು ಜನಸಂದಣಿ ಇರುವ ಪ್ರದೇಶವಾಗಿದ್ದು ನಗರ ಮಧ್ಯದಲ್ಲಿ ರಾಷ್ಟ್ರೀಯ ಹೆದ್ದಾರಿಯು ಹಾದು ಹೋಗುತ್ತದೆ. ಸದಾ ಜನ ಸಂಚಾರವಿರುವ ಈ ಪ್ರದೇಶದಲ್ಲಿನ ಮೂರು ಹೋಟೆಲ್‌ಗಳಲ್ಲಿನ ಮಲೀನ ನೀರು ಮತ್ತು ಅದರೊಂದಿಗೆ ಆ ಪ್ರದೇಶದಲ್ಲಿನ ಶೌಚಾಲಯದ ಕೊಳಚೆ ನೀರು ಸೇರಿ ರಸ್ತೆ ತುಂಬಾ ಹರಿದು ಹೋಗುತ್ತಿರುವುದರಿಂದಾಗಿ ಜನರು ರಸ್ತೆಯಲ್ಲಿ ನಡೆದಾಡಲು ಆಗದ ಪರಿಸ್ಥಿತಿಯು ಉದ್ಭವಿಸಿದೆ. ಈ ಕುರಿತಾಗಿ ಜಿಲ್ಲಾಧಿಕಾರಿಗಳು ಮತ್ತಿತರ ಸಂಬಂಧಪಟ್ಟ ಅಧಿಕಾರಿಗಳಿಗೆ ಮನವಿ ಇತ್ಯಾದಿಗಳ ಮೂಲಕ ಗಮನ ಸೆಳೆದಿದ್ದರೂ ಅದರಿಂದ ಯಾವುದೇ ಪ್ರಯೋಜನವಾಗದೆ ಜನರು ನರಕಯಾತನೆಯನ್ನು ಅನುಭವಿಸುವಂತಾಗಿದೆ. ಸಾರ್ವಜನಿಕ ಆರೋಗ್ಯಕ್ಕೆ ಧಕ್ಕೆ ತರುವ ಈ ಕೊಳಚೆ ನೀರನ್ನು ನಿಲ್ಲಿಸುವಂತೆ ಪುರಸಭೆಗೆ ಮುತ್ತಿಗೆ, ಅಧಿಕಾರಿಗಳಿಗೆ ಬಹಿಷ್ಕಾರ ಮುಂತಾದ ಪ್ರತಿಭಟನೆಗಳು ನಡೆಯುತ್ತಿವೆ. ಜನರು ತಮ್ಮ ಮನೆಗಳಲ್ಲಿ ಈ ದುರ್ವಾಸನೆಯಿಂದಾಗಿ ವಾಸಿಸುವುದೇ ದುಸ್ತರವಾಗಿದೆ. ಆದ್ದರಿಂದ ಸಾರ್ವಜನಿಕರು ಬೀದಿಗಿಳಿಯುವ ಮೊದಲು ಈ ಕೊಳಚೆ ನೀರು ಹಾಯುವುದನ್ನು ನಿಲ್ಲಿಸಲು ಖಾಯಂ ಪರಿಹಾರದ ವ್ಯವಸ್ಥೆಯನ್ನು ಮಾಡಲು ಸಕಾಲಿಕ ವ್ಯವಸ್ಥೆಯನ್ನು ತುರ್ತಾಗಿ ಸರಕಾರದವರು ಮಾಡಬೇಕೆಂದು ಮಾನ್ಯ ನಗರಾಭಿವೃದ್ಧಿ ಸಚಿವರ ಗಮನವನ್ನು ಸೆಳೆಯಬಯಸುತ್ತೇನೆ.

ಶ್ರೀ ವೈಜನಾಥ ಪಾಟೀಲ್ (ನಗರಾಭಿವೃದ್ಧಿ ಸಚಿವರು) : ಮಾನ್ಯ ಅಧ್ಯಕ್ಷರೇ, ಇದು ನನ್ನ ಗಮನಕ್ಕೆ ಬಂದಿದೆ. ಇದರ ಬಗ್ಗೆ ಕ್ರಮ ತೆಗೆದುಕೊಳ್ಳುವುದಕ್ಕೆ ಸ್ಪಾಟ್ ಇನ್ಸ್‌ಪೆಕ್ಷನ್ ಮಾಡಿ ವರದಿಯನ್ನು ಕೊಡುವುದಕ್ಕೆ ನಾನು ಈಗಾಗಲೇ ಆದೇಶವನ್ನು ಮಾಡಿದ್ದೇನೆ.

**ಬೆಂಗಳೂರು ಕಬ್ಬನ್ ಪಾರ್ಕ್‌ನಲ್ಲಿರುವ ಮಕ್ಕಳ ಗ್ರಂಥಾಲಯದ ಬಗ್ಗೆ**

ಶ್ರೀ ಆರ್. ಕೃಷ್ಣಪ್ಪ (ಜಯಮಹಲ್) : ಮಾನ್ಯ ಅಧ್ಯಕ್ಷರೇ, ಬೆಂಗಳೂರಿನ ಕಬ್ಬನ್ ಪಾರ್ಕಿನಲ್ಲಿ ಮಕ್ಕಳ ಗ್ರಂಥಾಲಯವನ್ನು ಸ್ಥಾಪಿಸಿ ಈಗಾಗಲೇ ಹಲವಾರು ತಿಂಗಳುಗಳು ಕಳೆದಿದ್ದರೂ ಸಹ ಅದನ್ನು ಇನ್ನೂ ಮಕ್ಕಳ ಉಪಯೋಗಕ್ಕಾಗಿ ತೆರೆದಿರುವುದಿಲ್ಲ, ಆದ್ದರಿಂದ ಕೂಡಲೇ ಕಬ್ಬನ್ ಪಾರ್ಕಿನಲ್ಲಿ ಮಕ್ಕಳ ಗ್ರಂಥಾಲಯವನ್ನು

ತೆರೆಯಲು ಕ್ರಮ ಕೈಗೊಳ್ಳಬೇಕೆಂದು ಸನ್ಮಾನ್ಯ ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರನ್ನು ಕೋರುತ್ತೇನೆ.

ಶ್ರೀ ಹೆಚ್.ಜಿ. ಗೋವಿಂದೇಗೌಡ (ಪ್ರಾಥಮಿಕ ಮತ್ತ ಪ್ರೌಢಶಿಕ್ಷಣ ಸಚಿವರು): ಮಾನ್ಯ ಅಧ್ಯಕ್ಷರೇ ಈಗಾಗಲೇ ಕಬ್ಬನ್ ಪಾರ್ಕ್‌ನಲ್ಲಿ 2-10-1994ರಿಂದ ಮಕ್ಕಳ ಗ್ರಂಥಾಲಯವನ್ನು ಪ್ರಾರಂಭಿಸಲಾಗಿದೆ. (ಹಿಂದೆ ಮಯೂರ ಹೋಟೇಲ್ ಇದ್ದ ಕಟ್ಟಡದಲ್ಲಿ) ಈ ಗ್ರಂಥಾಲಯವು ಬೆಳಿಗ್ಗೆ 11 ರಿಂದ ಸಾಯಂಕಾಲ 6.00 ಘಂಟೆಯವರೆಗೆ ಸೇವೆ ನೀಡುತ್ತಿದೆ. ಹಾಗೂ ಸೋಮವಾರ ವಾರದ ರಜಾ ದಿನವಿದ್ದು, ಸಾರ್ವತ್ರಿಕ ರಜೆಗಳಲ್ಲಿ ಕಾರ್ಯನಿರ್ವಹಿಸುವುದಿಲ್ಲ.

## ಶಾಸನ ರಚನಾ ಕಾರ್ಯಕಲಾಪಗಳು

**ಅ) ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ವಧೇಯಕ, 1995**

**ಮಂಡನೆಗೆ ಅನುಮತಿ ಕೋರಿಕೆ**

ಶ್ರೀ ಜೆ.ಹೆಚ್. ಪಟೇಲ್ (ಉಪಮುಖ್ಯಮಂತ್ರಿಗಳು) : ಮಾನ್ಯ ಉಪಧ್ಯಕ್ಷರೇ, ಮಾನ್ಯ ಕಂದಾಯ ಮಂತ್ರಿಗಳ ಪರವಾಗಿ 1995ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ವಿಧೇಯಕವನ್ನು ಸಭೆಯ ಮಂದೆ ಮಂಡಿಸಲು ತಮ್ಮ ಅನುಮತಿಯನ್ನು ಕೋರುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ "1995ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ನೀಡುವುದು."

ಪ್ರಸ್ತಾವ ಅಂಗೀಕರಿಸಲ್ಪಟ್ಟಿತು ಮತ್ತು ಅನುಮತಿ ನೀಡಲಾಯಿತು

ಶ್ರೀ ಜೆ.ಹೆಚ್. ಪಟೇಲ್(ಉಪ ಮುಖ್ಯಮಂತ್ರಿಗಳು) : ಮಾನ್ಯ ಉಪಾಧ್ಯಕ್ಷರೇ, 1995ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ವಿಧೇಯಕವನ್ನು ಸಭೆಯ ಮುಂದೆ ಮಂಡಿಸುತ್ತೇನೆ.

ಉಪಾಧ್ಯಕ್ಷರು : ವಿಧೇಯಕವನ್ನು ಮಂಡಿಸಲಾಗಿದೆ.

**ಆ) ಸಿವಿಲ್ ಪ್ರಕ್ರಿಯೂ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 1995**

**ಮಂಡನೆಗೆ ಅನುಮತಿ ಕೋರಿಕೆ**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ವಾರ್ತಾ ಮತ್ತು ಪ್ರಚಾರ ಮಂತ್ರಿಗಳು) : ಮಾನ್ಯ ಉಪಾಧ್ಯಕ್ಷರೇ, 1995 ನೇ ಸಾಲಿನ ಸಿವಿಲ್ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕವನ್ನು ಸಭೆಯ ಮುಂದೆ ಮಂಡಿಸಲು ತಮ್ಮ ಅನುಮತಿಯನ್ನು ಕೋರುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ "1995 ನೇ ಸಾಲಿನ ಸಿವಿಲ್ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿಯನ್ನು ನೀಡುವುದು".

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು ಮತ್ತು ಅನುಮತಿ ನೀಡಲಾಯಿತು.**

ಶ್ರೀ ಎಂ.ಸಿ. ನಾಣಯ್ಯ : (ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ವಾರ್ತಾ ಮತ್ತು ಪ್ರಚಾರ ಮಂತ್ರಿಗಳು) : ಮಾನ್ಯ ಉಪಾಧ್ಯಕ್ಷರೇ, 1995 ನೇ ಸಾಲಿನ ಸಿವಿಲ್ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕವನ್ನು ಸಭೆಯ ಮುಂದೆ ಮಂಡಿಸುತ್ತೇನೆ.

ಉಪಾಧ್ಯಕ್ಷರು : ವಿಧೇಯಕವನ್ನು ಮಂಡಿಸಲಾಗಿದೆ

12.20 ಪಿ.ಎಂ

**ಇ) ಕರ್ನಾಟಕ ಕಾನೂನು ನೆರವು ಮಂಡಳಿ (ತಿದ್ದುಪಡಿ) ವಿಧೇಯಕ, 1995 ಮಂಡನೆಗೆ ಅನುಮತಿ ಕೋರಿಕೆ**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ವಾರ್ತಾ ಮತ್ತು ಪ್ರಚಾರ ಮಂತ್ರಿಗಳು) : ಮಾನ್ಯ ಉಪಾಧ್ಯಕ್ಷರೇ, 1995ನೇ ಸಾಲಿನ ಕರ್ನಾಟಕ ಕಾನೂನು ನೆರವು ಮಂಡಳಿ (ತಿದ್ದುಪಡಿ) ವಿಧೇಯಕವನ್ನು ಸಭೆಯ ಮುಂದೆ ಮಂಡಿಸಲು ತಮ್ಮ ಅನುಮತಿಯನ್ನು ಕೋರುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ "1995ನೇ ಸಾಲಿನ ಕರ್ನಾಟಕ ಕಾನೂನು ನೆರವು ಮಂಡಳಿ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿಯನ್ನು ನೀಡುವುದು."

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು ಮತ್ತು ಅನುಮತಿ ನೀಡಲಾಯಿತು.**

ಶ್ರೀ ಎಂ. ಸಿ. ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ವಾರ್ತಾ ಮತ್ತು ಪ್ರಚಾರ ಮಂತ್ರಿಗಳು ): ಮಾನ್ಯ ಉಪಾಧ್ಯಕ್ಷರೇ, 1995 ನೇ ಸಾಲಿನ ಕರ್ನಾಟಕ ಕಾನೂನು ನೆರವು ಮಂಡಳಿ (ತಿದ್ದುಪಡಿ) ವಿಧೇಯಕವನ್ನು ಸಭೆಯ ಮುಂದೆ ಮಂಡಿಸುತ್ತೇನೆ.

ಉಪಾಧ್ಯಕ್ಷರು : ವಿಧೇಯಕವನ್ನು ಮಂಡಿಸಲಾಗಿದೆ.

**ಈ) ಕರ್ನಾಟಕ ರಾಜ್ಯ ಮಹಿಳಾ ಆಯೋಗ ವಿಧೇಯಕ 1995 ಮಂಡಳಿಗೆ ಅನುಮತಿ ಕೋರಿಕೆ**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ವಾರ್ತಾ ಮತ್ತು ಪ್ರಚಾರ ಮಂತ್ರಿಗಳು) : ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ರಾಜ್ಯ ಮಂತ್ರಿಗಳ ಪರವಾಗಿ 1995ನೇ ಸಾಲಿನ ಕರ್ನಾಟಕ ರಾಜ್ಯ ಮಹಿಳಾ ಆಯೋಗ ವಿಧೇಯಕವನ್ನು ಸಭೆಯ ಮಂಡಿಸಲು ತಮ್ಮ ಅನುಮ್ಮತಿಯನ್ನು ಕೋರುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ "1995 ನೇ ಸಾಲಿನ ಕರ್ನಾಟಕ ರಾಜ್ಯ ಮಹಿಳಾ ಆಯೋಗ ವಿಧೇಯಕವನ್ನು ಮಂಡಿಸಲು ಅನುಮತಿಯನ್ನು ನೀಡುವುದು."

**ಪ್ರಸ್ತಾಪ ಅಂಗೀಕರಿಸ್ಪಟ್ಟಿತು ಮತ್ತು ಅನುಮತಿ ನೀಡಲಾಯಿತು.**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ವಾರ್ತಾ ಮತ್ತು ಮಕ್ಕಳ ಕಲ್ಯಾಣ ಹಾಗೂ ಕನ್ನಡ ಮತ್ತು ಸಂಸ್ಕೃತಿ ರಾಜ್ಯ ಮಂತ್ರಿಗಳ ಪರವಾಗಿ 1995 ನೇ ಸಾಲಿನ ಕರ್ನಾಟಕ ರಾಜ್ಯ ಮಹಿಳಾ ಆಯೋಗ ವಿಧೇಯಕವನ್ನು ಸಭೆಯ ಮುಂದೆ ಮಂಡಿಸುತ್ತೇನೆ.

ಉಪಾಧ್ಯಕ್ಷರು : ವಿಧೇಯಕವನ್ನು ಮಂಡಿಸಲಾಗಿದೆ.

**ಆ) ವಿಧೇಯಕಗಳನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು**

**1) ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ವಿಧೇಯಕ, 1995**

**ಪರ್ಯಾಲೋಚನಾ ಪ್ರಸ್ತಾವ**

ಶ್ರೀ ಜೆ.ಹೆಚ್. ಪಟೇಲ್ (ಉಪ ಮುಖ್ಯಮಂತ್ರಿಗಳು) : ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಕಂದಾಯ ಮಂತ್ರಿಗಳ ಪರವಾಗಿ) 1995ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಕೋರುತ್ತೇನೆ.

**ಪ್ರಸ್ತಾಪವನ್ನು ಮಂಡಿಸಲಾಯಿತು.**

ಶ್ರೀ ಜೆ.ಎಚ್. ಪಟೇಲ್ (ಉಪ ಮುಖ್ಯಮಂತ್ರಿಗಳು) : ಇದು ಮಂಡಲ್ ಪಂಚಾಯಿತ್ ಎಂದು ಇದ್ದುದು ಗ್ರಾಮ ಪಂಚಾಯತ್ ಎಂದು ಆಗಿದೆ. ಹಾಗೆಯೇ ಜಿಲ್ಲಾ ಪರಿಷತ್ ಎಂದು ಇದ್ದುದು ಜಿಲ್ಲಾ ಪಂಚಾಯತ್ ಆಗಿದೆ. ತಾಲ್ಲೂಕು ಪಂಚಾಯತ್ ಸೇರಿದೆ, ಇದು ಬರೇ ಹೆಸರು ಬದಲಾವಣೆ ಅಷ್ಟೆ

ಶ್ರೀ ವೈ. ರಾಮಕೃಷ್ಣ : ಉದ್ದೇಶ ಮತ್ತು ಕಾರಣದಲ್ಲಿ ಹೇಳಿದ್ದಾರೆ. 1974ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) ಅಧಿನಿಯಮದ ಎರಡನೆಯ ತಿದ್ದುಪಡಿಗೆ ಕರ್ನಾಟಕ ಪಂಚಾಯತ್‌ರಾಜ್‌ನಲ್ಲಿ ತಿದ್ದುಪಡಿ. ಇದಕ್ಕೆ ಸ್ಪಷ್ಟೀಕರಣ ಕೊಡಿ ಏಕೆಂದರೆ ಇದರಲ್ಲಿ ಸ್ಪಷ್ಟೀಕರಣ ಇಲ್ಲ. ಇದರಲ್ಲಿ ಉದ್ದೇಶಗಳು ಮತ್ತು ಕಾರಣಗಳನ್ನು ಇನ್ನೂ ದೀರ್ಘವಾಗಿ ಹೇಳಿದ್ದರೆ ನಮಗೆ ಅನುಕೂಲ ಆಗುತ್ತಿತ್ತು. ಈ ತಿದ್ದುಪಡಿ ಉದ್ದೇಶ ಏನು ಎಂದು ನಮಗೆ ಮೊದಲು ಅರ್ಥ ಆಗಬೇಕು. ಈ ಉದ್ದೇಶ ಎಷ್ಟು ಎಕರೆಗಳಿಗೆ ಅನ್ವಯಿಸುತ್ತದೆ. ಎನ್ನತಕ್ಕ ಸ್ಟ್ಯಾಟಿಸ್ಟಿಕ್ಸ್ ಇರಬೇಕಿತ್ತು. what necessiated you it to bring this amendment?

ಎನ್ನುವುದು ನಮಗೆ ಗೊತ್ತಾಗಬೇಕಲ್ಲ.

ಶ್ರೀ ಜೆ.ಎಚ್. ಪಟೇಲ್ : ಮಾನ್ಯ ಉಪಾಧ್ಯಕ್ಷರೆ, ಹಿಂದೆ ಅಕ್ಟ್‌ನಲ್ಲಿ ಏನು ಇದೆ. ಆ ಆಕ್ಟ್ Karnataka Public Promises (Eviction of Un-authorised Occupants) Act,ಇದರಲ್ಲಿ ಮಂಡಲ್ ಪಂಚಾಯತಿ ಇದ್ದುದು ಈಗ ಗ್ರಾಮ ಪಂಚಾಯಿತಿ ಎಂದು ಆಗಿದೆ. ತಾಲ್ಲೂಕು ಪಂಚಾಯಿತಿ ಸೇರಿದೆ. ಜಿಲ್ಲಾ ಪರಿಷತ್ ಎಂದು ಇದ್ದುದು ಈಗ ಗ್ರಾಮ ಪಂಚಾಯಿತಿ ಎಂದು ಆಗಿದೆ. ಅದಕ್ಕೋಸ್ಕರ ಖರ್ಚು ಏನೂ ಇಲ್ಲ. ಬರೇ ಹೆಸರುಗಳು ಅಷ್ಟೇ ಹೆಸರುಗಳು ಅಷ್ಟೇ ತಿದ್ದುಪಡಿ ಮಾಡಬೇಕು ಎಂದು ಇರುವುದು.

ಶ್ರೀ ಡಿ.ಕೆ. ಶಿವಕುಮಾರ್ : ಈ ಬಿಲ್ ತಂದಿರುವುದರಿಂದ ನಾನು ಅಂದುಕೊಂಡಿದ್ದೇನೆ, ಎಂದರೆ ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ ಮಂಡಲ್ ಪಂಚಾಯತ್‌ನಲ್ಲಿ ಸಾರ್ವಜನಕರ ಆಸ್ತಿ ಏನು ಇದೆ. ಆ ಆಸ್ತಿಗೆ ಯಾರಾದರೂ ಪ್ರವೇಶಕ ಮಾಡಿದರೆ ಅವರನ್ನು ಹೊರಗೆ ಹಾಕಲಿಕ್ಕೆ ತಾಲ್ಲೂಕು ಪಂಚಾಯತಿಗೆ, ಜಿಲ್ಲಾ ಪಂಚಾಯತಿಗೆ ಹಕ್ಕನ್ನು ಕೊಡುತ್ತಿದ್ದಾರೆ ಎಂದು.

ಉಪಾಧ್ಯಕ್ಷರು : ಮಂಡಲ್ ಪಂಚಾಯತ್, ಗ್ರಾಮ ಪಂಚಾಯತಿ ಆಯಿತು. ತಾಲ್ಲೂಕು ಪಂಚಾಯತಿ ಹೊಸದಾಗಿ ಸೇರ್ಪಡೆಯಾಗಿದೆ. ಜಿಲ್ಲಾ ಪರಿಷತ್ತು ಜಿಲ್ಲಾ ಪಂಚಾಯತ್ ಎಂದು ಆಗಿದೆ. ಅಷ್ಟೇ.

ಶ್ರೀ ಎಚ್.ಎನ್. ನಂಜೇಗೌಡ : ಈಗ ಏನು ಆಗಿದೆ ಎಂದರೆ ಯಾವುದಾದರೂ ಅಮೆಂಡ್ ಮೆಂಟ್‌ಕೊಟ್ಟರೆ ನಮಗೆ ಎಕ್ಸಪ್ಲೇನೇಷನ್ ಕೊಡಬೇಕು. ಇದು ಒಂದು .ಅಧಿ ನಿಯಮ ಎಂದರೆ ಒರಿಜಿನಲ್ ಆಕ್ಟ್ ಏನು ಒರಿಜಿನಲ್ ಆಕ್ಟ್‌ನಲ್ಲಿ ಏನು ಪ್ರಾವಿಜನ್‌ಇರುತ್ತವೆ? Whether it should be amended or added?

ಹೀಗೆ ಏಕೆ ಕ್ಯಾಜುಯಲ್ ಆಗಿ ಮಾಡುತ್ತೀರಿ? Suppose I read this without any background what should I understand? what was in the original and what is to be incuded?

ಅಷ್ಟೇ ನಮಗೆ ಎಕ್ಸಪ್ಲೇನೇಷನನ್ನು ಕೊಡಬೇಕಾಗುತ್ತದೆ

ಶ್ರೀ ಎಂ.ಸಿ. ನಾಣಯ್ಯ : ತಾವು ದಯವಿಟ್ಟು ಬಿಲ್ ನೋಡಿ. The Karnataka Public Premises (E viction of Unauthorised Occupants) (Amendment) Bill 1995

ನಾವು ಯಾವುದನ್ನು ತಿದ್ದುಪಡಿ ಮಾಡಲಿಕ್ಕೆ ಎಂದು ಹೇಳುತ್ತಾ ಇರತಕ್ಕದ್ದು ತರುತ್ತಿದ್ದೇವೆ ಎಂದು ಪುಟ ಎರಡಲ್ಲಿ ಸ್ಟೇಟ್‌ಮೆಂಟ್ ಆಫ್ , ಅಬ್ಜೆಕ್ಟ್ ಮತ್ತು ರೀಸನ್ಸ್‌ನಲ್ಲಿ ಇದೆ.

Section 2 of the Karnataka Public Premises (Eviction of Unauthorised Occupants) Act 1974 is propsed to be amended to bring on consonante with the Karnataka panchyat Raj Act 1993. ಅಲ್ಲಂದ ಹಿಂದೆ ಅನೆಕ್ಸರ್ ಕೊಟ್ಟದ್ದೇವೆ. ಯಾವುದನ್ನು ಅಮೆಂಡ್‌ಮೆಂಟ್ ಮಾಡುವುದಕ್ಕೆ ಹೊರಟಿದ್ದೇವೆ ಎಂದು ಅನೆಕ್ಸರ್‌ನಲ್ಲಿ ಕೊಟ್ಟದ್ದೇವೆ. ಈಗ ಇರತಕ್ಕದ್ದು "Public prenises" means any premises belonging to or allotted to state Government or taken on lease or requisitioned by or on be half of the state Government and includes any premises be longing to or taken on lease by or on behalf of a local authority ;

ಎಕ್ಸಪ್ಲನೇಷನ್ ನೋಡಿ. For the purposes of this clause local authority means - ಏನೆಂದು ಹೇಳಿದ್ದೇವೆ.

ಅಂದರೆ ಹಿಂಭಾಗದಲ್ಲಿ ಇರುವುದನ್ನು ಅವರು ನೋಡಲಿಲ್ಲ.

ಉಪಾಧ್ಯಕ್ಷರು : ಹೆಸರು ಮಾತ್ರ ಛೇಂಜ್ ಮಾಡುತ್ತಾ ಇರತಕ್ಕದ್ದು.

ಶ್ರೀ ಎಂ.ಸಿ. ನಾಣಯ್ಯ : ಕಾನೂನು ಇದೆ,ಆ ಕಾನೂನು ನಮ್ಮ 1976ರ ಕಾನೂನಿನಲ್ಲಿ ಯಾವುದು ಇತ್ತು, ಅದರಲ್ಲಿ ಜಿಲ್ಲಾ ಪರಿಷತ್ ಮತ್ತು ಮಂಡಲ್ ಪಂಚಾಯತ್ ಕಾನೂನು ಇದೆ, ಅದನ್ನು ತಿದ್ದುಪಡಿ ಮಾಡುತ್ತೇವೆ.

ಶ್ರೀ ವೈ. ರಾಮಕೃಷ್ಣ : ಇವರು ಇಂಟ್ರೊಡ್ಯೂಸ್ ಮಾಡುವ ಟೈಮ್‌ನಲ್ಲಿ ನಮಗೆ ಬಿಲ್ ಕೊಡುತ್ತಾರೆ. ನಾವು ಓದಬೇಕಲ್ಲ, ಈಗ ಏನು ಇದೆ, ಹಿಂದೆ ಏನು ಇತ್ತು ಅದನ್ನು ಕೊಡಬೇಕು. ಒರಿಜಿಸಲ್ ಅಕ್ಟ್‌ನಲ್ಲಿ ಏನು ಇತ್ತು ಅದು ನಮಗೆ ತಿಳಿಯಬೇಕು. Should suggest amendnonts.

ಎಲ್ಲಾ ಗಾಳಿಗೆ ತೂರಿ ಬಿಟ್ಟು ಬಿಲ್ ತಂದು ಇಲ್ಲಿ ಕನ್ನಿಡರೇಷನ್‌ಗೆ ಎಂದು ಇಟ್ಟು ನಮಗೆ ಕಾಪಿ ಕೊಟ್ಟರೆ How are we to know?

ತಾವು ಯೋಚನೆ ಮಾಡಿ.

ಶ್ರೀ ಜೆ.ಎಚ್. ಪಟೇಲ್ : ಏನಾದರೂ ಚರ್ಚೆ ಮಾಡುವ ಅವಶ್ಯಕತೆ ಇದೆ ಎಂದರೆ ನಾವು ಒಪ್ಪುತ್ತೇವೆ. ಸದನಕ್ಕೆ ಮುಚ್ಚಿಟ್ಟು ತಕ್ಷಣ ಬಿಲ್‌ಪಾಸ್‌ಮಾಡತಕ್ಕದ್ದು ಇದು ಅಲ್ಲ. ಇದರಲ್ಲಿ ಏನೂ ಚರ್ಚಾಸ್ಪದ ಇಲ್ಲ ಎಂದು ತಿಳಿದಿದ್ದೇವೆ. ಮಂಡಲ್ ಪಂಚಾಯತಿ ಎನ್ನುವುದು ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಅಂತ ಸೇರಿದೆ. ಜಿಲ್ಲಾ ಪರಿಷತ್ತು ಜಿಲ್ಲಾ ಪಂಚಾಯತ್ ಎಂದು ಹೆಸರು ಮಾತ್ರ ಬದಲಾವಣೆ ಆಗಿರುವುದು. ಇದರಲ್ಲಿ ಏನು ಚರ್ಚೆ ಮಾಡೋಣ?

ಶ್ರೀ ವೈ. ರಾಮಕೃಷ್ಣ : ಒರಿಜಿನಲ್ ಆಕ್ಟ್ ನಾವು ನೋಡಬೇಕು.

ಶ್ರೀಮತಿ ಪ್ರಮೀಳಾ ನೇಸರ್ಗಿ : ಚರ್ಚೆ ಎಂದು ನಾವು ಹೇಳುತ್ತಿಲ್ಲ. ಇವರು ಇಂಟ್ರೊಡ್ಯೂಸ್ ಮಾಡತಕ್ಕ ಕಾಲದಲ್ಲಿ it is only a substitution and nothing else

ಎಂಬ ಒಂದು ವರ್ಡ್ ಇದ್ದರೆ ಈ ರೀತಿ ಬರುತ್ತಾ ಇರಲಿಲ್ಲ. ಇಂಟ್ರೊಡ್ಯೂಸ್ ಮಾಡುವಾಗ ಅಷ್ಟಾದರೂ ಸ್ವಲ್ಪ ಹೇಳದಿದ್ದರೆ ಹೇಗೆ?

ಉಪಾಧ್ಯಕ್ಷರು : ಮೊದಲೇ ಬಿಲ್ ಕಳಸತಕ್ಕ ವ್ಯವಸ್ಥೆ ಮಾಡಿ.

ಶ್ರೀ ಡಿ.ಕೆ. ಶಿವಕುಮಾರ್ : ಈ ಬಿಲ್ ತಂದಿರುವ ಉದ್ದೇಶ ಸಾರ್ಥಕ ಆಗುವುದಿಲ್ಲ ಎಂದು ನಾನು ತಿಳಿದುಕೊಂಡಿದ್ದೇನೆ. ಹಿಂದೆ ಮಂಡಲ್ ಪಂಚಾಯತಿಗೆ, ಜಿಲ್ಲಾ ಪರಿಷತ್ತಿಗೆ ಎಂದು ಇರುವುದನ್ನು ಬದಲಾಯಿಸುವುದಕ್ಕೆ ತಂದಿರುವ ಅಮೆಂಡ್‌ಮೆಂಟ್ ಇದು. ತಾಲ್ಲೂಕ್ ಪಂಚಾಯತಿ ಜಿಲ್ಲಾ ಪಂಚಾಯತಿ ಮತ್ತು ಮಂಡಲ್ ಪಂಚಾಯತಿಗೆ ಅಧಿಕಾರ ಕೊಟ್ಟಿದ್ದಾರೆ, ಯಾವುದು ಎಂದರೆ ಎವಿಕ್ಟ್ ಮಾಡುವ ಒಂದು ಅಧಿಕಾರ. ಬಹುಶಃ ಈ ಬಿಲ್ ತಂದಿರುವ ಉದ್ದೇಶ ಸರಿಯಾಗಿ ಆಗುವುದಿಲ್ಲ. ಆದ್ದರಿಂದ ಇದನ್ನು ವಾಪಸ್ ತೆಗೆದುಕೊಂಡು ಏನು ಅಧಿಕಾರ ಇದೆ. ಅದನ್ನು ಅಸಿಸ್ಟೆಂಟ್ ಕಮೀಷನರ್‌ಗೆ ತಹಶೀಲ್ದಾರ್‌ಗೋ ಇಲ್ಲವೇ ಡಿಸಿಗೋ ಕೊಟ್ಟರೆ ಮಾತ್ರ ಈ ಬಿಲ್ಲಿಗೆ ಬೆಲೆ ಬರುತ್ತದೆ. ಎಂದು ನಾನಾದರೂ ತಿಳಿದುಕೊಂಡಿದ್ದೇನೆ. ಏಕೆಂದರೆ ಜಿಲ್ಲಾ ಪಂಚಾಯತ್ ತಾಲ್ಲೂಕ್ ಪಂಚಾಯತ್ ಬಂದ ಮೇಲೆ ಸರ್ಕಾರದ ಆಸ್ತಿಯನ್ನು ಉಳಿಸಿಕೊಳ್ಳುವುದಕ್ಕೆ ಬಹುಶಃ ಈ ಪಂಚಾಯತಿಗಳಿಗೆ ರಾಜಕಾರಣಿಗಳಿಗೆ ಸಾಧ್ಯ ಇಲ್ಲ. ಇನ್ನಾದರೂ ನೀವು ಡಿಸಿಗೆ ಇಲ್ಲ ಎಸಿಗೆ ಅವಕಾಶ ಮಾಡಿಕೊಡಿ. ಇದನ್ನು ವಿತ್‌ಡ್ರಾ ಮಾಡಿ. ಲೋಕಲ್ ಅಥಾರಿಟೀಸ್ ಏನು ಇದೆ, ಅದನ್ನು ತೆಗೆದು ಹಾಕಿ ಕಲೆಕ್ಟರ್‌ಗೋ ಇಲ್ಲ ಅಸಿಸ್ಟೆಂಟ್‌ಕಮೀಷನರ್‌ಗೋ ಇಲ್ಲ ಡಿಸಿಗೆ ಮಾಡಿದರೆ ಮಾತ್ರ ಬಹುಶಃ ನಮ್ಮ ಸರ್ಕಾರದ ಆಸ್ತಿಗಳನ್ನು ಉಳಿಸಿಕೊಳ್ಳಬಹುದು ಎಂದು ನಾನಾದರೂ ತಿಳಿದುಕೊಂಡಿದ್ದೇವೆ. ಆದ್ದರಿಂದಲೇ ಬಿಲ್ಲನ್ನು ವಾಪಸ್ ತೆಗೆದುಕೊಂಡು ಲೋಕಲ್ ಅಥಾರಿಟಿ ಬದಲಾಗಿ ಎಸಿ,ಡಿಸಿ,ತಹಶೀಲ್ದಾರ್ ಅವರುಗಳನ್ನು ಅಧಿಕಾರಿಗಳಾಗಿ ಮಾಡಬೇಕೆಂದು ತಮ್ಮ ಮೂಲಕ ನಾನು ಮಾನ್ಯ ಮಂತ್ರಿಗಳಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಶ್ರೀ ಎಂ.ಸಿ. ನಾಣಯ್ಯ : ಹಿರಿಯ ಸದಸ್ಯರಾದ ಮಾನ್ಯ ಡಿ.ಕೆ. ಶಿವಕುಮರ್ ಅವರು ಹೇಳಿದ್ದಾರೆ. ಈಗ ಒಂದು ಕಾನೂನು ಇದೆ. ಈ ಕಾನೂನಿನ ಒಂದು ವಿಧಿಯನ್ನು ನಾವು ತಿದ್ದುಪಡಿ ಮಾಡುತ್ತಿದ್ದೇವೆ. ಅದರಲ್ಲಿ ಲೋಕಲ್ ಅಥಾರಿಟೀಸ್ ಎಂದು ಹುದ್ದೆ ಇದ್ದದ್ದನ್ನು ಜಿಲ್ಲಾ ಪರಿಷತ್ತಿಗೆ ಬದಲಾಗಿ ಜಿಲ್ಲಾ ಪಂಚಾಯತ್, ತಾಲ್ಲೂಕ್ ಪಂಚಾಯತ್ ಅಂತ ಸೇರಿಸಿದ್ದೇವೆ, ಮಂಡಲ್ ಪಂಚಾಯತಿಗೆ ಬದಲು ಗ್ರಾಮ ಪಂಚಾಯತಿ ಎಂದು ಸೇರಿಸಿದ್ದೇವೆ. ಬಾಕಿ ಇರತಕ್ಕ ವಿಧಿ ವಿಧಾನಗಳು ಎಲ್ಲ ಆ ಕಾಯಿದೆಯಲ್ಲಿದೆ. ಆ ಕಾಯಿದೆಯಲ್ಲಿ ಯಾವ್ಯಾವ ಅಧಿಕಾರಿಗಳು ಈ ಒಂದು ಕ್ರಮವನ್ನು ತೆಗೆದುಕೊಳ್ಳಲಿಕ್ಕೆ ಇರತಕ್ಕವರು ಇದ್ದರು ಅಧಿಕಾರ ಅವರಿಗೆ ಇದೆ. ಸೆಕ್ಷನ್ (3)ರಲ್ಲಿ ಆಥರೈಸ್ಡ್ ಆಫೀಸರ್ಸ್ ಎಂದು ಹೇಳುತ್ತಾ ಇರತಕ್ಕದ್ದು ಕಾನೂನಿನ ಅಡಿಯಲ್ಲಿ ಪೂರ್ತಿಯಾಗಿದೆ. ಅದರಲ್ಲಿರತಕ್ಕ ಕ್ಲಾಸ್ (ಬಿ) ಆಫೀಸರ್ಸ್

ಕ್ಲಾಸ್ (ಬಿ) ಆಫೀಸರ್ಸ್ ಎಂದರೆ ಎಸಿಗೆ ಅಧಿಕಾರ ಇದೆ, ಲೋಕಲ್ ಅಥಾರಿಟೀಸ್‌ಗೆ ಆ ಅಧಿಕಾರವನ್ನು ಕೊಟ್ಟಿದ್ದೇವೆ.

ಶ್ರೀ ಡಿ.ಕೆ. ಶಿವಕುಮಾರ್ : ಇದರಲ್ಲಿ ಏನೂ ಅದು ಬರುವುದಿಲ್ಲ.

ಶ್ರೀ ಎಂ.ಸಿ. ನಾಣಯ್ಯ : ಒರಿಜಿನಲ್ ಆಕ್ಟ್‌ನಲ್ಲಿ ತಿದ್ದುಪಡಿ ಮಾಡುತ್ತೇವೆ. ಈ ಬಿಲ್‌ನಲ್ಲಿ ಬರುವುದಿಲ್ಲ. ಒರಿಜಿನಲ್ ಆಕ್ಟ್ ಯಾವುದು ಇದೆ, ಅದಕ್ಕೆ ಸಂಬಂಧಪಟ್ಟಂತೆ ತರುತ್ತೇವೆ. ಬಾಕಿ ಎಲ್ಲಾ ವಿಧಿಗಳನ್ನು ಒರಿಜಿನಲ್ ಆಕ್ಟ್‌ನಲ್ಲಿ ಉಳಿಸಿಕೊಂಡಿದ್ದೇವೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ "1995ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗಹಾರರನ್ನು ಒಕ್ಕಲೆಬ್ಬಿಸುವ) ಅಧಿನಿಯಮ (ಎರಡನೆಯ) ತಿದ್ದುಪಡಿ ವಿಧೇಯಕವನ್ನು ಪರ್ಯಾಲೋಚಿಸುವುದು"

**ಪ್ರಸ್ತಾವ ಅಂಗೀಕರಿಸಲ್ಪಟ್ಟಿತು.**

**ಖಂಡ ಖಂಡವಾಗಿ ವಿಧೇಯಕವನ್ನು ಪರ್ಯಾಲೋಚಿಸುವುದು.**

ಉಪಾಧ್ಯಕ್ಷರು : "ಖಂಡ ಎರಡು ಈ ವಿಧೇಯಕದ ಅಂಗವಾಗಿರುತ್ತದೆ"

**ಪ್ರಸ್ತಾಪ ಅಂಗೀಕರಿಸ್ಪಟ್ಟಿತು**

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ "ಮೊದಲನೇ ಖಂಡ, ದೀರ್ಘ ಶೀರ್ಷಿಕೆ ಪ್ರಸ್ತಾವನೆ ಹಾಗೂ ಅಧಿನಿಯಮಗೊಳಿಸುವ ಸೂತ್ರ ಸಂಹಿತೆ ವಿಧೇಯಕದ ಭಾಗವಾಗಿರುತ್ತದೆ."

**ಪ್ರಸ್ತಾಪವನ್ನು ಅಂಗೀಕರಿಸಲಾಯಿತು**

(ಮೊದಲನೇ ಖಂಡ, ದೀರ್ಘ ಶೀರ್ಷಿಕೆ, ಪ್ರಸ್ತಾವನೆ ಹಾಗೂ ಅಧಿನಿಯಮಗೊಳಿಸುವ ಸೂತ್ರ ಸಂಹಿತೆಗಳನ್ನು ಈ ವಿಧೇಯಕಕ್ಕೆ ಸೇರಿಸಲಾಯಿತು)

**ಪ್ರಸ್ತಾವನೆ ಅಂಗೀಕಾರ**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಸಂಸದೀಯ ವ್ಯವಹಾರಗಳ ಸಚಿವರು) : ಮಾನ್ಯ ಉಪಾಧ್ಯಕ್ಷರೆ, 1 1995ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) ಅಧಿನಿಯಮದ ಎರಡನೆಯ (ತಿದ್ದುಪಡಿ) ವಿಧೇಯಕವನ್ನು ತಿದ್ದುಪಡಿ ಮಾಡಿರುವಂತೆ ಅಂಗೀಕರಿಸಬೇಕೆಂದು ಕೋರುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ "1994ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಕಗದಾರರನ್ನು ಒಕ್ಕಲೆಬ್ಬಿಸುವ) ಅಧಿನಿಯಮದ ಎರಡನೆಯ (ತಿದ್ದುಪಡಿ) ವಿಧೇಯಕವನ್ನು ತಿದ್ದುಪಡಿ ಮಾಡಿರುವಂತೆ ಅಂಗೀಕರಿಸುವುದು"

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು ಮತ್ತು ಮಸೂದೆಗೆ ಒಪ್ಪಿಗೆ ನೀಡಲಾಯಿತು**

**2) 1995ರ ಕರ್ನಾಟಕ ಸಿವಿಲ್ ಪ್ರಕ್ರಿಯಾ ಸಂಹಿತೆ (ತಿದ್ದುಪಡಿ) ವಿಧೇಯಕ**

**ಪರ್ಯಾಲೋಚನಾ ಪ್ರಸ್ತಾಪ**

ಶ್ರೀ ಎಂ.ಸಿ. ನಾಣಯ್ಯ (ಮಾನ್ಯ ಸಂಸದೀಯ ವ್ಯವಹಾರಗಳ ಹಾಗೂ ಕಾನೂನು ಸಚಿವರು) : ಮಾನ್ಯ ಉಪಾಧ್ಯಕ್ಷರೆ, 1995ರ ಕರ್ನಾಟಕಕ ಸಿವಿಲ್ ಪ್ರಕ್ರಿಯಾ ಸಂಹಿತೆ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಕೋರತ್ತೇನೆ.

**ಪ್ರಸ್ತಾವ ಅಂಗೀಕರಿಸಲ್ಪಟ್ಟಿತು**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರು) : ಮಾನ್ಯ ಉಪಾಧ್ಯಕ್ಷರೆ, ಇದು ಒಂದು ಬಹಳ ಸರಳವಾಗಿರತಕ್ಕ ತಿದ್ದುಪಡಿ. ಈಗ ಇರತಕ್ಕ ಸಿವಿಲ್ ಪ್ರೊಸೀಜರ್ ಕೋಡಿನಲ್ಲಿರತಕ್ಕ ವಿಧಿ 54ರ ಪ್ರಕಾರ ಈ ಜಂಟಿ ಆಸ್ತಿಗಳನ್ನು ಪಾಲು ಹಾಕತಕ್ಕ ಸಂದರ್ಭದಲ್ಲಿ ನ್ಯಾಯಾಲಯಕ್ಕೆ ಹೋಗಿ ನ್ಯಾಯಾಲಯ ಪಾಲು ಹಾಕಬೇಕೆಂದು ಹೇಳುತ್ತಾ ಇರತಕ್ಕ ತೀರ್ಮಾನವನ್ನು ಮಾಡಿದಾಗ, ಆ ಪಾಲು ಯಾರು ಮಾಡಬೇಕೆಂದು ಹೇಳುತ್ತಾ ಇರತಕ್ಕ ತೀರ್ಮಾನವನ್ನು ಮಾಡಿದಾಗ, ಆ ಪಾಲು ಯಾರು ಮಾಡಬೇಕು ಎಂದು ಹೇಳುತ್ತಾ ಇರತಕ್ಕದ್ದು. ನ್ಯಾಲಯದವರು ಒಂದು ಪ್ರಿಲಿಮಿನರಿ ಡಿಕ್ರೀ ಮಾಡಿ ಅದನ್ನು ಕಲೆಕ್ಟರ್‌ಗೋ ಅಥವಾ ಡಿಸಿಗೋ ಕಳಿಸುತ್ತಾರೆ. ನೀವು ಕೂನೂನು ಪ್ರಕಾರ ನ್ಯಾಯಾಲಯದ ತೀರ್ಮನ ಪ್ರಾಕಾರ ಪಾಲು ಹಾಕಿ ಹಿಂದಕ್ಕೆ ಕಳಿಸಬೇಕು ಎಂದು ಹೇಳುತ್ತಾರೆ. ಇದು ಏನಾಗಿದೆ ಎಂದರೆ ಡಿಸಿ ಆಫೀಸಿಗೆ ಕಳಿಸಿರತಕ್ಕ ಬೇಕಾದಷ್ಟು ಪ್ರಕರಣಗಳು ಇವೊತ್ತಿಗೊ ಇನ್ನೂ ಕೂಡ ಇತ್ಯರ್ಥ ಆಗದೇ ಅಲ್ಲಿ ಕೋರ್ಟಿನಲ್ಲಿ ವ್ಯಾಜ್ಯಗಳು ಇತ್ಯರ್ಥ ಆಗುವುದಿಲ್ಲ. ಜಿಲ್ಲಾಧಿಕಾರಿಗಳ ಕಛೇರಿಗೆ ಕಳಿಸಿರತಕ್ಕ ಪ್ರಕರಣಗಳು ಇತ್ಯರ್ಥ ಆಗದೇ ಬೇಕಾದಷ್ಟು ಜನ ಆಸ್ತಿಗೋಸ್ಕರ ಪಾಲನ್ನು ನಂಬಿಕೊಂಡು ನಮ್ಮ ಪಾಲು ಕೈಗೆ ಸಿಗಬೇಕು ಎಂದು ಹೇಳುತ್ತಾ ಇರತಕ್ಕ ಉದ್ದೇಶದಿಂದ ಬಹಳ ತಿಂಗಳು, ಬಹಳ ವರ್ಷಗಳಿಂದ ವಂಚಿತರಾಗುತ್ತಿದ್ದಾರೆ.

ಇದು ನಮ್ಮ ಗಮನಕ್ಕೆ ಬಂದ ನಂತರ ಹಾಗೂ ಕೋರ್ಟುಗಳಲ್ಲಿರುವ ಕೆಲವು ವಕೀಲರುಗಳು ಮತ್ತಿತರರು ಸಿವಿಲ್ ಪ್ರಕ್ರಿಯಾ ಸಂಹಿತೆಗೆ 54ಕ್ಕೆ ತಿದ್ದುಪಡಿ ಯನ್ನು ತರಲೇಬೇಕೆಂದು ಒತ್ತಾಯಿಸುತ್ತದ್ದರು ಮತ್ತು ಈ ಕುರಿತು ರಾಜ್ಯದ ಉಚ್ಚ ನ್ಯಾಯಾಲಯದಲ್ಲೂ ಕೂಡ ತೀರ್ಪು ಕೊಟ್ಟಿರುವುದು ನನ್ನ ಗಮನಕ್ಕೆ ಬಂದಿದೆ. ಆದುದರಿಂದ ಈ ಹಿನ್ನಲೆಯಲ್ಲಿ ಸದರಿ ಸಂಹಿತೆಗೆ ತಿದ್ದುಪಡಿ ತರುವುದರ ಮೂಲಕ ಕಲೆಕ್ಟರ್ ಎನ್ನುವ ಸ್ಥಳದಲ್ಲಿ ಕೋರ್ಟ್ ಕಮೀಷನರ್ ಎಂಬ ಪದವನ್ನು ಬಳಸಿದ್ದೇವೆ. ಇದೇ ತರಹದ ತಿದ್ದುಪಡಿಯನ್ನು ಕೇರಳ ಮತ್ತು ತಮಿಳುನಾಡಿದಲ್ಲಿ ತಂದಿದ್ದಾರೆ. ಕೋರ್ಟಿನಲ್ಲಿ ಅವರು ಈ ತರಹದ ತೀರ್ಮಾನ ಕೊಟ್ಟ ನಂತರ ಕೋರ್ಟ್ ಕಮೀಷ್ನರ್ ಅವರನ್ನು ಅವರೇ ನೇಮಕ ಮಾಡಿ, ಅವರ ಮೂಲಕ ಆಸ್ತಿಯನ್ನು ಪಾಲು ಮಾಡುವಲ್ಲಿ ಅವರು ಒಂದು ವರದಿ ಕೊಟ್ಟ ನಂತರ ಪಾರ್ಟಿಶನ್ ಎಂದು ಮತ್ತು spearation of shares ಎಂದು ಹೇಳತಕ್ಕಂಥಾದ್ದು ಕೋರ್ಟಿಗೆ ಫೈನಲ್‌ಡಿಕ್ರಿ ಮಾಡುವುದಕ್ಕೆ ಬೇಗ ಅನುಕೂಲ ಆಗುತ್ತದೆನ್ನುವ ಹಿತದೃಷ್ಟಿಯಿಂದ ಈ ತಿದ್ದುಪಡಿ ತರಲಾಗಿದೆ. ಇದು ಎಲ್ಲರಿಗೂ ಬೇಕಾಗಿರುವ ತಿದ್ದುಪಡಿಯಾಗಿದ್ದು, ಯಾರೆಲ್ಲಾ ವ್ಯಾಜ್ಯ ಮಾಡಿ ಆಸ್ತಿಯಲ್ಲಿ ಪಾಲು ಬೇಕೆಂದು ಕೇಳುತ್ತಿದ್ದಾರೋ, ಆ ದಿಸೆಯಿಂದ ಅನುಕೂಲವಾಗಲೆಂದು ಸದರಿ ತಿದ್ದುಪಡಿಯನ್ನು ತರಲಾಗುತ್ತಿದೆ.

ಶ್ರೀ ಕಾಗೋಡು ತಿಮ್ಮಪ್ಪ (ಸಾಗರ) : ಈ ತಿದ್ದುಪಡಿ ತಂದಿರುವುದು ಸ್ವಾಗತಾರ್ಹ. ಅದರ ಬಗ್ಗೆ ಭಿನ್ನಾಭಿಪ್ರಾಯವಿಲ್ಲ. ಆದರೆ ಇವರು ತಿದ್ದುಪಡಿ ತಂದಿರುವ ಧಾಟಿ, ಏನಿದೆ, ಜಿಲ್ಲಾಧಿಕಾರಿಗಳ ಬದಲಿಗೆ ಕೋರ್ಟ್ ಕಮೀಷನರ್ ಮೂಲಕ ಮಾಡಬೇಕೆಂದು ಏನಿದೆ, ಅದು ಕೂಡ ಅನೇಕ ರೀತಿಯಿಂದ ಕಷ್ಟಕ್ಕೆ ಗುರಿಯಾಗುವ ಪರಿಸ್ಥಿತಿ ಇದೆ. ಕಾರಣವೇನೆಂದರೆ ಜಿಲ್ಲಾಧಿಕಾರಿಗಳು ಜಿಲ್ಲಾಧಿಕಾರಿಗಳಿಗೆ ಸಿಗುವಷ್ಟು ಪ್ರಮಾಣದಲ್ಲಿ ಕೋರ್ಟ್ ಕಮೀಷನರ್ ಅವರಿಗೆ ಸಿಗುವುದಿಲ್ಲ, ಏಕೆಂದರೆ ಅವರು ತಹಶೀಲ್ದಾರರಿಗೆ ಕಳುಹಿಸುತ್ತಾರೆ, ಅವರು ರೆವಿನ್ಯೂ ಇನ್ಸಪೆಕ್ಟರ್ ರವರ ಮೂಲಕ ರೆವಿನ್ಯೂ ದಾಖಲೆಗಳನ್ನು ನೋಡಿ ಸರ್ವೆ ನಂಬರ್ ಮುಂತಾದುವನ್ನು ವಿಭಾಗ ಮಾಡಿ ಕೊಡುತ್ತಾರೆ ಈ ಅವಕಾಶ ಕೋರ್ಟ್ ಕಮೀಷನರ್‌ಗೆ ಸಿಗುವುದಿಲ್ಲ,

ಜಿಲ್ಲಾಧಿಕಾರಿಗಳಿಗೆ ಇದ್ದಂಥ ಅಧಿಕಾರವನ್ನು ತಾವು ನಿಜವಾಗಿಯೂ ಸಹಾಯ ಮಾಡಬೇಕು ಎನ್ನುವುದಾದರೆ ತಹಶೀಲ್ದಾರ್ ಮುಖಾಂತರ ಮಾಡಿಸಿದರೆ ಬಹಳ ಅನುಕೂಲವಾಗುತ್ತದೆ. ಏಕೆಂದರೆ ತಹಶೀಲ್ದರ್ ಹತ್ತಿರ ರೆವಿನ್ಯೂ ದಾಖಲೆಗಳಿರುತ್ತವೆ. ಯಾವ ಸರ್ವೆ ನಂಬರ್ ಯಾರಿಗೆ ಹೋಗಬೇಕು ಅಂತ ಇರುತ್ತದೆ ಒಂದೊಂದು ಸಾರಿ ಕೋರ್ಟ್ ಡಿಕ್ರಿಯಾಗಿರುತ್ತದೆ. ಅದರ ಪ್ರಾಕಾರ ಆ ಸರ್ವೆ ನಂಬರ್ ಅದರಲ್ಲಿರುವ ವಿಸ್ತೀರ್ಣ ಕರಾರುವಕ್ಕಾಗಿರುವುದಿಲ್ಲ. ಆದುದರಿಂದ ಮಾಡುವುದನ್ನು ಮಾಡುತ್ತಿದ್ದೀರಿ. ತಹಶೀಲ್ದಾರ್‌ರವರ ಮುಖಾಂತರ ಮಾಡಿಸಿದ್ದಾರೆ ಬಹಳ ಸುಲಭವಾಗಿ ವಿಭಾಗ ಮಾಡಿಸಬಹುದು.

ಶ್ರೀ ವೈ. ರಾಮಕೃಷ್ಣ (ಆನೇಕಲ್) : ಜಿಲ್ಲಾಧಿಕಾರಿಗಳಿಗೆ ಇದ್ದಂಥ ಅಧಿಕಾರವನ್ನು ತಾವು ಕೋರ್ಟ್ ಕಮೀಷನರ್ ಅವರಿಗೆ ವರ್ಗಾಯಿಸುತ್ತಿದ್ದೀರಿ. ಅಲ್ಲದೆ,ಅನೇಕ ಕೇಸ್‌ಗಳು ಸಿವಿಲ್‌ಕೋರ್ಟ್‌ನಲ್ಲಿ ಪೆಂಡಿಂಗ್ ಇದೆಯೆಂದು ಹೇಳಿದ್ದೀರಿ. ಸುಮಾರು ಎಷ್ಟು ಕೇಸ್‌ಗಳು ಪೆಂಡಿಂಗ್ ಇದೆಯೆಂದು ಹೇಳಿದ್ದಾರೆ ನನಗೆ ಬಹಳ ಸಂತೋಷವಾಗುತ್ತಿತ್ತು. ತಾವು ಹೇಳಲಿಲ್ಲ. ನಾನು ಒಪ್ಪಿಕೊಳ್ಳುತ್ತೇನೆ.ಆದರೆ, ಮೂಲಭೂತವಾದ ಪ್ರಶ್ನೆಯೇನೆಂದರೆ, ಅವು ಏಕೆ ಆಗುತ್ತಿಲ್ಲವೆಂದರೆ, ನಮ್ಮ ರಾಜ್ಯದಲ್ಲಿ ಫ್ರಾಗ್‌ಮೆಂಟೇಶನ್ ಆಕ್ಟ್ ತಂದಂಥ ಕಾಲದಲ್ಲಿ ಸಂವಿಧಾನದಡಿಯಲ್ಲಿ ಭಾಗ ಮಾಡುವುದಕ್ಕಾಗುತ್ತಿರಲ್ಲಿಲ್ಲ. ಈಗ ಭಾಗ ಮಾಡುವುದಕ್ಕೆ ಸಧ್ಯವಿದೆ. ಫ್ರಾಗ್‌ಮೆಂಟೇಶನ್ ಆಕ್ಟ್ ಯಾವಾಗ ತೆಗೆದರೋ ಆಗಿನಿಂದ ಮಾಡುವುದಕ್ಕೆ ಸಾಧ್ಯವಿದೆ. ಇದರ ಬಗ್ಗೆ ಮುತುವರ್ಜಿ ವಹಿಸಿದ್ದ ಜಿಲ್ಲಾಧಿಕಾರಿಗಳು ಮತ್ತು ಅವರ ಕೆಳಗಿನ ಅಧಿಕಾರಿಗಳೇನಿದ್ದಾರೆ, ಸರ್ವೆ ಇಲಾಖೆಯವರು ಅಥವಾ ತಹಶೀಲ್ದಾರರು, ರೆವಿನ್ಯೂ ಇನ್ಸ್‌ಪೆಕ್ಟರ್, ಇಷ್ಟೊಂದು ಜನರಿದ್ದಾಗ ಅವರಿಗಿರತಕ್ಕ ಸಿಬ್ಬಂದಿ ಕೋರ್ಟ್ ಕಮೀಷನರ್ ಅವರಿಗೆ ಸಹಕಾರ ಕೊಡದಿದ್ದರೆ, ಇನ್ನೂ ವಿಳಂಬವಾಗುತ್ತದೆ. ಇದನ್ನು ಅರ್ಥಮಾಡಿಕೊಳ್ಳಬೇಕು. ಅದಕ್ಕೋಸ್ಕರ In the interest of speedy disposal ಇದರ ಉದ್ದೇಶವನ್ನು ತಾವು ಏನು ಹೇಳಿದ್ದೀರಿ. ಇದು ಒಂದು ವೇಳೆ ಕಾರ್ಯಗತವಾಗಬೇಕಾಗಿದ್ದರೆ ಈಗಿರತಕ್ಕ ಕಾನೂನು ಸರಿಯಿದಯೇ ಹೊರತು ತಂದಿರುವ ತಿದ್ದುಪಡಿ ಸರಿಯಿಲ್ಲವೆಂದು ಹೇಳುತ್ತಿದ್ದೇನೆ.

ಶ್ರೀ ಕೆ. ಶರಣಪ್ಪ (ಕುಷ್ಟಗಿ) : ಮಾನ್ಯ ಅಧ್ಯಕ್ಷರೆ, ಈ ತಿದ್ದುಪಡಿ ತಂದಿದ್ದು ನಿಜವಾಗಿಯೂ ಒಳ್ಳೆಯದು. ಇದುವರೆವಿಗೂ ಕೋರ್ಟಿನಲ್ಲಿ ಪಾರ್ಟಿಶನ್ ಸೂಟ್ ಎಂದರೆ ಒಂದು ಜಾಗಕ್ಕೆ ಹಾಕುವ ದಾವೆ ಎನ್ನುವ ಭಾವನೆ ಇದೆ. ಕನಿಷ್ಠ ಐದು ವರ್ಷದಿಂದ ಹತ್ತು ವರ್ಷಗಳವರೆಗೆ ಪಾರ್ಟಿಶನ್ ಸೂಟ್‌ನಲ್ಲಿ ಫೈನಲ್ ಡಿಕ್ರಿ ಸಿಗದಿರುವ ಸಾಕಷ್ಟು ಅನುಭವ ನಮಗಾಗಿದೆ. ಫೈನಲ್ ಡಿಕ್ರಿಯಾಗದೆ ಬಹಳಷ್ಟು ತೊಂದರೆ ಅನುಭವಿಸರಬೇಕಾಗುತ್ತದೆ. ಫೈನಲ್ ಡಿಕ್ರಿಯನ್ನು ಜಿಲ್ಲಾಧಿಕಾರಿಗಳ ಕಛೇರಿಗೆ ಕಳುಹಿಸಿದ ನಂತರ ಅದು ಅಲ್ಲಿಯೇ ನೆನೆಗುದಿಗೆ ಬಿದ್ದಿರುತ್ತದೆ ಅಲ್ಲಿಂದ ಎ.ಸಿ. ಮತ್ತು ತಹಶೀಲ್ದರ್‌ರವರಿಗೆ ಕಳುಹಿಸುತ್ತಾರೆ. ಇಷ್ಟೆಲ್ಲಾ ಆಗಿ ಬರುವುದರೊಳಗೆ ಕನಿಷ್ಠ 2-3 ವರ್ಷಗಳಾಗಿರುತ್ತದೆ. ಇದು ನನ್ನ ಅನುಭವದ ಮಾತು. ಆದುದರಿಂದ ಈ ದಿಸೆಯಲ್ಲಿ ತಿದ್ದುಪಡಿ ತಂದಿದ್ದು ನಿಜವಾಗಿಯೂ ಬಹಳ ಸಮಯೋಚಿತವಾಗಿದೆ. ಮಾನ್ಯ ಸದಸ್ಯರು ಮಾತನಾಡುತ್ತಾ ತಹಶೀಲ್ದಾರ್‌ರವರಿಗೆ ಅಧಿಕಾರ ಕೊಡಬೇಕೆಂದು ಹೇಳಿದರು. ಜಿಲ್ಲಾಧಿಕಾರಿಗಳಿಗೆ ಕೊಟ್ಟಿರುವ ಅಧಿಕಾರವನ್ನು ಬದಲಿಸಿ ತಹಶೀಲ್ದಾರರಿಗೆ ಕೊಟ್ಟರೆ ಏನೂ ಉಪಯೋಗವಿಲ್ಲ. ಏಕೆಂದರೆ ಅವರಿಗೆ ಕೆಳಮಟ್ಟದಿಂದ ಇಂಟರ್‌ಪ್ರಿಟೇಶನ್ ಲಾ ಬರುತ್ತಿರುತ್ತದೆ. ಆದುದರಿಂದ ತಹಶೀಲ್ದಾರರಿಗೆ ಅಧಿಕಾರ ಕೊಟ್ಟರೆ ಡಿಕ್ರಿ ಅವರ ಕಡೆಯಿಂದ ಸರಿಯಾಗಿ ಆಗುವುದಿಲ್ಲ. ಕೋರ್ಟ್ ಕಮೀಷನರ್‌ಗೆ ಯೋಗ್ಯವಾಗಿರುತ್ತದೆ .ಮತ್ತೊಬ್ಬ ಮಾನ್ಯ ಹಿರಿಯ ಸದಸ್ಯರು ಅವರಿಗೆ ಸೌಕರ್ಯಗಳಿರುವುದಿಲ್ಲವೆಂದು ಹೇಳಿದರು.

ಆದರೆ 26ನೇ ನಿಯಮದಲ್ಲಿ ಕೋರ್ಟ್ ಕಮೀಷನರ್‌ಗೆ ಎಲ್ಲಾ ಅಧಿಕಾರವೂ ಇರುತ್ತದೆ. After all is a court Commissioner.ಎಲ್ಲಾ ಕೋರ್ಟಿಗೆ ಏನು

ಅಧಿಕಾರವಿರುತ್ತದೆ. ಎಕ್ಸಿಕ್ಯೂಶನ್, ಇಂಪ್ಲಿಮೆಂಟೇಶನ್, ಹ್ಯಾಂಡಿಗ್ ಓವರ್ ಈ ಎಲ್ಲವನ್ನೂ ಸಿವಿಲ್ ಪ್ರಕ್ರಿಯಾ ಸಂಹಿತೆಯಲ್ಲಿ ಅಳವಡಿಸಿಕೊಳ್ಳಲಾಗಿದೆ. ಆದುದರಿಂದ ಇದನ್ನು ಕೋರ್ಟ್ ಕಮೀಷನರ್ ಅವರಿಗೆ ಕೊಟ್ಟರೆ ಯೋಗ್ಯವಾದುದೆಂದು ತಿಳಿಸುತ್ತಾ, ಇದು ಜನತಾ ದಳ ಸರ್ಕಾರದ ಒಂದು ಕೊಡುಗೆ ಎಂದರೆ ತಪ್ಪಾಗುವುದಿಲ್ಲ. ತಂದಿರುವ ತಿದ್ದುಪಡಿ ಬಹಳ ಯೋಗ್ಯವಾಗಿದ್ದು ಸಮಯೋಚಿತವಾಗಿದೆ. ಇದರಿಂದ ಕ್ವಿಕ್ ಡಿಸ್‌ಪೋಸಲ್‌ಗೆ ಒಂದು ಅರ್ಥ ಬರುತ್ತದೆಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ.

ಶ್ರೀಮತಿ ಪ್ರಮೀಳಾ ನೇಸರ್ಗಿ (ಚಾಮರಾಜಪೇಟೆ) : ನಮ್ಮಲ್ಲಿ ಒಂದು ಗಾದೆ ಇದೆ. ಯಾರ ಮೇಲಾದರೂ ಶಾಪ ಹಾಕಬೇಕಾದಲ್ಲಿ ಅವರ ಮನೆಯಲ್ಲಿ ಸಿವಿಲ್‌ದಾವೆ ಬೀಳಲಿ ಎಂದು ಇಂತಹ ಪರಿಸ್ಥಿತಿ ನಮ್ಮ ದೇಶದಲ್ಲಿರುವುದನ್ನು ನೋಡುತ್ತಿದ್ದೇವೆ. ನನ್ನ ಕಛೇರಿಯಲ್ಲಿ 1964ನೇ ಇಸವಿಯಿಂದ ಇವೊತ್ತಿನವರೆಗೆ ಫೈನಲ್ ಡಿಕ್ರಿ ಪ್ರೊಸೀಡಿಂಗ್ಸ್ ಆಗಿದ್ದು ಬಿಟ್ಟರೆ ಇವೊತ್ತಿನವರೆವಿಗೂ ಡಿಕ್ರಿ ಹಾಕದಿರುವುದನ್ನು ನೋಡಿದ್ದೇನೆ. ಸೆಕ್ಷನ್ 54ಕ್ಕೆ ಏನು ತಿದ್ದುಪಡಿ ತಂದಿದ್ದಾರೆ,ಇದನ್ನು ನೋಡಿದಾಗ ಸರಿಯಿದೆಯೇ ಎನ್ನುವ ಬಗ್ಗೆ ಸ್ವಲ್ಪ ಅನುಮಾನ ಮೂಡುತ್ತದೆ. ಏಕೆಂದರೆ ಇವರು ಆ ಸೆಕ್ಷನ್‌ನಲ್ಲಿ ಹೇಳುತ್ತಾರೆ.

"In accordance with the law (if any) for the time being in force relating to the partition or separate possession of shares and if necesary on the report of a revenue officer not below the rank of Tahsildar or such other person."ಎಂದು ನನಗನ್ನಿಸುತ್ತದೆ. ಕೋರ್ಟಿನಲ್ಲಿ ನೀವು ಒಂದು ಸಾರಿ ಅಧಿಕಾರ ಕೊಟ್ಟ ನಂತರ ಸೆಕ್ಷನ್ 54ರ ಪ್ರಕಾರ ಅಧಿಕಾರಿಗೆ ಡಿಕ್ರೀಶನ್ ಕೊಡಿ. ಅವರು ರೆವಿನ್ಯೂ ಅಧಿಕಾರಿಗಳನ್ನಾಗಲಿ ನೇಮಕ ಮಾಡಲಿ, ತಹಶೀಲ್ದಾರರನ್ನಾದರೂ ನೇಮಿಸಲಿ, ಸರ್ವೆ ಇಲಾಖೆಯಲ್ಲಿರುವ ಸರ್ವೇಯರ್‌ನ್ನಾಗಲಿ ನೇಮಿಸಲಿ ಅಥವಾ ಪಿಡಬ್ಲ್ಯೂಡಿಯಲ್ಲಿರುವ ಇಂಜಿನಿಯರ್ ಅವರನ್ನೇ ನೇಮಿಸಲಿ, ನೀವು ಈ ರೀತಿ ಕಟ್ಟುಪಾಡು ವಿಧಿಸಿ 'not less than the Revenue officer or Tahsildar' ಎಂದಾಗ ಮತ್ತೆ ನಾವು ಜಿಲ್ಲಾಧಿಕಾರಿಗಳ ಹತ್ತಿರ ಹೋಗುವ ಬದಲು ಇಷ್ಟು ವರ್ಷಗಳ ಕಾಲ ಏನು ಕೇಸ್ ನಡೆಸಿಕೊಂಡು ಬಂದಿದ್ದೇವೆ, ಈಗ ಮತ್ತೆ ಸಿವಿಲ್‌ಕೋರ್ಟಿಗೆ ವಾಪಸ್ಸು ಹೋಗಿ ಅಲ್ಲಿಂದ ತಹಶೀಲ್ದಾರ್‌ಹತ್ತಿರ, ರೆವಿನ್ಯೂ ಇನ್ಸ್‌ಪೆಕ್ಟರ್ ಹತ್ತಿರ ಹೋಗಿ ಮತ್ತು ಅವರಿಂದ ವರದಿ ಬರುವ ಹೊತ್ತಿಗೆ ನಮ್ಮ ಪಾರ್ಟಿಗಳು ರೆವಿನ್ಯೂ ಇನ್ಸ್‌ಪೆಕ್ಟರ್‌ರವರ ಬಾಲ ಹಿಡಿದುಕೊಂಡು ಬರುವಷ್ಟರಲ್ಲಿ ಇನ್ನೂ 15 ವರ್ಷಗಳಾಗುತ್ತದೆ. ಕೊನೆಗೆ ಅವರಿಗೆ ಡಿಕ್ರಿ ಸಿಗುವುದಿಲ್ಲ. ಅವರ ಜೀವಂತ ಕಾಲದಲ್ಲಿ ಸಿಗುವುದಂತೂ ಸಾಧ್ಯವಿಲ್ಲ. ಕೋರ್ಟ್ ಕಮೀಷನರ್ ಡಿಕ್ರೀಶನ್ ಕೊಡುವುದಕ್ಕೆ ದಯವಿಟ್ಟು ತಾವು ಸೂಕ್ತತ ತಿದ್ದುಪಡಿ ಮಾಡಿದರೆ ಅನುಕೂಲವಾಗುತ್ತಿದೆ Give the discreation to the court parties discreation ಯಾರನ್ನಾದರೂ ಮಾಡಬಹುದು. ಇದರಲ್ಲಿ ಕ್ಲಿಷ್ಟವಿದ್ದರೆ ಟೆಕ್ನಿಕಲ್ ಇಂಜಿನಿಯರ್ ಅವರನ್ನಾದರೂ ಮಾಡಬಹುದು. '" Not less than the Tahsildar or Revenue Inspector" ಏನು ಹೇಳುತ್ತಿದ್ದೀರಿ,ಅದನ್ನು ದಯವಿಟ್ಟು ತೆಗದುಕೊಂಡು ಮಾಡಿದರೆ ಒಳ್ಳೆಯದಾಗುತ್ತದೆ. ಆದುದರಿಂದ, ಅದರ ಬಗ್ಗೆ ಸೂಕ್ತ ತಿದ್ದುಪಡಿ ತರಬೇಕೆಂದು ತಮ್ಮಲ್ಲಿ ಕೇಳಿಕೊಳ್ಳುತ್ತಿದ್ದೇನೆ.

ಶ್ರೀ ಜಗದೀಶ್ ಶೆಟ್ಟರ್ (ಹುಬ್ಬಳ್ಳಿ ಗ್ರಾಮಾಂತರ) : ಸಿವಿಲ್ ಪ್ರಕ್ರಿಯಾ ಸಂಹಿತೆಗೆ ಏನು ಒಂದು ತಿದ್ದುಪಡಿ ತಂದಿದ್ದಾರೆ, ಇದರ ಪ್ರಕಾರ ತಹಶೀಲ್ದಾರ್ ಅಥವಾ ರೆವಿನ್ಯೂ ಅಧಿಕಾರಿಗಳ ಕಡೆಯಿಂದ ನಾವು ಅಭಿಪ್ರಾಯ ತೆಗೆದುಕೊಳ್ಳುವುದಾದರೆ

ಮತ್ತೆ ನಾವು ರೆವಿನ್ಯೂ ಇಲಾಖೆಗೆ ಅಧಿಕಾರ ಕೊಟ್ಟಂತಾಗುತ್ತದೆ. ಇವೊತ್ತು ಆರ್ಡರ್ 26, ರೂಲ್ 9, ಸಿಪಿಸಿ ಪ್ರಕಾರ ಕೋರ್ಟಿಗೆ ಎಲ್ಲಾ ಪೂರ್ತಿ ಅಧಿಕಾರವಿದೆ. ಕೋರ್ಟ್ ಕಮೀಷನರ್‌ರನ್ನಾದರೂ ನೇಮಿಸಬಹುದು, ಯಾರನ್ನಾದರೂ ನೇಮಿಸಬಹುದು, ಒಬ್ಬ ಇಂಜಿನಿಯರ್ ಎಕ್ಸ್‌ಪರ್ಟನನ್ನು ಬೇಕಾದರೆ ನೇಮಿಸಬಹುದು, ಬೇಕಾದರೆ ಸಿಟಿ ಸರ್ವೇಯರ್ ಅವರನ್ನು ನೇಮಿಸಬಹುದು. ರಿಪೋರ್ಟನ್ನು ತಹಶೀಲ್ದಾರರಿಂದ ತೆಗೆದುಕೊಳ್ಳುವುದಾದರೆ ನಾವು ಮತ್ತೆ, ಜಿಲ್ಲಾಧಿಕಾರಿಗಳಿಗೆ ಅಧಿಕಾರ ಕೊಟ್ಟಂತಾಗುತ್ತದೆ. ಅದಕ್ಕಾಗಿ ಕೋರ್ಟ್ ಕಮೀಷನರ್ ಅವರನ್ನು ನೇಮಿಸುವುದಕ್ಕೆ ಕೋರ್ಟ್‌ನವರಿಗೆ ಪೂರ್ಣ ಅಧಿಕಾರವಿರಬೇಕು. ರೆವಿನ್ಯೂ ಇನ್ಸ್‌ಪೆಕ್ಟರ್ ಆಗಲಿ, ತಹಶೀಲ್ದಾರ್ ಅವರನ್ನು ನೇಮಿಸುವುದಕ್ಕೆ ಪೂರ್ಣ ಅಧಿಕಾರವಿರಬೇಕೆಂಬ ವಿಚಾರವನ್ನು ಮಾನ್ಯ ಸಚಿವರು ಗಮನಿಸಬೇಕೆಂದು ನಾನು ಕೇಳಿಕೊಳ್ಳುತ್ತಿದ್ದೇನೆ.

ಒಬ್ಬ ಮಾನ್ಯ ಸದಸ್ಯರು : ಮಾನ್ಯ ಉಪಾಧ್ಯಕ್ಷರೆ, ಸಿವಿಲ್ ಪ್ರಕ್ರಿಯಾ ಸಂಹಿತೆಯ 54ನೇ ಸೆಕ್ಷನ್‌ಗೆ ತಂದಿರುವ ತಿದ್ದುಪಡಿ ಬಹಳ ಸೂಕ್ತವಾಗಿದೆ. ಏಕೆಂದರೆ justice delayed is justice denied" ನಾನು ಹೇಳಿದ ಹಾಗೆ ಬಹಳಷ್ಟು ಪ್ರಕರಣಗಳು ಇತ್ಯರ್ಥವಾಗದೆ ಹಾಗೆಯೇ ಉಳಿದಿರುತ್ತವೆ. ಮಾನ್ಯ ಸದಸ್ಯರಾದ ಕಾಗೋಡು ತಿಮ್ಮಪ್ಪನವರು ಹೇಳಿದಂತೆ, ಕೋರ್ಟ್‌ನವರು ಕಮೀಷನರ್ ಅವರನ್ನು ನೇಮಿಸುವಾಗ ತಹಶೀಲ್ದಾರ್ ಅವರನ್ನೂ ಕೂಡ ನೇಮಿಸಿಕೊಳ್ಳಬಹುದು. ಆದರೆ ಆ ಒಂದು ಡಿಕ್ರಿಯನ್ನು ಎಕ್ಸಿಕ್ಯೂಟ್ ಮಾಡುವ ಕಾಲದಲ್ಲಿ ಅದಕ್ಕೆ ಸದರಿ ಸಂಹಿತೆಯಲ್ಲಿ ಪ್ರಾವಿಜನ್ ಇದೆ. ಆದುದರಿಂದ ತಹಶೀಲ್ದಾರ್ ಅಥವಾ ರೆವಿನ್ಯೂ ಅಧಿಕಾರಿಗಳನ್ನು ಸೇರಿಸುವುದರಲ್ಲಿ ಯಾವುದೇ ಅರ್ಥವಿಲ್ಲವೆಂದು ನನ್ನ ಅಭಿಪ್ರಾಯವಾಗಿದೆ.

12.50 ಪಿ.ಎಂ.

ಶ್ರೀ ಎಂ.ಸಿ. ನಾಣಯ್ಯ : ಮಾನ್ಯ ಅಧ್ಯಕ್ಷರೆ, ಇದರ ಬಗ್ಗೆ ಮಾನ್ಯ ವೈ. ರಾಮಕೃಷ್ಣರವರು ಶ್ರೀಮತಿ ಪ್ರಮೀಳಾ ನೇಸರ್ಗಿಯವರು ಮತ್ತು ನನ್ನ ಕೆಲವಾರು ಮಿತ್ರರುಗಳು ಹಲವು ವಿಚಾರಗಳನ್ನು ಹೇಳಿದ್ದಾರೆ. ಇಲ್ಲಿ ನಾವು ಪುನಃ ಕಂದಾಯ ಅಧಿಕಾರಿಗಳಿಗೇನು ಅಧಿಕಾರವನ್ನು ಕೊಡುತ್ತಿಲ್ಲ. ಕೋರ್ಟ್‌ನಲ್ಲಿ ಕಮೀಷನರ್‌ನ್ನು ನೇಮಕ ಮಾಡುತ್ತಾರೆ, ಮಾಡಿಯಾದ ಮೇಲೆ ಎಲ್ಲಾದರು ಅಂಥ ಒಂದು ಸಂದರ್ಭ ಬಂದಾಗ If necessary ಅಂತ ಹೇಳತಕ್ಕಾಂಥಾದ್ದು ಬೇಕಾದರೆ ಅವರು ಅದನ್ನು ಮಾಡಿಕೊಳ್ಳಲಿ ಅಥವಾ ಬಿಡಲಿ. ಆದರೆ ಇದರ ಅವಶ್ಯಕತೆ ಬಂದಾಗ ಈ ರೀತಿ ಮಾಡಲಿ ಎಂದು.'If necessary'.

ಶ್ರೀಮತಿ ಪ್ರಮೀಳಾ ನೇಸರ್ಗಿ : ಆದರೆ Or other officer, Tahsildar....

ಶ್ರೀ ಎಂ.ಸಿ. ನಾಣಯ್ಯ : ದಯಮಾಡಿ ಕೇಳಿ.

"....with the law (if any) for the time being in force relating to the partition, or the separate possession of shares, and if necessary on the report of a revenue officer not below the rank of Tahsidar or such other person as the court may appoint as Commissioner in that behalf." Ultimately absolute dislute discretion is given to the court only. Court is the final ಆದ್ದರಿಂದ ಇಲ್ಲಿ ಏನು ತಂದಿದ್ದೇವೆ ಅದನ್ನು ನಮ್ಮ ರಾಜ್ಯದ ಉಚ್ಚನ್ಯಾಯಾಲಯಕ್ಕೆ ಕಳಿಸಿ ocnthority. Commissioner is the ಅಲ್ಲಿಂದ ಒಪ್ಪಿಗೆಯನ್ನು ಪಡೆದುಕೊಂಡಿಯೇ ಇದನ್ನು ತಂದಿರತಕ್ಕದ್ದು. ಬಹುಶಃ final authority.

Let them ಶ್ರೀಮತಿ ಪ್ರಮೀಳಾರವರ ಕಛೇರಿಯಲ್ಲಿ ಇಂಥ ಪ್ರಕರಣಗಳು ಬಹಳಷ್ಟು ಇರಬಹುದು. ಅಂಥ do what ever they want to do ಪ್ರಕರಣಗಳು ಬೇಗ ಇತ್ಯರ್ಥವಾಗಬೇಕು ಎನ್ನತಕ್ಕ ಆಸೆ ಇದೆತಾನೆ? ಆದುದರಿಂದ ಇದನ್ನು about it. ತಂದಿದ್ದೇವೆ.

ಶ್ರೀ ವೈ. ರಾಮಕೃಷ್ಣ : ಇದನ್ನು ಮಾಡಬೇಕೆಂದು ಹೈಕೋರ್ಟ್‌ನವರೇನಾದರು, ಹೇಳಿದ್ದಾರಾ ಅಥವಾ ಲಾಕಮಿಷನ್‌ನವರೇನಾದರು ಶಿಫಾರಸ್ಸು ಮಾಡಿದ್ದರೆ? I want to know the source from where you got this informatino? please let me know.

ಶ್ರೀ ಎಂ.ಸಿ. ನಾಣಯ್ಯ : ಇದು ಬಾರ್ ಅಸೋಸಿಯೇಷನ್‌ನಿಂದ ಬಂದಿತ್ತು. ನಾನು ಹೈಕೋರ್ಟ್‌ನಲ್ಲಿ ಕೆಲವು ಸಂದರ್ಭದಲ್ಲಿ ಬಾರ್ ಅಸೋಸಿಯೇಷನ್‌ಗೆ ಹೋಗಿದ್ದಾಗ ಕೇಳಿದ್ದರು. ನಿಮ್ಮ ಕಾಲದಲ್ಲಿ ಯಾದರೂ ಇದನ್ನು ತರುತ್ತೀರಾ ಎಂದು ಕೇಳಿದ್ದರು ಇದರಿಂದ ನಿಮಗೇನು ಲಾಭವೆಂದು ಕೇಳಿದ್ದೆ. ಅದಕ್ಕೆ ನಮಗೆ ಏನೋ ಬರಬೇಕಾಗಿದೆ ಫೈನಲ್ ಡಿಕ್ರಿಯಲ್ಲಿ ಬರುತ್ತದೆಂದು ಹೇಳಿದರು. ಇಲ್ಲಿ ವ್ಯಾಜ್ಯಗಳು ಬೇಗ ಬೇಗ ಇತ್ಯರ್ಥವಾಗಬೇಕು ಎನ್ನತಕ್ಕ ದೃಷ್ಟಿಯಿಂದ ಇದನ್ನು ತಂದಿದ್ದೇವೆಯೇ ಹೊರತು ಬೇರೆ ಉದ್ದೇಶವಿಲ್ಲ, ತಾವು ಇದಕ್ಕೆ ಸಂಪೂರ್ಣವಾಗಿ ಒಪ್ಪಿಗೆ ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ಕಾಗೋಡು ತಿಮ್ಮಪ್ಪ : ಬಾರ್ ಅಸೋಸಿಯೇಷನ್‌ನವರು ಇದೊಂದನ್ನು ಹೇಳಿದ್ದರೆ ಅಥವಾ ಬೇರೆ ವಿಷಯಗಳನ್ನು ಸಹ ಹೇಳಿದ್ದರೇ?

ಶ್ರೀ ಎಂ. ಸಿ. ನಾಣಯ್ಯ : ಅವರು ಬೇರೆ ವಿಷಯಗಳನ್ನು ಹೇಳಿದ್ದಾರೆ.ಅದು ಬಂದಬಂದಂಗೆ ಕೇಳಿ ನಾನು ಹೇಳುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ 1995ರ ಕರ್ನಾಟಕ ಸಿವಿಲ್‌ಪ್ರಕ್ರಿಯಾ ಸಂಹಿತೆ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸುವುದು.

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು**

**ಖಂಡ ಖಂಡವಾಗಿ ವಿಧೇಯಕವನ್ನು ಪರ್ಯಾಲೋಚಿಸುವುದು.**

**ಖಂಡ 2 ರಿಂದ 4ರವರೆಗೆ**

ಉಪಾಧ್ಯಕ್ಷರು : "ಖಂಡ 2 ರಿಂದ 4ರವರೆಗೆ ಎರಡೂ ಸೇರಿದಂತೆ ಈ ವಿಧೇಯಕದ ಅಂಗವಾಗಿರುತ್ತದೆ."

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು**

**(ಖಂಡ 2ರಿಂದ 4ರವರೆಗೆ ಎರಡೂ ಸೇರಿದಂತೆ ವಿಧೇಯಕಕ್ಕೆ ಸೇರಿಸಲಾಯಿತು)**

**ಖಂಡ 1 ಇತ್ಯಾದಿ**

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ:

"ಮೊದಲನೆಯ ಖಂಡ, ದೀರ್ಘ ಶೀರ್ಷಿಕೆ,ಪ್ರಸ್ತಾವನೆ ಹಾಗೂ ಅಧಿನಿಯಮಗೊಳಿಸುವ ಸೂತ್ರ ಸಂಹಿತೆ ವಿಧೇಯಕರ ಭಾಗವಾಗಿರುತ್ತದೆ.

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು**

**(ಮೊದಲನೆಯ ಖಂಡ, ದೀರ್ಘ ಶೀರ್ಷಿಕೆ ಪ್ರಸ್ತಾವನೆ ಹಾಗೂ ಅಧಿನಿಯಮ ಗೊಳಿಸುವ ಸೂತ್ರ ಸಂಹಿತೆಗಳನ್ನು ವಿಧೇಯಕಕ್ಕೆ ಸೇರಿಸಲಾಯಿತು)**

**ಪ್ರಸ್ತಾಪ ಅಂಗೀಕಾರ**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಸಚಿವರು) : ಸನ್ಮಾನ್ಯ ಉಪಾಧ್ಯಕ್ಷರೆ, 1995ರ ಕರ್ನಾಟಕ ಸಿವಿಲ್‌ಪ್ರಕ್ರಿಯಾ ಸಂಹಿತೆ (ತಿದ್ದುಪಡಿ) ವಿಧೇಯಕವನ್ನು ಅಂಗೀಕರಿಸಬೇಕೆಂದು ಕೋರುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ,

"1995ರ ಕರ್ನಾಟಕ ಸಿವಿಲ್ ಸಂಹಿತೆ (ತಿದ್ದುಪಡಿ) ವಿಧೇಯಕವನ್ನು ತಿದ್ದುಪಡಿಮಾಡಿರುವಂತೆ ಅಂಗೀಕರಿಸುವುದು"

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು ಮತ್ತು ಮಸೂದೆಗೆ ಒಪ್ಪಿಗೆ ನೀಡಲಾಯಿತು**

## 3) ಕರ್ನಾಟಕ ಕಾನೂನು ನೆರವು ಮಂಡಳಿ (ತಿದ್ದುಪಡಿ) ವಿಧೇಯಕ ಪರ್ಯಾಲೋಚನಾ ಪ್ರಸ್ತಾಪ

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಸಚಿವರು) : ಸನ್ಮಾನ್ಯ ಉಪಾಧ್ಯಕ್ಷರೇ 1995ರ ಕರ್ನಾಟಕ ಕಾನೂನು ನೆರವುಮಂಡಳಿ (ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಕೋರುತ್ತೇನೆ.

**ಪ್ರಸ್ತಾಪವನ್ನು ಮಂಡಿಸಲಾಯಿತು**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಸಚಿವರು) : ಸನ್ಮಾನ್ಯ ಉಪಾಧ್ಯಕ್ಷರೆ, 1995ನೇ ಸಾಲಿನ ಕರ್ನಾಟಕ ಕಾನೂನು ನೆರವು ಮಂಡಳಿ ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಕೋರುತ್ತೇನೆ. ಇದು ಸಹ ಸರಳವಾಗಿರತಕ್ಕ ತಿದ್ದುಪಡಿಯಾಗಿದೆ. ಈಗ ಇರುವ ಕಾನೂನಿನ 31ನೆಯ ವಿಧಿಯಲ್ಲಿ ಕಾನೂನು ನೆರವು ಮಂಡಳಿಗೆ ಕಾರ್ಯಕಲಾಪಗಳನ್ನು ಮಾಡುವುದಕ್ಕಾಗಿ ಕೆಲವು ವಿಧಿವಿಧಾನಗಳನ್ನು ಮಾಡಿಕೊಳ್ಳುತ್ತಾರೆ. ಈ 31ರ ವಿಧಿಯಲ್ಲಿನ ರೆಗುಲೇಷನ್‌ಗೆ ರೆಟ್ರೂಸೆವೆಕ್‌ಟೀವ್ ಎನ್ನತಕ್ಕ ಪದವನ್ನು ಸೇರಿಸಬೇಕಾಗಿದೆ. ತಾವುಗಳು ಏಕೆ ಎಂದು ಕೇಳಬಹುದು, ಈಗ ರೆಗ್ಯುಲೇಷನ್ ಮಾಡಲಾಗಿದೆ, ಅನಂತರ ಅದನ್ನು ಕೆಲವು ಸಂದರ್ಭಗಳಲ್ಲಿ ಸದನದ ಮುಂದೆ ಮಂಡಿಸಿ ಒಪ್ಪಿಗೆಯನ್ನು ಪಡೆದುಕೊಳ್ಳಬೇಕಾಗುತ್ತದೆ. ಇಲ್ಲಿ ರೆಗುರೇಷನ್‌ಇದೆ ಅದು ಇಲ್ಲ ಎಂದು ನಾನು ಹೇಳುವುದಿಲ್ಲ. ಆದರೆ ಅದು ಕಾನೂನಿನ ಪ್ರಾಕಾರ ಜಾರಿಗೆ ಬರಬೇಕಾಗಿರತಕ್ಕ ಸಮಯದಲ್ಲಿ ರೆಟ್ರಾಸ್‌ವೆಕ್‌ಟೀವ ಎನ್ನತಕ್ಕ ಪದವು ಇಲ್ಲದಿದ್ದರೆ ನಾವು ಮಾಡಿರತಕ್ಕ ರೆಗ್ಯುಲೇಷನ್‌ಗೆ ಯಾವುದೇ ರೀತಿಯಾದ ಕಾನೂನಿನ ಬಲವಿರುವುದಿಲ್ಲ. ಆದುದರಿಂದ ಕಾನೂನಿನ ಬಲವನ್ನು ಕೊಡುವುದಕ್ಕೋಸ್ಕರ ಈ ರೆಟ್ರಾಸ್‌ವೆಕ್‌ಟೀವ್ ಎನ್ನತಕ್ಕ ಪದವನ್ನು ನಿಯಮ 31ಕ್ಕೆ ಸೇರಿಸಿ ಇದನ್ನು ಮಾಡಬೇಕಾಗುತ್ತದೆ.

ಕಾನೂನು ನೆರವು ಮಂಡಳಿ ಮಾಡಿರತಕ್ಕ ಕೆಲಸಗಳ ಬಗ್ಗೆ ನಿಮಗೆಲ್ಲರಿಗೂ ಗೊತ್ತಿದೆ. ಲೋಕಅದಾಲತ್ ಮೂಲಕ, ವ್ಯಾಜ್ಯಗಳನ್ನು ಇತ್ಯರ್ಥ ಮಾಡುವುದು ಮತ್ತು ಇದಕ್ಕಾಗಿ ವಿಧಿವಿಧಾನಗಳನ್ನು ನಾವು ಮಾಡಿಬಿಟ್ಟಿದ್ದೇವೆ. ಆದ್ದರಿಂದ ಈ ರೆಟ್ರಾಸ್‌ವೆಕ್‌ಟೀವ್‌ಎನ್ನತಕ್ಕ ಪದವನ್ನು ನಾವು ವಿಧಿ31ರಲ್ಲಿ ಅಳವಡಿಸಿಕೊಂಡಾಗ ಅದಕ್ಕಾ ಕಾನೂನಿನ ಸ್ಥಿರತೆ ಬರುತ್ತದೆ ಎನ್ನತಕ್ಕ ದೃಷ್ಟಿಯಿಂದ ಇದನ್ನು ಮಾಡುತ್ತಿದ್ದೇವೆ. ಇದನ್ನು ತಾವು ಗಮನದಲ್ಲಿಟ್ಟುಕೊಂಡು ತಾವು ಖಡಕ್ಕೆ ಮಂಜೂರಾತಿಯನ್ನು ಕೊಡಬೇಕು. ಇದರಲ್ಲಿ ಯಾವುದೆ ರೀತಿಯಾದ ಒಳ ಒಪ್ಪಂದಗಳಿಲ್ಲ. ಕಾನೂನಿನ ಬಲವನ್ನು ಕೊಡುವುದಕ್ಕೋಸ್ಕರವಾಗಿ ಈ ರೆಟ್ರಾಸ್‌ಪೆಕ್‌ಟೀವ್ ಪದವನ್ನು ಸೇರಿಸುವ ಹಿನ್ನಲೆಯಲ್ಲಿ ಇದನ್ನು ತಂದಿದ್ದೇವೆ. ಆದ್ದರಿಂದ ತಾವು ದಯಮಾಡಿ ಇದಕ್ಕೆ ಒಪ್ಪಿಗೆಯನ್ನು ಕೊಡಬೇಕೆಂದು ಕೇಳಿಕೊಳ್ಳುತ್ತೇನೆ.

ಶ್ರೀ ವೈ. ರಾಮಕೃಷ್ಣ (ಆನೇಕಲ್) : ಮಾನ್ಯ ಅಧ್ಯಕ್ಷರೆ, ಇದು ಪ್ರಪ್ರಥಮವಾಗಿ ಜಾರಿಗೆ ಬಂದಿರತಕ್ಕದ್ದು. ಹೊಸದರಲ್ಲಿ ಕೆಲವು ಎಡರುತೊಡರುಗಳು ಆಗುವುದು ಸರ್ವೇಸಾಮಾನ್ಯ ಅಂಥ ತೊಡಕುಗಳನ್ನು ನಾವು ಪತ್ತೆ ಮಾಡಬೇಕಾಗಿದೆ ಆದರೆ ತಾವು ಇಲ್ಲಿ ಹೇಳಿದ್ದೀರಿ

'... make reglations with retrospective effect to meet unforeseen... ಅಂತ

ಈಗ ತಾವು ಮಾಡಿರುವ ರೆಗ್ಯುಲೇಷನ್ ಏನಾದರೂ ತಪ್ಪಾಗಿದೆಯ? ಆ ರೀತಿಯಾಗಿದ್ದರೆ ಏನು ಮಾಡಿದ್ದೀರಿ ಇದರಲ್ಲಿ ಏನಾದರೂ ತಪ್ಪಾಗಿದ್ದರೆ ಅದಕ್ಕೋಸ್ಕರ ಏನು ಮಾಡಬೇಕಾಗಿದೆ ಎಂಬುದರ ಬಗ್ಗೆ ತಾವು ಹೇಳಬೇಕು.

ಶ್ರೀಮತಿ ಪ್ರಮೀಳಾ ನೇಸರ್ಗಿ (ಚಾಮರಾಜಪೇಟೆ) : ಸನ್ಮಾನ್ಯ ಅದ್ಯಕ್ಷರೆ, ಈ ಕಾನೂನು ನೆರವು ಮಂಡಳಿಯಲ್ಲಿ ಇದುವರೆಗೆ ಯಾರಿಗೆ ಸರಿಯಾದ ನೆರವು ಸಿಕ್ಕಬೇಕಾಗತ್ತೋ ಅವರಿಗೆ ಸಿಕ್ಕಿಯೂ ಇಲ್ಲ, ಸಿಕ್ಕುವುದೂ ಇಲ್ಲ. ಅದರ ಬಗ್ಗೆ ಸಮಯ ಬಂದಾಗ ಮಾತನಾಡುತ್ತೇನೆ. ಆದರೆ ಇವರು unforeseen' ಎಂದು ಏನು ಹೇಳಿದ್ದಾರೆ ಅದು ಕಾಣದ, ತೆರೆಯ ಹಿಂದೆ ಏನು ನಡೆದಿದೆ ಅದನ್ನು ನಾವು ತಿಳಿದುಕೊಳ್ಳಬೇಕು. ಆ ರೀತಿ ಏನಾದರು ನಡೆದಿದ್ದರೆ ಅದನ್ನು ಸರಿಪಡಿಸುವುದಕ್ಕೇನಾದರು ನೀವೇನಾದರೂ ಇದನ್ನು ಮಾಡುವುದಿದ್ದರೆ ಅದೇನು ನಡೆದಿದೆ ಎಂಬುದನ್ನು ನಮಗೆ ತಿಳಿಸಿದರೆ ಕಾನೂನಿಗೆ ರೆಟ್ರಾಸ್‌ಪೆಕ್ಟೀವ್‌ನ್ನು ಮಾಡಿಕೊಡಲು ಸಾಧ್ಯವಾಗುತ್ತದೆ.ತಾವು ಏನು ಅಲ್ಲಿ ಮಾಡಿದ್ದೀರಿ ಎಂಬ ಬಗ್ಗೆಯೇ ಹೇಳುವುದಿಲ್ಲ ಇಲ್ಲಿ unforeseen, retrospectively ಎಂದು ತಂದರೆ ಇಲ್ಲಿ ಏನು ಬೇಕಾದರೂ ಮಾಡಿರಲಿ, ಅದು ಸರಿಯಾಗುವುದಿಲ್ಲ, ನೀವು ಮಾಡಿದ್ದೆಲ್ಲ ಸರಿ ಎನ್ನುವುದನ್ನು ನಾವು ಖಂಡಿತವಾಗಿ ಒಪ್ಪಿಕೊಳ್ಳಲು ಸಾಧ್ಯವಿಲ್ಲ, ಲೀಗಲ್ ಬೋರ್ಡ್‌ನಲ್ಲಿ ಏನೇನು ದುರುಪಯೋಗವಾಗಿದೆ ಎಂಬುದು ತಮಗೆಲ್ಲಾ ಗೊತ್ತಿದೆ. ವಿಚಾರಣೆಯಾಗಲಿ, ಕಾರುಗಳ ದುರುಪಯೋಗವಾಗಿರುವುದೆಲ್ಲಾ ಗೊತ್ತಿದೆ. ಅವುಗಳನ್ನೆಲ್ಲ ಈಗ ಸರಿ ಪಡಿಸಲು ನೀವು ಹೋಗಿದ್ದೀರಿ? ನಾವು ಇದರ ಬಗ್ಗೆ ಕೇಳಬೇಕಾಗುತ್ತದೆ.

ಅಲ್ಲಿ ಹಣದ ಮತ್ತು ಇತರೆ ಎಲ್ಲಾ ರೀತಿಯಾದ ದರುಪಯೋಗವಾಗಿದೆ. ಆ ದಿಕ್ಕಿನಲ್ಲಿ ಧುರುಪಯೋಗವಾಗಿರುವ ಹಣವನ್ನೆಲ್ಲ ರೆಗ್ಯುಲೇಟ್ ಮಾಡುತ್ತೇವೆಂದು ನೀವು ಈ ರೆಗ್ಯುಲೇಷನ್‌ನ್ನು ತರುವುದಾದರೆ ಇದು ಸರಿಯಾಗುವುದಿಲ್ಲ. ನೀವೇನು ರೆಗ್ಯುಲೇಷನ್‌ನ್ನು ಸರಪಡಿಸಲು ಯಾವ ಅನ್ಯಾಯವನ್ನು ಸರಿಪಡಿಸಲು ತಾವು ಹೋಗಿದ್ದೀರಿ ಅದರ ಬಗ್ಗೆ ನಮಗೆ ಮಾಹಿತಿ ಬೇಕಾಗುತ್ತದೆ. ಹಿಂದೆ ಇದ್ದಂಥ ನಿಮ್ಮ ಕಾನೂನು ಕಾರ್ಯದರ್ಶಿಯವರು ಅಡ್ವೋಕೇಟ್ ಜನರರ್‌ರವರು ಈ ಲೀಗಲ್ ಬೋರ್ಡ್ ಮೇಲೆ ವರದಿಯನ್ನು ಸಹ ಕೊಟ್ಟಿದ್ದಾರೆನ್ನತಕ್ಕ ವಿಚಾರವನ್ನು ತಿಳಿದುಕೊಂಡಿದ್ದೀರಿ. ಆದ್ದರಿಂದ ನಾನು ಕೇಳುತ್ತಿದ್ದೇನೆ ಇವುಗಳನ್ನೆಲ್ಲ ಸರಿಪಡಿಸುವುದಕ್ಕೋಸ್ಕರ ಇದನ್ನು ಮಾಡಿದ್ದೀರೋ ಅಥವಾ ಇದರಲ್ಲಿ ನಿಜವಾದ ಉದ್ದೇಶವಿದ್ದರೆ ನಾವೆಲ್ಲ ಸಹಕಾರ ಕೊಡೋಣ ಕಾನೂನಿನ ನೆರವು ಪ್ರತಿಯೊಬ್ಬರಿಗೂ ಸಹ ಬೇಕಾಗಿದೆ. ಆದರೆ ಕಾನೂನಿನ ನೆರವು ಸರಿಯಾಗಿ ಸಿಕ್ಕುತ್ತಿಲ್ಲ. ಆ ರೀತಿ ಸರಿಯಾಗಿ ಕಾನೂನಿನ ನೆರವು ಸಿಕ್ಕಬೇಕಾಗಿದ್ದರೆ ಏನೇನು ಮಾಡಬೇಕು ಎಂಬುದಕ್ಕೆ ತಮ್ಮ ಜೊತೆ ಸಹಕರಿಸಲು ನಾವು ಸಹ ಸಿದ್ದರಾಗಿದ್ದೇವೆ. ಒಂದು ಮಾತನ್ನು ಮಾನ್ಯ ಕಾನೂನು ಸಚಿವರು ತಿಳಿದುಕೊಳ್ಳಬೇಕು. ಅದೇನೆಂದರೆ ಇಷ್ಟು ವರ್ಷಗಳಾದರೂ ಸಹ ಕರ್ನಾಟಕದಲ್ಲಿ ಮಹಿಳಾ ವಕೀಲರ ವೇದಿಕೆಎಂಬುದು ಇದೆ ಎಂದು ಸಹ ಅವರಿಗೆ ಗೊತ್ತಿಲ್ಲ, ಮಂತ್ರಿಗಳಿಗೆ ಹೇಳಿ ಯಾಯಿತು, ಲೀಗಲ್ ಬೋರ್ಡ್‌ಗೆ ಹೇಳಿಯಾಯಿತು ಮಹಿಳಾ

ವಕೀಲರನ್ನು ಸೇರಿಸಿ ಕೊಂಡು ಇದನ್ನು ಮಾಡಬೇಕೆಂದು ಹೇಳಿಯಾಯಿತು. ಆದರೆ ಇದುವರೆಗೆ ಸಹ ಇದನ್ನು ಮಾಡಿಲ್ಲ. ಲೀಗಲ್ ಬೋರ್ಡಿಸವರನ್ನು ಸೇರಿಸಿಕೊಂಡು ಮಾಡುತ್ತಾರೆ. ಇವರನ್ನು ಬಿಡುತ್ತಾರೆ, ಆದ್ದರಿಂದ ನಾನು ತಾವೇನು ತರುತ್ತಿದ್ದೀರಿ ಅದರ ಬಗ್ಗೆ ತಿಳಿದುಕೊಳ್ಳಬೇಕಾಗುತ್ತದೆ. ಇಲ್ಲಿ ಏನೇನಾಗಿದೆ ಎಂಬುದನ್ನು ನೋಡಬೇಕಾಗುತ್ತದೆ, ವಿಚಾರಣೆ ಮಾಡಬೇಕಾಗುತ್ತದೆ.

ಆದ್ದರಿಂದ ತಾವು ಏನು ತರುತ್ತಿದ್ದೀರಿ ಅದರ ಬಗ್ಗೆ ದಯವಿಟ್ಟು ಹೇಳಿ. ನಮ್ಮನ್ನು ಸಹ ವಿಶ್ವಾಸಕ್ಕೆ ತೆಗೆದುಕೊಳ್ಳಿ. ಇಲ್ಲೇ ಅದನ್ನು ಕೊಡಬೇಕೆಂದಿಲ್ಲ, ಬೇಕಾದರೆ ಸಭಾಧ್ಯಕ್ಷರ ಕೊಠಡಿಯಲ್ಲಿ ಆದರು ಕೊಡಿ, ನಾವು ಅದನ್ನು ನೋಡಿ ನಂತರ ಅದಕ್ಕೆ ಒಪ್ಪಿಗೆಯನ್ನು ಕೊಡೋಣ. ಈ ರೀತಿ ಮಾಡುವುದರಲ್ಲಿ ತಪ್ಪೇನಿಲ್ಲ. ಆದರೆ ಮೊಗಮ್ಮಾಗಿ' with retrospective affect,' 'unforeseen' ಕಾಣದ ಕೈಯಲ್ಲಿ, ಆಗಬಾರದ್ದೆಲ್ಲ ಆಗಿದೆ. ಅವುಗಳನ್ನೆಲ್ಲ ಸರಿಪಡಿಸಲು ಮಾಡುತ್ತೇವೆಂದರೆ ದಯವಿಟ್ಟು ಇದನ್ನು ಒಪ್ಪುವುದಕ್ಕಾಗುವುದಿಲ್ಲ. ಆದ್ದರಿಂದ ತಾವು ದಯಮಾಡಿ ಮಾಹಿತಿಯನ್ನು ಕೊಡಬೇಕು, ಇದರ ಬಗ್ಗೆ ಪರಿಶೀನೆ ಮಾಡಿ ಮುಂದೆ ತೀರ್ಮಾನ ತೆಗೆದುಕೊಳ್ಳಣವೆಂದು ನಾನು ಕೇಳಿಕೊಳ್ಳುತ್ತಿದ್ದೇನೆ.

ಶ್ರೀ ವೈ. ರಾಮಕೃಷ್ಣ : ಇದರಲ್ಲಿ abuse of money ಆಗಿದೆಯಾ abuse of power, ನಲ್ಲಿ ಆಗಿದೆಯಾ ಅಥವಾ abuse in establishment ನಲ್ಲಿ ಈ ತರಹ ಆಗಿದೆಯೂ. ಈ ಮೂರು ಕ್ಯಾಟಗರಿಯಲ್ಲಿ ಏನೇನಾಗಿದೆ ಎಂಬ ಬಗ್ಗೆ ಕ್ಯಾಟಗಾರಿಕಲ್ ಆಗಿ ಹೇಳಿ.

ಒಬ್ಬ ಮಾನ್ಯ ಸದಸ್ಯರು : ಸನ್ಮಾನ್ಯ ಅಧ್ಯಕ್ಷರೆ, ಮಾನ್ಯ ಸಚಿವರೇನು ಈ ಬಿಲ್ಲನ್ನು ತಂದಿದ್ದಾರೆ, ಅದರ ಪ್ರಕಾರ ರೆಟ್ರಾಸ್‌ಪೆಕ್ಟೀವ್ ಎಫೇಕ್ಟ್‌ನ್ನು ಈ ಒಂದು ರೆಗ್ಯುಲೇಷನ್‌ಗೆ ಕೊಡುವುದರಿಂದ ಬಹಳಷ್ಟು ದೂರಗಾಮಿ ಪರಿಣಾಮವಾಗುತ್ತದೆ. ಆ ರೀತಿ ಅವರು ತರುವ ಮೊದಲು ಅದರ ಬಗ್ಗೆ ನಿರ್ದಿಷ್ಟವಾದ ಉದಾಹರಣೆಯನ್ನು ಕೊಡಬೇಕಾಗಿತ್ತು ಕೇವಲ ಕಾರಣಕ್ಕೆ ಅದು ಎಂದು ಹೇಳಬೇಕಾಗಿತ್ತು, ತಮ್ಮ ಈ statement of objat of rewards ಏನಿದೆ, ಇದರಲ್ಲಿ ಸ್ಪೆಸಿಫಿಕ್ಕಾಗಿ ಇಲ್ಲ. ಅಂತಹ ಪ್ರಸಂಗ ಏಕೆ ಬಂತು ಎಂಬುದನ್ನು ಹೇಳಬೇಕಾಗಿತ್ತು. ಅದನ್ನು ಹೇಳಲಾರದೆ ಇಂತಹ ಬಿಲ್ ತಂದಿದ್ದು ತೀರಾ ತಪ್ಪು ಅದಕ್ಕೆ ಇದರ ಬಗ್ಗೆ ಬಹಳಷ್ಟು ವಿಚಾರ ಮಾಡಿ. ಏಕೆಂದರೆ ಎಷ್ಟೋ ಕಾನೂನುಗಳು ಇವೆ. ಅದರಲ್ಲಿ ಈ ಒಂದು ಕಾನೂನಿನಲ್ಲಿ, ಕರ್ನಾಟಕ ಲೀಗಲ್ ಏಡ್ ಬೋರ್ಡ್ ಇದರಲ್ಲಿ ಈ ರೆಟ್ರಾನ್ಸೆಕ್ಟೀವ್ ಐಫೆಕ್ಟ್ ಇದೆ. ಅದಕ್ಕೆ ತಾವು ರೆಗ್ಯುಲೇಷನ್ ತರಬೇಕೆಂದು ಏಕೆ ಸರ್ಕಾರಕ್ಕೆ ಉದ್ದೇಶ ಮಾಡಿದ್ದು? ಇದರ ಬಗ್ಗೆ ಸ್ವಲ್ಪ ವಿವರಗಳನ್ನು ಹೇಳಬೇಕೆಂದು ಮಾನ್ಯ ಸಚಿವರಲ್ಲಿ ಕೇಳಿಕೊಳ್ಳುತ್ತೇನೆ.

ಶ್ರೀ ಎಂ.ಸಿ. ನಾಣಯ್ಯ : ಮಾನ್ಯ ಸಭಾಧ್ಯಕ್ಷರೆ ವಾಟಾಳ್ ನಾಗರಾಜ್‌ರವರು ಈ ಕಡೆ ಸ್ವಲ್ಪ ಗಮನಿಸಬೇಕು. ಮಾನ್ಯ ಸಭಾಧ್ಯಕ್ಷರೆ, ಹಿರಿಯರಾದ ರಾಮಕೃಷ್ಣರವರು ನನ್ನ ಸ್ಥಾನದಲ್ಲಿ ತಾವು ಕೆಲಸ ಮಾಡಿದ್ದೀರಿ, ಶ್ರೀಮಾನ್ ರಾಮಕೃಷ್ಣರವರು ತಮ್ಮ ಕಾಲದಲ್ಲಿ ಕೂಡ ಇದನ್ನು ಕಾರ್ಯರೂಪಕ್ಕೆ ತಂದಿದ್ದರಿ ಮತ್ತು ಒಳ್ಳೆಯ ಉತ್ತಮ ಕೆಲಸ ಮಾಡುತ್ತಿದ್ದೀರೆಂದು ನನಗೆ ಗೊತ್ತಿದೆ. ಶ್ರೀಮತಿ ಪ್ರಮೀಳಾ ನೇಸರ್ಗಿಯವರು ಏನೆಲ್ಲಾ ರೆಟ್ರಾಸ್ಪೆಕ್ಟೀವ್ ಎಫೆಕ್ಟ್ ಆಯಿತು, ಇದರಲ್ಲಿ ಕಾಣದ ಕೈ ಒಳಗಡೆ ಇದೆ ಮುಗುಮ್ಮಾಗಿ ನೀವು ಮಾಡುತ್ತೀರಿ ಎಂದು ಹೇಳಿದರು. ಯಾವುದೂ ಕಾಣದ ಕೈ ಇಲ್ಲ, ಮುಗುಮ್ಮಾಗಿಯೂ ಇಲ್ಲ, ಕಾಣದ ಕೈ ಇದ್ದರೆ ಅದನ್ನು ಕಾಣುವ ಹಾಗೆ

ಕಾರ್ಯಕ್ರಮ ಕೈಗೊಳ್ಳುತ್ತೇನೆ. ಈ ಕಾರ್ಯಕ್ರಮ ಮಾಡುತ್ತೇನೆ. ಕಾಣದ ಕೈ ಎಲ್ಲಾದರೂ ಇದ್ದರೆ ಅದು ಕಾಣುವ ಹಾಗೆ ಮಾಡುತ್ತೇನೆ. ಮುಗುಮ್ಮಾಗ್ಗಿ ಅಂತ ಹೇಳುತ್ತಾ ಇರತಕ್ಕಂಥಾದ್ದನ್ನು ಬಹುಶಃ ನಾನು ಇಲ್ಲಿ ಇರತಕ್ಕಂತಹ ಸಂದರ್ಭದಲ್ಲಿ ಅದನ್ನು ಮಾಡಲು ಬಿಡುವುದಿಲ್ಲ. ಇಷ್ಟು ಭರವಸೆಗಳು ನಾನು ನಿಮಗೆ ಕೊಡುತ್ತೇನೆ. ಇನ್ನೊಂದು ನೀವುಹೇಳಿರತಕ್ಕಂಥಾದ್ದು ಕಾನೂನು ನೆರವು ಮಂಡಳಿಯಲ್ಲಿ ಏಕೋ ಏನೋ ಗೊತ್ತಿಲ್ಲ ಅಖಿಲ ಭಾರತ ಮಹಿಳೆಯರ ಮಹಿಳಾ ವಕೀಲರ ಸಂಘ ಎಂದು ಇದೆ ಅದಕ್ಕೆ ಶ್ರೀಮತಿ ಪ್ರಮೀಳಾ ರವರು ಅಧ್ಯಕ್ಷರು ಕೂಡ ಆಗಿದ್ದಾರೆ. ನಾನು ಕಾನೂನು ಮಂತ್ರಿಯಾಗಿದ ಕೂಡಲೇ ಅದನ್ನು ನಾನೇ ಗುರುತು ಹಚ್ಚಿದೆ. ಅವರಿಗೆ ಈ ಸಾರಿ 15 ಸಾವಿರರೂಪಾಯಿ ಕೊಟ್ಟೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : 15 ಸಾವಿರ ಕೊಟ್ಟರಿ, ಆದರೆ ಕಾನೂನು ಕಾರ್ಯದರ್ಶಿ ಹತ್ತಿರ ಹೋದಾಗ ಅದು ಕಡಿಮೆಯಾಯಿತು, ಅಲ್ಲಿಂದ ಹಣಕಾಸು ಇಲಾಖೆಗೆ ಹೋದಾಗ ಕೇವಲ 5000 ರೂಪಾಯಿ ಬಂದಿದೆ. ಅದನ್ನು ನಾನು ಮಾತನಾಡುವಾಗ ಹೇಳಿದ್ದೇನೆ. ತಮ್ಮ ಆದೇಶಕ್ಕೆ ತಮ್ಮ ಅಧಿಕಾರಿಗಳು ಮಾನ್ಯತೆ ಕೊಟ್ಟಿಲ್ಲ. ಮಾಡಿಲ್ಲ ಅದರ ಬಗ್ಗೆ ನಾನು ಡಾಕ್ಯುಮೆಂಟ್ಸ್ ತಂದಿದ್ದೇನೆ, ಹೇಳುತ್ತೇನೆ.

ಶ್ರೀ ಎಂ.ಸಿ. ನಾಣಯ್ಯ : ಮಹಿಳೆಯರ ಮಹಿಳಾ ವಕೀಲರ ಸಂಘ ಬಿಟ್ಟು ನಾನು ಕೆಲಸ ಮಾಡುತ್ತಿಲ್ಲ. ನಾನೂಒಬ್ಬ ವಕೀಲ. ಮಹಿಳಾ ವಕೀಲರನ್ನು ಬಿಟ್ಟು ನಾವು ವಕೀಲರ ಹೋಗಿ ಕೆಲಸ ಮಾಡುವುದು, ಆ ಕೆಲಸ ಮಾಡುವುದಿಲ್ಲ. ಮತ್ತು ಲೀಗಲ್ ಏಡ ಬೋರ್ಡ್ ಯಾವುದು ಇದೆ, ಮಾನ್ಯ ಸಭಾಧ್ಯಕ್ಷರೆ, ನಾನು ಈಗಾಗಲೇ ತೀರ್ಮಾನ ತೆಗೆದುಕೊಂಡು ಬಿಟ್ಟಿದ್ದೇನೆ. ಅಲ್ಲಿ ಯಾರು ಅಧ್ಯಕ್ಷರಾಗಿರುತ್ತಾರೆ, ಪ್ರಮೀಳರವರ ಅಧ್ಯಕ್ಷರಾಗಿತ್ತಾರೆ ಅಂತ ಅಲ್ಲಿ ಯೂರು ಅಧ್ಯಕ್ಷರಾಗಿರುತ್ತಾರೆ ಅವರು ಅದರ ಸದಸ್ಯರಾಗಿರಬೇಕು. ನಾವು ಅವರು ಒಟ್ಟಿಗೇ ಈ ಸದಸ್ಯರಲ್ಲಿ 1978 ರಿಂದ 73 ರವರೆಗೆ ಕೂತಿದ್ದೇವೆ. ನನಗೆ ಗೊತ್ತಿದೆ ಅವರು ಹೇಗೆ ಕೆಲಸ ಮಾಡುತ್ತಾರೆ ಎಂದು. ನಿಮ್ಮನ್ನು ಕೇಳುತ್ತೇನೆ, ಯಾರು ಅಧ್ಯಕ್ಷರಾಗುತ್ತಾರೆ ಅವರಿಗೂ ಕೇಳುತ್ತೇನೆ. ಆದರೆ ಲೀಗಲ್ ಎಡ್ ಬೋರ್ಡ್‌ನಲ್ಲಿ ಈ ಹಿಂದೆ ಏನು ಅವ್ಯವಹಾರ ನಡೆದಿದೆ, ಅದರ ಬಗ್ಗೆ ಕೂಡ ನಾನು ಈಗಾಗಲೇ ಕೆಲವು ಕ್ರಮಗಳನ್ನು ಕೈಗೊಂಡಿದ್ದೇನೆ. ಇನ್ನು ಮುಂದಕ್ಕೆ ಹಿಂದೆ ನಡೆದಿರತಕ್ಕಂಥಾದ್ದು ಏನಿದೆ ಅದರ ಬಗ್ಗೆ ಕಾರ್ಯಕ್ರಮ ಕೈಗೊಳ್ಳುತ್ತೇನೆ. ಮುಂದೆ ನಡೆಯಲಿಕ್ಕೆ ಅದಕ್ಕೆ ಆಸ್ಪದ ಕೊಡುವುದಿಲ್ಲ. ಇದು ಮಾಡುತ್ತೇನೆ. ಇನ್ನು ಈಗ ರೆಗ್ಯುಲೇಷನ್ಸ್ ಏನು ಈ ರೆಟ್ರಾಸ್ಪೆಕ್ಟೀವ್ ಎಫೆಕ್ಟ್ ಎಂದು ಹೇಳಿ ಅವ್ಯವಹಾರ ಮಾಡಿದ್ದನ್ನು ತಿಂದಿದ್ದನ್ನು, ಕಾಣದ ಕೈ ಮಾಡಿರುವುದನ್ನು ಏನಾದರೂ ನೀವು ರೆಗ್ಯುಲರೈಸ್ ಮಾಡುವುದಕ್ಕೆ ಅಂದರೆ ಅಲ್ಲ, ಯಾವುದನ್ನಾದರೂ ನಾವು ರೆಗ್ಯುಲರೈಸ್ ಮಾಡಬೇಕಾದರೂ ಕೂಡ ರೆಟ್ರಾಸ್ಪೆಕ್ಟೀವ್ ಎಫೆಕ್ಟ್ ಆಗಿ ಈ ಸದನದ ಮುಂದೆ ನಾವು ಅದನ್ನು ಮಂಡಿಸಲೇಬೇಕಾಗುತ್ತದೆ. ದಯವಿಟ್ಟು ತಾವು ನೋಡಿ, ತಾವು ರೆಟ್ರಾಸ್ಪೆಕ್ಟೀವ್ ರೆಗ್ಯುಲೇಷನ್ ಮಾಡಬೇಕಾದರೂ ಈ ಸದನದ ಮುಂದೆ ಮಂಡಿಸಲೇಬೇಕಾಗುತ್ತದೆ.

ಎಲ್ಲಾ ಸದನದ ಸದಸ್ಯರ ಗಮನಕ್ಕೆ ತಂದೇ ಮಾಡಬೇಕಾಗುತ್ತದೆ. ಆದರೆ ಈಗ ತಂದಿರತಕ್ಕಂತಹ ಹಲವಾರು ಕಾರಣಗಳಲ್ಲಿ ಒಂದು ಕಾರಣ ಯಾವುದು ಅಂದರೆ, ಅಲ್ಲಿದ್ದಂಥ ಸಿಬ್ಬಂದಿ ಪೈಕಿ ಕೆಲವರು ನಿವೃತ್ತರಾಗಿದ್ದಾರೆ. ನಿವೃತ್ತಿಯಾಗಿರರುವವರಿಗೆ ಇವತ್ತು ಪೆನ್‌ಷನ್ ಕೊಡಲಿಕ್ಕೆ ಅಲ್ಲಿ ಕಾರ್ಯಕ್ರಮ ಇಲ್ಲ. ಬಹುಶಃ ಅದನ್ನು ಈಗ ಮಾಡಬೇಕಾಗುತ್ತದೆ. ಅದನ್ನು ಮಾಡಲಿಕ್ಕೋಸ್ಕರ ಮೊದಲನೆಯದಾಗಿ, ಈ ತರಹ ಎಲ್ಲಾದರೂ ವಿಚಾರಗಳು ಬಂದಾಗ ಬಹುಶಃ ಅದರ ಬಗ್ಗೆ ಕಾರ್ಯಕ್ರಮ ಕೈಗೊಳ್ಳಲಿಕ್ಕೆ

ಈ ಒಂದು ತಿದ್ದುಪಡಿಯನ್ನು ತಂದಿದ್ದೀವಿ. ಅದರಿಂದ ರೆಗ್ಯುಲೇಷನ್ ನಿವೃತ್ತಿಯಾದವರಿಗೆ ಪೆನ್‌ಷನ್ ಕೊಡಲಿಕ್ಕೆ ಒಂದು ಕಾರ್ಯಕ್ರಮ ಹಾಕಿಕೊಳ್ಳಬೇಕೆಂದು ಹೇಳತಕ್ಕಂತಹ ಹಿನ್ನಲೆಯಲ್ಲಿ ನಾನು ಇದನ್ನು ತಂದಿದ್ದೇನೆ. ಇಷ್ಟು ಭರವಸೆಯನ್ನು ಕೊಡುತ್ತೇನೆ. ಮಾನ್ಯ ಸಭಾಧ್ಯಕ್ಷರೆ, ಯಾವುದೇ ಈ ತರಹದ ಗುಟ್ಟಾಗಿ ಮಾಡಿ ಸದನದ ಮುಂದೆ ತರದೆ ನಾವು ಬಿಡುವುದಿಲ್ಲ. ಆ ಕೆಲಸವನ್ನು ನಾವು ಮಾಡುವುದಿಲ್ಲ ಆದ್ದರಿಂದ ಇದಕ್ಕೆ ತಮ್ಮ ಅ ಅನುಮತಿಯನ್ನು ಕೋರುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆದರೆ

"1995ನೇ ಸಾಲಿನ ಕರ್ನಾಟಕ ಕಾನೂನು ನೆರವು ಮಂಡಳಿ ( ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸುವುದು"

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು**

**ಖಂಡ ಖಂಡವಾಗಿ ವಿಧೇಯಕವನ್ನು ಪರ್ಯಾಲೋಚಿಸುವುದು**

**ಖಂಡ 2 ರಿಂದ 3 ರವರೆಗೆ**

ಉಪಾಧ್ಯಕ್ಷರು : "ಖಂಡ 2 ರಿಂದ 3 ರವರೆಗೆ ಎರಡೂ ಸೇರಿದಂತೆ ಈ ವಿಧೇಯಕದ ಅಂಗವಾಗಿರುತ್ತದೆ."

**ಪ್ರಸ್ತಾಪ ಅಂಗೀಕರಿಸ್ಪಟ್ಟಿತು**

**(ಖಂಡ 2 ರಿಂದ 3 ರವರೆಗೆ ಎರಡೂ ಸೇರಿದಂತೆ ವಿಧೇಯಕಕ್ಕೆ ಸೇರಿಸಲಾಯಿತು)**

**ಖಂಡ 1 ಇತ್ಯಾದಿ**

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ:

"ಮೊದಲನೆಯ ಖಂಡ ದೀರ್ಘ ಶೀರ್ಷಿಕೆ, ಪ್ರಸ್ತಾವನೆ ಹಾಗೂ ಅಧಿನಿಯಮಗೊಳಿಸುವ ಸೂತ್ರ ಸಂಹಿತೆ ವಿಧೇಯಕದ ಭಾಗವಾಗಿರುತ್ತದೆ."

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು**

(ಮೊದಲನೆಯ ಖಂಡ, ದೀರ್ಘ ಶೀರ್ಷಿಕೆ ಪ್ರಸ್ತಾವನೆ ಹಾಗೂ ಅಧಿನಿಯಮ ಗೊಳಿಸುವ ಸೂತ್ರ ಸಂಹಿತೆಗಳನ್ನು ವಿಧೇಯಕಕ್ಕೆ ಸೇರಿಸಲಾಯಿತು)

**ಪ್ರಸ್ತಾವದ ಅಂಗೀಕಾರ**

ಶ್ರೀ ಎಂ.ಸಿ. ನಾಣಯ್ಯ (ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ವಾರ್ತಾ ಮತ್ತು ಪ್ರಚಾರ ಮಂತ್ರಿಗಳು) ಮಾನ್ಯ ಅಧ್ಯಕ್ಷರೆ, 1995 ನೇ ಸಾಲಿನ ಕರ್ನಾಟಕ ಕಾನೂನು ನೆರವು ಮಂಡಳಿ (ತಿದ್ದುಪಡಿ) ವಿಧೇಯಕವನ್ನು ಅಂಗೀಕರಿಸಬೇಕೆಂದು ಕೋರುತ್ತೇನೆ.

ಉಪಾಧ್ಯಕ್ಷರು : ಪ್ರಸ್ತಾಪ ಏನೆಂದರೆ.

"1995 ರ ಕರ್ನಾಟಕ ಕಾನೂನು ನೆರವು ಮಂಡಳಿ (ತಿದ್ದುಪಡಿ) ವಿಧೇಯಕವನ್ನು ತಿದ್ದುಪಡಿ ಮಾಡಿರುವಂತೆ ಅಂಗೀಕರಿಸುವುದು"

**ಪ್ರಸ್ತಾಪ ಅಂಗೀಕರಿಸಲ್ಪಟ್ಟಿತು ಮತ್ತು ಮಸೂದೆಗೆ ಒಪ್ಪಿಗೆ ನೀಡಲಾಯಿತು.**

ಉಪಾಧ್ಯಕ್ಷರು : ಈಗ ಮಾನ್ಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಮಂತ್ರಿಗಳು ವಿಧೇಯಕವನ್ನು ಮಂಡಿಸುವುದು.

ಶ್ರೀ ಎಸ್. ನಂಜಪ್ಪ : ಮಾನ್ಯ ಅಧ್ಯಕ್ಷರೆ, ಈ ಬಿಲ್ಲನ್ನು ಚರ್ಚೆಗೆ ತೆಗೆದುಕೊಳ್ಳಬೇಕಾಗಿದೆ. ಇದರಲ್ಲಿ 20 ವಿಧಿಗಳಿವೆ. ನಾವು ಸ್ವಲ್ಪ ಮಾತನಾಡಬೇಕು. ಆದರೆ ಈಗ ನಾವು ಅದನ್ನು ನೋಡಿ ಓದಿ ಮಾತನಾಡುವುದಕ್ಕೆ ಅವಕಾಶ ಇಲ್ಲ. ಇದಕ್ಕೆ ಸಹಕಾರ ಕೊಡಬಾರದು ಎರಡು ಅಲ್ಲ ಆದರೆ ಎರಡು ದಿನ ಸಮಯ ಬೇಕಾಗುತ್ತದೆ. ಇದನ್ನು ನಾಡಿದ್ದು ಚರ್ಚೆಗೆ ತೆಗೆದುಕೊಳ್ಳಬೇಕಾಗುತ್ತದೆ. ಕೆಲವು ಇನ್ ಸಫಿಷಿಯಂಟ್ ಆಗಿದೆ. ಆದ್ದರಿಂದ ನಾಡಿದ್ದು ಶುಕ್ರವಾರ ತೆಗೆದುಕೊಂಡು ಚರ್ಚೆ ಮಾಡೋಣ.

ಶ್ರೀ ಎಂ.ಸಿ. ನಾಣಯ್ಯ : ಇದಕ್ಕೆ ಒಪ್ಪಿಗೆ ಇದೆ.

ಶ್ರೀ ವಾಟಾಳ್ ನಾಗರಾಜ್ : ಮಹಿಳೆಯರ ಬಗ್ಗೆ ತಕರಾರು ಇಲ್ಲದೆ ನೀವು ಒಪ್ಪಿಕೊಂಡದ್ದು ಇದೊಂದೇ.

ಶ್ರೀ ಎಂ.ಸಿ. ನಾಣಯ್ಯ : ಮಹಿಳೆಯರ ಬಗ್ಗೆ ನಮಗೂ ನಿಮಗೂ ಇರತಕ್ಕಂತಹ ಅಭಿಮಾನವನ್ನು ಇದು ಎತ್ತಿ ತೋರಿಸುತ್ತದೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಮಹಿಳೆಯರು ಎಂದು ಬಂದಾಗ ಅದಕ್ಕೆ ಸಹಾಯ ಮಾಡುವುದಕ್ಕೆ ಮಾತನಾಡುವುದಕ್ಕೆ ಎಲ್ಲರೂ ಒಪ್ಪುತ್ತಾರೆ.

ಶ್ರೀಮತಿ ಬಿ.ಟಿ. ಲಲಿತಾ ನಾಯಕ್ (ಮಹಿಳಾ ಮತ್ತು ಮಕ್ಕಳ ಕಲ್ಯಾಣ ರಾಜ್ಯಸಚಿವರು) : ಒಪ್ಪಿಕೊಳ್ಳಲಿ ಒಪ್ಪಿಕೊಂಡರೆ ಬಹಳ ಸಂತೋಷ.ನಾಳೆ ಪಾಸ್ ಮಾಡುತ್ತೇವೆ ಎಂದು ಒಪ್ಪಿಕೊಂಡಿದ್ದಾರೆ. ಇರದೇ ಪಾಸ್ ಆದರೆ ಬಹಳ ಸಂತೋಷ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಇದಕ್ಕೆ ಕೊಟ್ಟಿರುವ ಹಣ ಬಹಳ ಕಡಿಮೆ ಇದೆ. ಇದರ ಬಗ್ಗೆ ನೀವು ವಿಚಾರ ಮಾಡಿ ಮತ್ತೆ ಅಮೆಂಡ್‌ಮೆಂಟ್ ಮಾಡಿ, ತನ್ನ ನಾವು ಸಲಹೆ ಕೊಡುತ್ತೇವೆ. ನೀವು ಈಗ ತಂದಿರತಕ್ಕಂಥದ್ದು ಬಹಳ ಒಳ್ಳೆಯದು. ಅದಕ್ಕೆ ಇನ್ನೊಂದು ಹಣ ಕೊಡುವುದಕ್ಕೋಸ್ಕರ....

ಶ್ರೀ ಎಂ.ಸಿ. ನಾಣಯ್ಯ : ಮಾನ್ಯ ಸಭಾಧ್ಯರಕ್ಷರೆ, ನಾವು ತಂದಿರತಕ್ಕ ಈ ವಿಧೇಯಕ ಯಾವುದಿದೆ, ಈ ನ್ಯಾಷನಲ್ ವಿಮೆನ್ಸ್ ಕಮೀಷನ್ ಆಕ್ಟ್ ಯಾವುದು ಇದೆ, ಅದನ್ನು ಸಂಪೂರ್ಣವಾಗಿ ಅಳವಡಿಸಿಕೊಂಡಿದ್ದೇವೆ. ಬೇರೆ ಏನೂ ಇಲ್ಲ ಅದನ್ನು ಪೂರ್ತಿ ಅಳವಡಿಸಿಕೊಂಡಿದ್ದೇವೆ. ಅದನ್ನು ಚರ್ಚೆ ಮಾಡಿ ಇನ್ನು ಏನಾದರೂ ಹೊಸ ಸಲಹೆಗಳಿದ್ದರೆ ಕೊಡಲಿ. ಅವರನ್ನು ಎತ್ತರಕ್ಕೆ ತರಬೇಕಾದರೆ ತಾವು ಸಲಹೆಗಳನ್ನು ಕೊಡಬೇಕಾಗುತ್ತದೆ.

ಶ್ರೀ ವೈ. ರಾಮಕೃಷ್ಣ : ಅದಕ್ಕಿಂತ ಹೆಚ್ಚಾಗಿ ಅಧಿಕಾರವನ್ನು ಕೊಡಬೇಕು. ಅದು ಕೊಟ್ಟಿಲ್ಲ ವೆಂದು ಹೇಳುವುದೇ ನಮ್ಮ ಅಭಿಪ್ರಾಯ.

ಶ್ರೀ ಎಂ.ಸಿ. ನಾಣಯ್ಯ : ಕೊಡಬಹುದು. ಅದಕ್ಕೆ ಮುಂದೆ ತಿದ್ದುಪಡಿ ಬರುತ್ತದೆ.

ಉಪಾಧ್ಯಕ್ಷರು : ಇನ್ನು ರಾಜ್ಯಪಾಲರ ಭಾಷಣದ ಮೇಲೆ ಚರ್ಚೆ ಪ್ರಾರಂಭಿಸಿದೆ.

## ಉಪಾಧ್ಯಕ್ಷರ ಅನುಮತಿ ಕೋರಿ ಪ್ರಸ್ತಾಪಿಸಲಾದ ವಿಷಯ

### ಶ್ರೀ ವೈ.ಕೆ. ರಾಮಯ್ಯ ಮಾಜಿ ಶಾಸಕರು, ಇವರನ್ನು ಜೈಲಿನಿಂದ ಬಿಡುಗಡೆ ಮಾಡುವ ಬಗ್ಗೆ

ಶ್ರೀ ವಾಟಾಳ್ ನಾಗರಾಜ್:ಮಾನ್ಯ ಉಪಾಧ್ಯಕ್ಷರೆ, ರಾಜ್ಯಪಾಲರ ಭಾಷಣಕ್ಕೆ ವಂದನೆ ಸಲ್ಲಿಸುವ ಚರ್ಚೆಗೆ ಬರುವುದಕ್ಕಿಂತ ಮುಂಚೆ ತಮ್ಮಲ್ಲಿ ಒಂದು ಮನವಿ. ಶ್ರೀಮಾನ್ ವೈ.ಕೆ. ರಾಮಯ್ಯ ನವರನ್ನು ಜೈಲಿನಿಂದ ಬಿಡುಗಡೆ ಮಾಡಿದ್ದೀರೋ ಅಥವಾ ಇಲ್ಲವೋ ಎನ್ನುವುದು ನಮಗೆ ಇನ್ನೂ ಖಾತರಿಯಾಗಿಲ್ಲ. ಮತ್ತು ಅವರು ಒಂದು ಪತ್ರವನ್ನು ಬರೆದಿದ್ದಾರೆ. ಆ ಪತ್ರದಲ್ಲಿ ಏನು ಬರೆದಿದ್ದಾರೆ ಎಂದರೆ "ನನ್ನ ಮೇಲೆ ಸತ್ಯಕ್ಕೆ ದೂರವಾದ ಅಪರಾಧಗಳನ್ನು ಹೊರಿಸಿ ಮೊಕದ್ದಮೆಗಳನ್ನು ಹಾಕಿದ್ದಾರೆ. ಅಕ್ರಮ ಪ್ರವೇಶ, ಅಸಭ್ಯ ವರ್ತನೆ, ಪ್ರಾಣ ಬೆದರಿಕೆ ಇನ್ನೂ ಅನೇಕ ಅಪರಾಧಗಳನ್ನು ನನ್ನ ಮೇಲೆ ಹೊರಿಸಿ ಮೊಕದ್ದಮೆಗಳನ್ನು ಹಾಕಿದ್ದಾರೆ." ಆ ಮೊಕದ್ದಮೆಗಳನ್ನು ಹಾಕತಕ್ಕದ್ದು ಸರಿಯಲ್ಲ ಎಂದು ನಾನೇ ಹೇಳುತ್ತೇನೆ.

ಉಪಾಧ್ಯಕ್ಷರು : ನೀವು ಯಾವ ನಿಯಮದ ಕೆಳಗೆ ಇದನ್ನು ಪ್ರಸ್ತಾಪ ಮಾಡುತ್ತೀರಿ?

ಶ್ರೀ ವಾಟಾಳ್ ನಾಗರಾಜ್ : ತಮಗೆ ಮನವಿ ಮಾಡಿಕೊಳ್ಳುತ್ತಿದ್ದೇನೆ.

ಉಪಾಧ್ಯಕ್ಷರು : ಇದು ಜೀರೋ ಅವರ್ ಅಲ್ಲ.

ಶ್ರೀ ವಾಟಾಳ್ ನಾಗರಾಜ್ : ನಾನ ಒಪ್ಪುತ್ತೇನೆ ಆದರೆ ಇದು ಒಂದು ಅತ್ಯಂತ ವಿಚಾರ ಇದನ್ನು ತಾವು ಪರಿಗಣನೆ ಮಾಡಬೇಕು. ಏಕೆಂದರೆ ಒಬ್ಬರು ಮಾಜಿ ಸದಸ್ಯರಾದವರು ಒಂದು ಪ್ರಾಮಾಣಿಕ ಪ್ರಯತ್ನ ಮಾಡಿ...

ಉಪಾಧ್ಯಕ್ಷರು : ನಿಮಗೆ ಅವಕಾಶ ಮಾಡಿಕೊಡುತ್ತೇನೆ, ಇದನ್ನು ಮಧ್ಯಾಹ್ನ ತೆಗೆದುಕೊಳ್ಳೋಣ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಮಾನ್ಯ ಮಂತ್ರಿಗಳು ಹೇಳಬೇಕಲ್ಲ.ಅವರು ಇಲ್ಲಿ ಇರಬೇಕು. ಒಂದು ಪಕ್ಷದ ಮುಖಂಡರು....

(ಗೊಂದಲ)

ಶ್ರೀ ಹೆಚ್.ಎನ್. ನಂಜೇಗೌಡ : ಸನ್ಮಾನ್ಯ ಗೃಹಸಚಿವರು ಇಲ್ಲೇ ಇದ್ದಾರೆ.

(ಗೊಂದಲ)

ಒಬ್ಬ ಮಾನ್ಯ ಸದಸ್ಯರು : ಮಾನ್ಯ ಅಧ್ಯಕ್ಷರೆ, ದಯಮಾಡಿ ಇದಕ್ಕೆಲ್ಲಾ ಅವಕಾಶ ಮಾಡಿಕೊಡಬಾರದು. ಪದೇ ಪದೇ ಇದನ್ನು ಮಾತನಾಡತಕ್ಕಂಥಾದ್ದು ಅಲ್ಲ.

(ಗೊಂದಲ)

ಶ್ರೀಮತಿ ಪ್ರಮೀಳಾ ನೇಸರ್ಗಿ : ಅವರು [illegible] ಯಾವುದೇ ಸಂತೋಷಕ್ಕೋಸ್ಕರ ಹೋಗಿಲ್ಲ, ಮಾನ್ಯ ಗೃಹಮಂತ್ರಿಗಳು ಹೇಳಲಿ. ಅವರ ಕೇಸ್‌ನ್ನು ವಿತ್ತಡ್ರಾ ಮಾಡಿ ಅವರನ್ನು ಮನೆಗೆ ಕಳುಹಿಸಿಕೊಡಿ. ಪಾಪ ಹೋಗಲಿ.

(ಗೊಂದಲ)

ಶ್ರೀಮತಿ ಪ್ರಮೀಳಾ ನೇಸರ್ಗಿ : ಮಾನ್ಯ ವೈ.ಕೆ. ರಾಮಯ್ಯನವರು ಒಂದು ರಾಜಕೀಯ ಪಕ್ಷದ ನಾಯಕರು.

(ಗೊಂದಲ)

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಉಪಾಧ್ಯಕ್ಷರೆ, ತಮಗೆ ಅವಕಾಶ ಮಾಡಿ ಕೊಡತಕ್ಕಂಥ ಸಂಪೂರ್ಣ ಅಧಿಕಾರ ಇದೆ. ನಾನು ಈ ಪ್ರಶ್ನೆಯನ್ನು ಏಕೆ ಕೇಳುತ್ತಿದ್ದೇನೆ ಎಂದರೆ ಈಗ ಜಾಮೀನು ಕೊಟ್ಟು ನೀವು ಹೋಗಿ, ನಾವು ಬಿಡುವುದಿಲ್ಲ, ಎನ್ನುತ್ತಿದ್ದಾರೆ. ನಾನು ತಮಗೆ ಬರೆದಿರತಕ್ಕಂಥ ಪತ್ರದ ಬಗ್ಗೆ ಹೇಳಿಬಿಡುತ್ತೇನೆ.

(ಗೊಂದಲ)

ಶ್ರೀ ಜಿ. ಬಸವಣ್ಣಪ್ಪ : ಇದು ಒಂದು ಪಕ್ಷದ ಜವಾಬ್ದಾರಿ.

(ಗೊಂದಲ)

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಉಪಾಧ್ಯಕ್ಷರೆ, ನಿಮ್ಮ ಸಹಕಾರಕ್ಕೆ ನಾನು ಬರುತ್ತೇನೆ. ಮಾನ್ಯ ವೈ.ಕೆ. ರಾಮಯ್ಯನವರನ್ನು ನಾವು ಜೈಲಿಗೆ ಕಳುಹಿಸಿಲ್ಲ ಅವರೇ ಹಠಮಾಡಿ ಜೈಲಿಗೆ ಹೋಗಿದ್ದಾರೆ. ನಾನು ಏನು ಮಾಡಲಿ ಎಂದು ಮಾನ್ಯ ಗೃಹ ಸಚಿವರು ಹೇಳಿದ್ದಾರೆ. ಆದರೆ, ಆ ಮಾತು ಸತ್ಯಕ್ಕೆ ದೂರವಾದುದು ಎಂದು ರಾಮಯ್ಯನವರು ಹೇಳಿದ್ದಾರೆ. ಅವರ ಮೇಲೆ 4-5 ಮೊಕದ್ದಮೆಗಳನ್ನು ಹಾಕಿದ್ದಾರೆ. ಅಕ್ರಮ ಕೂಟ, ಅಕ್ರಮ ಪ್ರವೇಶ, ಅಸಭ್ಯ ವರ್ತನೆ, ಪ್ರಾಣ ಬೆದರಿಕೆ, ಇದು ಇಷ್ಟೂ ಸತ್ಯಕ್ಕೆ ದೂರವಾದುದು ಎಂದು ನಾನು ಹೇಳುತ್ತೇನೆ, ರಾಮಯ್ಯನವರು ಹೇಳುತ್ತಾರೆ. ಇದರಲ್ಲಿ ಏನೂ ಅನುಮಾನ ಇಲ್ಲ. ಮಾನ್ಯ ಗೃಹಮಂತ್ರಿಗಳ ಆತ್ಮದಲ್ಲೂ ಇದು ಇಲ್ಲ ಎಂದು ಅವರು ಒಪ್ಪಿಕೊಂಡಿದ್ದಾರೆ. ಆದರೆ ಬಹಿರಂಗವಾಗಿ ವಿಧಿ ಇಲ್ಲ ಅವರು ಏನು ಹೇಳುತ್ತಾರೇ ಅದು ಅವರಿಗೆ ಸೇರಿದ್ದು. ಆದರೆ ಒಂದು ಮಾತ್ರ ತಮಗೆ ಹೇಳುತ್ತೇನೆ, ಈ ರೀತಿ ಒಬ್ಬ ಜವಾಬ್ದಾರಿಯುತವಾದರತರ ಈ ರಾಜ್ಯದ ಮತ್ತು ಈ ಸದನದ ಮಾಜಿ ಶಾಸಕರು ಹಾಗೂ ಮಂತ್ರಿಗಳಾಗಿದ್ದವರ ಬಗ್ಗೆ ರಾಜಕೀಯಕ್ಕಿಂತ ಹೆಚ್ಚಾಗಿ ಪೂರ್ವಗ್ರಹ ಪೀಡಿತವಾಗದೆ ಸರ್ಕಾರ ಪ್ರಾಮಾಣಿಕವಾದಂತಹ ಒಂದು ಚಿಂತನೆ ಮಾಡಬೇಕು. ಆದುದರಿಂದ ಮಾನ್ಯ ಅಧ್ಯಕ್ಷರೆ, ಗೃಹಸಚಿವರು ಹಾಕಿರತಕ್ಕಂಥ ಮೊಕದ್ದಮೆಗಳು ಇವರ ಮೇಲೆ ಅಲ್ಲ. ಈ ಮೊಕದ್ದಮೆಗಳನ್ನು ಹಾಕಬೇಕಾದರೆ....

ಉಪಾಧ್ಯಕ್ಷರು : ನಾನು ಏನು ಮಾಡಬೇಕು ಎಂದು ಸಲಹೆ ಮಾಡಿ.

ಶ್ರೀ ವಾಟಾಳ್ ನಾಗರಾಜ್ : ತಾವು ಏನು ಮಾಡಬೇಕು ಎಂದು ಹೇಳುತ್ತೇನೆ.

(ಗೊಂದಲ)

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಉಪಾಧ್ಯಕ್ಷರೆ, ತಾವು ಏನು ಮಾಡಬೇಕು ಎಂದು ತಮ್ಮ ಗಮನಕ್ಕೆ ತರುತ್ತೇನೆ. ಮಾನ್ಯ ಸಂಸದೀಯ ವ್ಯವಹಾರಗಳ ಸಚಿವರು ಇಲ್ಲಿ ಇದ್ದಾರೆ. ಮಾನ್ಯ ಗೃಹ ಸಚಿವರು ಇಲ್ಲೇ ಇದ್ದಾರೆ. ಪ್ರಾಣ ಭಯ, ?ಯಾರಿಗೆ? ಯಾರ ಮೇಲೆ? ಪ್ರಾಣ ಬೆದರಿಕೆ.?

ಉಪಾಧ್ಯಕ್ಷರು : ಮಾನ್ಯ ವಾಟಾಳ್ ನಾಗರಾಜರವರೇ ನನಗೆ ಸ್ವಲ್ಪ ಅವಕಾಶ ಕೊಡುತ್ತೀರಾ? ಮಾನ್ಯ ನಂಜೇಗೌಡರನ್ನು ಕೇಳುತ್ತೇನೆ, ಇಲ್ಲಿ ನಾನು ಹೇಗೆ ಕೆಲಸ ಮಾಡಬೇಕು ಎಂದು ತಾವು ಸಲಹೆ ಮಾಡಬೇಕು. ಇಲ್ಲವೇ ಇದನ್ನು ಕಾನೂನಿನ ಚೌಕಟ್ಟಿನೊಳಗೆ ತೆಗೆದುಕೊಂಡು ಬನ್ನಿ. ಹೀಗೆ ಪ್ರಸ್ತಾಪ ಮಾಡಿದರೆ ಸಭೆ ನಡೆಸುವುದು ಹೇಗೆ?

ಶ್ರೀ ಹೆಚ್.ಎನ್. ನಂಜೇಗೌಡ : ನಿನ್ನೆ ಇದರ ಬಗ್ಗೆ ಜೌಪಚಾರಿಕವಾದ ಚರ್ಚೆಯಾಯಿತು. ಈಗ ಮಾನ್ಯ ಗೃಹ ಸಚಿವರು ಏನಾದರೂ ಹೇಳುವುದಿದ್ದರೆ ಹೇಳಲಿ, ಇಲ್ಲದಿದ್ದರೆ, ಮುಂದಿನ ಬಿಸಿನೆಸ್ ತೆಗೆದುಕೊಳ್ಳಬಹುದು.

ಉಪಾಧ್ಯಕ್ಷರು : ತಾವು ಹಿರಿಯರಿದ್ದೀರಿ, ತಾವೇ ಸಲಹೆ ಮಾಡಿ.

ಶ್ರೀ ವಾಟಾಳ್ ನಾಗರಾಜ್ : ತಮ್ಮ ಮಾತನ್ನು ನಾನು ಒಪ್ಪುತ್ತೇನೆ. ಅದರಲ್ಲಿ ಏನು ಎರಡು ಅಭಿಪ್ರಾಯವಿಲ್ಲ.

ಶ್ರೀ ಪಿ.ಜಿ.ಆರ್. ಸಿಂಧ್ಯಾ (ಗೃಹ ಸಚಿವರು) : ಸನ್ಮಾನ್ಯ ಉಪಾಧ್ಯಕ್ಷರೆ, ಸನ್ಮಾನ್ಯ ವೈ.ಕೆ. ರಾಮಯ್ಯ ನವರ ಬಂಧನದ ವಿಚಾರದಲ್ಲಿ ಈ ಸರ್ಕಾರ ಪರಿಶೀಲನೆ ಮಾಡುತ್ತದೆ ಎನ್ನುವ ಒಂದು ಮಾತನ್ನು ನಾನು ಮಾನ್ಯ ವಾಟಾಳ್ ನಾಗರಾಜ್‌ರವರು ಮತ್ತು ನಂಜೇಗೌಡರು ಪ್ರಸ್ತಾಪ ಮಾಡಿದಾಗ ಹೇಳಿದ್ದೆ. ಇದನ್ನು ಹೇಳಿದ ಮೇಲೆ ಪುನಃ ಅವರು ಪ್ರಸ್ತಾಪ ಮಾಡಿದ್ದಾರೆ. ಕಾರಾಗೃಹದಿಂದ ವೈ.ಕೆ. ರಾಮಯ್ಯನವರು ಪತ್ರ ಬರೆದಿದ್ದಾರೆಂದು ನಾಗರಾಜ್‌ರವರು ಪತ್ರವನ್ನು ತಮ್ಮ ಮೂಲಕ ನನಗೆ ಕಳುಹಿಸುಕೊಟ್ಟಿದ್ದಾರೆ. ಇದಾದ ನಂತರ ನಾನು ಪೋಲೀಸ್ ಅಧಿಕಾರಿಗಳನ್ನು ಕರೆಸಿದೆ. ಏಕೆಂದರೆ ಈ ಸದನದಲ್ಲಿ ಯಾವುದೇ ವಿಚಾರ ಪ್ರಸ್ತಾಪ ಮಾಡಿದಮೇಲೆ ಬಹಳ ಜನ ಶಾಸಕರುಗಳು ಇದನ್ನು ಎತ್ತಿದ ಮೇಲೆ, ಅವರನ್ನು ಬಂಧಿಸಿದಂತರ ಅಧಿಕಾರಿಗಳನ್ನು ಪೋಲೀಸ್ ಕಮಿಷನರ್‌ರನ್ನು ಕರೆದು ಸಭಾಧ್ಯಕ್ಷರ ಒಪ್ಪಿಗೆ ಪಡೆದು, ಅವರ ಕೊಠಡಿಯಲ್ಲಿ ಇವತ್ತು ಸಭೆಯನ್ನು ಮಾಡಿದ್ದೇವೆ. ವಾಸ್ತವಾಂಶವೆಂದರೆ ಅವತ್ತು ಮಾನ್ಯ ವೈ.ಕೆ. ರಾಮಯ್ಯನವರು ಪೊಲೀಸ್ನವರಿಗೆ ಯಾವುದೇ ರೀತಿಯ ವಿಚಾರವನ್ನು ತಿಳಿಸದೆ ಮುಷ್ಕರವನ್ನು ಮಾಡಿದರು. ಅವರಿಗೆ ಮಾಡತಕ್ಕಂಥ ಹಕ್ಕಿದೆ. ಮುಷ್ಕರವನ್ನು ಮಾಡಿದರು. ಹೇಮಾವತಿ ನೀರನ್ನು ತುಮಕೂರಿಗೆ ಕೊಡತಕ್ಕಂಥ ವಿಚಾರದಲ್ಲಿ ಸರ್ಕಾರ ಅದಕ್ಕೆ ಬೇಕಾಗಿರತಕ್ಕಂಥ ಹಣ ಮತ್ತು ಆಗುತ್ತಿರತಕ್ಕಂಥ ಕಾಮಗಾರಿಯಲ್ಲಿ ತ್ವರಿತವಾಗಿ ಕೆಲಸವಾಗುವ ವಿಚಾರದಲ್ಲಿ ಯಾವುದೇ ರೀತಿಯಾದ ಅಡೆತಡೆಗಳನ್ನು ಮಾಡುವುದಿಲ್ಲ. ಈ ಸರ್ಕಾರಕ್ಕೆ ನೀರನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬೇಕು, ತುಮಕೂರಿಗೆ ನೀರು ಕೊಡಬೇಕು ಎನ್ನುವುದು ನಮಗೆಲ್ಲರಿಗೆ....

ಶ್ರೀ ಜಿ.ಎಸ್. ಶಿವನಂಜಪ್ಪ : ಎಂದು ಪ್ರಾರಂಭ ಮಾಡುತ್ತೀರಿ ಎಂದು ಹೇಳಿಬಿಡಿ ಸಾಕು.

ಶ್ರೀ ಪಿ.ಜಿ.ಆರ್. ಸಿಂಧ್ಯಾ : ಮಾನ್ಯ ಶಿವನಂಜಪ್ಪನವರು ಬಹಳ ಹಿರಿಯ ಸದಸ್ಯರು. ತಾವು ದಯವಿಟ್ಟು ನಾನು ಹೇಳುವುದನ್ನು ಕೇಳಿದರೆ ಆದಾದನಂತರ ಅವರು ಹೇಳುವುದನ್ನು ನಾನು ಕೇಳುವುದಕ್ಕೆ ತಯಾರಿದ್ದೇನೆ. ಹೇಮಾವತಿ ಕೆಲಸಗಳು ತುಮಕೂರಿನ ಜಿಲ್ಲೆಯಲ್ಲಿ ನಿಂತುಹೋಗಿವೆ. ಬೇಗ ಮಾಡಬೇಕು ಪ್ರಾರಂಭ ಮಾಡಿಸಬೇಕು ಎಂದು ಕೇಳುತ್ತಿದ್ದಾರೆ. ಇದರಲ್ಲಿ ರಾಜಕೀಯದ ಪ್ರಶ್ನೆ ಇಲ್ಲ. ಇಲ್ಲಿ ಯಾವ ರಾಜಕೀಯ ಮಾಡತಕ್ಕಂಥ ಅಗತ್ಯ ಇಲ್ಲ. ನಮ್ಮ ಮುಖ್ಯಮಂತ್ರಿಗಳು ಸ್ಪಷ್ಟವಾಗಿ ಒಂದಲ್ಲ ಹಲವಾರು ಬಾರಿ ಹೇಳಿದ್ದಾರೆ. ನಾವು ಈ ಕೆಲಸವನ್ನು ನಿಲ್ಲಿಸುವುದಿಲ್ಲ. ಬೇಗ ಇದನ್ನು ಪ್ರಾರಂಭ ಮಾಡಿ ಮುಗಿಸುತ್ತಿದ್ದೇವೆ. ನೀರನ್ನು ಕೊಡುತ್ತಿದ್ದೇವೆ. ವೈ.ಕೆ. ರಾಮಯ್ಯನವರಿಗೆ ಹಕ್ಕಿದೆ. ಅವರು ಹೋಗಿ ಗಾಂಧಿ ಪ್ರತಿಮೆ ಹತ್ತಿರ ಉಪವಾಸ ಕುಳಿತುಕೊಂಡರು. ಪೊಲೀಸರು ಅಲ್ಲಿಗೆ ಹೋದಮೇಲೆ ಇಲ್ಲಾ ನಾವು ಶಾಂತ ರೀತಿಯಿಂದ ಹೊರಟು ಹೋಗುತ್ತೇವೆ ಎಂದು ಡಿಸ್ಪರ್ಸ್ ಆದರು. ಆದಾದನಂತರ ಕುಮಾರ ಕೃಪ ಗೆಸ್ಟ್ ಹೌಸ್‌ಗೆ ಹೋದರು. ಮಾನ್ಯ ಮುಖ್ಯಮಂತ್ರಿಗಳು ಅಲ್ಲಿ ಇರಬಹುದು ಎಂದು. ಅಲ್ಲಿಗೆ ಹೋಗಿ ಅಲ್ಲೂ ಧರಣಿ ಕುಳಿತುಕೊಂಡರು. ಧರಣಿ ಕುಳಿತುಕೊಂಡ ಮೇಲೆ ಅಲ್ಲಿಗೆ ಪೊಲೀಸರು ಹೋಗಿ ಸ್ವಾಮಿ, ಇದು ಧರಣಿ

ಕುಳಿತುಕೊಳ್ಳತಕ್ಕಂಥ ಜಾಗ ಅಲ್ಲ. ಯಾರೂ ಸಹ ಕುಳಿತುಕೊಂಡರೆ ಹೇಗೆ? ಇಲ್ಲಿಗೆ ಬೇಕಾದಷ್ಟು ಜನಪರ ರಾಷ್ಟ್ರಗಳಿಂದ ಗೆಸ್ಟ್ ಎಲ್ಲಾ ಬಂದಿರುತ್ತಾರೆ. ಅಪ್ಸೆಟ್ ಮಾಡಬೇಡಿ. ದಯವಿಟ್ಟು ನೀವು ಹೋಗಿ ಎಂದು ಹೇಳಿದರು. ಅದಕ್ಕೆ ಅವರು ಇಲ್ಲಾ ನಾನು ಹೋಗುವುದಿಲ್ಲ ನನಗೆ ಅರೆಸ್ಟ್ ಮಾಡಬೇಕು ಎಂದು ಹೇಳಿದರು. ನಾವು ಅರೆಸ್ಟ್ ಮಾಡಲ್ಲ ಎಂದು ಬರೆದುಕೊಡಿ ಎಂದರೆ ಅದಕ್ಕೆ ಪೊಲೀಸರು ಬರೆದುಕೊಟ್ಟಿದ್ದಾರೆ. ನಾವು ಅರೆಸ್ಟ್ ಮಾಡಿಲ್ಲ ನೀವು ಈಗ ಹೋಗಬಹುದು ಎಂದು. ಇಲ್ಲಾ ನೀವು ಪೊಲೀಸ್ ಸ್ಟೇಷನ್ಗೆ ಕರೆದುಕೊಂಡು ಹೋಗಬೇಕು ಎಂದು ಹೇಳಿದ್ದಾರೆ.

ಅಲ್ಲಿಗೆ ಇವರನ್ನು ಮಧ್ಯಾಹ್ನ 2 ಗಂಟೆಗೆ ಸದಾಶಿವನಗರದ ಪೊಲೀಸ್ ಸ್ಟೇಷನ್ಗೆ ಕರೆದುಕೊಂಡು ಹೋಗಿದ್ದಾರೆ. ಇವರ ಜೊತೆಯಲ್ಲಿ ಬಂದಂತಹ 25 ಜನರನ್ನು ಕರೆದುಕೊಂಡು ಹೋಗಿದ್ದಾರೆಂದು ಹೇಳಿದ್ದಾರೆ. ಅವರೆಲ್ಲಾ ಊಟ ಮಾಡಿದ್ದಾರೆ. ಇವರು ನಾನು ಊಟ ಮಾಡಲ್ಲ ಎಂದು ಹೇಳಿದ್ದಾರೆ. ಇವರು ಶುಗರ್ ಪೇಷಂಟ್, ಹೆಚ್ಚು ಕಡಿಮೆ ಆದರೆ ತೊಂದರೆ ಆಗಬಹುದು ಎಂದು ಹೇಳಿ ನಾವು ಒತ್ತಾಯವಾಗಿ ಫೀಡ್ ಮಾಡುವುದಕ್ಕೆ ಪ್ರಯತ್ನ ಮಾಡಿದ್ದೇವೆ. ಆಗ ಇಲ್ಲಾ ನನಗೆ ನೀರು ಕೊಡಿ, ಬೇರೆ ಏನೂ ಬೇಡ ಎಂದು ಹೇಳಿದ್ದಾರೆ. ಆಮೇಲೆ ಮಧ್ಯಾಹ್ನ ನಾಲ್ಕು ಗಂಟೆ ಆದಮೇಲೆ ನೀವು ಹೋಗಿ, ಹೋಗಿ ಎಂದರೆ ನಾನು ಹೋಗುವುದಿಲ್ಲ ಎಂದಿದ್ದಾರೆ. ನಂತರ ನೀವು ಬರೆದುಕೊಡಿ ನೀವು ಹೋಗಿ ಎಂದು ಹೇಳಿದಾಗ ಪೊಲೀಸರು ಬರೆದುಕೊಟ್ಟರೂ ಸಹ ಇಲ್ಲಾ ನಾವು ಇಲ್ಲೇ ಕುಳಿತುಕೊಳ್ಳುತ್ತೇವೆ ಎಂದಿದ್ದಾರೆ. ಅವರು ಅಲ್ಲಿ ಪೊಲೀಸ್ ಸ್ಟೇಷನ್ನಲ್ಲಿ ಅಧಿಕಾರಿಗಳನ್ನು ಬಯ್ಯತಕ್ಕಂಥಾದ್ದು ಮತ್ತು ಬಂದೂಕು ಇರತಕ್ಕಂಥ ಜಾಗಕ್ಕೆ ಹೋಗತಕ್ಕಂಥಾದ್ದು ಅಸಭ್ಯ ರೀತಿಯಲ್ಲಿ ನಡೆದುಕೊಂಡಿರತಕ್ಕಂಥಾದ್ದು ಇದೆಲ್ಲಾ ವೈ.ಕೆ. ರಾಮಯ್ಯನವರು ಮಾಡಿದ್ದಾರೆ ಎಂದು ಪೊಲೀಸರು ಹೇಳಿರುವುದು. ಅವರಿಗೆ ಬ್ಲಡ್ ಪ್ರೆಷರ್ ಇದೆ. ಮತ್ತು ಶುಗರ್ ಪೇಷಂಟ್. ಅದಕ್ಕೆ ನಮಗೂ ಭಯ ಇದೆ. ಅವರು ಈ ರೀತಿ ಧರಣಿ ಮಾಡಿದ್ದರಿಂದ ಅವರ ವಿಚಾರವನ್ನು ವ್ಯಕ್ತ ಮಾಡುವುದರಲ್ಲಿ ನಮಗೆ ಏನೂ ತಕರಾರಿಲ್ಲ. ಇಲ್ಲಾ ನೀವು ಕೋರ್ಟಿಗೆ ನಮ್ಮನ್ನು ಪ್ರೊಡ್ಯೂಸ್ ಮಾಡಬೇಕು ಎಂದು ಹೇಳಿದ್ದಾರೆ. ಮಾರನೇ ದಿನ ಯುಗಾಗಿ ಹಬ್ಬ ಇದೆ. ನ್ಯಾಯಾಧೀಶರ ಹತ್ತಿರ ಕರೆದುಕೊಂಡು ಹೋಗಿದ್ದಾರೆ. ನ್ಯಾಯಾಧೀಶಕರು ರಜೆ ಮೇಲೆ ಇದ್ದರು. ಆಮೇಲೆ ಕೇಸ್ ಹಾಕಿದ್ದಾರೆ. ಸೆಲ್ಫ್ ಬಾಂಡ್ ಕೊಟ್ಟು ಹೋಗಿ ಎಂದು ಪೊಲೀಸ್ ಸ್ಟೇಷನ್ನಲ್ಲಿ ಹೇಳಿದ್ದಾರೆ. ಯಾವಾಗ ಇದೆಲ್ಲಾ ಮಾಡಿದರು ಆಗ ಬಾಂಡ್ ಮೇಲೆ ಬರೆದುಕೊಡಿ ಎಂದು ಹೇಳಿದ್ದಾರೆ. ಇಲ್ಲಾ, ನಾನು ಸೆಲ್ಫ್ ಬಾಂಡ್ ಬರೆದುಕೊಡುವುದಿಲ್ಲ ಎಂದು ಹೇಳಿದ್ದಾರೆ.

1.20 ಪಿ.ಎಂ

ನಂತರ ಅವರನ್ನು ಮ್ಯಾಜಿಸ್ಟ್ರೇಟ್ ಹತ್ತಿರ ಕರೆದುಕೊಂಡು ಹೋಗಿದ್ದಾರೆ. ಅಲ್ಲಿ ನಾನು ಏನು ಅಪರಾಧ ಮಾಡಿದ್ದೇನೆ. ತುಮಕೂರಿಗೆ ನೀರು ಕೊಡಿ ಎಂದು ಕೇಳುವುದು ತಪ್ಪಾ ಎಂದು ಅಲ್ಲಿ ವಾದ ಮಾಡಿದ್ದಾರೆ. ನೀವು ನನ್ನನ್ನು ಜೈಲಿಗೆ ಹಾಕಲೇ ಬೇಕು, ಎಲ್ಲಿಯವರೆಗೂ ತುಮಕೂರಿಗೆ ನೀರು ಕೊಡುವುದಿಲ್ಲವೋ ಅಲ್ಲಿಯವರೆಗೂ ನಾನು ಜೈಲಿನಲ್ಲೇ ಇರುತ್ತೇನೆಂದು ಹೇಳಿದ್ದಾರೆ. ಆಗ ನ್ಯಾಯಧೀಶರಿಗೆ ಬೇರೆ ದಾರಿನೇ ಇರಲಿಲ್ಲ, ನ್ಯಾಯಾಧೀಕರಣ ಅವರನ್ನು ಜೈಲಿಗೆ ಕರೆದುಕೊಂಡು ಹೋಗಿದ್ದಾರೆ. ಜೈಲಿನಲ್ಲಿ ಅವರು ಇದ್ದರೆ ಸ್ವಾಮಿ, ನನಗೂ ಒಂದು ಪತ್ರವನ್ನು ಅಲ್ಲಿಂದ ಬರೆದಿದ್ದಾರೆ. ನಿಮ್ಮ ಸರ್ಕಾರಕ್ಕೆ ಒಂದು ಒಳ್ಳೆಯ ಕಾರನ್ನು ಕೊಡುವುದಕ್ಕೆ ಹಣಕಾಸಿನ ಯೋಗ್ಯತೆ ಇಲ್ಲವಾ? ಎಂದು ಬರೆದಿದ್ದಾರೆ. ಅವರು ಪ್ರತಿ ದಿನ ಆಸ್ಪತ್ರೆಗೆ ಹೋಗಬೇಕಂತೆ, ಅವರಿಗೆ ರಕ್ತದೊತ್ತಡ ಮತ್ತು ಸಕ್ಕರೆ ಖಾಯಿಲೆ ಇದೆ.

ಅವರನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವುದು ಸರ್ಕಾರದ ಕರ್ತವ್ಯ, ಕರೆದುಕೊಂಡು ಹೋಗುತ್ತೇವೆಂದರೆ, ಅವರಿಗೆ ಒಳ್ಳೆಯ ಕಾರು ಬೇಕಂತೆ, ಒಳ್ಳೆಯ ಕಾರು ಕೊಡುವುದಿಲ್ಲವೂ, ಎಂದು ಕಾಗದ ಬರೆದಿದ್ದಾರೆ.

ಶ್ರೀ ವಾಟಾಳ್ ನಾಗರಾಜ್ : ಯಾರ ಜೊತೆ ಕರೆದುಕೊಂಡು ಹೋಗುತ್ತೀರಾ ಎಂದರೆ ಕಳ್ಳರ ಜೊತೆಯಲ್ಲಿ ಕರೆದುಕೊಂಡು ಹೋಗುತ್ತೀರಾ?

ಶ್ರೀ ಪಿ.ಜಿ.ಆರ್. ಸಿಂಧ್ಯಾ : ನಾವು ಕಳ್ಳರ ಜೊತೆಯಲ್ಲಿ ಕರೆದುಕೊಂಡು ಹೋಗಿಲ್ಲ. ಇದು ಸತ್ಯಕ್ಕೆ ದೂರವಾದಂತಹ ವಿಷಯವಾಗಿದೆ.

ಶ್ರೀ ವಾಟಾಳ್ ನಾಗರಾಜ್ : ನನಗೆ ಜೈಲಿನಲ್ಲಿ ಅದಂತಹ ಅನುಭವ, ನಮಗೇನೂ ಬೆಂಜ್ ಕಾರು ಕೊಡುವುದಿಲ್ಲ. ಅಲ್ಲಿ ಕೋರ್ಟಿಗೆ ಕರೆದುಕೊಂಡು ಹೋಗುವಂತಹ ಖೈದಿಗಳು, ಖೋಟ ನೋಟು ಪ್ರಿಂಟ್ ಮಾಡಿದ ಖೈದಿಗಳು, ಮರ್ಡರ್ ಮಾಡಿದಂತಹ ಖೈದಿಗಳು, ಇವರೆಲ್ಲರನ್ನು ಕರೆದುಕೊಂಡು ಹೋಗುವಂತಹ ವ್ಯಾನ್ನಲ್ಲಿ ನಮ್ಮನ್ನು ಕರೆದುಕೊಂಡು ಹೋಗುತ್ತಾರೆ. ಆದ್ದರಿಂದ ಮಾನ್ಯ ವೈ.ಕೆ. ರಾಮಯ್ಯನವರು ಬೇರೆ ವ್ಯವಸ್ಥೆಯನ್ನು ಮಾಡಿಕೊಡಿ ಎಂದು ಕೇಳಿರಬಹುದು. ನನ್ನ ಅನುಭವಕ್ಕೆ ಬಂದದ್ದನ್ನು ನಾನು ಹೇಳುತ್ತಿದ್ದೇನೆ. ಇದು ನನ್ನ ಅನುಭವ. ಈ ಬಗ್ಗೆ ನಾನು ಏನೂ ಕೇಳುವುದಕ್ಕೆ ಹೋಗುವುದಿಲ್ಲ. ಇದು ನಮ್ಮ ಕ್ರಮ. ಅದಕ್ಕೆ ನಾವು ತಲೆ ಕೆಡಿಸಿಕೊಳ್ಳುವುದಕ್ಕೆ ಹೋಗುವುದಿಲ್ಲ ಮತ್ತು ನಮ್ಮ ನೀತಿ. ತಪ್ಪು ಏನಿಲ್ಲ, ಅದಕ್ಕೋಸ್ಕರ ನಾವು ಗೃಹ ಸಚಿವರನ್ನು ಕಾರು ಕೊಡಿ ಎಂದು ಕೇಳುವುದಕ್ಕೆ ಹೋಗುವುದಿಲ್ಲ. ಮಾನ್ಯ ಸಿಂಧ್ಯಾರವರು ಜೈಲಿನಲ್ಲಿದ್ದರು. ಅವರು ಸಹ ಬಹಳ ವರ್ಷಗಳು ಜೈಲಿನಲ್ಲಿದ್ದರು. ಅಲ್ಲಿನ ಪರಿಸ್ಥಿತಿ ಮತ್ತು ವ್ಯವಸ್ಥೆಗಳ ಬಗ್ಗೆ ಅವರಿಗೂ ಗೊತ್ತಿದೆ. ಅಲ್ಲಿ ದೊಡ್ಡವರು ಚಿಕ್ಕವರು ಎಂಬ ಪ್ರಶ್ನೆ ಇಲ್ಲ, ಎಲ್ಲರನ್ನೂ ಒಟ್ಟಿಗೆ ಕರೆದುಕೊಂಡು ಹೋಗುವುದಕ್ಕೆ ವ್ಯವಸ್ಥೆ ಮಾಡಿರಬೇಕು. ಅದಕ್ಕೆ ಅವರು ಕಾರು ಕಳುಹಿಸಿ ಎಂದು ಹೇಳಿರಬಹುದು.

ಶ್ರೀ ಪಿ.ಜಿ.ಆರ್. ಸಿಂಧ್ಯಾ : ತಮಗೆ ಯಾವ ರೀತಿ ಪತ್ರ ಬರೆದಿದ್ದಾರೆ, ಸರ್ಕಾರಕ್ಕೆ ಯಾವ ರೀತಿ ಪತ್ರ ಬರೆದಿದ್ದಾರೆ ಎಂದು ನಾವು ತೋರಿಸಬೇಕಾಗುತ್ತದೆ. ಮಾನ್ಯ ವಾಟಾಳ್ ನಾಗರಾಜ್‌ರವರು ಬಹಳ ಸಲ ಜೈಲಿಗೆ ಹೋಗಿರಬಹುದು; ನಾನು ಸಹ ಹಲವಾರು ಸಲ ಹೋಗಿದ್ದೇನೆ. 21 ತಿಂಗಳುಗಳ ಕಾಲ ನಾನು ಜೈಲಿನಲ್ಲಿದ್ದೆ. ಜೈಲ್‌ಗಳಲ್ಲಿ ಶಾಸಕರು, ಲೋಕಸಭಾ ಸದಸ್ಯರು, ಇವರಿಗೆ ಕೆಲವು ಸವಲತ್ತುಗಳು ಇವೆ. ಜೈಲ್ ಮ್ಯಾನ್ಯುಲ್ ಇದೆ. ಅದರ ಪ್ರಕಾರ ಒಬ್ಬ ನಾಗರಿಕನಿಗೆ ಏನೇನು ಸೌಲಭ್ಯ ಕೊಡಬೇಕು. ಅದೆಲ್ಲಾ ಸೌಲಭ್ಯಗಳನ್ನು ನಾವು ಕೊಟ್ಟಿದ್ದೇವೆ. ಅವರು ಅಲ್ಲಿ ನಾನು ಊಟ ಮಾಡುವುದಿಲ್ಲ, ಎನ್ನುತ್ತಾರೆ. ಆಸ್ಪತ್ರೆಗೆ ಹೋದರೆ ಅಲ್ಲಿ ವೈದ್ಯರ ಮೇಲೆ ರೇಗಾಡುತ್ತಾರೆ. ಪೊಲೀಸ್‌ನವರ ಮೇಲೆ ರೇಗಾಡುತ್ತಾರೆ. ಮಾನ್ಯ ರಾಮಯ್ಯನವರು ನನಗೆ ಒಳ್ಳೆಯ ಸ್ನೇಹಿತರು ಆಗಿದ್ದಾರೆ.

ಶ್ರೀ ಎಂ. ನಾರಾಯಣ ಸ್ವಾಮಿ : ಮಾನ್ಯ ಅಧ್ಯಕ್ಷರೆ, ಅವರು ಈ ರೀತಿಯಾಗಿ ಮಾಡುವುದರಿಂದ ದಯಮಾಡಿ ಕಾಲ ವ್ಯಯ ಮಾಡುವಂಥಾದ್ದು ಬೇಡ. ಅವರು ಉದ್ದೇಶ ಪೂರ್ವಕವಾಗಿ ಪತ್ರಿಕೆಗಳಲ್ಲಿ ನನ್ನ ಹೆಸರು ಬರಬೇಕು ಎನ್ನುವಂತಹ ಮಾನಸಿಕವಾಗಿ ಅಸ್ವಸ್ಥರಾಗಿದ್ದರೂ ಇರಬಹುದು. ಅದಕ್ಕೂ ಕೂಡ ತಾವು ಕ್ರಮ ತೆಗೆದುಕೊಳ್ಳಬೇಕು. ಅವರನ್ನು ಮೆಂಟಲ್ ಆಸ್ಪತ್ರೆಗೆ ಕಳುಹಿಸಿ ತಪಾಸಣೆ ಮಾಡಿಸುವಂತಹ ಕೆಲಸವನ್ನು ತಾವು ಮಾಡಬೇಕೆಂದು ಹೇಳುತ್ತೇನೆ

ಶ್ರೀ ಪಿ.ಜಿ.ಆರ್. ಸಿಂಧ್ಯಾ : ಶ್ರೀ ವೈ.ಕೆ. ರಾಮಯ್ಯನವರಿಗೆ ತೊಂದರೆಯನ್ನು ಕೊಡಬೇಕು. ಅವರು ಮುಷ್ಕರ ಮಾಡುವುದು ತಪ್ಪೆಂದು ಸರ್ಕಾರ ಎಲ್ಲಾ ಸಹಿತ

ಹೇಳಿಲ್ಲ. ನಾನು ಅವರು ಇಬ್ಬರೂ ಒಳ್ಳೆಯ ಸ್ನೇಹಿತರಾಗಿದ್ದು ಕೊಂಡು ಗೃಹಮಂತ್ರಿಯಾಗಿ ಅವರ ಆರೋಗ್ಯದ ಬಗ್ಗೆ ನನಗೂ ಒಂದು ರೀತಿಯ ಕಳವಳವಿದೆ. ಅವರಿಗೆ ರಕ್ತದೊತ್ತಡ, ಸಕ್ಕರೆ ಖಾಯಿಲೆ ಇರುವುದರಿಂದ ಅವರಿಗೆ ಹೆಚ್ಚು ಕಡಿಮೆಯಾದರೆ ಏನು ಮಾಡುವುದು. ಅವರು ಈ ರಾಜ್ಯದ ನಾಯಕರು ಒಂದು ಜವಾಬ್ದಾರಿ ಪಕ್ಷದ ಅಧ್ಯಕ್ಷರು ಆಗಿದ್ದಾರೆ. ಅವರ ಬಗ್ಗೆ ಲಘುವಾಗಿ ಪರಿಗಣಿಸುವುದಕ್ಕೆ ನಾವು ತಯಾರಿಲ್ಲ, ಈಗ ಅವರು ನಾನೇ ಜೈಲಿಗೆ ಹೋಗುತ್ತೇನೆ. ಪೊಲೀಸ್ ಸ್ಟೇಷನ್‌ನಲ್ಲಿ ಜೈಲಿನಲ್ಲಿ ಊಟ ಮಾಡುವುದಿಲ್ಲ. ನನಗೆ ಔಷಧ ಬೇಡ, ತುಮಕೂರಿಗೆ ನೀರು ಕೊಟ್ಟುಬಿಡಿ ಎಂದರೆ ಜೈಲಿನಲ್ಲೇ ಇರುತ್ತೇನೆಂದರೆ ಹೇಗೆ? ಪೊಲೀಸ್ ಸ್ಟೇಷನ್‌ನಲ್ಲಿ ಇವರು ಮಾಡಿರುವಂತಹ ವರ್ತನೆಯ ದೃಷ್ಟಿಯಿಂದ ನಾವು ಪೊಲೀಸಿನವರಿಗೂ ಕೇಳಿಕೊಂಡಿದ್ದೇವೆ. ಪೊಲೀಸಿನವರಿಗೂ ಗೊತ್ತಿದೆ. ಇವತ್ತು ನಾವು ಅಧಿಕಾರದಲ್ಲಿರುತ್ತೇವೆ ನಾಳೆ ನೀವು ಬರಬಹುದು ಎಂದು ಅವರು ಎಲ್ಲರ ಜೊತೆಯಲ್ಲಿ ಸೌಜನ್ಯದಿಂದ ನಡೆದುಕೊಳ್ಳುತ್ತಾರೆ. ಇವರಿಗೆ ವಿಶೇಷವಾದ ಸೌಜನ್ಯದಿಂದ ನಡೆದುಕೊಳ್ಳಬೇಕು ನಾವು ಸೂಚನೆಯನ್ನು ಸಹ ಕೊಟ್ಟಿದ್ದೇವೆ. ಮಾನ್ಯ ಮುಖ್ಯಮಂತ್ರಿಯವರಿಗೂ ಮಾನ್ಯ ವೈ.ಕೆ. ರಾಮಯ್ಯನವರಿಗೂ ರಾಜಕೀಯವಾಗಿ ದ್ವೇಷವಿದೆ ಎಂದು ಹೇಳುವುದು ಆ ದೃಷ್ಟಿಯಿಂದ ಇಲ್ಲ. ನಾನು ನಿನ್ನೆ ಇದರ ಬಗ್ಗೆ ಸ್ಪಷ್ಟವಾಗಿ ಹೇಳಿದ್ದೇನೆ. ಮಾನ್ಯ ಮುಖ್ಯಮಂತ್ರಿಯವರಿಗೆ ಯಾವುದೇ ರಾಗ, ದ್ವೇಷ ಇಲ್ಲ. ಇವತ್ತು ಸಹ ನಾನು ಮಾನ್ಯ ರಾಮಯ್ಯನವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ. ಅವರನ್ನು ಕೋರ್ಟ್ ಮುಂದೆ, ಪ್ರೊಡ್ಯೂಸ್ ಮಾಡುತ್ತಾರೆ. ದಯಮಾಡಿ ಸೆಲ್ಫ್ ಬೆಲ್ ತೆಗೆದುಕೊಂಡು ಹೋಗಬೇಕೆಂದು ನಾನು ಮನವಿ ಮಾಡಿಕೊಳ್ಳುತ್ತೇನೆ. ಅವರು ತಮ್ಮ ಮೇಲೆ ನಾಲ್ಕು ಕಟ್ಟಳೆಗಳನ್ನು ಹಾಕಿದ್ದಾರೆ ಅದನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ಹೇಳಿದ್ದಾರೆ.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೆ, ಅವರು ಪ್ರಾಣ ಬೆದರಿಕೆಯನ್ನು ಯಾರಿಗೆ ಹಾಕಿದರು? ಅದು ಬೇಕಲ್ಲಾ, ಸುಮ್ಮನೆ ನೀವು ಕೇಸ್ ಹಾಕಿಬಿಟ್ಟರೆ, ನುಗ್ಗಿದರು, ಹೊಡೆಯುವುದಕ್ಕೆ ಹೋದರು ಎಂದರೆ ಹೀಗೆ? ಅದುದರಿಂದ ದಯಮಾಡಿ ತಾವು ಆತ್ಮಶೋಧನೆ ಮಾಡಿಕೊಳ್ಳಿ. ಅವರನ್ನು ಜೈಲಿಗೆ ಕಳುಹಿಸುವುದು ಬಿಡಿಸುವುದು ಆ ಪ್ರಶ್ನೆ ಬೇರೆ. ಇಂಥವರಿಗೆ ಪ್ರಾಣ ಬೆದರಿಕೆ ಹಾಕಿದರು ಎಂಬುದು ನಮಗೆ ಬೇಕು.

ಶ್ರೀ ಪಿ.ಜಿ.ಆರ್. ಸಿಂಧ್ಯಾ : ಅವರು ಏನು ಶಬ್ದಗಳನ್ನು ಉಪಯೋಗಿಸಿದ್ದಾರೆಂದರೆ ನನ್ನ ವ್ಯಕ್ತಿತ್ವಕ್ಕೆ ಧಕ್ಕೆಯಾಗುತ್ತದೆ ಮತ್ತು ಅಧಿಕಾರಕ್ಕೆ ಧಕ್ಕೆ ಬರುತ್ತದೆ ಎಂದು ಅವರು ಉಪಯೋಗಿಸಿದಂತಹ ಭಾಷೆಯನ್ನು ಕೇಳಿದಾಗ ಬಹಳ ನೀಚವಾಗಿ ಮಾತನಾಡಿದ್ದಾರೆ. "I will take care of your Home Minister; I will see who is your Chief Minister" ಅಂತ ಹೀಗೆಲ್ಲಾ ಹೇಳಿದ ಮೇಲೂ ನಾನು ಅವರ ಮೇಲೆ ಕ್ರಮ ತೆಗೆದುಕೊಳ್ಳಬೇಕು, ದೊಡ್ಡ ಅಪರಾಧ ಮಾಡಿದ್ದಾರೆಂದು ಸರ್ಕಾರವಂತೂ ಹೇಳಿಲ್ಲ. ನಾನೇ ಜೈಲಿಗೆ ಹೋಗುತ್ತೇನೆ. ನೀರು ಕೊಡುವವರೆಗೂ ನಾನು ಜೈಲಿನಿಂದ ಹೊರಗೆ ಬರುವುದಿಲ್ಲವೆಂದರೆ ನಾವು ಏನು ಮಾಡುವುದು? ಇದು ನಮ್ಮ ಮುಂದಿರುವ ಪ್ರಶ್ನೆ. ಆದರೂ ನಾನು ಭರವಸೆ ಕೊಡುತ್ತಿದ್ದೇನೆ. ಅವರ ಆರೋಗ್ಯ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಮತ್ತು ಅವರು ಮಾಡುತ್ತಿರುವ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ಮತ್ತೊಮ್ಮೆ ಹೇಳುತ್ತಿದ್ದೇನೆ.

ಶ್ರೀ ಕಾಗೋಡು ತಿಮ್ಮಪ್ಪ : ಇಷ್ಟು ದೀರ್ಘವಾಗಿ ಉತ್ತರ ಕೊಟ್ಟು ಅದರಲ್ಲಿ ಏನು ಹುರುಳಿಲ್ಲವೆಂದರೆ ವಾಟಾಳ್ ನಾಗರಾಜ್‌ರವರು ಗಂಟಲು ಶೋಷಣೆ ಮಾಡಿಕೊಂಡು ಈಗ ಪರಿಹಾರ ಕಾಣದೆ ಅವರು ಸುಮ್ಮನೆ ವಾಪಸ್ಸು ಹೋಗುವಂತಹ ಪರಿಸ್ಥಿತಿ ಇದೆ. ಇಲ್ಲಿ ಪ್ರಶ್ನೆ ಇರುವುದು ಈ ಕೇಸ್ ಆಯಿತು ವಾಪಸ್ಸು

ತೆಗೆದುಕೊಳ್ಳಿ ಮನೆಗೆ ಹೋಗಿ ಅಂದರೆ ಅವರು ಹೋಗುವುದಿಲ್ಲ. ಅವರನ್ನು ಅರೆಸ್ಟ್ ಮಾಡಿದ್ದಿರಾ, ಕೇಸ್ ದಾಖಲು ಮಾಡಿಕೊಂಡಿದ್ದೀರಿ. ನೀವು ಅವರನ್ನು ಕಳುಹಿಸುವಂತಹ ಸಂದರ್ಭ ಬಂದಿದೆ. ಇಲ್ಲದಿದ್ದರೆ ಅವರು ಪೊಲೀಸ್ ಸ್ಟೇಷನ್‌ನಲ್ಲೆ ಮಲಗಿಕೊಳ್ಳಲಿ ಅಂದಿದ್ದರೆ ಅವರು ಇರುತ್ತಿದ್ದರು ಇಲ್ಲದಿದ್ದರೆ ತಾವಾಗಿಯೇ ಹೋಗುತ್ತಿದ್ದರು.

ಶ್ರೀ ಪಿ.ಜಿ.ಆರ್. ಸಿಂಧ್ಯಾ : ನಾನು ಏಕೆ ಇಷ್ಟು ದೀರ್ಘವಾಗಿ ಹೇಳಿಕೆ ಕೊಟ್ಟೆ ಎಂದರೆ ಸರ್ಕಾರ ಏನೊ ಮಾಡುವುದಕ್ಕೆ ಹೋಗುತ್ತಿದೆ. ದೊಡ್ಡ ಅಪರಾಧದ ಹೊರೆಯನ್ನು ಅವರ ಮೇಲೆ ಕೂಡಿಸುವಂತಹ ಭೀತಿ, ಮತ್ತು ಹಾಗೆ ಮಾಡಿದರು ಹೀಗೆ ಮಾಡಿದರು ಎನ್ನುವಂತಹ ಭಾವನೆ ಯಾರಿಗೂ ಬರಬಾರದು. ನಾವು ಇಲ್ಲಿ ಮಾತನಾಡುತ್ತೇವೆ. ನಾಳೆ ದಿವಸ ಪತ್ರಿಕೆಗಳಲ್ಲಿ ವರದಿಯಾಗುತ್ತದೆ, ಆಗ ಸರ್ಕಾರದ ಗೌರವವೇನಾಗುತ್ತದೆ. ಆ ದೃಷ್ಟಿಯಿಂದ ಸರ್ಕಾರ ಏನು ಮಾಡಿದೆ ಅಲ್ಲಿ ಏನು ಪರಿಸ್ಥಿತಿ ಇದೆ ಎಂಬುದನ್ನು ನಾನು ಇಲ್ಲಿ ಹೇಳಿದೆ. ಇವತ್ತು ಅವರನ್ನು ನ್ಯಾಯಾಧೀಶರ ಮುಂದೆ ಹಾಜರು ಪಡಿಸುತ್ತಿದ್ದಾರೆ. ಅವರಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇನೆ. ಸೆಲ್ಫ್ ಬಾಂಡ್ ಬರೆದುಕೊಟ್ಟು ಅವರು ಹೋಗಬಹುದು. ಅವರ ಚಳುವಳಿಯ ಉದ್ದೇಶವೇನಿದೆ ಹಾಗೂ ಅವರ ಬಗ್ಗೆ ನಿಮಗೆಷ್ಟು ಕಳಕಳಿ ಇದೆಯೋ ಅಷ್ಟೇ ಕಳಕಳಿ ನಮಗೂ ಇದೆ. ನಾವು ಅಧಿಕಾರಕ್ಕೆ ಬಂದು ಇನ್ನೂ ನೂರು ದಿನಗಳು ಆಗಿಲ್ಲ.

ಶ್ರೀ ಕಾಗೋಡು ತಿಮ್ಮಪ್ಪ : ಚಳುವಳಿಗೆ ಕುಳಿತುಕೊಂಡಾಗ ಅವರು ಸೆಲ್ಫ್ ಬಾಂಡ್ ಮೇಲೆ ಏಕೆ ಬರುತ್ತಾರೆ?

ಶ್ರೀ ಪಿ.ಜಿ.ಆರ್. ಸಿಂಧ್ಯಾ : ನಾನು ಉತ್ತರವನ್ನು ಮುಗಿಸಿಲ್ಲ. ನೀವು ಇಂಪೇಸೆಂಟ್ ಆಗುತ್ತಿದ್ದೀರಾ.

ಶ್ರೀ ಕಾಗೋಡು ತಿಮ್ಮಪ್ಪ : ಇಲ್ಲ, ಕೇಸ್‌ಗಳನ್ನು ಹಿಂದೆ ತೆಗೆದುಕೊಳ್ಳುತ್ತೀರಾ,

ಶ್ರೀ ಪಿ.ಜಿ.ಆರ್. ಸಿಂಧ್ಯಾ : ನಾನು ಇನ್ನೂ ಪೂರ್ಣವಾಗಿ ಉತ್ತರ ಕೊಟ್ಟಿಲ್ಲ. ಸರ್ಕಾರ ಯಾವ ರೀತಿ ಕೆಲಸ ಮಾಡುತ್ತಿದೆ ಎಂಬುದು ಜನರಿಗೆ ಗೊತ್ತಾಗಬೇಕು. ರಾಮಯ್ಯನವರ ಮೇಲೆ ಯಾವುದೇ ರೀತಿಯ ಆಕ್ರೋಶವಾಗಲೀ ದ್ವೇಷವಾಗಲೀ, ಇಲ್ಲ. ಅವರು ಮಾಡುತ್ತಿರುವಂಥ ಹೋರಾಟ ಇದರ ಬಗ್ಗೆ ಯಾರದ್ದೂ ತಕರಾರು ಇಲ್ಲ. ವೈ.ಕೆ. ರಾಮಯ್ಯನವರ ಆರೋಗ್ಯದ ಬಗ್ಗೆ ನಮಗೆ ಬಹಳ ಕಳಕಳಿ ಇದೆ.... ಕುಳಿತುಕೊಳ್ಳಿರಿ ಹೇಳುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ಸನ್ಮಾನ್ಯ ಅಧ್ಯಕ್ಷರೆ, ಕೇಸುಗಳನ್ನು ತೆಗೆಯಿರಿ ಅಂದರೆ, ಸುತ್ತಿಬಳಸಿ ಅವರ ಆರೋಗ್ಯ ಚೆನ್ನಾಗಿ ಇದೆ ಎಂದು ಹೇಳುತ್ತಾ ಎಲ್ಲೋ ಹೋಗುತ್ತಿದ್ದಾರೆ. ಇವರು ಕೇಸುಗಳನ್ನು ಹಿಂತೆಗೆದುಕೊಂಡರೆ ತಾನಾಗಿಯೇ ರಾಮಯ್ಯನವರು ಮನೆಗೆ ಬರಬಹುದು, ತೊಂದರೆ ಏನಿಲ್ಲ.

ಶ್ರೀಮತಿ ಎಂ. ಪ್ರಮೀಳಾ ನೇಸರ್ಗಿ : ಒಂದು ನಿಮಿಷ, ಮಾನ್ಯ ಉಪಾಧ್ಯಕ್ಷರೆ, ಈಗ ಸೆಲ್ಫ್ ಬಾಂಡ್ ಬಗ್ಗೆ ತಾವು ಹೇಳಿದಿರಿ, ನಾನು ಹೇಳುತ್ತಿದ್ದೇನೆ, ಈಗ ಈ ಸಭೆ ಒಂದು ತೀರ್ಮಾನವನ್ನು ತೆಗೆದುಕೊಳ್ಳಬೇಕು. ಸೆಲ್ಫ್ ಬಾಂಡ್ ಕೋರ್ಟಿನಲ್ಲಿ ಏಕೆ ಅಂಥ ಹೇಳಿದರೆ ಅವರು ಇನ್ನೊಂದು ಸಾರಿ ಹಾಜರಾಗಬೇಕು ಎನ್ನುವ ಉದ್ದೇಶದಿಂದ ಬಾಂಡ್ ತೆಗೆದುಕೊಳ್ಳುತ್ತಾರೆ. ಅಂದರೆ ನಿಮಗೆ ವೈ.ಕೆ. ರಾಮಯ್ಯನವರು ಓಡಿಹೋಗಿ ಬಿಡುತ್ತಾರೆ ಎಂಬ ಅನುಮಾನ ಏನಾದರೂ ಇದೆಯೇ? ಅನುಮಾನ ಇಲ್ಲವಿದ್ದ ಮೇಲೆ ಸೆಲ್ಫ್ ಬಾಂಡ್ ಇನ್‌ಸಿಸ್ಟ್ ಮಾಡಬಾರದು, self bond is required only for the purpose of attendance in the court. ದಯವಿಟ್ಟು ನಿಯಮ ತೆಗೆದುನೋಡಿ. ಕ್ರಿಮಿನಲ್ ಪ್ರೊಸೀಜರ್ ಕೋಡ್‌ನಲ್ಲಿ ಮತ್ತು ಅದರ ಏಮ್ಸ್ ಅಂಡ್

ಅಬ್ಜೆಕ್ಟ್‌ನಲ್ಲಿ ಬಾಂಡ್ ಇರತಕ್ಕಂಥದ್ದು ಕೇವಲ ಅಪಿಯರ್‌ನ್ಸ್‌ಗೋಸ್ಕರ. ತಪ್ಪಿಸಿಕೊಂಡು ಹೋಗಬಾರದು ಎಂಬ ಉದ್ದೇಶದಿಂದ, ಆದರೆ ಇವರು ಕಳ್ಳರಲ್ಲ, ಕಾಕರಲ್ಲ, ಸ್ಮಗ್ಲರಲ್ಲ. ವೈ.ಕೆ. ರಾಮಯ್ಯನವರು ಓಡಿಹೋಗುವಂತವರಲ್ಲ, ಅಂತಹವರ ಬಗ್ಗೆ ಸೆಲ್ಫ್ ಬಾಂಡ್ ಕೇಳತಕ್ಕಂಥ ಅವಶ್ಯಕತೆ ಇಲ್ಲ, ಇದರ ಬಗ್ಗೆ ತಾವು ಹೇಳಬೇಕು. ಇದರ ಬಗ್ಗೆ ಒಂದು ತೀರ್ಮಾನವನ್ನು ತೆಗೆದುಕೊಂಡು ರಾಜಕೀಯವಾಗಿ ಅರೆಸ್ಟ್ ಮಾಡಿದವರೆಲ್ಲರಿಗೂ ಕೂಡ ಸೆಲ್ಫ್ ಬಾಂಡ್ ಕೊಡಿ ಎಂದು ಕೇಳತಕ್ಕಂಥದ್ದು ಅಷ್ಟು ಒಳ್ಳೆಯದಲ್ಲ. ಅದರ ಬಗ್ಗೆ ಏನಾದರೂ ಸೂಕ್ತವಾದ ಕ್ರಮ ತೆಗೆದುಕೊಳ್ಳಬೇಕಾದ ಅವಶ್ಯಕತೆ ಇದೆಯೆಂದು ನಾನು ಹೇಳುತ್ತಿದ್ದೇನೆ.

ಶ್ರೀ ಕಾಗೋಡು ತಿಮ್ಮಪ್ಪ : ಇಷ್ಟೆಲ್ಲಾ ಗಂಟಲು ಶೋಷಣೆ ಮಾಡಿಕೊಂಡರು ಕೊನೆಗೆ ಪರಿಹಾರ ಏನು ಕಾಣಿಸಲಿಲ್ಲ.

ಶ್ರೀ ಜಿ.ಎಸ್. ಶಿವನಂಜಪ್ಪ (ಗುಬ್ಬಿ) : ಅಧ್ಯಕ್ಷರೆ, ಈಗ ಗಂಭೀರವಾಗಿರತಕ್ಕಂಥ ಪರಿಸ್ಥಿತಿ ತುಮಕೂರು ಜಿಲ್ಲೆಯೊಳಗೆ ಪ್ರಾರಂಭವಾಗಿದೆ, ನಾಳೆಯಿಂದ ರಸ್ತೆ ರೋಕೊ ಮಾಡಬೇಕೆನ್ನುವ ವಿಚಾರ ಜನಗಳ ಮುಂದೆ ಇದೆ, ನೀವೇನಾದರೂ ಕೇಸುಗಳನ್ನು ವಾಪಸ್ಸು ತೆಗೆದುಕೊಳ್ಳದೆ ಸರಿಯಾದ ರೀತಿಯಲ್ಲಿ ಆಶ್ವಾಸನೆ ಕೊಡದೆ ಹೋದರೆ ತುಮಕೂರು ಜಿಲ್ಲೆಯ ಯಾವುದೇ ರಸ್ತೆಯಲ್ಲಿ ಕಾರುಗಳಾಗಲಿ, ಬಸ್ಸುಗಳಾಗಲಿ, ಲಾರಿಗಳನ್ನು ತಡೆಯತಕ್ಕಂಥ ಚಳುವಳಿ ಮಾಡುವುದಕ್ಕೆ ಪ್ರಯತ್ನ ಮಾಡುತ್ತಿದ್ದಾರೆ.

ಶ್ರೀ ಕಾಗೋಡು ತಿಮ್ಮಪ್ಪ : ಅವರು ಜೈಲಿನಲ್ಲಿ ಇರಲಿ, ನೀವು ಅಲ್ಲಿ ಚಳುವಳಿ ಮಾಡಿ.

ಶ್ರೀ ಜಿ.ಎಸ್. ಶಿವನಂಜಪ್ಪ : ಅವರು ಚಳುವಳಿ ಮಾಡುತ್ತೇವೆಂದು ನೋಟೀಸನ್ನು ಸಹ ಕೊಟ್ಟಿದ್ದಾರೆ. ದಯಮಾಡಿ ಸಿಂಧ್ಯಾರವರು ವೈ.ಕೆ. ರಾಮಯ್ಯನವರ ಮೇಲೆ ಹಾಕಿರತಕ್ಕಂಥ ಕೇಸುಗಳನ್ನು ವಾಪಸ್ಸು ತೆಗೆದುಕೊಂಡು ಅವರನ್ನು ಬಿಡುಗಡೆ ಮಾಡಬೇಕು, ಎರಡನೆಯದಾಗಿ, ಹೇಮಾವತಿ ನೀರನ್ನು ತುಮಕೂರು ಜಿಲ್ಲೆಗೆ ಒದಗಿಸಲು ತಯಾರಿದ್ದೇವೆ ಎಂದು ಹೇಳುತ್ತಿದ್ದಾರೆ, ಮತ್ತೆ ಯಾವಾಗ ಪ್ರಾರಂಭ ಮಾಡುತ್ತಾರೆ ಎಂಬುವುದು ಬಹಳ ಮುಖ್ಯವಾಗಿರತಕ್ಕಂಥದ್ದು. ಇಲ್ಲದಿದ್ದರೆ ನಾಳೆಯಿಂದ ಚಳುವಳಿ ಪ್ರಾರಂಭವಾಗುತ್ತದೆ ನಮ್ಮ ಕಾಂಗ್ರೆಸ್ ಸರ್ಕಾರ ಇದ್ದಿದ್ದರೆ ಹೋದ ತಿಂಗಳು 31ನೇ ತಾರೀಖು ನೀರು ಬಿಡುತ್ತೇವೆಂದು ಆಶ್ವಾಸನೆ ಕೊಟ್ಟಿದ್ದರು. ಬಹುಶಃ ಬಹಳಷ್ಟು ಜನರಿಗೆ ಅನೇಕ ಸಮಸ್ಯೆಗಳು ತನ್ನಷ್ಟಕ್ಕೆ ತಾನೇ ಬಗೆಹರಿಯುತ್ತಿತ್ತು. "Penny wise polland foolish" ಅಂತ ಹೇಳುವ ಹಾಗೆ ಕೆಲಸ ಮಾಡುತ್ತಿದ್ದಾರೆ, ಸುಮಾರು ಇವತ್ತು ಕುಡಿಯುವ ನೀರಿನ ಸಮಸ್ಯೆಗೆ ತುಮಕೂರು ಜಿಲ್ಲೆಯೊಳಗೆ ಒಂದು ಕೋಟಿ ರೂಪಾಯಿಗಳನ್ನು ಏನು ಖರ್ಚು ಮಾಡುತ್ತಿದ್ದಾರೆ ಅದೆಲ್ಲಾ ನಮ್ಮ ಸರ್ಕಾರ ಇದ್ದಿದ್ದರೆ ಬಗೆಹರಿಯುತ್ತಿತ್ತು. ಇವರು ಅದೇನು ಮಾಡಿದ್ದಾರೋ ಏನೋ ನನಗೆ ಗೊತ್ತಿಲ್ಲ. ಆದರೆ ಕುಡಿಯುವ ನೀರಿನ ಸಮಸ್ಯೆಯನ್ನು ಪರಿಹರಿಸಲಿಕ್ಕೆ ಹೇಮಾವತಿಯ ನೀರು ಇವತ್ತು ಖಂಡಿತ ಬೇಕಾಗುತ್ತದೆ. ಕೂಡಲೇ ಆ ಕೆಲಸವನ್ನು ಪ್ರಾರಂಭ ಮಾಡಲಿ ಅಂತ ನಾನು ಸರ್ಕಾರಕ್ಕೆ ತಮ್ಮ ಮೂಲಕ ವಿನಂತಿಸುತ್ತಿದ್ದೇನೆ.

ಶ್ರೀ ಕರಡಿ ಸಂಗಣ್ಣ ಅಮರಪ್ಪ : ಸನ್ಮಾನ್ಯ ಅಧ್ಯಕ್ಷರೆ, ನನ್ನ ಸ್ವಂತ ಕ್ಷೇತ್ರದಲ್ಲಿ ಕೊಪ್ಪಳ ನಗರದಲ್ಲಿ ಈ ದಿವಸ ಕುಡಿಯುವ ನೀರಿನ ಅಂಗವಾಗಿ ಚಳುವಳಿ ನಡೆದಿದೆ. ಮಹಿಳೆಯರೆಲ್ಲಾ ಬೀದಿಗೆ ಇಳಿದಿದ್ದಾರೆ ಎಂಬುದನ್ನು ನಾನು ಮಾತನಾಡಬೇಕೆಂದರೆ ನೀವೆಲ್ಲಾ ಬರೀ ನಿಯಮಾವಳಿಗಳನ್ನು ಮಾತನಾಡುತ್ತೀರಾ

ಶ್ರೀ ಕಾಗೋಡು ತಿಮ್ಮಪ್ಪ : ಅವರು ಅವರ ಕ್ಷೇತ್ರದ ವಿಚಾರವನ್ನು ಹೇಳುತ್ತಿದ್ದಾರೆ. ನಾವು ನಮ್ಮದನ್ನು ಹೇಳಿಕೊಳ್ಳುತ್ತೇನೆ, ಅವರಿಗೂ ಕೂಡ ಅವಕಾಶ ಕೊಡಿ.

ಶ್ರೀ ಕೆ.ಎನ್. ನಾಗೇಗೌಡ : ಮಾನ್ಯ ಅಧ್ಯಕ್ಷರೆ, ಬಹಳ ಗಂಭೀರವಾದಂಥ ವಿಚಾರವನ್ನು ಕಳೆದ ಎರಡು ಸಾರಿ ನಿನ್ನೆ ಮತ್ತು ಇವತ್ತು ನಮ್ಮ ಅತ್ಯಂತ ಹಿರಿಯ ಗೌರವಾನ್ವಿತ ಸದಸ್ಯರಾದಂಥ ಶ್ರೀ ವಾಟಾಳ್ ನಾಗರಾಜ್‌ರವರು ಹಾಗೂ ಸ್ನೇಹಿತರು ಒಬ್ಬ ರಾಜಕೀಯ ಮುಖಂಡರ ಬಂಧನದ ಬಗ್ಗೆ ಸುಧೀರ್ಘವಾಗಿ ಚರ್ಚೆ ಮಾಡುತ್ತಿದ್ದಾರೆ, ನಾನು ಸಹ 10-15 ನಿಮಿಷ ಆ ಎಲ್ಲಾ ವಿಚಾರವನ್ನು ಕೇಳಿದಾಗ ವೈ.ಕೆ. ರಾಮಯ್ಯನವರು ಉತ್ತರವನ್ನು ಕೊಟ್ಟಿದ್ದಾರೆ, ಈ ಎರಡು ವಿಚಾರದಲ್ಲಿ ಸೆಲ್ಫ್ ಬಾಂಡ್ ಬಗ್ಗೆ ಮಾತ್ರ ನಮ್ಮ ಗೃಹಸಚಿವರು ಪ್ರಸ್ತಾಪ ಮಾಡಿದ್ದಾರೆ ನಾನು ಒಂದು ಘಟನೆಯನ್ನು ಅವರ ಜ್ಞಾಪಕಕ್ಕೆ ತರುವುದಕ್ಕೆ ಇಷ್ಟಪಡುತ್ತೇನೆ. ಆ ಘಟನೆ ಏನೆಂದರೆ ನಮ್ಮ ರೈತ ಸಂಘದ ರಂಗಸ್ವಾಮಿಯವರು ನಾವು ಎಲ್ಲಾ ಕಬ್ಬಿನ ಬೆಲೆ ಕೊಡಬೇಕೆಂದು ವಿಧಾನಸ-ಧದ ಮೂರನೆಯ ಮಹಡಿಯಲ್ಲಿ ಇದು ನಮ್ಮ ಪುಟ್ಟಣ್ಣಯ್ಯನವರಿಗೆ ಜ್ಞಾಪಕ ಇರಬೇಕು, ಒಂದು ರಾತ್ರಿ, ಒಂದು ಹಗಲು ಆ ಸಂದರ್ಭದಲ್ಲಿ ಮಾನ್ಯ ಜಾಲಪ್ಪನವರು ಮಂತ್ರಿಯಾಗಿದ್ದರು ಆ ಕಾಲದಲ್ಲಿ ಚಳುವಳಿ ಮಾಡಿದೆವು. ಆಗ ನಮಗೂ ಸಹ ಕೇಸ್ ಹಾಕಿದ್ದರು. ನಾವು ಕೋರ್ಟಿಗೆ ಹೋಗಲಿಲ್ಲ, ಜಾಮೀನು ಕೊಡುವುದಿಲ್ಲ ಎಂದು ಹೇಳಿದ್ದೆವು ಅದ್ದರಿಂದ ನಾನು ನಮ್ಮ ಎಲ್ಲಾ ಸದಸ್ಯರ ಭಾವನೆಯನ್ನು ಅರ್ಥಮಾಡಿಕೊಂಡು ವೈ.ಕೆ. ರಾಮಯ್ಯನವರ ವಿಚಾರ ಏನೇ ಇರಲಿ ಒಬ್ಬ ರಾಜಕೀಯ ವ್ಯಕ್ತಿ ಒಬ್ಬ ಸಾರ್ವಜನಿಕರಿಗೋಸ್ಕರವಾಗಿ ಹೋರಾಟ ಮಾಡುತ್ತಿದ್ದಾರೆಂದು ತಿಳಿದು ಸರ್ಕಾರ ಅವರ ಕೇಸನ್ನು ವಾಪಸ್ಸು ತೆಗೆದುಕೊಳ್ಳಬೇಕೆಂದು ನಾನು ಸರ್ಕಾರಕ್ಕೆ ಸಲಹೆ ಮಾಡುವುದಕ್ಕೆ ಇಷ್ಟಪಡುತ್ತೇನೆ.

+ ಶ್ರೀ ಎಸ್. ಬಂಗಾರಪ್ಪ : ಮಾನ್ಯ ಸಭಾಧ್ಯಕ್ಷರೆ, ತುಮಕೂರು ಜಿಲ್ಲೆಗೆ ಹೇಮಾವತಿ ನೀರನ್ನು ಕೊಡುವ ವಿಷಯ ಈಗ ಚರ್ಚೆಗೆ ಸಂಬಂಧಪಟ್ಟಿರತಕ್ಕಂಥದ್ದು. ಅದಕ್ಕಾಗಿ ಸತ್ಯಾಗ್ರಹ ಮಾಡತಕ್ಕಂಥದ್ದು ಆಯಾವ ರಾಜಕೀಯ ಪಕ್ಷಗಳಿಗೆ, ವ್ಯಕ್ತಿಗಳಿಗೆ ಸಂಬಂಧಪಟ್ಟಿರತಕ್ಕಂಥ ಹಕ್ಕಿನ ಪ್ರಶ್ನೆ. ಅದನ್ನು ಮಾನ್ಯ ಸಚಿವರೂ ಕೂಡ ಒಪ್ಪಿಕೊಳ್ಳುತ್ತಾರೆ. ಒಬ್ಬ ವ್ಯಕ್ತಿಗೆ ಇರತಕ್ಕಂಥ ಹಕ್ಕು ಅದು ಅಥವಾ ಪಕ್ಷಕ್ಕೆ ಇರತಕ್ಕಂಥ ವಿಚಾರದಲ್ಲಿ ಮಾನ್ಯತೆ ಮಾಡಿದ್ದಾರೆ. ಅದರ ಬಗ್ಗೆ ಯಾವುದೇ ಭಿನ್ನಾಭಿಪ್ರಾಯ ಯಾವ ಕಡೆಯಿಂದಲೂ ಈ ಸದನದಲ್ಲಿ ಇಲ್ಲ, ಮತ್ತೊಂದು ವಿಷಯ ಅವರು ಮಾಜಿ ಮಂತ್ರಿಗಳು ಆಗಿದ್ದಾರೆ ಎಂಬತಕ್ಕಂಥದ್ದು ಅಲ್ಲವೇನೇ ಒಂದು ಪಕ್ಷದ ಅಧ್ಯಕ್ಷರೂ ಕೂಡ ಆಗಿದ್ದಾರೆ. ಗೌರವಾನ್ವಿತ ವ್ಯಕ್ತಿಯಾಗಿ ಸಾರ್ವಜನಿಕ ಜೀವನದಲ್ಲೂ ಕೂಡ ಅವರು ಇದ್ದಾರೆಂಬ ಅದರ ಬಗ್ಗೆಯೂ ಕೂಡ ಭಿನ್ನಾಭಿಪ್ರಾಯ ಈ ಸದನದಲ್ಲಿ ಯಾವುದೇ ಮೂಲೆಯಿಂದಲೂ ಕೂಡ ಬಂದಿಲ್ಲ. ಮೂರನೆಯ ವಿಷಯ ಭಿನ್ನಾಭಿಪ್ರಾಯಕ್ಕೆ ಎಡೆಯಿಲ್ಲ, ಸರ್ಕಾರ ಕೂಡ ಮಾನ್ಯ ಸಚಿವರ ಹೇಳಿಕೆ ಮುಖಾಂತರ ಒಪ್ಪಿಕೊಂಡಿದೆ. ಅದು ಅವರ ಆರೋಗ್ಯದ ಬಗ್ಗೆಯೂ ಕೂಡ, ರಕ್ತದ ಒತ್ತಡ, ಸಕ್ಕರೆ ಕಾಯಿಲೆ ಇತ್ಯಾದಿ, ಸಹಜವಾಗಿ ಆ ರೀತಿ ಇದ್ದಾಗ ಸ್ವಲ್ಪ ನಾವು ಯಾವಾಗಲೂ ಕೂಡ ಮಾರ್ಜಿನ್ ಕೊಡತಕ್ಕಂಥದ್ದು. ಅತೀ ಯೋಗ್ಯ ಎಂಬತಕ್ಕಂಥ ಭಾವನೆ ತಮ್ಮ ಹೇಳಿಕೆಯಿಂದಲೇ ನಮ್ಮೆಲ್ಲರಿಗೂ ಕೂಡ ಬಂದಿದೆ. ಆ ಭಾವನೆ ಬರುವ ಹಾಗೆ ತಾವು ಹೇಳಿಕೆಯನ್ನು ಕೊಟ್ಟಿದ್ದಕ್ಕಾಗಿ ನಾನು ನಿಮ್ಮನ್ನು ಅಭಿನಂದಿಸುತ್ತೇನೆ. ಏಕೆಂದರೆ ವಾಸ್ತವಾಂಶವನ್ನು ಬದಿಗೊತ್ತಿ ಯಾವುದೇ ಹೇಳಿಕೆಯನ್ನು ಕೊಡತಕ್ಕಂಥ ಪ್ರಯತ್ನವನ್ನು ಕೂಡ ತಾವು ಮಾಡಿಲ್ಲ, ತಮ್ಮ ಪ್ರಾಮಾಣಿಕತೆಗೆ ನಾನು ಮೆಚ್ಚುತ್ತೇನೆ ಮತ್ತು ಸಾರ್ವಜನಿಕ ಜೀವನದಲ್ಲಿ ಸರ್ಕಾರದ ಪರವಾಗಿ ಹೇಳಿಕೆ ಕೊಡಬೇಕಾದರೆ ಅದನ್ನು ಗಮನದಲ್ಲಿಟ್ಟುಕೊಂಡೇ ಹೇಳಿಕೆ ಕೊಡತಕ್ಕಂಥ ವಿಚಾರ ಕೂಡ ಹೌದು.

ಇವತ್ತು ನಮ್ಮ ಮುಂದಿರತಕ್ಕ ಪ್ರಶ್ನೆ ಏನೆಂದರೆ ಅವರು ಪತ್ರವನ್ನು ಜೈಲಿನಿಂದಲೇ ಬರೆದಿದ್ದಾರೆ. ಸೆಂಟ್ರಲ್ ಜೈಲಿನಲ್ಲಿದ್ದಾರೆ ಎಂಬ ವಿಚಾರ ಅದು ಈಗ ಗೊತ್ತಾಯಿತು.

ನಾವು ಆ ದಿಸೆಯಲ್ಲಿ ವಿಚಾರ ಪ್ರಸ್ತಾಪ ಬಂದಾಗಲೂ ಕೂಡ ಸ್ವಲ್ಪ ಕಾಲ ನಾನು ಇಲ್ಲಿದ್ದೆ. ಜಾಮೀನು ಕೊಟ್ಟು ಹೊರಗೆ ಬರಬಹುದು ಬರಬಾರದು ಅಂತ ಏನಿಲ್ಲ. ಜಾಮೀನನ್ನು ಒಂದೊಂದು ಸಾರಿ ಕೇಳಿದರೆ ನ್ಯಾಯಾಲಯ ಒಪ್ಪಬಹುದು, ಅಥವಾ ಒಪ್ಪದಲೇ ಇರಬಹುದು. ಇಲ್ಲಿರುವ ಅಂಶ ಇಷ್ಟೆ, ಸೆಲ್ಫ್ ಬಾಂಡ್ ಮೇಲೆ ತಮ್ಮ ಸ್ವಯಂ ಮುಚ್ಚಳಿಕೆಯ ಆಧಾರದಮೇಲೆ ಅವರು ಹೊರಗೂ ಕೂಡ ಬರಬಹುದು ಎಂಬ ಭಾವನೆ ನಮಗೂ ಕೂಡ ಒಂದೊಂದು ಸಾರಿ ಬಂದುಬಿಡುತ್ತದೆ, ನಾನೇ ಹೇಳಿದೆ ಅದನ್ನು ಬರೆದುಕೊಟ್ಟು ಹೊರಗಡೆ ಬರುವುದು ಬೇಡವೇ ಇದು ಸಣ್ಣ ವಿಚಾರ. ಇದಕ್ಕೆ ಏಕಷ್ಟು ತೊಂದರೆ ಎನ್ನತಕ್ಕಂಥದ್ದು. ಮಾನ್ಯ ಸದಸ್ಯಣೇಯವರು ಹೇಳಿದ ಹಾಗೆ ನಮಗೆ ಅನಿಸುತ್ತದೆ ಆ ಕಾನೂನಿನಲ್ಲಿ ಏನಿದೆ ಅಂತ ಅಂದರೆ ನನಗೆ ಕೂಡ ಗೊತ್ತಿರುವ ಹಾಗೆ ನಾವೆಲ್ಲ ವಕೀಲರಾಗಿ ಕೆಲಸ ಮಾಡಿರತಕ್ಕಂಥವರು ತಾವು ವಕೀಲರಲ್ಲ ಎಂದು ಕಾಣುತ್ತದೆ. ನೀವು ಇಂಜಿನಿಯರ್ ಆದರೂ ಕೂಡ ನೀವು ಕಾನೂನಿನ ಚೌಕಟ್ಟಿನಲ್ಲೇ ಏನು ಮಾತನಾಡಿದ್ದೀರಿ, ನಾನು ಅದನ್ನು ಬಹಳ ಮೆಚ್ಚುತ್ತೇನೆ. ಇಲ್ಲಿರತಕ್ಕಂಥ ಪ್ರಶ್ನೆ ಸ್ವಯಂ ಮುಚ್ಚಳಿಕೆ ನಾನೇಕೆ ಬರೆದುಕೊಡಬೇಕು, ನಾನು ಹೋರಾಟ ಮಾಡಿದ್ದು ಸಾರ್ವಜನಿಕರ ಒಂದು ವಿಚಾರ, ರೈತರ ಬಗ್ಗೆ ಹೋರಾಟ ಮಾಡಿದ್ದೇನೆ ಎಂಬತಕ್ಕಂಥ ಭಾವನೆ, ಕೆಲವೊಮ್ಮೆ ಆ ವ್ಯಕ್ತಿಗೆ ಬಂದಾಗ ಅದೇ ಪರಿಪಾಠವಾಗಿ ಆದಿತೇನೊ ಎಂಬ ದೃಷ್ಟಿಯಿಂದ ನಿಮ್ಮ ಮನಸ್ಸಿನಲ್ಲಿ ಇದೆ ಎಂದು ನನ್ನ ಭಾವನೆ. ಅದಕ್ಕೆ ನಾನು ಏನು ಹೇಳುತ್ತೇನೆಂದರೆ, ಕೋರ್ಟಿಗೆ ಈಗ ನೀವು ಕೇಸು ದಾಖಲು ಮಾಡಿದ್ದೀರಿ. I don't think any chargesheet is filed against Mr. Y.K. Ramaiah. I think only FIR is filed.

ಇನ್ನೂ ಚಾರ್ಜ್ ಷೀಟ್ ಹಾಕಿಲ್ಲ. ನಾವು ಇನ್ನೂ ಕೂಡ pre-charge sheedingg a person ಸ್ಟೇಜ್‌ನಲ್ಲಿದ್ದೇವೆ. ಅಂದರೆ ಇನ್ನೂ ಎಫ್.ಐ.ಆರ್. ಸ್ಟೇಜ್‌ನಲ್ಲೇ ಪ್ರಕರಣ ಇದೆ. ನಾನು ಹೇಳುವುದೇನೆಂದರೆ ಚಾರ್ಜ್-ಷೀಟ್ ಹಾಕುವುದು ಬಿಡುವುದು ಸರ್ಕಾರಕ್ಕೆ ಬಟ್ಟಿದ್ದು. ಅಥವಾ ಗೃಹ ಇಲಾಖೆಯ ಮುಖಾಂತರ ನೀವೇನು ವಿಚಾರಣೆ ನಡೆಸುತ್ತಿರೋ ಅವರಿಗೆ ಬಿಟ್ಟಿದ್ದು. ನಮ್ಮ ಅಭಿಪ್ರಾಯದಲ್ಲಿ ಇಂತಹ ವಿಚಾರಗಳಿಗೆ ಚಾರ್ಜ್ ಷೀಟ್ ಹಾಕಬಾರದು. ನಾನು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ರೈತ ಸಂಘದವರ ಮೇಲೆ ಹಾಕಿರತಕ್ಕ ಕೇಸ್‌ಗಳನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ಸದನದ ಹಿಂದಿನ ಮಾನ್ಯ ಸದಸ್ಯರಾದ ಪ್ರೊ: ನಂಜುಂಡಸ್ವಾಮಿಯವರು ಕೋರಿದಾಗ, ನಾನು ಅದಕ್ಕೆ ಒಪ್ಪಿಗೆ ಕೊಟ್ಟೆ. ಅಷ್ಟೇ ಅಲ್ಲ ರೈತ ಸಂಘದ ಚಳುವಳಿ. ದಲಿತ ಸಂಘದ ಚಳುವಳಿ ವಿದ್ಯಾರ್ಥಿಗಳ ಚಳುವಳಿ ಅಲ್ಪಸಂಖ್ಯಂತರ ಚಳುವಳಿ ನಡೆದಂತಹ ಸಂದರ್ಭದಲ್ಲಿ ಅನೇಕ ಕಡೆಗಳಲ್ಲಿ ಅವರುಗಳ ಮೇಲೆ ಇದ್ದ ಕೇಸುಗಳನ್ನು ವಾಪಸ್ ತೆಗೆದುಕೊಳ್ಳಬೇಕೆಂದು ಎಲ್ಲಾ ರಾಜಕೀಯ ಪಕ್ಷಗಳು ಕೋರಿದಾಗ, once for all ನಾವು ಆ ಕೇಸ್‌ಗಳನ್ನು ಕ್ಲೋಸ್ ಮಾಡುವುದು ಒಳ್ಳೆಯದು ಎನ್ನುವ ದೃಷ್ಟಿಯಿಂದ ನೂರಾರು ಕೇಸ್‌ಗಳನ್ನು ಹಿಂದಕ್ಕೆ ತೆಗೆದುಕೊಳ್ಳತಕ್ಕ ವಿಚಾರದಲ್ಲಿ ನಮ್ಮ ಸರ್ಕಾರ ಆ ಸಂದರ್ಭದಲ್ಲಿ ಒಪ್ಪಿಗೆ ಕೊಟ್ಟಿತು. ಆ ರೀತಿಯಾಗಿ ಹಾಕಿರತಕ್ಕ ಎಲ್ಲಾ ಕೇಸ್‌ಗಳನ್ನು ಹಿಂದಕ್ಕೆ ತೆಗೆದುಕೊಳ್ಳಬೇಕೆಂದು ನಾವು ಸಚಿವ ಸಂಪುಟದಲ್ಲಿ ತೀರ್ಮಾನ ಮಾಡಿದೆವು. ಆದರೆ ಇಲ್ಲಿ ಇನ್ನೂ ಚಾರ್ಜ ಷೀಟೇ ಹಾಕಿಲ್ಲ ಎಫ್.ಐ.ಆರ್. ಸ್ಟೇಜ್‌ನಲ್ಲಿ ಇದೆ. ಚಾರ್ಜ್ ಷೀಟ್ ಹಾಕದೇ ಇರುವುದು ಬಹಳ ಒಳ್ಳೆಯದು. ಒಂದು ವೇಳೆ ನೀವು ಇದಕ್ಕೆ ಒಪ್ಪಿಗೆ ಕೊಟ್ಟರೆ ಎಲ್ಲರೂ ಕೂಡ ಇದೇ ರೀತಿ ಕೇಳಿದರೆ ಚಾರ್ಜ್ ಷೀಟ್ ಹಾಕಬೇಕೇ ಬಿಡಬೇಕೇ ಎಂಬುದು ನಿಮಗೆ ಕಷ್ಟವಾಗುತ್ತದೆ. ನಿಮ್ಮ ಅಭಿಪ್ರಾಯ ನೋಡಿದರೆ ಚಾರ್ಜ್ ಷೀಟ್ ಹಾಕುವ ಲಕ್ಷಣ ನನಗಂತೂ ಕಾಣುತ್ತಿಲ್ಲ.

ಮಾನ್ಯ ರಾಮಯ್ಯನವರಿಗೆ ಬಹಳ ಗೌರವ ಕೊಟ್ಟು ತಾವು ಮಾತನಾಡಿದ್ದೀರಿ. ನಾನೇನು ಹೇಳುತ್ತೇನೆ ಎಂದರೆ ಮಾನ್ಯ ಸದಸ್ಯರಾದ ವಾಟಾಳ್‌ರಾಗಲೀ ನಾಗೇಗೌಡರಾಗಲೀ ಶಿವನಂಜಪ್ಪನವರಾಗಲೀ ಯಾರೇ ಕೇಳಿದರೂ ಕೂಡ ರಾಜಕೀಯವಾಗಿ ಹೋರಾಟ ಮಾಡತಕ್ಕಂಥದ್ದು ಪ್ರಜಾಪ್ರಭುತ್ವದಲ್ಲಿರತಕ್ಕ ಹಕ್ಕಿನ ಪ್ರಶ್ನೆ.ಹಾಗೆ ನೀವು ಚಾರ್ಜ್ ಷೀಟ್ ಹಾಕುತ್ತಾ ಹೋದರೆ ಇದು ಬಹಳ ಕಷ್ಟ ಆಗತಕ್ಕಂತಹ ವಿಚಾರ. ಆದ್ದರಿಂದ ನಾನೇನು ಹೇಳುತ್ತೇನೆ ಎಂದರೆ ಚಾರ್ಜ್‌ಷೀಟ್ ಹಾಕುವುದಕ್ಕೆ ಹೋಗಬಾರದು. ಈ ಒಂದು ಸಲಹೆಯನ್ನು ತಾವು ತೀವ್ರವಾಗಿ ಪರಿಶೀಲನೆ ಮಾಡುತ್ತೀರೆಂದು ನಾನು ಭಾವಿಸುತ್ತೇನೆ. ಒಂದೇ ಸಾರಿ ತಾವು ಚಾರ್ಜ್ ಷೀಟ್ ಹಾಕುವುದಿಲ್ಲ ಎಂದು ಹೇಳಿದರೆ ಬಹಳ ಸಂತೋಷ. ಆದರೆ ಚಾರ್ಜ್ ಷೀಟ್ ಹಾಕುವುದು ಬಿಡುವುದು ನಿಮಗೆ ಬಿಟ್ಟಿರತಕ್ಕದ್ದು. ನೀವು ಅದನ್ನು ಗೌರವಮತಿಯಾಗಿ ಜವಾಬ್ದಾರಿಯದೇ ನೋಡುತ್ತೀರಿ ಎಂದು ನಾನು ಭಾವಿಸಿದ್ದೇನೆ. ಮತ್ತೊಂದು ವಿಚಾರ.ಬಾಂಡ್ ಮೇಲೆ ಬಿಡುಗಡೆ ಮಾಡುವುದು. ತಾವು ಒಪ್ಪಿದರೆ ಸೆಲ್ಫ್ ಬಾಂಡ್ ಮೇಲೂ ಸಹ ಬಿಡುಗಡೆ ಮಾಡಬಹುದು. ಆದರೆ ಚಾರ್ಜ್ ಷೀಟ್ ಹಾಕುವುದಿಲ್ಲ ಎಂದ ಮೇಲೆ ಆ ಪ್ರಶ್ನೆ ಬರುವುದಿಲ್ಲ. ಇವತ್ತು ಮಾನ್ಯ ರಾಮಯ್ಯನವರನ್ನು ನ್ಯಾಯಧೀಶರ ಮುಂದೆ ಹಾಜರು ಮಾಡುತ್ತೇವೆಂದು ತಾವು ನೆನಪು .ಅಥವಾ ಈಗಾಗಲೇ ಹಾಜರುಪಡಿಸಿದ್ದಾರೋ ಏನೋ ಗೊತ್ತಿಲ್ಲ. ಅನಾರೋಗ್ಯದ ಕಾರಣದ ಮೇಲೆ ಅವರನ್ನು ಬಿಡುಗಡೆ ಮಾಡಲಿಕ್ಕೆ ತಾವು ಒಪ್ಪಿಗೆ ಕೊಟ್ಟರೆ ಸಾರ್ವಜನಿಕ ಜೀವನದಲ್ಲಿ ಹೋರಾಟ ಮಾಡತಕ್ಕ ಒಬ್ಬ ವ್ಯಕ್ತಿಗೆ ಗೌರವವನ್ನು ಕೊಟ್ಟ ಹಾಗುತ್ತದೆ. ಅದು ನನ್ನ ಅನಿಸಿಕೆ. ಅಂತಿಮ ತೀರ್ಮಾನ ಸರ್ಕಾರಕ್ಕೆ ಬಿಟ್ಟಿದ್ದು. ಮಾತನಾಡಲಿಕ್ಕೆ ಅನುಮತಿ ಕೊಟ್ಟಿದ್ದಕ್ಕಾಗಿ ಮಾನ್ಯ ಉಪ ಸಭಾಧ್ಯಕ್ಷರನ್ನು ವಂದಿಸುತ್ತೇನೆ.

ಶ್ರೀ ಪಿ.ಜಿ.ಆರ್. ಸಿಂಧ್ಯಾ : ಮಾನ್ಯ ಉಪಾಧ್ಯಕ್ಷರೇ, ಈ ವಿಷಯವನ್ನು ಒಂದು ಪ್ರತಿಷ್ಠೆಯ ವಿಷಯವನ್ನಾಗಿ ಮಾಡಿಕೊಳ್ಳಲಿಕ್ಕೆ ಸರ್ಕಾರ ತಯಾರಿಲ್ಲ ವಾಸ್ತವಾಂಶಗಳನ್ನು ನಡೆದಿರತಕ್ಕ ವಿಚಾರಗಳನ್ನು ಈ ಸದನದ ಮುಂದೆ ಇಡತಕ್ಕದ್ದು. ಈ ಸ್ಥಾನದಲ್ಲಿ ಕುಳಿತುಕೊಂಡ ನನ್ನ ಕರ್ತವ್ಯ ಎಂದು ನಾನು ತಿಳಿದಿದ್ದೇನೆ. ಮಾನ್ಯ ಸದಸ್ಯರಾದ ಜಿ.ಎಸ್. ಶಿವನಂಜಪ್ಪನವರು ತುಮಕೂರಿನಲ್ಲಿ ಕೆಲಸಗಳು ಪ್ರಾರಂಭ ಆಗಬೇಕೆಂದು ಹೇಳಿದರು. ಅದನ್ನು ಆದಷ್ಟು ತೀವ್ರವಾಗಿ ಮಾಡಲಿಕ್ಕೆ ಸರ್ಕಾರ ಕ್ರಮ ತೆಗೆದುಕೊಳ್ಳುತ್ತದೆ ಎನ್ನತಕ್ಕ ಭರವಸೆಯನ್ನು ಕೊಟ್ಟು ಸದನ ಅತ್ಯಂತ....

(ಗೊಂದಲ)

ಶ್ರೀ ಕಾಗೋಡು ತಿಮ್ಮಪ್ಪ : ತುಮಕೂರಿನಲ್ಲಿ ಮಾತ್ರ ಟೆಂಡರ್ ಕರೆದು ಕೆಲಸ ಶುರು ಮಾಡುತ್ತೇವೆಂದು ಹೇಳಿದ್ದಾರೆ. ನಮ್ಮ ಊರಿನಲ್ಲಿ ಏಕೆ ಟೆಂಡರ್ ಕರೆಯುವುದಿಲ್ಲ? ಸಾರ್ವಜನಿಕ ಕೆಲಸಗಳು ಎಂದರೆ ಎಲ್ಲಾ ಕಡೆ ಒಂದೇ ರೀತಿ ಇರಬೇಕು.

(ಗೊಂದಲ)

ಉಪಾಧ್ಯಕ್ಷರು : ಈಗ ಸದನದ ಮುಂದೆ ಚರ್ಚಿಸತ್ತಿರುವ ವಿಷಯ ಮಾನ್ಯ ವೈ.ಕೆ. ರಾಮಯ್ಯನವರ ಬಿಡುಗಡೆ ಬಗ್ಗೆ. ಟೆಂಡರ್ ಬಗ್ಗೆ ಅಲ್ಲ. ಮತ್ತೆ ಆ ವಿಷಯವನ್ನು ಬೆಳೆಸುವುದಕ್ಕೆ ಹೋಗಬೇಡಿ. ಅದನ್ನು ಒಂದು ಸೀಮಿತವಾಗಿ ತೆಗೆದುಕೊಳ್ಳಿ.

ಶ್ರೀ ಪಿ.ಜಿ.ಆರ್. ಸಿಂಧ್ಯಾ : ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಸದಸ್ಯರಾದ ಕಾಗೋಡು ತಿಮ್ಮಪ್ಪನವರು ವಿಷಯಾಂತರ ಮಾಡಲಿಕ್ಕೆ ಹೊರಟಿದ್ದಾರೆ. ಆದರೆ ನಾನು ಅದಕ್ಕೆ ತಯಾರಿಲ್ಲ, ನಾನು ಸರ್ಕಾರದ ಸ್ಪಷ್ಟವಾದ ನಿರ್ಧಾರಗಳನ್ನು ಹೇಳುತ್ತಿದ್ದೇನೆ. ಎಷ್ಟೇ ಹಣಕಾಸಿನ ತೊಂದರೆ ಇದ್ದರೂ ನೀರಾವರಿ ವಿಚಾರದಲ್ಲಿ ಕಾಮಗಾರಿಗಳನ್ನು

ತ್ವರಿತವಾಗಿ ಪ್ರಾರಂಭಿಸುತ್ತೇನೆ. ಅದು ಟೆಂಡರ್ ಕರೆಯುವುದೋ ಆರ್‌ಬಿಟ್ರೇಷನ್‌ನೋ ಮತ್ತೊಂದೋ ಇರಬಹುದು. ಮಾನ್ಯ ಗೌರವಾನ್ವಿತ ಸದಸ್ಯರುಗಳಾದ ವಾಟಾಳ್ ನಾಗರಾಜ್, ನಂಜೇಗೌಡರು, ಪ್ರಮೀಳಾ ನೇಸರ್ಗಿಯವರು, ನಾಗೇಗೌಡರು, ಹಾಗೂ ಮಾಜಿ ಮುಖ್ಯಮಂತ್ರಿಗಳಾದ ಬಂಗಾರಪ್ಪನವರು ತಮ್ಮ ತಮ್ಮ ಭಾವನೆಗಳನ್ನು ಸದನದಲ್ಲಿ ವ್ಯಕ್ತ ಮಾಡಿದ್ದಾರೆ. ಈ ಪ್ರಕರಣವನ್ನು ಒಂದು ದೊಡ್ಡ ಪ್ರತಿಷ್ಠೆಯ ವಿಷಯವನ್ನಾಗಿ ಮಾಡಿಕೊಂಡು, ಇದರ ಬಗ್ಗೆ ಒಂದಿಷ್ಟು ಚರ್ಚೆ ಮಾಡಿ ಅವರಿಗೆ ದೊಡ್ಡ ಶಿಕ್ಷೆ ಕೊಡಿಸಬೇಕೆಂಬ ಉದ್ದೇಶವೇನೂ ಸರ್ಕಾರಕ್ಕಿಲ್ಲ. ಮಾನ್ಯ ರಾಮಯ್ಯನವರಿಗೆ ಕೈ ಮುಗಿದು ಹೇಳಿದ್ದಾರೆ ನಾಳೆ ಯುಗಾದಿ ಹಬ್ಬ ಇದೆ. ಮನೆಗೆ ಹೋಗಿ ಹಬ್ಬ ಆಚರಿಸಿ ಎಂದು ಆದರೂ ಅವರು ಇಲ್ಲ ನಾನು ಮನೆಗೆ ಹೋಗುವುದಿಲ್ಲ.

ಜೈಲಿಗೆ ಹೋಗಬೇಕು ಎಂದರೆ ಏನು ಮಾಡುವುದು. ಪೋಲೀಸ್ ಸ್ಟೇಷನ್‌ನಲ್ಲೂ ಅವರನ್ನು ಮನೆಗೆ ಹೋಗುವಂತೆ ಕೋರಿದ್ದಾರೆ. ಆದರೂ ಅವರು ಮಾತು ಕೇಳಲಿಲ್ಲ. ಇಷ್ಟೆಲ್ಲಾ ಹೇಳಿದ ಮೇಲೂ ಮಾನ್ಯ ವೈ.ಕೆ. ರಾಮಯ್ಯನವರನ್ನು ಮನವೊಲಿಸುವ ವಿಶ್ವಾಸ ನನಗಿಲ್ಲ. ನಿಮಗೆ ಹೇಳಬೇಕೆಂದರೆ ಒಂದು ರೀತಿಯಲ್ಲಿ ಅವರು ಒಂದು ತರಹ ಮನುಷ್ಯ. ಅದರ ಬಗ್ಗೆ ನಾನು ಇಲ್ಲಿ ಹೇಳಿದರೆ ತಪ್ಪಾಗುತ್ತದೆ. ಆದ್ದರಿಂದ ನಾನೇನೂ ಹೇಳಲಿಕ್ಕೆ ಹೋಗುವುದಿಲ್ಲ. ಮಾನ್ಯ ರಾಮಯ್ಯನವರನ್ನು ಕುಣಿಗಲ್‌ಗೋ ಮನೆಗೋ ವಾಪಸ್ ಕಳುಹಿಸಲಿಕ್ಕೆ ಪ್ರಾಮಾಣಿಕವಾಗಿ ಏನು ಮಾಡಬೇಕೋ ಅದನ್ನು ಆದ್ಯತೆ ಮೇಲೆ ಮಾಡಲಿಕ್ಕೆ ಪ್ರಯತ್ನ ಮಾಡುತ್ತೇನೆ.

ಉಪಾಧ್ಯಕ್ಷರು : ಈಗ ಚರ್ಚೆ ಸಾಕು. ಸಭೆಯನ್ನು ಈಗ ಮುಂದಕ್ಕೆ ಹಾಕುತ್ತಿದ್ದೇನೆ. ಮತ್ತೆ ಸಭೆ 2-45 ಕ್ಕೆ ಸೇರುತ್ತದೆ.

(ಸದನವು 1-46 ನಿಮಿಷಕ್ಕೆ ಮುಕ್ತಾಯಗೊಂಡು ಪುನಃ ಮಧ್ಯಾಹ್ನ 2.45ಕ್ಕೆ ಸಮಾವೇಶಗೊಳ್ಳಲು ನಿರ್ಧರಿಸಿತು)

(ಸಭೆ ಪುನಃ 3-10 ಗಂಟೆಗೆ ಸಮಾವೇಶಗೊಂಡಿತು. ಮಾನ್ಯ ಸಭಾಧ್ಯಕ್ಷರು ಶ್ರೀ ರಮೇಶ್‌ಕುಮಾರ್ ಪೀಠದಲ್ಲಿ ಉಪಸ್ಥಿತರಿದ್ದರು)

ಶ್ರೀ ಡಿ.ಕೆ. ಶಿವಕುಮಾರ್ : ಮಾನ್ಯ ಅಧ್ಯಕ್ಷರೇ, ಸಭೆಯನ್ನು ಇನ್ನೂ ಅರ್ಧಗಂಟೆ ಮುಂದೆ ಹಾಕಬೇಕಾಗಿತ್ತು. ಏಕೆಂದರೆ ಇಲ್ಲಿ ಮಂತ್ರಿಗಳೇ ಇಲ್ಲ. ಇಬ್ಬರು ರಾಜ್ಯಮಂತ್ರಿಗಳೂ ಮಾತ್ರ ಇದ್ದಾರೆ.

ಅಧ್ಯಕ್ಷರು : ಬರುತ್ತಾರೆ, ಬಿಡಿ.

ಶ್ರೀ ಡಿ.ಕೆ. ಶಿವಕುಮಾರ್ : ಇದರ ಬಗ್ಗೆ ತಾವು ಕೊನೆಯ ತೀರ್ಪನ್ನು ಹೇಳಬೇಕಾಗುತ್ತದೆ. ಆಡಳಿತಪಕ್ಷವಾಗಲೀ, ವಿರೋಧ ಪಕ್ಷವಾಗಲೀ, ಚರ್ಚೆ ನಡೆಯುವಾಗ ಮಂತ್ರಿಗಳು ಇರಬೇಕು.

ಶ್ರೀ ಎಂ. ನಾರಾಯಣ ಸ್ವಾಮಿ : ಇಬ್ಬರು ಮಂತ್ರಿಗಳು ಇದ್ದಾರಲ್ಲ. ನಾಗರಾಜಯ್ಯನವರು ಇದ್ದಾರೆ, ಮಿರಾಜುದ್ದೀನ್ ಅವರು ಇದ್ದಾರೆ.

ಶ್ರೀ ಎಲ್.ಆರ್. ಶಿವರಾಮೇಗೌಡ : ಅರ್ಧಮಂತ್ರಿಗಳು ಇಬ್ಬರು ಇದ್ದಾರೆ. ಪೂರಾ ಮಂತ್ರಿಗಳು ಯಾರೂ ಇಲ್ಲ.

ಶ್ರೀ ಡಿ.ಕೆ. ಶಿವಕುಮಾರ್ : ಇಲ್ಲಿ ಏನಾದರೂ ಚಕಮಕಿ ನಡೆದರೆ ಆಗ ಏನು ಮಾಡಬೇಕು? ಆಗ ಸರ್ಕಾರದ ಪರವಾಗಿ ಉತ್ತರ ಕೊಡುವವರು ಯಾರು?

ಶ್ರೀ ಡಿ. ನಾಗರಾಜಯ್ಯ : ಏನಾದರೂ ಚಕಮಕಿಯಾದರೆ ನಾವಿಬ್ಬರು ಇದ್ದೇವೆ. ಸಾರುಬಿಡಿ.

ಶ್ರೀ ಡಿ.ಕೆ. ಶಿವಕುಮಾರ್ : ತಾವು ನಮ್ಮ ರಕ್ಷಣೆಗೆ ಬರಬೇಕಾಗುತ್ತದೆ.

ಶ್ರೀ ಎಂ. ನಾರಾಯಣಸ್ವಾಮಿ : ಏನೂದರೂ ಹೆಚ್ಚು ಕಡಿಮೆಯಾದರೆ ಅವರು ಇದ್ದಾರೆ. ನೀವು ಹೆದರಿಕೊಳ್ಳುವುದು ಬೇಡ.

ಅಧ್ಯಕ್ಷರು : ಶರಣಪ್ಪನವರೇ ನೀವು ಶುರುಮಾಡಿ.

## ರಾಜ್ಯಪಾಲರ ಭಾಷಣಕ್ಕೆ ಸಲ್ಲಿಸತಕ್ಕ ವಂದನಾರ್ಪಣಾ ಪ್ರಸ್ತಾವದ ಮೇಲಿನ ಮುಂದುವರೆದ ಚರ್ಚೆ

ಶ್ರೀ ಕೆ. ಶರಣಪ್ಪ (ಕುಷ್ಟಗಿ) : ಮಾನ್ಯ ಅಧ್ಯಕ್ಷರೇ, ಮಾರ್ಚ್ 20ರಂದು ಮಾನ್ಯ ರಾಜ್ಯಪಾಲರು ಮಾಡಿದ ಭಾಷಣಕ್ಕೆ ಸಾಕಷ್ಟು ಹಿರಿಯ ಸದಸ್ಯರು ಪಾಲ್ಗೊಂಡು ಸಾಕಷ್ಟು ವಿಷಯಗಳನ್ನು ಅವರ ಭಾಷಣದ ಬಗ್ಗೆ ಮಾತನಾಡಿದ್ದಾರೆ. ಹಿರಿಯ ಸದಸ್ಯರು ಕೆಲವರು ವಿಷಯಗಳನ್ನು ಅವರ ಬಗ್ಗೆ ಮಾತನಾಡಿದ್ದಾರೆ. ಹಿರಿಯ ಸದಸ್ಯರು ಕೆಲವರು ರಾಜ್ಯಪಾಲರ ಭಾಷಣದ ಮೇಲೆ ಕಾಣಿಸಲಾದ ನೀತಿ ನಿರೂಪಣೆ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಅವರಲ್ಲಿ ಕೆಲವರು ಸಹ ವಿರೋಧ ಮಾಡಬೇಕೆಂಬ ಏಕೈಕ ಉದ್ದೇಶದಿಂದ ಸಾಕಷ್ಟು ಮೆಚ್ಚಗೆಯನ್ನು ವ್ಯಕ್ತಮಾಡಲಾಗದೆ ಟೀಕೆ ಟಿಪ್ಪಣಿಗಳನ್ನು ಸಹ ಮಾಡಿದ್ದಾಗಿದೆ. ವಾಸ್ತವವಾಗಿ ಮಾನ್ಯ ರಾಜ್ಯಪಾಲರ ಭಾಷಣದಲ್ಲಿ ಸರ್ಕಾರ ನೀತಿ ನಿರೂಪಣೆ ಬಗ್ಗೆ ಬಹಳ ಒಳ್ಳೆಯ ಮಹತ್ವದ ವಿಷಯಗಳನ್ನು ಪ್ರಸ್ತಾಪ ಮಾಡಿದ್ದಾರೆತ. ನಾನು ಒಂದೊಂದಾಗಿ ಅವುಗಳನ್ನು ವಿವರಿಸುವುದಕ್ಕೆ ಹೋಗದೆ ಸಂಕ್ಷಿಪ್ತವಾಗಿ, ಎಲ್ಲರೂ ಹೇಳಿದ್ದಕ್ಕಿಂತ ಬೇರೆಯಾಗಿ ಒಂದು ಸಲಹೆಯ ಜೊತೆಗೆ ಹೇಳುವುದಾದರೆ, ಈದ್ಗಾ ಮೈದಾನದ ಬಗ್ಗೆ ನಿಜವಾಗಿಯೂ ಸರ್ಕಾರ ತೆಗೆದುಕೊಂಡಂಥ ನಿರ್ಣಯ ಇಡೀ ರಾಷ್ಟ್ರದಲ್ಲೇ ಮೆಚ್ಚುಗೆ ಯಾದಂಥ ವಿಷಯ. ಈ ಜ್ವಲಂತ ಸಮಸ್ಯೆ ಕಾಂಗ್ರೆಸ್ ಸರ್ಕಾರದಲ್ಲಿ ಎಷ್ಟೇ ಪ್ರಯತ್ನ ಮಾಡಿದರೂ ಕೂಡ ಇತ್ಯರ್ಥವಾಗದೆ ಉಳಿದಿದ್ದಂಥ ವಿಷಯವನ್ನು ಇವರು ಅಧಿಕಾರಕ್ಕೆ ಬಂದು ಮೂರು ತಿಂಗಳ ಒಳಗೆ ಈ ಸಮಸ್ಯೆಯನ್ನು ಬಗೆಹರಿಸಿದಂತಹ ಯಶಸ್ಸು ಈ ಸರ್ಕಾರದ್ದಾಗಿದೆ. ನಾನು ಈ ಸದನದ ಮುಖಾಂತರ ಹೇಳುವುದೇನೆಂದರೆ, ನಮ್ಮ ಸರ್ಕಾರ ಮಾಡಿದಂಥ ಈ ಕೆಲಸ ಇಡೀ ರಾಷ್ಟ್ರದಲ್ಲಿ ಜ್ವಲಂತ ಸಮಸ್ಯೆಯಾಗಿರುವ ರಾಮಮಂದಿರ,

ಬಾಬರಿ ಮಸೀದಿ ಸಮಸ್ಯೆಯ ಪರಿಹಾರಕ್ಕೆ ಮಾರ್ಗ ಕಲ್ಪಿಸಲಿ ಮತ್ತು ಈ ಮಾದರಿಯ ಮುಖಾಂತರ ಅದಕ್ಕೆ ಉಪಯೋಗವಾಗಲಿ ಎಂದು ಈ ಸಂದರ್ಭದಲ್ಲಿ ನಾನು ಹೇಳುತ್ತೇನೆ. ಎರಡನೆಯದಾಗಿ ಇಡೀ ಕಾಂಗ್ರೆಸ್ ಸರ್ಕಾರದಲ್ಲಿ ಐದುವರ್ಷಗಳಲ್ಲಿ ಪಂಚಾಯತ್ ಚುನಾವಣೆಯನ್ನು ಬಿಟ್ಟು ಬೇರೆ ಯಾವುದೇ ಚುನಾವಣೆಯನ್ನು ಸಹ ಮಾಡಿರಲಿಲ್ಲ. ಅದನ್ನು ಕೂಡ ಪಂಚಾಯತ್ ಚುನಾವಣೆ ಬಗ್ಗೆ ಕೋರ್ಟಿನಿಂದ ಆದೇಶಬಂದಮೇಲೆ ಮಾಡಿದರೇ ಹೊರತು ಸ್ವತಃ ತಾವಾಗಿ ಏನೂ ಮಾಡಲಿಲ್ಲ. ಆದರೆ ಈ ಸರ್ಕಾರ ಅಧಿ ಕಾರಕ್ಕೆ ಬಂದ ಸ್ವಲ್ಪ ದಿವಸಗಳಲ್ಲೇ ಚುನಾವಣೆಯಲ್ಲಿ ಭರವಸೆ ಕೊಟ್ಟಂತೆ ಎರಡು ತಿಂಗಳೊಳಗೇ ಅಧಿಕಾರ ವಿಕೇಂದ್ರಿಕರಣದ ಬಗ್ಗೆ ಆಸಕ್ತಿ ವಹಿಸಿದ ಈ ಸರ್ಕಾರ ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಚುನಾವಣೆಗಳನ್ನು ಬಹಳ ಶಾಂತತೆಯಿಂದ, ಕಾಯಿದೆ ಬದ್ಧವಾಗಿ ನಡೆಸಿದ್ದು ಈ ಯಶಸ್ಸು ಕೂಡ ಈ ಸರ್ಕಾರಕ್ಕೆ ಸಲ್ಲುತ್ತದೆ. ಅಧಿಕಾರ ವಿಕೇಂದ್ರಿಕರಣದ ಬಗ್ಗೆ ಸರ್ಕಾರದ ಧೋರಣೆ ಏನಿದೆ, ಅದರಲ್ಲಿ ಎಷ್ಟರಮಟ್ಟಿಗೆ ಆಸಕ್ತಿಯನ್ನು ಹೊಂದಿದೆ ಎಂಬುದನ್ನು

ಅಧಿಕಾರಕ್ಕೆ ಬಂದ ಕೂಡಲೇ ನಡೆಸಿದ ಈ ಚುನಾವಣೆಗಳಿಂದ ತಿಳಿದು ಕೊಳ್ಳಬಹುದಾಗಿದೆ. ಈಗ ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಚುನಾವಣೆಗಳನ್ನು ಈ ಸರ್ಕಾರ ಮಾಡಿದಮೇಲೆ, ಇದರ ಜೊತೆಗೆ ಬಹಳ ದಿವಸಗಳಿಂದ ನೆನೆಗುದಿಗೆ ಬಿದ್ದಿರುವಂಥ ಎ.ಪಿ.ಎಂ. ಸಿ. ಮತ್ತು ಉಳಿದ ಇನ್ನಿತರ ಸಂಘಸಂಸ್ಥೆಗಳ ಚುನಾವಣೆಗಳನ್ನು ಕೂಡ ಬೇಗನೆ ಮಾಡಬೇಕೆಂದು ನಾನು ಈ ಸಂದರ್ಭದಲ್ಲಿ ಸೂಚಿಸಬಯಸುತ್ತೇನೆ.

ಇನ್ನೂ ಸಾಕಷ್ಟು ವಿಷಯಗಳನ್ನು ರಾಜ್ಯಪಾಲರ ಭಾಷಣದಲ್ಲಿ ಪ್ರಸ್ತಾಪ ಮಾಡಿದ್ದಾರೆ. ಒಂದೊಂದು ಹೇಳಬೇಕೆಂದರೆ, ರೈತರ ಬಗ್ಗೆ ಸಾಕಷ್ಟು ಆದ್ಯತೆಯನ್ನು ಕೊಡಲಾಗಿದೆ. ಅವರ ಬಡ್ಡಿ ಮನ್ನಾ ಮಾಡಿದ್ದು ಮತ್ತು ಬಡ ರೈತರಿಗೆ ಅಕ್ಕಿಯನ್ನು ಹಂಚಿದ್ದು ಹಾಗೂ ಬೆಲೆ ಏರಿಕೆಯ ವಿಚಾರದಲ್ಲಿ ಟನ್ ಓವರ್ ಟ್ಯಾಕ್ಸ್ ತೆಗೆದದ್ದು, ಇವು ರೈತರ ಬಗ್ಗೆ ಕೈಗೊಂಡ ಒಳ್ಳೆಯ ಕಾರ್ಯಕ್ರಮಗಳು ಆಗಿವೆ. ಈ ವಿಷಯಗಳು ರಾಜ್ಯಪಾಲರ ಭಾಷಣದಲ್ಲಿ ನಮೂದಾಗಿವೆ. ಇದಲ್ಲದೆ, ಇನ್ನೂ ನಮ್ಮ ರಾಜ್ಯದಲ್ಲಿರತಕ್ಕ ಸಮಸ್ಯೆಗಳು, ಅದು ಕುಡಿಯು ನೀರು ಇರಬಹುದು. ವಿದ್ಯುಚ್ಛಕ್ತಿ ಇರಬಹುದು, ಸಾರಿಗೆ ಇರಬಹುದು, ಇವೆಲ್ಲಾ ವಿಷಯಗಳಿಗೂ ಆದ್ಯತೆಯನ್ನು ಕೊಡಲಾಗಿದೆ. ಈ ವಿಷಯಗಳನ್ನು ಬರೀ ಭಾಷಣದಲ್ಲಿ ಕೂಡದೇ, ಬಜೆಟ್‌ನಲ್ಲೂ ಸಹಿತ ಕಾಣಿಸಿ, ನುಡಿದಂತೆ ನಡೆಯುವ ಸರ್ಕಾರ ಎನ್ನುವ ಧೋರಣೆಯನ್ನು ಕಂಡುಕೊಳ್ಳಲಾಗಿದೆ. ನೀರಾವರಿ ಬಗ್ಗೆಯೂ ಸಹಿತ ಸಾಕಷ್ಟು ಆದ್ಯತೆಯನ್ನು ಕೊಟ್ಟಿದ್ದಾರೆ. ಕೃಷ್ಣಾ ಭಾಗ್ಯ ಜಲ ನಿಗಮ ಯೋಜನೆಯನ್ನು ಹಾಕಿಕೊಂಡು, ಎರಡು ಸಾವಿರ ಇಸವಿಯೊಳಗೆ ಬಚಾವತ್ತ ವರದಿ ಪ್ರಕಾರ, ನೀರಿನ ಬಳಕೆ ಮಾಡುವಂತಥಾದ್ದು ನಮೂದಾಗಿದೆ. ಇದು ನಿಜವಾಗಿಯೂ ಒಳ್ಳೆಯ ವಿಷಯ, ಇದರಿಂದ ರಾಜ್ಯಸರ್ಕಾರಕ್ಕೆ ಒಳ್ಳೆಯ ಹೆಸರು ಬರುತ್ತದೆ. ಆದ್ದರಿಂದ, ಇದು ಕೃತಿಯಲ್ಲಿ ಬರಲಿ ಎಂದು ಹಾರೈಸುತ್ತೇನೆ. ಇನ್ನು ಮಹಿಳೆಯರಿಗೆ ಮತ್ತು ಹರಿಜನ ಗಿರಿಜನರ ಕಲ್ಯಾಣ ಹೀಗೆ ಸಾಕಷ್ಟು ವಿಷಯಗಳು ಅವರ ಭಾಷಣದಲ್ಲಿ ಪ್ರಸ್ತಾಪವಾಗಿದೆ. ಇನ್ನು ಭಾಷಣದಲ್ಲಿ ನಮೂದು ಮಾಡಿದೆ. ಎಲ್ಲಾ ಮನುಷ್ಯನಿಗೂ ತಲೆಯ ಮೇಲೊಂದು ಸೂರು ಎಂಬಂತೆ ಎಲ್ಲರಿಗೂ ನಿವೇಶನ ಒದಗಿಸಿಕೊಡುವಂಥ ಪ್ರಸ್ತಾಪ ಸಹಿತ ರಾಜ್ಯಪಾಲರ ಭಾಷಣದಲ್ಲಿ ಇದೆ.ನಿಜವಾಗಿಯೂ ಇದು ಬಡವರ ಕಾರ್ಯಕ್ರಮ, ಇದು ಬಹಳ ಅವಶ್ಯ ಇದೆ. ಈ ಕಾರ್ಯಕ್ರಮ ಬರೀ ಭಾಷಣದಲ್ಲಿಯೇ ಅಲ್ಲದೆ, ತೀವ್ರಗತಿಯಲ್ಲಿ ಕೃತಿಯಲ್ಲಿಯೂ ಬರಲಿ ಎಂದು ಹೇಳುತ್ತೇನೆ. ಇನ್ನು ಹೊಸ ಸರ್ಕಾರ ಆಶ್ರಯ ಕಮಿಟಿಯ ಚೇರ್ಮನ್‌ಷಿಪ್ ಬಗ್ಗೆಯೂ ಸಹಿತ, ಈ ಸದನದ ಸದ್ಯರೇ ಆಗಬೇಕೆಂಬ ಸೂಚನೆಯನ್ನು ಇಟ್ಟಿದೆ. ಇನ್ನು ಆರೋಗ್ಯದ ಬಗ್ಗೆ ಶಿಕ್ಷಣದ ಬಗ್ಗೆ ಹೊಸ ಹೊಸ ಯೋಜನೆಗಳನ್ನು ಹಾಕಿಕೊಂಡಿರುವ ಬಗ್ಗೆ ರಾಜ್ಯಪಾಲರ ಭಾಷಣದಲ್ಲಿ ನಮೂದಾಗಿದೆ. ಅವೆಲ್ಲವೂ ಕೃತಿಯಲ್ಲಿ ಬಂದೇ ತೀರತ್ತವೆಂಬ ಭಾವನೆಯನ್ನು ವ್ಯಕ್ತಮಾಡುತ್ತೇನೆ.

ಹಸಿರು ಕಾರ್ಡು ಇರಬಹುದು, ಬಡ್ಡಿ ಮನ್ನಾ ಮಾಡಿದ್ದು ಇರಬಹುದು ಹೀಗೆ, 3-4 ಅಂಶಗಳ ಬಗ್ಗೆ ಈಗಾಗಲೇ ಬಜೆಟ್‌ನಲ್ಲಿ ಸಹಿತ ದುಡ್ಡನ್ನು ಕಾದಿರಿಸಿ, 1995-96ನೇ ಇಸವಿಯಲ್ಲಿ ಜಾರಿಗೆ ತರತಕ್ಕ ಪ್ರಯತ್ನ ಮಾಡಿದೆ. ಈ ದಿಸೆಯಲ್ಲಿ ಹೇಳುವುದಾದರೆ, ರಾಜ್ಯಪಾಲರ ಭಾಷಣದಲ್ಲಿ ಏನೇನು ನಮೂದು ಮಾಡಿದೆ, ಅವೆಲ್ಲವೂ 1995-96ನೇ ಇಸವಿಯಲ್ಲಿ, ಚಾಚೂ ತಪ್ಪದೆ ಜಾರಿಗೆ ಬರುತ್ತವೆಂಬ ಆಶಾಕಿರಣವನ್ನು ಹೊಂದಿದ್ದೇವೆ. ಈ ದಿಸೆಯಲ್ಲಿ ನಾವೆಲ್ಲರೂ ಸಹಿತ ರಾಜ್ಯಪಾಲರ ಭಾಷಣಕ್ಕೆ ವಂದನೆಯನ್ನು ಸಲ್ಲಿಸಬೇಕಾಗುತ್ತದೆ. ನನಗೆ, ಈ ರೀತಿ ವಂದನೆಯನ್ನು ಸಲ್ಲಿಸತಕ್ಕ ಪ್ರಸ್ತಾವದ ಮೇಲೆ ಮಾತನಾಡಲು ಸಮಯ ಕೊಟ್ಟಿದ್ದಕ್ಕೆ, ಅವರಿಗೆ ವಂದನೆಗಳನ್ನು ಸಲ್ಲಿಸಿ,ನನ್ನ ಮಾತುಗಳನ್ನು ಮುಗಿಸುತ್ತೇನೆ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ (ಬಾಗೆಪಲ್ಲಿ) : ಸನ್ಮಾನ್ಯ ಅಧ್ಯಕ್ಷರೇ,ಕಳೆದ 4 ತಿಂಗಳಲ್ಲಿ ಜನತಾ ದಳದ ಸರ್ಕಾರ ಎರಡನೇ ಬಾರಿಗೆ ರಾಜ್ಯಪಾಲರ ಭಾಷಣದ ಮೇಲೆ ವಂದನೆಯನ್ನು ಸಲ್ಲಿಸತಕ್ಕ ಚರ್ಚೆಯನ್ನು ಮಾಡುತ್ತಿದ್ದೇವೆ. ಸಾಮಾನ್ಯವಾಗಿ ರಾಜ್ಯಪಾಲರ

ಭಾಷಣದ ಮೇಲೆ ಚರ್ಚೆ ಬಜೆಟ್‌ಗೆ ಮೊದಲು ನಡೆಯಬೇಕಾಗಿತ್ತು. ಅದು ಸರಿಯಾದ ಸಂಪ್ರದಾಯ ಕಾರಣ ಇಷ್ಟೆ, ರಾಜ್ಯಪಾಲರ ಭಾಷಣ ಎಂದು ಹೇಳಿದರೆ, ಸರ್ಕಾರದ ಒಂದು ಧೋರಣೆ ಬಜೆಟ್ ಎಂದು ಹೇಳಿದರೆ, ಸರ್ಕಾರದ ಕಾರ್ಯಕ್ರಮದ ಕಲ್ಪನೆ. ಧೋರಣೆ ಹೇಗಿರುತ್ತದೋ ಅದರ ಆಧಾರದ ಮೇಲೆ ಸರ್ಕಾರದ ಕಾರ್ಯಕ್ರಮಗಳು ನಡೆಯುತ್ತವೆ. ಮೊದಲಿಗೆ, ಧೋರಣೆ ಎನ್ನತಕ್ಕ ವಿಷಯವನ್ನು ಚರ್ಚೆ ಮಾಡದೆ, ಧೋರಣೆ ಏನು ಎನ್ನುವುದನ್ನೇ ತಿಳಿಯದೇ, ಕಾರ್ಯಕ್ರಮ ರೂಪಿಸುವುದು ಸಾಧ್ಯವಿಲ್ಲವೆನ್ನತಕ್ಕಂಥಾದ್ದು ನನ್ನಅಭಿಪ್ರಾಯ ಆದ್ದರಿಂದ ರಾಜ್ಯಪಾಲರ ಭಾಷಣದ ಮೇಲೆ ಮೊದಲು ಚರ್ಚೆಯಾಗಬೇಕಾಗಿತ್ತು. ಆಮೇಲೆ ಬಜೆಟ್ ಮೇಲೆ ನಡೆಯಬೇಕಾಗಿತ್ತು. ಈ ನಾಲ್ಕು ತಿಂಗಳಲ್ಲಿ, ಎರಡನೇ ಸಲ ರಾಜ್ಯಪಾಲರ ಭಾಷಣದ ಮೇಲೆ ಚರ್ಚೆ ನಡೆಯುವಂಥಾದ್ದು ನಡೆದಿದೆ. ಪ್ರಥಮ ಸಂದರ್ಭದಲ್ಲಿ, ರಾಜ್ಯಪಾಲರ ಭಾಷಣದಲ್ಲಿ ಹೇಳಿದಂಥ ಹೆಚ್ಚಿನ ಅಂಶಗಳೇ, ಇದರಲ್ಲಿಯೂ ಪ್ರಸ್ತಾಪವಾಗಿದೆ. ಯಾವುದೇ ರೀತಿಯ ಹೊಸ ವಿಚಾರಗಳು ಇದರಲ್ಲಿ ಇಲ್ಲ. ಮತ್ತು ನಿರ್ದಿಷ್ಟವಾದ ಗುರಿ ಇಲ್ಲ. ಏನನ್ನು ಮಾಡಬೇಕೆಂಬ, ಯಾವ ಸಂದರ್ಭದಲ್ಲಿ, ಯಾವ ಸಮಸ್ಯೆಯನ್ನು, ಯಾವ ಹಂತದಲ್ಲಿ ,ಹೇಗೆ ನಿವಾರಣೆ ಮಾಡಬೇಕೆಂಬ ಬಗ್ಗೆ ಸ್ಪಷ್ಟವಾದ ಗುರಿ ಕೂಡ ಇಲ್ಲ. ಸನ್ಮಾನ್ಯ ಅಧ್ಯಕ್ಷರೇ,ನಾನು ನಿವಾರಣೆ ಮಾಡಬೇಕೆಂಬ ಬಗ್ಗೆ ಸ್ಪಷ್ಟವಾದ ಗುರಿ ಕೂಡ ಇಲ್ಲ. ಸನ್ಮಾನ್ಯ ಅಧ್ಯಕ್ಷರೇ, ನಾನು ಬಜೆಟ್ ಮೇಲೆ ಭಾಷಣ ಮಾಡುವಾಗ, ಎರಡು ಪ್ರಮುಖ ವಿಷಯಗಳನ್ನು ಈ ಬಜೆಟ್‌ನಲ್ಲಿ ಯಾವುದೇ ಕಾರ್ಯಕ್ರಮ ಇಲ್ಲ. ನಾನು ಬಜೆಟ್ ಮೇಲೆ ಮಾತನಾಡುವಾಗ, ಹೆಚ್ಚಿನ ಅಂಶ ಭೌತಿಕ ದಾರಿದ್ರ್ಯವನ್ನು ನಿವಾರಣೆ ಮಾಡುವುದಕ್ಕೆ ಸರ್ಕಾರ ಏನಾದರೂ ಕಾರ್ಯಕ್ರಮ ಹಾಕಿದೆಯೇ ಎನ್ನುವುದರ ಬಗ್ಗೆ ಚರ್ಚೆ ಮಾಡಿದೆ ಮತ್ತು ಈ ಭೌತಿಕ ದಾರಿದ್ರ್ಯವನ್ನು ನಿವಾರಣೆ ಮಾಡುವ ನಿಟ್ಟಿನಲ್ಲಿ ಸರ್ಕಾರದ ಯಾವುದೇ ರೀತಿಯ ಧೋರಣೆ ಸ್ಪಷ್ಟವಾಗಿಲ್ಲವೆಂದು ಹೇಳಿದೆ. ಎರಡನೇ ಅಂಶ, ಈ ರಾಜ್ಯದ ಭೌತಿಕ ದಾರಿದ್ರ್ಯವನ್ನು ಹಿಮ್ಮೆಟ್ಟಿಸುವುದರಲ್ಲಿ ಕಾರ್ಯಕ್ರಮ ಇಲ್ಲದೇ ಇರುವುದು ಒಂದು ಕಡೆಯಾದರೆ, ಇನ್ನೊಂದುಕಡೆ ಈ ಭೌತಿಕ ದಾರಿದ್ರ್ಯ ನಮ್ಮಲ್ಲಿ ಎಷ್ಟು ಹೆಚ್ಚಾಗುತ್ತಿದೆ ಎಂದು ಹೇಳಿದರೆ, ಇತ್ತೀಚೆಗೆ, ಸರ್ಕಾರ ಮಹಾಚೈತ್ರ ಪುಸ್ತಕವನ್ನು ಹಿಂದಕ್ಕೆ ತೆಗೆದುಕೊಂಡಿರತಕ್ಕಂಥಾದ್ದು ಸ್ಪಷ್ಟವಾದ ನಿದರ್ಶನ. ಈ ಸರ್ಕರಕ್ಕೆ ನಮ್ಮ ರಾಜ್ಯದಲ್ಲಿ, ಭೌತಿಕ ಬೆಳವಣಿಗೆಯಾಗತಕ್ಕ ದೃಷ್ಟಿಯಾಗಲೀ ಅಥವಾ ಅದನ್ನು ಬೆಳೆಸತಕ್ಕ ವಿಷಯವಾಗಲೀ ಈ ಸರ್ಕಾರದ ಮುಂದೆ ಇಲ್ಲ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಮಾನ್ಯ ಅಧ್ಯಕ್ಷರೇ, ಪಂಯಿಂಟ್ ಆಫ್ ಆರ್ಡರ್ ನಾನು ಸಭಾಧ್ಯಕ್ಷರನ್ನು ಕೇಳುವುದು ಇಷ್ಟೆ. ಪುಸ್ತಕ ಯಾರಾದರೂ ಬರೆಯಬಹುದು. ಏನು ಬೇಕಾದರೂ ಬರೆಯಬಹುದು. ಯಾವುದನ್ನು ಇಡಬೇಕೆಂದು ಇದ್ದರೆ, ಅದನ್ನು ಮಾಡುವುದಕ್ಕೆ ಸಾಧ್ಯವಿದೆ. ಆದರೆ, ಪುಸ್ತಕ ಬರೆದಾಗ, ಒಂದು ಸಂಪ್ರದಾಯವನ್ನು ಇಟ್ಟು, ಆ ಸಂಪ್ರದಾಯಕ್ಕೆ ಅನ್ವಯವಾಗುವಂತೆ ಬರೆಯಬೇಕು. ಇದರಲ್ಲಿ ಬಸವಣ್ಣನವರ ಬಗ್ಗೆ, ಅಲ್ಲಮ ಪ್ರಭುಗಳ ಬಗ್ಗೆ ಅಕ್ಕಮಹಾದೇವಿಯರ ಬಗ್ಗೆ ಮತ್ತು ಅನೇಕ ಶರಣರ ಬಗ್ಗೆ ಬರೆದಾಗ, ಈ ಪುಸ್ತಕವನ್ನು ಪಠ್ಯಪುಸ್ತಕ ಸಮಿತಿಯವರು ನೋಡದೇ ಕಣ್ಣುಮುಚ್ಚಿ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕವನ್ನಾಗಿ ಇಟ್ಟಾಗ, ಅದನ್ನು ತೆಗೆಯಬೇಕಾದ ಸಂದರ್ಭ ಬಂದುದನ್ನು ನೀವು ಸರಿ ಎಂದು ಹೇಳುತ್ತೀರಾ ಅಥವಾ ಏನುಬೇಕಾದರೂ ಬರೆದು, ಅದನ್ನು ಮಕ್ಕಳಿಗೆ ಕೊಡಬಹುದು ಎಂದು ಹೇಳುತ್ತೀರಾ? ಹಾಗಿದ್ದರೆ ಈಗ ಬ್ಲೂ ಫಿಲಂ ಬಂದಿದೆ, ಅದನ್ನೂ ಮಕ್ಕಳಿಗೆ ಇಟ್ಟುಬಿಡಿ....

(ಗೊಂದಲ)

ಶ್ರೀ ಡಿ. ಮಂಜುನಾಥ್ (ಉನ್ನತ ಶಿಕ್ಷಣ ಸಚಿವರು) : ಮಾನ್ಯಸದಸ್ಯರು, ಅವರ ಅಭಿಪ್ರಾಯವನ್ನು ಹೇಳುತ್ತಿದ್ದಾರೆ, ಹೇಳಲಿ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಅವರು ಅಭಿಪ್ರಾಯವನ್ನು, ಅವರು ಹೇಳಬಹುದು, ಆದರೆ ನಮ್ಮ ಅಭಿಪ್ರಾಯವನ್ನು, ನಾವು ಹೇಳುತ್ತೇವೆ. ಈ ರೀತಿಯಾದರೆ ಹೇಗೆ? ಅವರು ನಾವು ಮಾತನಾಡುವ ಹಕ್ಕನ್ನು ಕಸಿದುಕೊಳ್ಳುತ್ತಿದ್ದಾರೆ. ತ ಪಾಯಿಂಟ್ ಆಫ್ ಆಡರ್ ಎಂದು ಹೇಳಬೇಕು. ಅವರು ಪಾಯಿಟ್ ಆಫ್ ಆರ್ಡರ್ ರೈಸ್ ಮಾಡಿ, ಅಷ್ಟಕ್ಕೆ ಬಿಟ್ಟರೆ ಹೇಗೆ, ನಾವು ಏನೇನು ಹೇಳಬಾರದು ಎಂಬುದನ್ನು ಅವರು ಹೇಳಲಿ

ಶ್ರೀಮತಿ ಪ್ರಮೀಳಾ ನೇಸರ್ಗಿ : ಸದನದಲ್ಲಿ ಹೇಳಬೇಕಾದರೆ ಮೂಲಭೂತ ಹಕ್ಕು Freedom of speech with resriction. ಎಲ್ಲಾ ಜವಾಬ್ದಾರಿಯಿಂದ ಮಾತನಾಡಬೇಕು.

ಶ್ರೀ ಹೆಚ್. ಶಿವಪ್ಪ : ನಾವು ಹಳ್ಳಿಗಾಡಿನಿಂದ ಬಂದವರು. ಇಲ್ಲಿ ಎಂಥೆಂಥವೋ ಹೊಸ ಪದಗಳು ಬರುತ್ತಿವೆ, ಈ ಪದಗಳಿಗೆ ಅರ್ಥ ಗೊತ್ತಿಲ್ಲ, ಭಾವನೆ ಗೊತ್ತಿಲ್ಲ ಈ ಪದಗಳನ್ನು ತೆಗೆದು ಹಾಕಿ. ಬ್ಲೂ ಫಿಲಂ ಎನ್ನುವುದನ್ನು ಸದಸ್ಯರಾದ ಪ್ರಮೀಳಾ ನೇಸರ್ಗಿಯವರು ಬಳಸಿದ್ದಾರೆ. ಅದನ್ನು ಕಡತದಿಂದ ತೆಗೆಯಿರಿ. That itself constitutes unparlimontary. That is not the word to be used here. please expunge it.

(ಗೊಂದಲ)

2 ಜಿ.ವಿ. ಶ್ರೀರಾಮರೆಡ್ಡಿ : ಮಾನ್ಯ ಅಧ್ಯಕ್ಷರೇ, ನಾನು ಪುಸ್ತಕ ತಂದಿದ್ದೇನೆ. ಅದರಲ್ಲಿ ಏನು ಇದೆ ಅಂತ ನಾನು ಹೇಳುತ್ತೇನೆ. ನನಗೆ ಅವಕಾಶ ಕೊಡಬೇಕು. ಕರ್ನಾಟಕ ರಾಜ್ಯದಲ್ಲಿ ಭೌತಿಕ ದಾರಿದ್ರ್ಯವನ್ನು ಮೊಟಕುಗೊಳಿಸಲಿಕ್ಕೆ ಸರ್ಕಾರ ಒಂದು ಕಡೆ ಪ್ರಯತ್ನ ಮಾಡುತ್ತಿದ್ದರೆ ಭೌತಿಕ ದಾರಿದ್ರ್ಯವನ್ನು ಬೆಳೆಸಲೇಬಾರದು ಎಂದು ಹೇಳತಕ್ಕಂಥ ಶಕ್ತಿಗಳು ಪ್ರಾಭಾವದಿಂದ ಇವತ್ತು ಮಹಾಚೈತ್ರದ ಪುಸ್ತಕವನ್ನು ಹಿಂದಕ್ಕೆ ತೆಗೆದುಕೊಂಡಿದ್ದಾರೆ. ಆ ಮಹಾಚೈತ್ರದ ಪುಸ್ತಕದಲ್ಲಿ ಬಸವಣ್ಣನವರ ಬಗ್ಗೆ ಅವಹೇಳನಕರವಾದ ಮಾತುಗಳನ್ನು ಹೇಳಿದ್ದಾರೆ ಎಂದು ನಾನು ಹೇಳತಕ್ಕಂಥಾದ್ದು. ನಾನು ಪುಸ್ತಕ ತಂದಿದ್ದೇನೆ. ಇಲ್ಲಿ ನಾನು ಈ ವಿಷಯವನ್ನು ಸ್ಪಷ್ಟವಾಗಿ ಹೇಳುತ್ತಿದ್ದೇನೆ. Mr.Speaker : let us not go into it.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ತಾವು ನನ್ನ ಅಭಿಪ್ರಾಯವನ್ನು ಹೇಳಲು ಬಿಡಬೇಕು.

ಶ್ರೀ ಜಿ.ಎಸ್. ಶಿವನಂಜಪ್ಪ : ಮಾನ್ಯ ಅಧ್ಯಕ್ಷರೇ,ನನ್ನದೊಂದು ಕ್ರಿಯಾಲೋಪ. ಅವರು ಈ ವಿಷಯದ ಬಗ್ಗೆಬೇಕಾದರೆ ಅರ್ಧ ಗಂಟೆ ಕಾಲ ಚರ್ಚೆಮಾಡಲಿ ಬೇಕಾದರೆ. ಬೇಡ ಎಂದು ಹೇಳುವುದಿಲ್ಲ ಒಂದು ಸಮುದಾಯವನ್ನು ಹಿಯಾಳಿಸಿರತಕ್ಕಂಥಾದ್ದು ಅದರಲ್ಲಿ ಇದೆ. ನಾನು ಹೇಳುತ್ತೇನೆ ಅದು ಎಲ್ಲಿ ಅಂತ. ಬಸವಣ್ಣನವರನ್ನು ಅವರ ಶಿಷ್ಯರೇ ಒಪ್ಪದೇ ಇರತಕ್ಕಂಥ ಒಂದು ಪರಿಸ್ಥಿತಿ ಇದರಲ್ಲಿ ಬರುತ್ತದೆ. ಅಕ್ಕಮಹಾದೇವಿಯನ್ನು ಒಬ್ಬ ಸಾಮಾನ್ಯಾವಾಗಿರತಕ್ಕಂಥ ಹೆಣ್ಣು ಮಗಳಿಗೆ ಹೋಲಿಸಿದ್ದಾರೆ ಅದರಲ್ಲಿ ಅವರು. ಅಲ್ಲಮ್ಮ ಪ್ರಭುವನ್ನು ಹಿಯಾಳಿಸಿದ್ದಾರೆ. ಅದರಲ್ಲಿ ಹೆಚ್ಚಿನದೇನೂ ಅನಾಹುತ ವಾಗತಕ್ಕಂಥಾದ್ದು ಇಲ್ಲ ನಾನು ಓದಿದ್ದೇನೆ. ಆದರೆ ಬಸವಣ್ಣನವರನ್ನು ವಿಶ್ವಾಸ ಮಾನವ ಅಂತ ತತ್ವವನ್ನು ಭೋದನೆ ಮಾಡಿದಂಥ ಒಬ್ಬ ಮಹಾಪುರುಷನನ್ನು ಕೇವಲ ಒಬ್ಬ ಅವರ ಅನುಯಾಯಿಯಾಗಿರತಕ್ಕಂಥವನ್ನು ನಾನು ಒಪ್ಪುವುದಿಲ್ಲ. ಬಸವಣ್ಣನವರನ್ನು ಎನ್ನತಕ್ಕಂಥ ಮಾತು ಅದರಲ್ಲಿ ಬರುವುದರಿಂದ ಇವರಿಂದ ಇಡೀ

ಸಮುದಾಯಕ್ಕೆ ನೋವಾಗಿದೆ. ಆ ಬಗ್ಗೆ ಚರ್ಚೆ ಮಾಡುವುದಿದ್ದರೆ ಪ್ರತ್ಯೇಕವಾಗಿ ಒಂದು ದಿನ ಚರ್ಚೆ ಮಾಡಲಿ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಅವರು ಮಾತನಾಡಲಿ ನಾನು ಬೇಡ ಅಂತ ಹೇಳುವುದಿಲ್ಲ. ಮಾನ್ಯ ಅಧ್ಯಕ್ಷರೇ ನಾನುಪುಸ್ತಕವನ್ನು ಕೂಡ ತಂದಿದ್ದೇನೆ. ಇದರಲ್ಲಿ ಬಸವಣ್ಣನವರಿಗೆ ಅವಮಾನ ವಾಗತಕ್ಕಂಥ ಯಾವುದೇ ಒಂದು ಅಕ್ಷರ ಇಲ್ಲ. ನಾನು ಈ ಪುಸ್ತಕವನ್ನು ಓದುವುದಿಲ್ಲ. ಅದಕ್ಕೆ ಅವಕಾಶ ಬಹುಶಃ ತಾವು ಕೊಡುವುದಿಲ್ಲ. ಒಂದು ಅಕ್ಷರ ಇದರಲ್ಲಿ ಬಸವಣ್ಣನವರ ಅನುಯಾಯಿಗಳಾಗಿ ಮಡಿವಾಳಮಾಚುದೇವ ಆಗಬಹುದು ಅಡಪದ ಅಪ್ಪಯ್ಯ ಆಗಬಹುದು ಅವರಿಬ್ಬರು ಮಾತನಾಡತಕ್ಕಂಥ ಚರ್ಚೆಯಲ್ಲಿ ಇದರಲ್ಲಿ ಯಾವುದೇ ಅಂತಹ ಒಂದು ಅಕ್ಷರ ಕೂಡ ಇಲ್ಲ. ಎರಡನೆಯದಾಗಿ ಬಸವಣ್ಣನವರ ಬಗ್ಗೆ ಇಲ್ಲಿ ಅವಹೇಳನಕರವಾದಂತಹ ಮಾತುಗಳನ್ನು ಇಲ್ಲಿ ಯಾರಾದರೂ ಹೇಳಿದ್ದರೆ ಬಸವಣ್ಣನ ವಿರೋಧಿಗಳು ಬಿಜ್ಜಳನ ಅಸ್ಥಾನದಲ್ಲಿ ಕಲ್ಯಾಣದಲ್ಲಿದಂತಹ ಬಸವಣ್ಣನ ವಿರೋಧಿಗಳು ಹೇಳಿರುವಂಥಾದ್ದು ಅಷ್ಟು ಬಿಟ್ಟರೆ ಬೇರೆ ಯಾರೂ ಹೇಳಲಿಲ್ಲ. ಈ ಎರಡು ಪ್ರಶ್ನೆಗಳು ಇದರಲ್ಲಿ ಪ್ರಮುಖವಾಗಿ ಬರುತ್ತವೆ. ಒಂದು ಸರ್ಕಾರದ ಕ್ರಮದ ಪ್ರಶ್ನೆ. ಇನ್ನೊಂದು ಅಭಿವ್ಯಕ್ತ ಸ್ವಾತಂತ್ರ್ಯದ ಪ್ರಶ್ನೆ. ಇನ್ನೊಂದು ಚರಿತ್ರೆಯನ್ನು ತನ್ನ ಮೂಗಿಗೆ ನೇರವಾಗಿ ಬರೆಯಬೇಕೆಂದು ಒತ್ತಾಯ ಮಾಡತಕ್ಕಂಥ ಪಟ್ಟಭದ್ರ ಹಿತಾಸಕ್ತಿಗಳು ಪ್ರಶ್ನೆ. ಇವು ಮೂರು ಪ್ರಶ್ನೆಗಳು ಇದರಲ್ಲಿ ಉದ್ಭವವಾಗುತ್ತದೆ.

ಚರಿತ್ರೆಯಲ್ಲಿ ಒಂದನೆಯದು, ಚರಿತ್ರೆಯಲ್ಲಿ ತಮಗೆ ತಿಳಿದ ಹಾಗೆ ಹಲವಾರು ಘಟನೆಗಳು ನಡೆಯುತ್ತವೆ. ಎಲ್ಲೂ ತಮ್ಮ ಮೂಗಿಗೆ ನೇರವಾಗಿ ನಡೆಯಬೇಕು ಅಂತ ಎಲ್ಲೂ ಇಲ್ಲ. ಅಥವಾ ಚರಿತ್ರೆಯಲ್ಲಿ ನಡೆದಂಥಥ ಘಟನೆಗಳು ನನ್ನ ಮೂಗಿನ ನೇರಕ್ಕೆ ಇಲ್ಲ ಅಂತ ಎನ್ನುವವ ಕಾರಣಕ್ಕೋಸ್ಕರ ಇಡೀ ಇತಿಹಾಸವನ್ನು ಅಲ್ಲಗಳೆಯತಕ್ಕಂಥಾದ್ದು ನಾವು ಎಲ್ಲರೂ ಸೇರಿ ಇತಿಹಾಸಕ್ಕೆ ಮಾಡಿದಂಥ ದ್ರೋಹ ಆಗುತ್ತದೆ. ಎರಡನೆಯದು ಇತಿಹಾಸ ನನ್ನ ಮೂಗಿನ ನೇರಕ್ಕೆ ಆಗಬೇಕು ಎಂದು ಹೇಳತಕ್ಕಂಥಾದ್ದು ಒಂದು ಫ್ಯಾಸಿಸ್ಟ್ ಧೋರಣೆ ಆಗುತ್ತದೆ. ಇತಿಹಾಸವನ್ನು ಯಾರ ಮೂಗಿನ ನೇರಕ್ಕೆ ಬರೆಯಲು ಸಾಧ್ಯಇಲ್ಲ. ಮಾನ್ಯ ಅಧ್ಯಕ್ಷರೇ, ಇವತ್ತುಅಂತ ಹೇಳಿ ಹೋರಾಟ ಮಾಡುತ್ತಿದ್ದಾರೆ ಅದೇ ಒಬ್ಬರು ಮಾತೆ ಮಹಾದೇವಿ ಕಲ್ಯಾಣ ಕ್ರಾಂತಿ ಎನ್ನತಕ್ಕಂಥ ಪುಸ್ತಕದಲ್ಲಿ ಬುದ್ದಿಗೇಡಿ ಬಸವ ಅಂತ ಕರೆಯುತ್ತಾರೆ. ಅವತ್ತು ಯಾರೂ ಮಾತನಾಡಲಿಲ್ಲ ಇವರು. ಅನಾಚಾರಿ ಬಸವ ಅಂತ ಕಲ್ಯಾಣ ಕ್ರಾಂತಿ ಎನ್ನತಕ್ಕಂಥ ಪುಸ್ತಕದಲ್ಲಿ ಹೇಳಿದ್ದಾರೆ ಅವತ್ತು ಯಾರೂ ಬಸವಣ್ಣನವರಿಗೆ ಅವಮಾನ ಮಾಡಿದ್ದಾರೆಂದು ಮಾತನಾಡಲಿಲ್ಲ. ಮಹಾಚೈತ್ರಕ್ಕಿಂತ ಹಿಂದೆ ಬರೆದಂತಹ ಪುಸ್ತಕ ಇದು. ಕಲ್ಯಾಣ ಕ್ರಾಂತಿ ಯಾರು ಆ ಕಲ್ಯಾಣ ಕ್ರಾಂತಿಯನ್ನು ಬರೆದರೋ ಅವರು ಇವತ್ತು ಬಸವಣ್ಣನ ಬಗ್ಗೆ ಅವಹೇಳನ ಮಾಡಿದ್ದಾರೆ ಅಂತ ಹೋರಾಟ ಮಾಡುತ್ತಿದ್ದಾರೆ. ಅದರ ಬಗ್ಗೆ ಮಾತನಾಡಲಿಲ್ಲ. ಮೂರನೇಯದಾಗಿ ಒಬ್ಬ ಲೇಖಕನಿಗೆ ನನಗೆ ಇಷ್ಟ ಬಂದ ರೀತಿಯಲ್ಲಿ ಬರೆಯಬೇಕು ಅಂತ ಇರುವುದಿಲ್ಲ. ಎರಡನೆದಾಗಿ ಒಬ್ಬ ಲೇಖಕನಿಗೆ ಲೇಖಕನಾಗಿ ಸಾಮಾಜಿಕ ಜವಾಬ್ದಾರಿ ಇರುತ್ತದೆ.

SRI H SHIVAPPA : Liberty is not a licence.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಆ ಜವಾಬ್ದಾರಿ ಹಿನ್ನಲೆಯಲ್ಲಿಯೇ ಆತನು ಕೂಡ ಬರೆಯಬೇಕಾಗುತ್ತದೆ. ಬೇಜವಾಬ್ದಾರಿಯಾಗಿ ಬರೆಯವುದಕ್ಕೆ ಆಗುವುದಿಲ್ಲ. ಆದರೆ ಒಬ್ಬ ಲೇಖಕ ಬರೆದಿದ್ದು ಇಡೀ ಸಮಾಜದಲ್ಲಿರತಕ್ಕಂಥ ಪ್ರತಿಯೊಬ್ಬ ಮನುಷ್ಯನಿಗೂ ಒಪ್ಪಿಗೆ ಆಗಬೇಕೆಂದು ಇಲ್ಲ. ಆತನ ಅಭಿವ್ಯಕ್ತ ಸ್ವಾತಂತ್ರ್ಯದ ಪ್ರಶ್ನೆ ಒಂದು ಕಡೆ ಆದರೆ ಸಮಾಜವನ್ನು ನೋಡತಕ್ಕಂಥ ದೃಷ್ಟಿ ಕೋನಗಳು ಬೇರೆ ಬೇರೆಯಾಗಿರುತ್ತವೆ.

ಇಂಥ ಒಂದು ಸಂದರ್ಭದಲ್ಲಿ ಸರ್ಕಾರ ಈ ಪುಸ್ತಕವನ್ನು ಪಠ್ಯಪುಸ್ತಕವಾಗಿ ಆಯ್ಕೆ ಮಾಡಲಿಕ್ಕೆ ಒಂದುಸಮಿತಿಯನ್ನು ರಚನೆ ಮಾಡಿತ್ತು. ಸರ್ಕಾರ ಆಯ್ಕೆ ಮಾಡಿರತಕ್ಕಂಥ ಪುಸ್ತಕ ಇದು ಅಲ್ಲ. ವಿಶ್ವವಿದ್ಯಾನಿಯದವರು ಆ ಪುಸ್ತಕವನ್ನು ಆಯ್ಕೆ ಮಾಡಿರತಕ್ಕಂಥ ಪುಸ್ತಕ ಇದು ಅಲ್ಲ. ವಿಶ್ವವಿದ್ಯಾನಿಲಯದವರು ಆ ಪುಸ್ತಕವನ್ನು ಆಯ್ಕೆ ಮಾಡಲಿಕ್ಕೆ ರಚನೆ ಮಾಡಿದಂತಹ ಸಮಿತಿಯಲ್ಲಿ ಅದರ ಅಧ್ಯಕ್ಷರು ಡಾಕ್ಟರ್ ಸಿದ್ದಯ್ಯ ಪುರಾಣಿಕ್. ಅವರಿಗೆ ಬಸವಣ್ಣನವರ ಮೇಲೆ ಇದ್ದ ಭಕ್ತಿಮೇಲೆ ಇವತ್ತು ಯಾರೂ ಪ್ರಶ್ನೆ ಮಾಡುವುದಕ್ಕೆ ಸಾಧ್ಯ ಇಲ್ಲ. ಅಂತಹವರು ಅಧ್ಯಕ್ಷರಾಗಿದ್ದಂಥ ಒಂದು ಸಮಿತಿಯೇ ಆಯ್ಕೆ ಮಾಡಿದಂತಹ ಒಂದು ಪುಸ್ತಕ. ಇದು ಈ ಪುಸ್ತಕವನ್ನು ಬರೆದಿದ್ದು 10 ವರ್ಷಗಳ ಹಿಂದೆ. ಎರಡು ಮೂರು ವರ್ಷಗಳಾದ ನಂತರ ಈ ಪುಸ್ತಕದಲ್ಲಿರುವ ಹುಳಕನ್ನು ನೋಡಿದ್ದಾರೆ. ಎನ್ನತಕ್ಕಂಥ ಅಂಶವನ್ನು ಇವತ್ತು ಹೇಳುತ್ತಾ ಇದ್ದಾರೆ. ಪಠ್ಯಪುಸ್ತಕ ಸಮಿತಿಯವರು ಇದನ್ನು ಆಯ್ಕೆ ಮಾಡಿದಾಗ ಯಾರೂ ಆ ಬಗ್ಗೆ ಅಕ್ಷೇಪಣೆಯನ್ನು ಎತ್ತಲಿಲ್ಲ. ಈ ಪುಸ್ತಕದ ಆಗ್ಗೆ ಹಲವಾರು ಭಿನ್ನಾಭಿಪ್ರಾಯಗಳು ಬಂದಾಗ ಅದನ್ನು ಪರಿಶೀಲನೆ ಮಾಡಿ ಅದನ್ನು ಪುಸ್ತಕವಾಗಿ ಮಾಡಬೇಕೇ ಅಥವಾ ಬಿಡಬೇಕೇ ಎನ್ನತಕ್ಕಂಥ ಅಲೋಚನೆ ಸರ್ಕಾರಕ್ಕೆ ಬಂದು ಅದಕ್ಕೆ ಸಲಹೆ ಕೊಡಲಿಕ್ಕೆ ಒಂದು ಸಮಿತಿಯನ್ನು ರಚನೆ ಮಾಡಿದ್ದೇವೆ ಎಂದು ಹೇಳಿ ಸರ್ಕಾರ ಆ ಸಮಿತಿಯವರು ಅಭಿಪ್ರಾಯವನ್ನು ಕೊಡುವುದಕ್ಕೆ ಮೊದಲೇ ಆ ಪುಸ್ತಕವನ್ನು ಪಠ್ಯಪುಸ್ತಕ ಅಲ್ಲವಾಗಿ ರದ್ದು ಮಾಡಿರತಕ್ಕಂಥಾದ್ದು ಇದು ಕಾನೂನಿನ ದೃಷ್ಟಿಯಿಂದ ಕೂಡ ಅಥವಾ ವಿಶ್ವವಿದ್ಯಾನಿಲಯಗಳ ಸ್ವಾಯುತ್ತತೆ ಅಧಿಕಾರ ದೃಷ್ಟಿಯಿಂದ ಕೂಡ ಇದು ಸರಿಯಲ್ಲ. ಇವತ್ತು ಮಹಾಚೈತ್ರದ ಒಂದು ಸುಸ್ತಕದ ಪ್ರಶ್ನೆ ಅಲ್ಲ. ಇಡೀ ಸರ್ಕಾರದ ಧೋರಣೆ ಪ್ರಶ್ನೆ ಇದು. ಸರ್ಕಾರ ಏನು ಹೇಳುತ್ತದೆ. ನಾನು ಇದರ ಬಗ್ಗೆ ಯಾವುದೇ ವಿಧವಾದಂಥ ಕ್ರಮವನ್ನು ತೆಗೆದುಕೊಂಡಿಲ್ಲ. ಅದು ರಾಜ್ಯಪಾಲರು ತೆಗೆದುಕೊಂಡಿರತಕ್ಕಂಥ ಕ್ರಮ ಆದ್ದರಿಂದ ಅದಕ್ಕೂ ನಮಗೂ ಯಾವುದೇ ರೀತಿಯಾಗಿರತಕ್ಕಂಥ ಸಂಬಂಧ ಇಲ್ಲ ಎನ್ನತಕ್ಕಂಥಥ ಮಾತನ್ನು ಹೇಳುತ್ತಾರೆ. ಸರ್ಕಾರದ ಆಜ್ಞೆಸ್ವಾಮಿ. 09ನೇ ತಾರೀಖು ಮಾರ್ಚಿ ಅದರಲ್ಲಿ ಈ ರೀತಿ ಹೇಳುತ್ತದೆ.

Government in their report dated 8th March 1995 have reported that seven swamijis are on the hunger strike in Bidar agitating forr the withdrawal of the book entitled 'Maha Chaitra' leading to grave law and order situation. The report is based on the message received from the Deputy Commissioner, Bidar District,Government have reviewed the situation prevailing in the District, in consulation with the principal secretary,Home Department and Additional Director General of police (Intelligence). Government considering the overall sitution in the matter have recommended His Excellency the chancellor,offf the Head of the University under section 7(2) of the karnataka state Universities Act,1976 to advice the vice chancellors of Gulbarga and Kuvempu Universities to withdrow the book in the 'Maha Chaitra ' immediately in exercise of the power vested in the vice Chancellor under Section 12(5) of the Karnataka state universities Act of 1976 to prevent grave deterioration in the law and order situation His Excellency the Chancllor has considered the advice tendered by the Government has considered the advise tendered by the Government and in exercise of the power vested in him under section 10(2) of the K.S.U.Act of 1976, as Head of the university has advised you to excrise

thee power vested in you as vice chancellor under section 12(5) of the K.S.U.Act 1976 for withdrawal of the text book entiteled 'Maha Chaitra ".

ಇದು ಸರ್ಕಾರ ಹೇಳುತ್ತಾ ಇರತಕ್ಕಂಥಾದ್ದು ಇವತ್ತು. ಛಾನ್ಸಲರ್ ಆಗಿ ರಾಜ್ಯಪಾಲರು ಮಾಡಿರತಕ್ಕಂಥ ಕೆಲಸ ಇದು ಅಂತ ಹೇಳಿ. ಸರ್ಕಾರ ಇವತ್ತು ತಪ್ಪು ಮಾಹಿತಿಯನ್ನು ಕೊಡುತ್ತಿದೆ. ಒಂದು ಕಡೆ ಕಾನೂನಿನ ದೃಷ್ಟಿ ಇನ್ನೊಂದು ಕಡೆ ಅಭಿವ್ಯಕ್ತಿ ಸ್ವಾತಂತ್ರ್ಯದ ದೃಷ್ಟಿ. ಇನ್ನೊಂದು ಕಡೆ ಚರಿತ್ರೆಯನ್ನು ತನ್ನ ಮೂಗಿನ ನೇರಕ್ಕೆ ಬರೆಯಬೇಕೆನ್ನುವ ದೃಷ್ಟಿ. ಈ ಮೂರು ಪ್ರಜಾಪ್ರಭುತ್ವ ವಿರೋಧಿಧೋರಣೆಗಳನ್ನು ಪ್ರತಿಪಾದನೆ ಮಾಡುತ್ತಾ ಇರತಕ್ಕಂಥ ಶಕ್ತಿಗಳು ಇವತ್ತು ಈ ಪುಸ್ತಕವನ್ನು ವಾಪಸ್ಸ್ ಪಡೆದಿದೆ. ಈ ಪುಸ್ತಕವನ್ನು ವಾಪಸ್ಸ್ ಪಡೆದಿರತಕ್ಕಂಥ ಪ್ರಶ್ನೆ ಅಲ್ಲ.

3.40 ಪಿ.ಎಂ

ಇದರ ಹಿಂದೆ ಇರತಕ್ಕಂಥ ತಾತ್ವಿಕ ಧೋರಣೆಯನ್ನು ನಾವು ನೋಡಬೇಕಾಗುತ್ತದೆ. ನನಗೆ ತಿಳಿದ ಮಟ್ಟಿಗೆ ಬಹುತೇಕವಾಗಿ ಕರ್ನಾಟಕ ರಾಜ್ಯದಲ್ಲಿ ಭೌತಿಕ ದಾರಿದ್ರ್ಯವನ್ನು ಬೆಳಸಿ ಮನುಷ್ಯನ ತಲೆಯಲ್ಲಿ ಅಲೋಚನೆಯನ್ನು ಬೆಳೆಯುದ ಹಾಗೆ ತನ್ನ ಮೂಗಿಗೆ ನೇರವಾಗಿ ಎಲ್ಲವೂ ನಡೆಯಬೇಕು ಎನ್ನತಕ್ಕಂಥ ಅ ಭೌತಿಕ ದಾರಿದ್ರ್ಯವನ್ನು ಬೆಳೆಸತಕ್ಕಂಥ ಶಕ್ತಿಗಳು ಇವತ್ತು ಮಹಾಚೈತ್ರ ಪುಸ್ತಕವನ್ನು ವಾಪಸ್ಸ್ ಪಡೆಯಲಿಕ್ಕೆ ಇವತ್ತು ಸರ್ಕಾರದ ಮೇಲೆ ಒತ್ತಾಯ ತಂದಿದ್ದಾರೆ. ಸರ್ಕಾರ ಅವರ ಒತ್ತಾಯಕ್ಕೆ ಮಣಿದಿದೆ. ಇವತ್ತಿನದಿವಸ ಕಾನೂನಿನ ಪರಿಸ್ಥಿತಿಯಲ್ಲಿ ನೋಡಿ. ಕಾನೂನಿನ ಪರಿಸ್ಥಿತಿಯ ಬಗ್ಗೆ ನಾನು ಮಾತನಾಡುವುದಿಲ್ಲ. ಕರ್ನಾಟಕ ರಾಜ್ಯದ ಕಾನೂನು ಮತ್ತು ಸುವ್ಯವಸ್ಥೆ ಬಗ್ಗೆ ನಿನ್ನೆ ಮಾನ್ಯ ಸದಸ್ಯರಾದ ಜೀವರಾಜ ಆಳ್ವರವರು ಮಾತನಾಡುವಾಗ ಹೇಳಿದರು. ಹಾಗಾದರೆ ತಾವು ಅದು ಕಾನೂನು ಮತ್ತು ಸುವ್ಯವಸ್ಥೆಯ ಪ್ರಶ್ನೆ ಅಂತ ಒಪ್ಪುವುದಾದರೆ ಸರ್ಕಾರ ರಾಜೀನಾಮೆಯನ್ನು ಕೊಡಬೇಕು. ಅಲ್ಲ ಅಂತ ಹೇಳುವುದಾದರೆ ಸರ್ಕಾರ ಅದನ್ನು ಸಮರ್ಥಿಸಿ ಕೊಳ್ಳಬೇಕಾಗುತ್ತದೆ.

ಹಾಗಾದರೆ ಕಾನೂನು ಮತ್ತು ಸುವ್ಯವಸ್ಥೆಯ ಪರಿಸ್ಥಿತಿ ಬಂದಿದೆ ಅಂತ ಹೇಳಿ ಪ್ರತಿಯೊಬ್ಬರು ಒಂದೊಂದು ಪುಸ್ತಕದ ಮೇಲೂ ಒಬ್ಬೊಬ್ಬರು ಗಲಾಟೆಯನ್ನು ಎಬ್ಬಿಸುತ್ತಾರೆ. ಇವತ್ತು ಇದೇ ಮಹಾಚೈತ್ರ ಪುಸ್ತಕದಲ್ಲಿ ಬೇರೆ ವಿಭಾಗದ ಜನರ ಬಗ್ಗೆ ಕೂಡ ಮಾತನಾಡಿರತಕ್ಕಂಥ ಅಂಶಗಳು ಇವೆ. ಅದರ ಬಗ್ಗೆ ಯಾರೂ ಮಾತನಾಡುವುದಿಲ್ಲ. ಸನ್ಮಾನ್ಯ ಎಲ್ಲಾ ಸದಸ್ಯರಲ್ಲಿ ನಾನು ಮನವಿ ಮಾಡಿಕೊಳ್ಳುವುದು ಇಷ್ಟೇ. ದಯವಿಟ್ಟುಯಾವುದೇ ಪೂರ್ವಗ್ರಹ ಪೀಡಿತರಾಗದೇ ಈ ಪುಸ್ತಕವನ್ನು ಓದಿ ನೋಡಿ. ಈ ಪುಸ್ತಕವನ್ನು ಓದಿ ನೋಡಿ ಇದರಲ್ಲಿ ಏನಾದರೂ ಅಂತಹ ಒಂದೇ ಅಕ್ಷರ ಇದ್ದರೆ ಪುಸ್ತಕ ಇಲ್ಲೇ ಇದೆ. ಒಂದು ಪುಸ್ತಕವನ್ನು ಯಾರು ಎರಡು ರೀತಿಯಲ್ಲಿ ಓದುವುದಕ್ಕೆ ಆಗುವುದಿಲ್ಲ. ಒಂದೇ ಒಂದು ಅಕ್ಷರ ಏನಾದರೂ ಆ ರೀತಿ ಇದ್ದರೆ ನೋಡುಬಹುದು. ನಾನು ಇಷ್ಟೇ ಸನ್ಮಾನ್ಯಸದಸ್ಯರಲ್ಲಿ ಮತ್ತು ಸರ್ಕಾರದಲ್ಲಿ ಮನವಿ ಮಾಡಿಕೊಳ್ಳತಕ್ಕಂಥಾದ್ದು ಭೌತಿಕ ದಾರಿದ್ರ್ಯಯಾವ ರಾಜ್ಯದಲ್ಲಿ ನಾಶವಾಗುತ್ತದೆಯೋ ಆ ರಾಜ್ಯ ಖಂಡಿತವಾಗಿ ತಮ್ಮ ಆಲೋಚನಾ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ತನ್ನ ಆಲೋಚನಾ ಶಕ್ತಿಯನ್ನು ತನ್ನ ವಿವೇಚನಾ ಶಕ್ತಿಯನ್ನು ಕಳೆದುಕೊಂಡಂತಹ ಯಾವುದೇ ಒಂದು ಪರಂಪರೆ ಇದೆ. ಪ್ರಗತಿಪರವಾದ ಸಾಹಿತ್ಯವನ್ನು ಹುಟ್ಟಿಬೆಳೆಸಿದಂತಹ ಒಂದು ರಾಜ್ಯ. ಸನ್ಮಾನ್ಯ ಅಧ್ಯಕ್ಷರೇ, ಅದಕ್ಕೆ ನಾನು ಒಂದು ಉದಾಹರಣೆಯನ್ನು ಕೊಡುತ್ತೇನೆ. ಕುವೆಂಪುರವರ ಶೂದ್ರ ತಪಸ್ವಿ ನಾಟಕದಲ್ಲಿ ಒಂದು ಅಂಶ ಬರುತ್ತದೆ. ಕುವೆಂಪು

ಅವರ ಶೂದ್ರ ತಪಸ್ವಿನಾಟಕದಲ್ಲಿ ರಾಮ ಹೋಗಿ ಶಂಭೂಕನಿಗೆ ನಮಸ್ಕಾರ ಮಾಡಿ ಬರುತ್ತಾನೆ.

ರಾಮಾಯಣದಲ್ಲಿ ಶಂಭೂಕನನ್ನು ರಾಮಹತ್ಯೆ ಮಾಡುತ್ತಾರೆ. ಹಾಗಾದರೆ ಕುವೆಂಪು ಅವರ ಶೂದ್ರ ತಪಸ್ವಿ ನಾಟಕದಲ್ಲಿ ರಾಮನಿಗೆ ಅಪಚಾರ ಮಾಡಿದರು ಅಂತ ಹೇಳಿಶೂದ್ರ ತಪಸ್ವಿ ನಾಟಕವನ್ನು ನಿಷೇದ ಮಾಡಬಹುದಲ್ಲ. ಇನ್ನೊಂದು ಉದಾಹರಣೆಯನ್ನು ಕೊಡುತ್ತೇನೆ ನಾನು. ರನ್ನ ಮತ್ತು ಪಂಪ ಕನ್ನಡ ನಾಡಿನ ಹೆಮ್ಮೆಯ ಕವಿಗಳು. ಮಹಾಭಾರತವನ್ನು ಬರೆದಿದ್ದಾರೆ. ಅವರದ್ದೇ ಆದಂಥ ದೃಷ್ಟಿಯಲ್ಲಿ ಕರ್ಣನ ಗದಾಯುದ್ಧ ಪಂಪಭಾರತ ಬರೆದಿದ್ದಾರೆ. ಕರ್ಣನ ಗದಾಯುದ್ಧದಲ್ಲಿ ಹೇಳುತ್ತಾರೆ ದ್ರೌಪದಿ ಭೀಮನಿಗೆ ಮಾತ್ರ ಹೆಂಡತಿ ಅಂತ. ಹಾಗಾದರೆ ಇದು ಕೂಡ ಒಂದು ವಿಭಾಗದ ಜನಕ್ಕೆ ನೋವಾಗುತ್ತದೆ ಅಂತ ಹೇಳಿ ನೀವು ಆ ಪುಸ್ತಕವನ್ನು ನಿಷೇಧ ಮಾಡಬಹುದಲ್ಲ. ಆ ರೀತಿಯಲ್ಲಿ ನೀವು ನಿಷೇದ ಮಾಡುತ್ತಾ ಹೋದರೆ ಕರ್ನಾಟಕ ರಾಜ್ಯದಲ್ಲಿ ಯಾವುದೇ ಒಂದು ಸಾಹಿತ್ಯಇರುವುದಕ್ಕೆ ಸಾಧ್ಯ ಇಲ್ಲ.

(ಗೊಂದಲ)

ಬಸವಣ್ಣನವರು ಶಾಸ್ತ್ರವೆಂಬುದು ಒಂದು ಸಂತೆಯ ಮಾತು ಅಂತ ಹೇಳುತ್ತಾರೆ. ಹಾಗಾದರೆ ಬಸವಣ್ಣ ಇವರೆಲ್ಲರಿಗೂ ಅಪಮಾನ ಮಾಡಿದ್ದಾರೆ ಅಂತ ಹೇಳುತ್ತೀರಾ ನೀವು. ವೇದವೆಂಬುದು ಓದಿನ ಸುದ್ದಿ ಪುರಾಣ ಎಂಬುದು ಪುಂಡರ ಗೋಷ್ಠಿ. ಶಾಸ್ತ್ರ ಎಂಬುದು ಸಂತೆಯ ಮಾತು ಅಂತ ಬಸವಣ್ಣನವರ ವಚನಗಳಲ್ಲಿ ಹೇಳುತ್ತಾರೆ ಹಾಗಾದರೆ ಬಸವಣ್ಣ ವೇದ ಪುರಾಣಕ್ಕೆ ಅವಮಾನ ಮಾಡಿದ್ದಾನೆ ಅಂತ ಬಸವಣ್ಣನನ್ನು ನಿಷೇಧ ಮಾಡುತ್ತೀರಾ ನೀವು. ಆದ್ದರಿಂದ ಮಾನ್ಯ ಅಧ್ಯಕ್ಷರೇ, ಇದು ನಮ್ಮ ರಾಜ್ಯದ ಭೌತಿಕ ಚಿಂತನೆಗೆ ಈ ಸರ್ಕಾರ ಮತ್ತು ಪಟ್ಟಭದ್ರ ಹಿತಾಸಕ್ತಿಗಳು ಹಾಕಿರತಕ್ಕಂಥ ಕೊಡಲಿ ಪೆಟ್ಟುಇದನ್ನು ನಾನು ಸಂಪೂರ್ಣವಾಗಿ ವಿರೋಧ ಮಾಡುತ್ತೇನೆ. ಮಾನ್ಯ ಅಧ್ಯಕ್ಷರೇ, ಇನ್ನು ಎರಡನೆಯದಾಗಿ ರಾಜ್ಯಪಾಲರ ಭಾಷಣದಲ್ಲಿ ಮೊಟ್ಟಮೊದಲನೆಯದಾಗಿ ಕೈಗಾರಿಕೆಗಳ ಬೆಳವಣಿಗೆಗಳ ಬಗ್ಗೆ ಕೈಗಾರಿಕಾ ಬೆಳವಣಿಗೆ ಅಂತ ಬೆಳವಣಿಗೆಅಂತ ಹೇಳಿದರೆ ಒಂದು ರಾಜ್ಯದ ಸಂಪನ್ಮೂಲವನ್ನು ಉತ್ಪಾದನೆ ಮಾಡತಕ್ಕಂಥ ಅತಿ ಮುಖ್ಯವಾಗಿರತಕ್ಕಂಥ ಒಂದುರಂಗ. ಅದು ಪ್ರತ್ಯೇಕವಾಗಿ ಸರ್ಕಾರದ ಕೈಗಾರಿಕೆ ರಂಗ ರೋಗಗ್ರಸ್ತವಾಗಿದೆ. ಇವುಗಳನ್ನು ಖಾಸಗೀಕರಣ ಮಾಡಬೇಕು ಅಂತ ಹೇಳಿ ಸರ್ಕಾರ ಹೊರಟಿದೆ. ಇದರ ಪರಿಣಾಮಗಳು ಏನು ಎನ್ನತಕ್ಕಂಥಾದ್ದನ್ನು ಸಹ ನೋಡಬೇಕು. ಇದರಲ್ಲಿ ಅವರು ಹೇಳುತ್ತಾರೆ . ಕೇಂದ್ರ ಸರ್ಕಾರದ ಆರ್ಥಿಕ ಧೋರಣೆಗಳಿಂದಾಗಿ ಹೊಸ ಧೋರಣೆಗಳು ಯಾವುವು ಅಂತ ಹುಡುಕಬೇಕಾಗಿದೆ. ಮಾನ್ಯ ಅಧ್ಯಕ್ಷರೇ, ಕೇಂದ್ರದ ಹೊಸ ಆರ್ಥಿಕ ಧೋರಣೆಯ ಪ್ರತಿಯಾಗಿ ಇವತ್ತು ನಮ್ಮ ದೇಶ ಇವತ್ತು ಆಂತರಿಕ ಮತ್ತು ವಿದೇಶಿ ಸಾಲದ ಬಲೆಗೆ ಸಿಕ್ಕಿದೆ.

2 ಲಕ್ಷ 67 ಸಾವಿರ ಕೋಟಿ ರೂಪಾಯಿಗಳ ವಿದೇಶಿ ಸಾಲ ಇವತ್ತು ಇದೆ. ಇನ್ನೊಂದು ಕಡೆ 2 ಲಕ್ಷ ಕೋಟಿ 46 ಸಾವಿರ ಕೋಟಿ ರೂಪಾಯಿಗಳ ಅಂತರೀಕ ಸಾಲ ಇದೆ. ಇವೆಲ್ಲವನ್ನು ಸೇರಿಸಿದರೆ ಯೋಜನಾ ಆಯೋಗದ ಲೆಕ್ಕದ ಪ್ರಕಾರ ಪ್ರತಿಯೊಬ್ಬನ ತಲೆಗೆ 5,800 ರೂಪಾಯಿಗಳ ಸಾಲ ಆಗುತ್ತದೆ. ಇದು ಹೊಸ ಆರ್ಥಿಕ ಧೋರಣೆಯ ಪ್ರತಿಫಲ. ಹೊಸ ಆರ್ಥಿಕ ಧೋರಣೆಯ ಉದ್ದೇಶ ಏನು ನರಸಿಂಹರಾಯರದ್ದು ಅಂತ ಹೇಳಿದರೆ ಖಾಸಗೀಕರಣ. ಇವತ್ತು ಖಾಸಗೀ ಕರಣಕ್ಕೋಸ್ಕರ ಕರ್ನಾಟಕ ರಾಜ್ಯ ಭೂ ಸುಧಾರಣಾ ಕಾಯ್ದೆಯನ್ನು ಸಹ ತಿದ್ದುಪಡಿ ಮಾಡುತ್ತಿದೆ. ಇದರ ಪರಿಣಾಮ ಏನಾಗುತ್ತದೆ. ದೇವರಾಜ ಅರಸರ ಕಾಲದಲ್ಲಿ ಭೂ ಸುಧಾರಣಾ ಕಾಯ್ದೆಯನ್ನು ತಂದಾಗ ಒಂದು 79(ಎ) 79(ಬಿ) 89 ಮತ್ತು 109 ಕಲ್ಮಗಳ ತಿದ್ದುಪಡಿ

ಮಾಡಲು ಸೂಚಿಸಿದೆ ಇವಕ್ಕೆ ಹಿಂದೆ ಕೃಷಿಯೇತರರ ವಾರ್ಷಿಕ ಆದಾಯ 12 ಸಾವಿರ ರೂಪಾಯಿಗಳಿಗೂ ಹೆಚ್ಚಿಗೆ ಇರುವ ಕೃಷಿಕನು ಭೂ ಸುಧಾರಣಾ ಕಾಯ್ದೆ ಪ್ರಕಾರ ಭೂಮಿಯನ್ನು ಕೊಂಡುಕೊಳ್ಳಬಾರದು ಎನ್ನುವಂತಹ ಒಂದು ಕಾನೂನು ಇತ್ತು. ಅದನ್ನು ಶ್ರೀಮಾನ್ ವೀರೇಂದ್ರ ಪಾಟೀಲರ ಸರ್ಕಾರ ಬಂದ ಮೇಲೆ 50 ಸಾವಿರ ರೂಪಾಯಿಗಳಿಗೆ ಏರಿಸಿತು. ಈಗ ಮಾನ್ಯ ದೇವೇಗೌಡರ ಸರ್ಕಾರ 50 ಸಾವಿರ ರೂಪಾಯಿಗಳಿಂದ 1 ಲಕ್ಷ ರೂಪಾಯಿಗಳಿಗೆ ಏರಿಸುತ್ತಿದೆ. ಅವರು ಇದಕ್ಕೆ ಕೊಡತಕ್ಕಂಥ ಕಾರಣ ಬೆಂಗಳೂರಿನ ಸುತ್ತಮುತ್ತಲೂ ವಿದೇಶಿಯರು ಕೈಗಾರಿಕೆಗಳಿಗೆ ಬಂಡವಾಳ ಹಾಕಿ ಕೈಗಾರಿಕೆಗಳನ್ನು ಪ್ರಾರಂಭ ಮಾಡಲು ಬರುತ್ತಿವೆ. ಅವರಿಗೆ ಭೂಮಿಯನ್ನು ಕೊಂಡುಕೊಳ್ಳುವುದಕ್ಕೆ ಅವಕಾಶ ಆಗಬೇಕು ಎನ್ನತಕ್ಕಂಥ ಮಾತನ್ನು ಹೇಳುತ್ತಿದ್ದಾರೆ.

ಮಾನ್ಯ ಅಧ್ಯಕ್ಷರೇ, ನಾನು ಇದನ್ನು ಇನ್ನೊಂದು ದೃಷ್ಟಿಯಿಂದ ನೋಡಬೇಕಾಗಿದೆ. ನಿನ್ನೆ ಸನ್ಮಾನ್ಯ ಸದಸ್ಯರಾದ ಸೋಮಶೇಖರ್‌ರವರು ಮಾತನಾಡುತ್ತಾ ಹೇಳಿದರು. ಬೆಂಗಳೂರಿನ ಸುತ್ತಮುತ್ತಲೂ ಯಾರು ಜಮೀನನ್ನು ಕೊಂಡುಕೊಳ್ಳತಕ್ಕಂಥವರು. ಯಾವ ರೈತ ಇವತ್ತು ಭೂಮಿಯನ್ನು ಉಳಿಸುವುದಕ್ಕೆ ಸಾಧ್ಯವಾಗುತ್ತದೆ. ಈ ಕಾನೂನು ಜಾರಿಗೆ ಬಂದರೆ ಯಾವ ರೈತನ ಜಮೀನು ಉಳಿಯುವುದಕ್ಕೆ ಸಾಧ್ಯ ಇಲ್ಲ ಭೂಮಿ ಕಳೆದುಕೊಂಡರೆ ಆಹಾರ ಧಾನ್ಯಗಳನ್ನು ಬೆಳೆಯುವುದಕ್ಕೆ ಸಾಧ್ಯ ಇಲ್ಲ. ಅಂತಹ ಭೂಮಿ ಯಲ್ಲಿ ವ್ಯವಸಾಯ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. ಇನ್ನು ಎರಡನೇಯದಾಗಿ ಕೈಗಾರಿಕೆಗಳನ್ನು ಖಾಸಗೀಕರಣಕ್ಕೆ ಕೊಟ್ಟರೆ ನಿರುದ್ಯೋಗ ಸಮಸ್ಯೆ ಭೀಕರವಾಗಿ ಬೆಳೆಯುತ್ತದೆ. ಭೂಮಿಯಿಂದ ದುಡ್ಡು ಸಿಗುತ್ತದೆ. ದುಡ್ಡು ತಿನ್ನುವುದಕ್ಕೆ ಆಗುವುದಿಲ್ಲ ಮನುಷ್ಯ. ಮಾನ್ಯ ಅಧ್ಯಕ್ಷರೇ ಆದ್ದರಿಂದ ಇವತ್ತು ಈ ಭೂ ಸುಧಾರಣಾ ಕಾಯ್ದೆಗೆ ತಿದ್ದುಪಡಿ ತರುವುದಕ್ಕೆ ಹೊರಟ್ಟಿದ್ದೀರಿ. ಇನ್ನೊಂದು ಕಡೆ ಆಹಾರ ಧಾನ್ಯಗಳ ಉತ್ಪಾದನೆ. ಇನ್ನು ಎರಡು ಸಾವಿರ ವರ್ಷಕ್ಕೆ ಹೋಗಬೇಕಾದರೆ ಇನ್ನು ಕೇವಲ 5 ವರ್ಷಗಳು ಮಾತ್ರ ಉಳಿದಿದೆ. ಈಗಿನ ನಮ್ಮ ಲೆಕ್ಕದ ಪ್ರಕಾರ ಯೋಜನಾ ಆಯೋಗದವರು ಲೆಕ್ಕ ಹಾಕಿರತಕ್ಕಂಥ ಪ್ರಕಾರ 150 ಲಕ್ಷ ಮೆಟ್ರಿಕ್‌ಟನ್ ಆಹಾರ ಉತ್ಪಾದನೆ ಆದರೆ ಮಾತ್ರ ಎರಡು ಸಾವಿರ ಇಸವಿಯೊಳಗೆ ನಾವು ನಮ್ಮ ರಾಜ್ಯದ ಜನಸಂಖ್ಯೆಗೆ ಎರಡು ಹೊತ್ತು ಊಟ ಕೊಡುವುದಕ್ಕೆ ಸಾಧ್ಯವಾಗುತ್ತದೆ.

ಈಗ ಇರತಕ್ಕಂಥಾದ್ದು 75 ಲಕ್ಷ ಮೆಟ್ರಿಕ್ ಟನ್ ಆಹಾರ ಉತ್ಪಾದನೆ ಇನ್ನೂ 75 ಲಕ್ಷ ಮೆಟ್ರಿಕ್ ಟನ್ ಆಹಾರ ಉತ್ಪಾದನೆ ಆಗಬೇಕು ಅಂತ ಆದರೆ ಇಲ್ಲಿ ಎರಡು ಅಂಶಗಳು ಪ್ರಮುಖವಾಗಿ ಬರುತ್ತದೆ. ಒಂದು ಕೃಷಿ ರಂಗದಲ್ಲಿ ಆಹಾರಧಾನ್ಯಗಳು ಹೆಚ್ಚು ಉತ್ಪಾದನೆ ಆಗಬೇಕಾದರೆ ಮೂಲ ಅಂಶ ಇರಬೇಕಾದುದು ಭೂಮಿಗಳುವವನಿಗೆ ತಗೆದುಕೊಂಡು ಕೊಡಬೇಕಾಗುತ್ತದೆ. ಎರಡನೇ ಅಂಶ ರೈತ ಬೆಳೆದಂತಹ ಬೆಳೆಗೆ ನ್ಯಾಯಯುತವಾದ ಬೆಲೆ ಸಿಗಬೇಕಾಗತ್ತದೆ. ಇಲ್ಲದಿದ್ದರೆ ಆತ ಇವತ್ತು ವ್ಯವಸಾಯ ಮಾಡುವುದಕ್ಕೆ ಆಗುವುದಿಲ್ಲ. ಆತ ಇವತ್ತು ದಿವಾಳಿಯಾಗುತ್ತಿದ್ದಾನೆ. ರೈತ ಇವತ್ತು ಯಾವ ಸ್ಥಿತಿಗೆ .ಬಂದಿದ್ದಾನೆ ಅಂತ ಹೇಳಿದರೆ ಇವತ್ತು ನಾವು ಏತಕ್ಕೆ ವ್ಯವಸಾಯ ಮಾಡಬೇಕು, ಎಲ್ಲಾದರೂ ಒಂದು ಪಿವನ್ ಕೆಲಸ ಸಿಕ್ಕಿದರೆ ಸಾಕು ಎಂದು ಹೇಳುವಂತಹ ಮಟ್ಟಕ್ಕೆ ಬಂದಿದ್ದಾನೆ. ಸ್ವೀಪರ್ ಕೆಲಸ ಸಿಕ್ಕಿದರೆ ಸಾಕು ಅಂತ ಇವತ್ತು ರೈತರು ಹಳ್ಳಿಗಳಲ್ಲಿ ಮಾತನಾಡುತ್ತಾರೆ ತಾಲ್ಲೂಕು ಆಫೀಸ್‌ನಲ್ಲಿ ಪಿವನ್ ಕೆಲಸ ಮಾಡುವಂತಹ ಹೆಂಡತಿಗೆ ಎರಡು ರೇಷ್ಮೆ ಸೀರೆ ಇರುತ್ತದೆ ಸ್ವಾಮಿ, ರೇಷ್ಮೆ ಬೆಳೆಯುತಕ್ಕಂಥ ರೈತನ ಹೆಂಡತಿಗೆ ಒಂದು ರೇಷ್ಮೆ ಸೀರೆ ಇಲ್ಲವೆಂದು ಈ ದೇಶದಲ್ಲಿ ಮಾತನಾಡಿಕೊಳ್ಳುತ್ತಾನೆ. ಇದು ಖಂಡಿತವಾಗಿ ವಾಸ್ತವಾದ ಅಂಶ. ರೈತ ಬೆಳೆಯತಕ್ಕಂಥ ಕೃಷಿ ಉತ್ಪಾದನೆ ಸರಕಿಗೂ ಬೆಲೆಗೂ ಕೈಗಾರಿಕೆಯಲ್ಲಿ ಆಗತಕ್ಕಂಥ ಉತ್ಪಾದನೆಯ ಬೆಲೆಗೂ ತೀವ್ರರೀತಿಯಾಂದಂತಹ ವ್ಯತ್ಯಾಸಗಳು ಆಗುತ್ತವೆ.

Imbalance in agrarian production and industrial produdion ಆ ಇಂಬ್ಯಾಲೆನ್ಸ್ ಕಡಿಮೆ ಆಗದೇ ಹೋದರೆ ಕೈಗಾರಿಕೆಗಳಲ್ಲಿ ಆಗತಕ್ಕಂಥ ಉತ್ಪಾದನೆಯ ಸರಕುಗಳಿಗೂ ಕೃಷಿಯಲ್ಲಿ ಉತ್ಪಾದನೆಯಾಗತಕ್ಕಂಥ ಸರಕುಗಳಬೆಲೆಗಳಿಗೂ ವ್ಯತ್ಯಾಸ ಕಡಿಮೆ ಆಗದೇ ಹೋದರೆ ರೈತ ದಿವಾಳಿಯಾಗತಕ್ಕಂಥಾದ್ದು ಸ್ಪಷ್ಟ. ಸರ್ಕಾರದವರು ಎಷ್ಟು ಕೋಟಿ ರೂಪಾಯಿಗಳ ಸಬ್ಸಿಡಿಯನ್ನು ಕೊಟ್ಟರೂ ಆತ ಉಳಿಯುವುದಕ್ಕೆ ಸಾಧ್ಯ ಇಲ್ಲ. ಇಂಬ್ಯಾಲೆನ್ಸ್ ಕಡಿಮೆ ಮಾಡಬೇಕು ಈ ಇಂಬ್ಯಾಲೆನ್ಸ್ ಕಡಿಮೆ ಮಾಡಬೇಕಾದರೆ ಕೃಷಿಯಲ್ಲಿ ಉತ್ಪಾದನೆ ಹೆಚ್ಚು ಮಾಡಬೇಕು. ಕೃಷಿ ಬೆಳೆಗೆ ನ್ಯಾಯಯುತವಾದ ಬೆಲೆ ಸಿಗಬೇಕಾಗುತ್ತದೆ.

ಇವತ್ತು ರೈತರಿಗೆ ಸರಿಯಾದ ಮಾರುಕಟ್ಟೆ ವ್ಯವಸ್ಥೆ ಇಲ್ಲ. ಇದರಿಂದ ಇವತ್ತು ಕೃಷಿ ದಿವಾಳಿಯಾಗುತ್ತಿದೆ. 150 ಮೆಟ್ರಿಕ್ ಟನ್ ಆಹಾರ ಪದಾರ್ಥಗಳನ್ನು ಉತ್ಪಾದನೆ ಮಾಡುವುದಕ್ಕೆ ಅದೂ ಎರಡು ಸಾವಿರ ಇಸವಿಯೊಳಗೆ ಸರ್ಕಾರದವರು ಯಾವುದೇ ಕಾರ್ಯಕ್ರಮವನ್ನು ಈ ರಾಜ್ಯಪಾಲರ ಭಾಷಣದಲ್ಲಿ ಹಾಕಿಕೊಂಡಿಲ್ಲ. ಇದು ಬಹಳ ಅಸಹಾಯಕಾರಿಯಾದಂತಹ ಅಂಶ. ಇವತ್ತು ಆಹಾರಸಾಮಗ್ರಿಗಳ ಪ್ರಶ್ನೆಬಹಳ ಗಂಭೀರವಾಗಿದೆ. ಕರ್ನಾಟಕ ರಾಜ್ಯದಲ್ಲಿ ಮತ್ತು ಈ ಕೃಷಿ ರಂಗಕ್ಕೆ ಹೊಂದಿಕೊಂಡೇ ನೀರಾವರಿ ಪ್ರಶ್ನೆ ಇದೆ. ವಿದ್ಯುಚ್ಛಕ್ತಿ ಪ್ರಶ್ನೆ ಇದೆ. ಮೊದಲನೇಯದು ವಿದ್ಯುಚ್ಛಕ್ತಿ ಬಗ್ಗೆ ಸರ್ಕಾರ ಇವತ್ತು ಹೇಳುತ್ತಿದೆ. ಸನ್ಮಾನ್ಯ ಉಪ ಮುಖ್ಯಮಂತ್ರಿಗಳು ಸ್ಪಷ್ಟವಾಗಿ ಹೇಳುತ್ತಿದ್ದಾರೆ. ತಕ್ಷಣಕ್ಕೆ ಪರಿಹಾರ ನಮ್ಮಲ್ಲಿ ಇಲ್ಲ ಅಂತ. ತಕ್ಷಣಕ್ಕೆ ಪರಿಹಾರ ಇಲ್ಲದಿದ್ದರೆ ರೈತ ನಾಶ ಆಗುತ್ತಾನೆ. ಬೆಳೆ ನಾಶ ಆಗುತ್ತದೆ. ಇವತ್ತು ನನ್ನ ಜಿಲ್ಲೆಯಾದ ಕೊಲಾರದಲ್ಲಿ ಟಮೋಟೋ ಒಣಗಿ ಹೋಗಿರತಕ್ಕಂಥ ಫೋಟೋಗಳನ್ನು ನಾನುತಮಗೆ ಕಳುಹಿಸುತ್ತಿದ್ದೇನೆ ತಾವು ನೋಡಬಹುದು. ಇನ್ನೊಂದು ಕಡೆ ಈರುಳ್ಳಿ ಕಲ್ಲಂಗಡಿ ನೀರು ಇಲ್ಲದೆ ಅಂದರೆ ಕರೆಂಟ್ ಇಲ್ಲದೆ ಕೋಸ್‌ಬೆಳೆಸಹ ನೋಡಿ ಎಷ್ಟು ಒಣಗಿ ಹೋಗಿದೆ. ಈರುಳ್ಳಿ ಸಂಪೂರ್ಣವಾಗಿ ಒಣಗಿ ಹೋಗಿದೆ. ಟಮೋಟೋವನ್ನು ಇವತ್ತು ರಸ್ತೆಗೆ ಬಿಸಾಕಿದ್ದಾರೆ.

ಅದೇ ರೀತಿಯಲ್ಲಿ ಈರಳ್ಳಿ ಬೆಳೆಯು ಸಂಪೂರ್ಣವಾಗಿ ಒಣಗಿ ಹೋಗಿ ಬಿಟ್ಟಿದೆ. ಸಂಪೂರ್ಣವಾಗಿ ಹಾಳಾಗಿ ಹೋದ ಈರುಳ್ಳಿ ಬೆಳೆಯ ಫೋಟೋವನ್ನು ಕೂಡ ತಮಗೆ ಕಳುಹಿಸುತ್ತಾ ಇದ್ದೇನೆ. ಕೋಲಾರ ಜಿಲ್ಲೆಯಿಂದ ಬಂದಿರತಕ್ಕಂಥ ತಾವು ಕೂಡ ಈ ಬಗ್ಗೆ ಆಲೋಚನೆ ಮಾಡಬೇಕಾಗಿದೆ. ನಮ್ಮ ರೈತರ ಪರಿಸ್ಥಿತಿಯು ಇವೊತ್ತು ಈ ಹಂತಕ್ಕೆ ಬಂದಿದೆ. ವಿದ್ಯುತ್‌ಚಕ್ತಿ ಕೊರತೆಯಿಂದಾಗಿ ಈ ಬೆಳೆಗಳು ನಾಶವಾಗಿವೆ, ರೈತರಿಗೆ ನಷ್ಟವಾಗಿದೆ. ನನಗೆ ಗೊತ್ತಿರತಕ್ಕ ಪ್ರಕಾರ ನಮ್ಮ ಜಿಲ್ಲೆಯಲ್ಲಿ ಸುಮಾರು 50ಕೋಟಿ ರೂಪಾಯಿಗಳಷ್ಟು ಬೆಳೆಗಳು ನಾಶವಾಗಿದೆ. ಇದಕ್ಕೆ ಕಾರಣ ವಿದ್ಯುಚ್ಛಕ್ತಿಯ ಕೊರತೆ. ನೀವು ಐದು ವರ್ಷಗಳಲ್ಲಿ ವಿದ್ಯುಚ್ಛಕ್ತಿಯ ವ್ಯವಸ್ಥೆಯನ್ನು ಸರಿಮಾಡುತ್ತೀರಿ ಎಂದು ಹೇಳಿದ್ದೀರಿ. ಆದರೆ ತತ್‌ಕ್ಷಣಕ್ಕೆ ಏನಾದರೂ ಒಂದು ಪರಿಹಾರ ಅದಕ್ಕೆ ಬೇಕಲ್ಲ? ಯಾಕೆಂದರೆ ಕೋಲಾರ ಜಿಲ್ಲೆಯಲ್ಲಿ ಯಾವುದೇ ನದಿ ಇಲ್ಲ, ನಾಲೆ ಇಲ್ಲ, ಕೆರೆಗಳಲ್ಲಿನೀರುಇಲ್ಲ, ಇವೊತ್ತು ನಮಗೆ ಇರತಕ್ಕಂಥ ಆಧಾರ ಎಂದರ ಬೋರ್‌ವೆಲ್‌ಗಳು ಮಾತ್ರ. ಅದಕ್ಕೂ 350 ಅಡಿಗಳಿಗಿಂತಲೂ ಕೆಳಗೆ ಹೋಗ ಬೇಕಾಗುತ್ತದೆ. ಇಷ್ಟು ಕಷ್ಟಪಟ್ಟು ಬೋರ್‌ವೆಲ್ ಹಾಕಿ ನೀರು ವ್ಯವಸ್ಥೆ ಮಾಡಿಕೊಳ್ಳ ಬೇಕೆಂದರೆ ಸುಮಾರು 70 ಸಾವಿರ ರೂಪಾಯಿಗಳಷ್ಟುನ್ನು ಖರ್ಚು ಮಾಡಬೇಕಾಗುತ್ತದೆ. ಇಷ್ಟು ಹಣವನ್ನು ಖರ್ಚುಮಾಡಿ ಬೋರ್‌ವೆಲ್ ಹಾಕಿಸಿದರೆ ಅವರಿಗೆ ಕರೆಂಟ್ ಇಲ್ಲ, 70ಸಾವಿರ ಖರ್ಚು ಮಾಡಿ ಬೋರ್‌ಹಾಕಿಸುವ ಶಕ್ತಿ ಎಷ್ಟು ಜನರಿಗೆ ಇದೆ? ಬಹಳಷ್ಟು ಜನರಿಗೆ ಇಲ್ಲ.

ಮಧ್ಯಮವರ್ಗದ ರೈತರಿಗೆ, ಕೆಲಹಂತದ ರೈತರಿಗಂತೂ ಆ ಶಕ್ತಿಯೇ ಇಲ್ಲ. ಹಾಕಿದವರ ಪರಿಸ್ಥಿತಿ ಹೀಗಾಗಿದೆ. ಆದ್ದರಿಂದ ತತ್‌ಕ್ಷಣದ ಸಮಸ್ಯೆಯ ಪರಿಹಾರದ ಬಗ್ಗೆ ಸರಕಾರದವರಲ್ಲಿ ಏನಾದರೂ ಕಾರ್ಯಕ್ರಮ ಇದೆಯೇ? ಅದು ಇದ್ದ ಹಾಗೆ ಇಲ್ಲ. ವಿದ್ಯುತ್ ಉತ್ಪಾದನೆ ಕಡಿಮೆ ಇದೆ ಎಂಬುದು ನಮಗೂ ಗೊತ್ತಿದೆ. ನಮ್ಮ ಬೇಡಿಕೆಯು 30 ಲಕ್ಷ ಮಿಲಿಯ ಯೂನಿಟ್‌ಗಳು. ಆದರೆ ನಮ್ಮಲ್ಲಿ ಲಭ್ಯವಿರುವುದು ಕೇವಲ 21 ಸಾವಿರ ಯುನಿಟ್‌ಗಳು ಮಾತ್ರ. ಇದು ಮೂಲಭೂತವಾದ ಸಮಸ್ಯೆಯಾಗಿದೆ. ನಾನು ಒಂದು ಪ್ರಶ್ನೆಯನ್ನು ಕೇಳಿದ್ದೆ, ಉತ್ತರದಲ್ಲಿ ಕೊಜೆಂಟ್ರಿಕ್ ಕಂಪನಿಯ ಜೊತೆಗೆ ಒಪ್ಪಂದ ಮಾಡಿಕೊಂಡಿದ್ದೇವೆ ಎಂದು ಹೇಳಿದ್ದಾರೆ. ಅವರಿಗೆ ಎಷ್ಟು ಲಾಭ ಕೊಡುತ್ತೇವೆಂದು ನೀವು ಅವರಿಗೆ ಆಶ್ವಾಸನೆ ಕೊಟ್ಟಿದ್ದೀರಿ ಎಂದು ಕೇಳಿದ್ದಕ್ಕೆ ಈ ಕ್ವಿಟ್ ಶೇರ್‌ನ ಮೇಲೆ 16 ಪರ್‌ಸೆಂಟ್‌ನಷ್ಟು ಲಾಭಾಂಶವನ್ನು ಕೊಡುತ್ತೇವೆಂದು ಹೇಳಿದ್ದಾರೆ. ಅವರು ಉತ್ಪಾದನೆ ಮಾಡುವಂಥ ಕರೆಂಟ್‌ಗೆ ಒಂದು ಯುನಿಟ್‌ಗೆ 4ರೂ 60 ಪೈಸೆಗಳಷ್ಟು ರೇಟ್ ಹಾಕುತ್ತಾರೆ. ಇದಕ್ಕೆ ಮಹಾರಾಷ್ಟ್ರ ಸರಕಾರದ ಉದಾಹರಣೆಯು ನಮ್ಮ ಮುಂದೆ ಇದೆ. ಇದು ದೀರ್ಘಕಾಲದ ಯೋಜನೆಯಾಗಿದೆ. ಈಗ ತತ್‌ಕ್ಷಣದ ಪರಿಹಾರವಾದರೂ ಏನು? ಇವೊತ್ತು ಕೋಲಾರ ಜಿಲ್ಲೆಯಲ್ಲಿ ರೈತರು ನಾಶವಾಗಿದ್ದಾರೆ. ಬೇರೆ ಜಿಲ್ಲೆಗಳಲ್ಲಿಯೂ ಹೆಚ್ಚು ಕಡಿಮೆ ಇದೇ ಪರಿಸ್ಥಿತಿಯು ಕರೆಂಟ್‌ನ ವಿಚಾರದಲ್ಲಿದೆ ಎಂದು ನಾನು ಅರಿತಿದ್ದೇನೆ. ಇಷ್ಟೇ ಅಲ್ಲದೆ ಕುಡಿಯುವ ನೀರಿನ ಸಮಸ್ಯೆಯು ಕೂಡ ಇದ್ದು, ಅದಕ್ಕೂ ಕರೆಂಟ್‌ನ ಪೂರೈಕೆ ಇಲ್ಲ ಇದರ ಬಗ್ಗೆ ತತ್‌ಕ್ಷಣದಲ್ಲಿ ಏನು ಮಾಡಬೇಕಾಗಿದೆ ಎಂಬುದನ್ನು ಆಲೋಚನೆ ಮಾಡಬೇಕಾಗಿದೆ. ಸಹಕಾರದ ಮುಂದಿರತಕ್ಕಂಥಸಮಸ್ಯೆಗಳು ಕೂಡ ನಮಗೆ ಗೊತ್ತಿದೆ. ನಮ್ಮಲ್ಲಿ ವಿದ್ಯುತ್‌ನ ಉತ್ಪಾದನೆ ಹೆಚ್ಚಿಗೆ ಆಗಬೇಕು. ಅದಕ್ಕಾಗಿ ಹಿಂದಿನ ಸರಕಾರಗಳು ಸೂಕ್ತ ಯೋಜನೆಗಳನ್ನು ಹಾಕಿರಲಿಲ್ಲ ಈಗಲಾದರೂ ಕೂಡ ಸರಕಾರದವರು ಸೂಕ್ತ ಯೋಜನೆಗಳನ್ನು ಹಾಕ ಬೇಕಾಗುತ್ತದೆ.

ಆದರೆ ತತ್‌ಕ್ಷಣದ ಸಮಸ್ಯೆ ಏನೆಂದರೆ ಇವೊತ್ತು ಬೆಳಗಳೆಲ್ಲವೂ ನಾಶವಾಗಿದೆ. ಒಣಗಿ ಹೋಗುತ್ತಿರುವ ಬೆಳೆಗಳನ್ನು ಕಾಪಾಡುವ ದೃಷ್ಟಿಯಲ್ಲಿ ರಾಜ್ಯಪಾಲರ ಭಾಷಣದಲ್ಲಿ ಹೇಳ ಬೇಕಾಗಿತ್ತು. ಆದರೆ ಹಾಗೆ ಯಾವ ಯೋಜನೆಗಳನ್ನು ಹಾಕಿಕೊಂಡ ಬಗ್ಗೆ ಹೇಳಿಲ್ಲ.

ಇನ್ನು ನೀರಾವರಿ ಪ್ರಶ್ನೆಯನ್ನು ಹೇಳುವಾಗ ಅದರ ಗಂಭೀರತೆಯನ್ನು ಅರಿತು ತಾವು ಒಂದು ದಿನದ ಚರ್ಚೆಯನ್ನು ಅದಕ್ಕೆ ನಿಗದಿ ಮಾಡಿದ್ದೀರಿ. ಆ ಕುರಿತು ನಾನು ಹೆಚ್ಚು ಹೇಳಲು ಹೋಗುವುದಿಲ್ಲ. ನಮ್ಮ ಕೋಲಾರದಂಥ ಜಿಲ್ಲೆಗಳಿಗೆ ಎರಡೇ ದಾರಿ ಇರತಕ್ಕಂಥಾದ್ದು. ಸಣ್ಣ ನೀರಾವರಿಗೆ ಹೆಚ್ಚು ಹಣವನ್ನು ಖರ್ಚು ಮಾಡಬೇಕಾಗುತ್ತದೆ. ಕೆರೆಗಳಲ್ಲಿನ ಹೂಳನ್ನು ತೆಗೆಯ ಬೇಕಾಗುತ್ತದೆ. ಹೆಚ್ಚು ಹಣವನ್ನು ಖರ್ಚು ಮಾಡಿ ನೀರನ್ನು ಸ್ಟೋರ್ ಮಾಡುವಂಥ ಕೆಲಸವನ್ನು ಮಾಡಬೇಕಾಗುತ್ತದೆ. ಎರಡನೆಯದಾಗಿ ನಾನು ಕೇಳಬಯಸುವುದೇನೆಂದರೆ, ನಾನು ನಿನ್ನೆ ಕೇಳಿದ ಪ್ರಶ್ನೆಯೊಂದಕ್ಕೆ ಮಾನ್ಯ ಮುಖ್ಯಮಂತ್ರಿಯವರು ಉತ್ತರವನ್ನು ಕೂಡ ಕೊಟ್ಟಿದ್ದಾರೆ. ಭದ್ರಾ ಮೇಲ್ದಂಡೆ ಯೋಜನೆಯ ಬಗ್ಗೆ. ಭದ್ರಾ ಮೇಲ್ದಂಡೆ ಯೋಜನೆಯ ಮೂಲಕ ಮಾತ್ರ ನಮ್ಮ ತುಮಕೂರು, ಚಿತ್ರದುರ್ಗ ಮತ್ತು ಕೋಲಾರ ಜಿಲ್ಲೆಗಳಿಗೆ ನೀರು ಬರುವ ಸಾಧ್ಯತೆಯಾಗುತ್ತದೆ. ಬೇರೆ ಯಾವುದೇ ಸಾಧ್ಯತೆಗಳು ಕಡಿಮೆ ಇದೆ. ಆದರೆ ಈ ಯೋಜನೆಯನ್ನು ಜಾರಿ ಮಾಡುವುದರಲ್ಲಿ ಹಲವಾರು ಸಮಸ್ಯೆಗಳು ಇರಬಹುದು. ನಾನು ಮಾನ್ಯ ಮುಖ್ಯಮಂತ್ರಿಯವರಲ್ಲಿ ಮತ್ತು ಸಹಕಾರದವರಲ್ಲಿ ಪ್ರಾರ್ಥಿಸಿಕೊಳ್ಳುವುದೇನೆಂದರೆ, ನಮ್ಮ ಕೋಲಾರ ಜಿಲ್ಲೆಯು ಬರಡು ಜಿಲ್ಲೆ. ಎಷ್ಟೇ ಸಮಸ್ಯೆಗಳು ಬಂದರೂ ಮಾನ್ಯ ದೇವೇಗೌಡರ ಕಾಲದಲ್ಲಿ ಜಿಲ್ಲೆಯ ವ್ಯವಸಾಯಕ್ಕೆ ನೀರನ್ನು ತಂದು ಕೊಟ್ಟಿದ್ದಾರೆ

ಎಂಬ ಕೀರ್ತಿಯು ನಿಮಗೆ ಬರುವುಂತಾಗಲಿ. ನಮ್ಮ ರೈತರುಗಳು ತಮ್ಮನ್ನು ಶಾಶ್ವತವಾಗಿ ನೆನೆಯಲಿ ಎಂದು ಆಶಿಸುತ್ತೇನೆ ಭದ್ರಾಮೇಲ್ದಂಡೆ ಯೋಜನೆಯನ್ನು ಅವರ ಕಾಲದಲ್ಲಿ ಏನಾದರೂ ಮಾಡಿ ಕೈಗೆತ್ತಿಕೊಳ್ಳಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ. ಇವೊತ್ತು ಈ ರೀತಿಯಲ್ಲಿ ಸಣ್ಣ ನೀರಾವರಿಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಡಬೇಕಾಗಿದೆ. ಹೀಗೆ ಪ್ರಾಮುಖ್ಯತೆಯನ್ನು ಕೊಡದೇ ಹೋದರೆ ನದಿ ಇಲ್ಲದಿರತಕ್ಕಂಥ ಜಿಲ್ಲೆಗಳಿಗೆ ನೀರಿನ ಸಮಸ್ಯೆಯುಬಹಳಷ್ಟು ಗಂಭೀರವಾಗುತ್ತದೆ.

ಇದೇ ರೀತಿಯಲ್ಲಿ ಇವೊತ್ತು ಗ್ರಾಮೀಣ ಪ್ರದೇಶಗಳಲ್ಲಿ ಆರೋಗ್ಯದ ಪರಿಸ್ಥಿತಿಯು ಗಂಭೀರ ವಿಷಯವಾಗಿದೆ. ಇದನ್ನು ನೆನಸಿಕೊಂಡರೆ ಭಯಾನಕವಾಗುತ್ತದೆ. ನಾವು ಇನ್ನೈದು ವರ್ಷಗಳಲ್ಲಿ 20ನೇ ಶತಮಾನಕ್ಕೆ ಕಾಲಿಡುತ್ತಿದ್ದೇವೆ. ಇವೊತ್ತು ಅತೀ ಹೆಚ್ಚು ಹಳ್ಳಿಗಾಡಿನಲ್ಲರತಕ್ಕಂಥ ಜನರು ನಿಂಬೆಹಣ್ಣು, ಬೇವಿನಸೊಪ್ಪಿನಿಂದ ಮಂತ್ರವನ್ನು ಹಾಕಿಸಿಕೊಳ್ಳುತ್ತಿದ್ದಾರೆಯೇ ಹೊರತು ಔಷಧಿಯಾಗಿ ಉಪಯೋಗಿಸುತ್ತಾ ಇಲ್ಲ. ಅದಕ್ಕೆ ಎರಡು ಮುಖ್ಯ ಕಾರಣಗಳು ಇವೆ. ಒಂದು ಅವರಲ್ಲಿರತಕ್ಕಂಥ ಬೌದ್ಧಿಕ ದಾರಿದ್ರ ಅಂದರೆ ಮೂಢನಂಬಿಕೆ ಇತ್ಯಾದಿಗಳು. ಇನ್ನೊಂದು ಅಲ್ಲಿ ಆಸ್ಪತ್ರೆಗಳ ವ್ಯವಸ್ಥೆ ಇಲ್ಲದೇ ಇರುವುದು. ಅವರು ಆಸ್ಪತ್ರೆಗೆ ಬರಬೇಕಾದರೆ ಕನಿಷ್ಠ 10-12 ಮೈಲುಗಳವರೆಗೆ ಬರಬೇಕಾಗುತ್ತದೆ. ಹಳ್ಳಿಗಾಡಿನಲ್ಲಿರತಕ್ಕಂಥ ಜನರ ಆರೋಗ್ಯ ಕುರಿತಾಗಿ ನಾವು ಗಂಭೀರವಾಗಿ ಪರಿಶೀಲನೆ ಮಾಡುವುದಾದರೆ ಎರಡು ಪ್ರಮುಖವಾದಂಥ ಪ್ರಶ್ನೆಗಳಿವೆ. ಸರಕಾರದವರೇ ಹೇಳಿರುವ ಪ್ರಾಕಾರ 40 ಪರ್‌ಸೆಂಟ್‌ನಷ್ಟು ಜನರು ಬಡತನದ ರೇಖೆಗಿಂತ ಕಡಿಮೆ ಇದ್ದಾರೆ. ಅವರಿಗೆ ಪೌಷ್ಟಿಕ ಆಹಾರ ಸಿಗುತ್ತಾ ಇಲ್ಲ.

ಅಪೌಷ್ಠಿಕತೆಯಿಂದಾಗಿ ಹಳ್ಳಿ ಮತ್ತು ಪಟ್ಟಣಗಳಲ್ಲಿನ ಜನರಿಗೆ ಕಾಯಿಲೆಗಳು ಹೆಚ್ಚಾಗಿ ಬರುತ್ತಿವೆ. ಪಾಷ್ಠಿಕ ಆಹಾರೋತ್ಪಾದನೆಯನ್ನು ಹೆಚ್ಚಿಸುವ ಕಡೆಗೆ ಗಮನಕೊಡಬೇಕು ಮತ್ತು ಪಾಷ್ಠಿಕಾಹಾರವನ್ನು ಜನಸಾಮಾನ್ಯರಿಗೆ ಸರಕಾರದವರೇ ಒದಗಿಸಿಕೊಡುವ ವ್ಯವಸ್ಥೆಯಾಗಬೇಕು. ಒಂದು ವರದಿಯ ಪ್ರಕಾರ ಒಬ್ಬ ಮನುಷ್ಯ ಆರೋಗ್ಯವಂತನಾಗಿರಬೇಕಾದರೆ ಪ್ರತಿದಿವಸವೂ 2600ಕ್ಯಾಲರಿಗಳಷ್ಟು ಆಹಾರವು ಬೇಕಾಗುತ್ತದೆ. ನಮ್ಮ ದೇಶದಲ್ಲಿ ಸಿಗುವ ಆಹಾರ ಕ್ಯಾಲರಿಯು900 ಮಾತ್ರ. ಅಂದರೆ 1500 ಕ್ಯಾಲರಿಗಳಷ್ಟು ಆಹಾರದ ಕೊರತೆ ಇದೆ ಎಂದ ಹಾಗೆ ಆಯಿತು. ಇದರಿಂದಾಗಿ ಮೂಲತಃ ಜನರು ನಾನಾ ರೀತಿಯ ಕಾಯಿಲೆಗಳಿಗೆ ಒಳಗಾಗುತ್ತಾ ಇದ್ದಾರೆ. ಬೆಳಿಗ್ಗೆ ಮಾನ್ಯ ಸದಸ್ಯರಾದ ಶ್ರೀ ಕುಂಬ್ಳೆ ಸುಂದರರಾಯರು ಸುರತ್ಕಲ್ ನಗರದ ಮಧ್ಯದಲ್ಲಿ ಕೊಳಚೆ ನೀರು ಹರಿದು ಹೋಗುತ್ತಿರುವ ಬಗ್ಗೆ ಹೇಳಿದರು. ಆದರೆ ಇಂಥ ದೃಶ್ಯವು ನಮ್ಮ ಎಲ್ಲಾ ಹಳ್ಳಿಗಳಲ್ಲಿಯೂ ಸಾಮಾನ್ಯ ವಾಗಿರುತ್ತದೆ. ಕೇವಲ ಚರಂಡಿ ನೀರು ಮಾತ್ರವಲ್ಲ, ಬೇರೆ ಬೇರೆ ಎಲ್ಲಾ ಕೆಲಸಗಳೂ ಅಲ್ಲಿಯೇ ನಡೆಯುತ್ತದೆ. ನಾನು ಹಿಂದಿನ ರಾಜ್ಯಪಾಲರ ಭಾಷಣದ ಮೇಲೆ ಮಾತನಾಡುವಾಗ ಕೂಡ ಒಂದು ವಿಚಾರವನ್ನು ಪ್ರಸ್ತಾಪ ಮಾಡಿದ್ದೆ.

ಸರಕಾರದವರು ಮಹಿಳೆಯರ ಬಗ್ಗೆ ಬಹಳ ಸಹಾನುಭೂತಿಯನ್ನು ವ್ಯಕ್ತಪಡಿಸಿದ್ದಾರೆ. ಇದು ಸಂತೋಷ ತರುವ ವಿಚಾರ. ಅದೇ ರೀತಿಯಲ್ಲಿ ರಿಸರ್‌ವೇಶನ್ ಮಾಡುತ್ತೇವೆ ಎಂದು ಹೇಳಿದ್ದಾರೆ, ಬಹಳ ಸಂತೋಷ. ಈ ಬಗ್ಗೆ ನಮ್ಮ ಬೆಂಬಲ ನಿಮ್ಮ ಬಗ್ಗೆ ಇದೆ. ಗ್ರಾಮೀಣ ಪ್ರದೇಶಗಳಲ್ಲಿ ವಾಸಮಾಡತಕ್ಕಂಥ ನೂರಕ್ಕೆ 70ರಷ್ಟು ಮಹಿಳೆಯರಿಗೆ ಇವೊತ್ತು ಶೌಚಕ್ಕಾಗಿ ಬಹಿರಂಗ ಸ್ಥಳಗಳಿಗೆ ಹೋಗಬೇಕಾದ ಸ್ಥಿತಿ ಇದೆ. ಅವರಿಗೆ ಯಾವುದೇ ವ್ಯವಸ್ಥೆಯು ಇಲ್ಲ, ಇಂಥ ವಿಚಾರದ ಬಗ್ಗೆ ಒಂದು ನಾಗರೀಕ ಸಮಾಜವು ತಲೆತಗ್ಗಿಸ ಬೇಕಾಗಿದೆ. ಇದೊಂದು ತೀರಾ ಅಮಾನವೀಯವವಾದಂಥ ಪರಿಸ್ಥಿತಿ. ಇದನ್ನು ಕೇವಲ ನೈರ್ಮಲ್ಯದ ಪ್ರಶ್ನೆಯಾಗಿ ಮಾತ್ರ ನಾನು ಹೇಳುತ್ತಾ ಇಲ್ಲ, ಇದು ನಮ್ಮ ನಾಗರೀಕ ಸಮಾಜದ ಮುಂದಿರತಕ್ಕಂಥ ಒಂದು ದೊಡ್ಡ

ಸವಾಲು ಕೂಡ ಆಗಿದೆ. ನೈರ್ಮಲ್ಯದ ಬಗ್ಗೆ ಎಂಥ ಗಂಭೀರ ಸ್ಥಿತಿ ಇದೆ ಎಂಬುದನ್ನು ಅಲ್ಲಿಗೆ ಹೋಗಿ ನೋಡಿದಾಗ ತಿಳಿಯುತ್ತದೆ. ಇವೊತ್ತು ಹಲವಾರು ಕಾರ್ಯಕ್ರಮಗಳಿವೆ. ಪಟ್ಟಣಗಳಿಗಾಗಿ ಒಳಚರಂಡಿ ಮಂಡಳಿಯೇ ಇದೆ. ಆದರೆ ನಮ್ಮ ಹಳ್ಳಿಗಳಿಗೆ ಮಾತ್ರ ಯಾವುದೇ ಬೋರ್ಡ್ ಇಲ್ಲ. ಅಲ್ಲಿ ಒಳಚರಂಡಿಯೂ ಇಲ್ಲ ಮೇಲ್ಚರಂಡಿಯೂ ಇಲ್ಲ. ಕೊಳಚೆ ನೀರು ಮೇಲ್ಗಡೆಯೇ ಹರಿದು ಹೋಗ ಬೇಕು. ನಾನು ಎಲ್ಲಾ ವಿವರಗಳನ್ನು ಹೇಳಿದರೆ ಅದು ಕೆಲವರಿಗೆ ಇರಿಸುಮುರಿಸು ಆಗಿ ಸಮಸ್ಯೆಯಾಗ ಬಹುದು. ಇನ್ನು ಕುಡಿಯುವ ನೀರಿನ ಪರಿಸ್ಥಿತಿಯು ನಮ್ಮಲ್ಲಿ ಏನಾಗದೆ ಅಂದರೆ, ಎಲ್ಲರೂ ಕೂಡ ಇದನ್ನು ರಾಜಕೀಯ ಬಂಡವಾಳವಾಗಿ ಮಾಡಿಕೊಳ್ಳಲು ಪ್ರಯತ್ನ ಮಾಡುತ್ತಿದ್ದಾರೆಯೇ ಹೊರತು ನಿಜವಾಗಿಯೂ ಸಮಸ್ಯೆಯನ್ನು ಪರಿಹರಿಸಿಲ್ಲ.

ಮಾನ್ಯ ನಜೀರ್‌ಸಾಬ್‌ರವರು ಬೋರ್‌ವೆಲ್‌ಗಳನ್ನು ಹಾಕುವ ಮೂಲಕ ಕರ್ನಾಟಕಕ್ಕೆ ಒಂದು ದೊಡ್ಡ ಕೊಡುಗೆಯನ್ನು ಕೊಟ್ಟರು. ಆದರೆ ಅದೇ ಬೋರ್‌ವೆಲ್‌ಗಳು ಸರಿಯಾಗಿ ರಿಪೇರಿ ಕೂಡ ಆಗುತ್ತಾ ಇಲ್ಲ. ಹಾಕಿರತಕ್ಕಂಥ ಬೋರ್‌ವೆಲ್‌ಗಳಲ್ಲಿ ನೀರು ಇಲ್ಲ. ಎನ್‌ಆರ್‌ಡಬ್ಲ್ಯು ಸ್ಕೀಮ್‌ನಲ್ಲಿ ಮಾಡಿದ ವ್ಯವಸ್ಥೆ ಯಲ್ಲಿ ಕೆಲವುಕಡೆಗಳಲ್ಲಿ ನೀರೇ ಇಲ್ಲ. ಇನ್ನು ಕೆಲವು ಕಡೆಗಳಲ್ಲಿ ಪಂಪ್ ಹಾಕಿಸಿಲ್ಲ. ಹಳ್ಳಿಗಾಡಿನಲ್ಲಿ ನೀರಿಗಾಗಿ 5-6 ಕಿ.ಮಿಗಳಷ್ಟು ದೂರ ಹೋಗಬೇಕಾಗಿದೆ. ಈ ಎಲ್ಲಾ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಗ್ರಾಮೀಣ ನೈರ್ಮಲ್ಯದ ಬಗ್ಗೆ ಯೋಚನೆ ಮಾಡಬೇಕಾಗಿದೆ. ಈ ಬಗ್ಗೆ ಹೆಚ್ಚಿನ ಹಣವನ್ನು ಸರಕಾರದವರು ಒದಗಿಸದೇ ಹೋದರೆ ನೈರ್ಮಲ್ಯ ಸ್ಥಿತಿಯನ್ನು ಕಾಪಾಡಲು ಮತ್ತು ಅದನ್ನು ಉತ್ತಮಪಡಿಸಲು ಯಾವುದೇ ರೀತಿಯಲ್ಲಿ ಕೂಡ ಸಾಧ್ಯವಾಗುವುದಿಲ್ಲ. ಅಂಥ ಒಂದು ಕಾರ್ಯಕ್ರಮವನ್ನು ಇಡಬೇಕಾಗಿತ್ತು. ಆದರೆ ಅದನ್ನು ಇಟ್ಟ ಬಗ್ಗೆ ಯಾವುದೇ ಸೂಚನೆಗಳು ಇಲ್ಲ. ಇನ್ನು ಆರೋಗ್ಯ ಕಾರ್ಯಕ್ರಮಗಳನ್ನು ಹೆಚ್ಚು ಹಾಕಿಕೊಳ್ಳುತ್ತೇವೆ ಮತ್ತು ಆರೋಗ್ಯದ ಕುರಿತಾದ ಕಾರ್ಯಕ್ರಮಗಳ ಬಗ್ಗೆ ಅಧಿಕ ಗಮನ ಕೊಡುತ್ತೇವೆ ಕೊಡುತ್ತೇವೆ ಎಂದು ಹೇಳಿದ್ದಾರೆ. ಮತ್ತು ಆರೋಗ್ಯ ಕೇಂದ್ರಗಳನ್ನು ಹೆಚ್ಚುಮಾಡುತ್ತೇವೆ ಮತ್ತು ಇರುವುದನ್ನು ಉತ್ತಮಪಡಿಸುತ್ತೇವೆಂದು ಹೇಳಿದ್ದಾರೆ. ಹೆಚ್ಚು ಮಾಡಬೇಕು ಉತ್ತಮ ಪಡಿಸಬೇಕು ನಿಜ ಆದರೆ ಡಾಕ್ಟರ್‌ಗಳು

ಎಷ್ಟು ಜನ ಇದ್ದಾರೆ ಹಳ್ಳಿಗಳಲ್ಲಿ? ನನ್ನ ಕ್ಷೇತ್ರದಲ್ಲಿ ಎರಡು ಪ್ರಾಥಮಿಕ ಆರೋಗ್ಯ ಕೇಂದ್ರಗಳಿವೆ ಅಧ್ಯಕ್ಷರೇ, ಒಂದೂವರೆ ವರ್ಷದಿಂದ ಆ ತಾಲ್ಲೂಕು ಕೇಂದ್ರಗಳಿರತಕ್ಕ ಆಸ್ಪತ್ರೆಗಳಲ್ಲಿ ಒಬ್ಬರೇ ಡಾಕ್ಟರ್ ಇರುವುದು. ಮಹಿಳಾ ವೈದ್ಯರಿಲ್ಲ. ಬೇರೆ ಡಾಕ್ಟರಿಲ್ಲ ಒಬ್ಬರೇ ವೈದ್ಯರಿದ್ದಾರೆ. ಬಹುಶಃ ಬೇರೆ ಜಿಲ್ಲೆಗಳಲ್ಲೂ ಇದೇ ಪರಿಸ್ಥಿತಿ ಇದೆ. ಆರೋಗ್ಯ ಕೇಂದ್ರಗಳಲ್ಲಿ ಆಸ್ಪತ್ರೆ ಇದ್ದರೆ ಡಾಕ್ಟರಿಲ್ಲ, ಡಾಕ್ಟರು ಆಸ್ಪತ್ರೆ ಇದ್ದರೆ ಔಷಧಿಇಲ್ಲ, ಸರ್ಕಾರ ಔಷಧಿ ಏನು ಒದಗಿಸುತ್ತಿದೆ ಅವು ಎಷ್ಟು ದುರುಪಯೋಗವಾಗುತ್ತಿದೆ ಎಂಬುದು ಬಹಳ ಮುಖ್ಯವಾದ ಪ್ರಶ್ನೆ ಇವತ್ತು ಹಲವಾರು ಕಡೆ ಸರ್ಕಾರ ಒದಗಿಸುವ ಔಷಧಿಗಳನ್ನು ಅಧಿಕಾರಿಗಳು ಬಹಿರಂಗವಾಗಿ ಮಾರಾಟ ಮಾಡುತ್ತಾರೆ. ಅದರಲ್ಲೇನು ಮುಚ್ಚುಮರೆ ಇಲ್ಲ. ಇನ್ನು ಸರ್ಕಾರಿ ಆಸ್ಪತ್ರೆಯ ಡಾಕ್ಟರುಗಳಿಗೆ ಆ ಸರ್ಕಾರಿ ಆಸ್ಪತ್ರೆಗಳಿಗಿಂತ ಅವರು ನಡೆಸುವ ನರ್ಸಿಗ್‌ಹೋಂಗಳು ಮತ್ತು ಕ್ಲೀನಿಕ್‌ಗಳೇ ಬಹಳ ಮುಖ್ಯ. ಸರ್ಕಾರಿ ಆಸ್ಪತ್ರೆಗೆ ಬಂದು ಅಟೆನ್ಡನ್ಸ್ ಹಾಕುವುದೇ ಅವರ ಕೆಲಸ, ಆದರೆ ಅವರು ಪೂರ್ತಿ ಕೆಲಸ ಮಾಡುವುದು ಅವರ ಸ್ವಂತ ಕ್ಲಿನಿಕ್ ಮತ್ತು ನರ್ಸಿಗ್ ಹೋಂಗಳಲ್ಲಿ.

ಇದರ ಬಗ್ಗೆ ಸರ್ಕಾರ ಏನಾದರೂ ಕಠಿಣವಾದ ಕ್ರಮ ತೆಗೆದುಕೊಳ್ಳಬೇಕು. ನಮ್ಮ ಮಾನ್ಯ ಕೃಷಿ ಸಚಿವರೇ ಒಂದ್ಸಲ ನಮ್ಮ ಜಿಲ್ಲೆಗೆ ಬಂದರು. ಅವರು ಬಂದಾಗ 11.30 ಅಲ್ಲೊಂದು ಸರ್ಕಾರಿ ಆಸ್ಪತ್ರೆ ಇದೆ, ಹನ್ನೊಂದುವರೆ ಆದರೂ

ಡಾಕ್ಟರಿಲ್ಲ. ಕೃಷಿ ಸಚಿವರೇ ಬಂದು ನೋಡಿದ್ದಾರೆ ಆದರೆ ಇವತ್ತಿಗೂ ಏನೂ ಕ್ರಮ ಜರುಗಿಲ್ಲ. ಈ ರೀತಿಯಾದ ಪರಿಸ್ಥಿತಿ ಆ ಡಾಕ್ಟರುಗಳು ತಮ್ಮ ಸ್ವಂತ ಕ್ಲಿನಿಕ್‌ಗಳಿಗೆ ಕೊಡುತ್ತಿರುವ ಗಮನ ಸರ್ಕಾರಿ ಆಸ್ಪತ್ರೆಗಳಿಗೆ ಕೊಡುತ್ತಿಲ್ಲ. ಸರ್ಕಾರಿ ಆಸ್ಪತ್ರೆಗಳಲ್ಲಿ ವೈದ್ಯರ ನೇಮಕ ಪರಿಣಾಮಕಾರಿಯಾಗಬೇಕು. ಸರ್ಕಾರ ಕೊಡುವ ಔಷಧಿಗಳನ್ನು ಹೆಚ್ಚು ಮಾಡಬೇಕಾಗಿದೆ ಮತ್ತು ಬೇಕಾದ ಸಲಕರಣೆಗಳನ್ನು ಕೂಡ ಹೆಚ್ಚು ಮಾಡಕದೇಹೋದರೆ ಆಸ್ಪತ್ರೆಗಳ ಗುಣಮಟ್ಟವನ್ನು ಹೆಚ್ಚುಮಾಡಲಿಕ್ಕೆ ಸಾಧ್ಯವಿಲ್ಲ. ಹಳ್ಳಿಗಾಡುಗಳಲ್ಲಿ ಯಾವುದಾದರೂ ಒಂದು ಸಣ್ಣ ಕಾಯಿಲೆ ಬಂದರೂ ಬೆಂಗಳೂರಿಗೆ ಕರೆದುಕೊಂಡು ಹೋಗಿ ಎಂದು ಹೇಳಿಬಿಡುತ್ತಾರೆ. ಅಲ್ಲಿ ಸರಿಯಾದ ವ್ಯವಸ್ಥೆ ಇರುವುದಿಲ್ಲ. ಮಧ್ಯರಾತ್ರಿಯಲ್ಲಿ ಸಮಸ್ಯೆ ಬರುತ್ತದೆ ಎಲ್ಲಿಗೆ ಕರೆದುಕೊಂಡು ಹೋಗಬೇಕು? ಮುಖ್ಯವಾಗಿ ಹಳ್ಳಿಗಾಡುಗಳ ಕಡೆ ಹಾವು ಕಚ್ಚುವುದು ಜಾಸ್ತಿ. ಹಳ್ಳಿಗಾಡಿನ ಎಲ್ಲ ಆಸ್ಪತ್ರೆಗಳಲ್ಲಿ ಹಾವು ಕಚ್ಚಿದರೆ ಔಷಧಿ ಇಲ್ಲ. ಹಾವು ಕಚ್ಚಿ ಆಸ್ಪತ್ರೆಗೆ ಕರೆದೊಯ್ದರೆ ಬೆಂಗಳೂರಿಗೆ ಹೋಗಿ ಅಂತಾರೆ, ಬೆಂಗಳೂರಿಗೆ ಬರುವಷ್ಟರಲ್ಲಿ ಅವನು ಮಧ್ಯದಾರಿಯಲ್ಲೇ ಸತ್ತುಹೋಗಿರುತ್ತಾನೆ. ಅವನು ಬದುಕಲಿಕ್ಕೆ ಸಾಧ್ಯವಿಲ್ಲ. ಇಂತಹ ಪರಿಸ್ಥಿತಿ ಇದೆ.

ಕೆಲವು ಅಗತ್ಯವಾದ ಔಷಧಿಗಳು ಮತ್ತು ಜೀವರಕ್ಷಕ ಔಷಧಿಗಳನ್ನು ಸರ್ಕಾರ ಪ್ರಾಧಾನ್ಯ ಕೊಟ್ಟು ಹೆಚ್ಚು ಒದಗಿಸಬೇಕು. ಆಗ ಮಾತ್ರ ಆಸ್ಪತ್ರೆಗಳನ್ನು ನಾವು ಉತ್ತಮಪಡಿಸಲು ಸಾಧ್ಯ ಆಗುತ್ತದೆ. ನಾವು ಒಟ್ಟಾರೆ ಕರ್ನಾಟಕ ರಾಜ್ಯದ ಪ್ರಗತಿಯನ್ನು ನೋಡಬೇಕಾದರೆ ಆ ಪ್ರಗತಿ ಆಗಬೇಕೂಂತಾದರೂ ಅದಕ್ಕೆ ನಿರ್ದಿಷ್ಟವಾದ ಗುರಿ ಇರಬೇಕು ಅದು ನಾಳೆಯೇ ಆಗುತ್ತದೆ ಎಂದು ಹೇಳುವುದಕ್ಕಾಗುವುದಿಲ್ಲ. ಆ ಸ್ಪಷ್ಟ ಗುರಿಯೆಡೆಗೆ ದಿಟ್ಟವಾದ ಹೆಜ್ಜೆ ಇಟ್ಟರೆ ಮಾತ್ರ ಯಾವುದೇ ಒಂದು ಸರ್ಕಾರ ರಾಜ್ಯವನ್ನು ಅಭಿವೃದ್ಧಿಪಡಿಸಲು ಸಾಧ್ಯವಾಗುತ್ತದೆ. ಆ ದೃಷ್ಟಿಯಿಂದ ಕರ್ನಾಟಕದಲ್ಲಿ ಒಂದು ಕಡೆ ಕೈಗಾರಿಕಾ ಅಭಿವೃದ್ಧಿ ಆಗಬೇಕು ಇನ್ನೊಂದು ಕಡೆ ಕೃಷಿ ಅಭಿವೃದ್ಧಿ ಆಗಬೇಕು. ಕೃಷಿಯಲ್ಲಿ ಮುಖ್ಯವಾದ ಸಮಸ್ಯೆ ಕೃಷಿ ಕಾರ್ಮಿಕರದ್ದು. ಕೃಷಿ ಕಾರ್ಮಿಕರಲ್ಲಿ ನೂರಕ್ಕೆ 80 ಭಾಗ ಇರುವುವರು ಪರಿಶಿಷ್ಟ ಜಾತಿ ಪಂಗಡದವರು. ಅವರ ಪರಿಸ್ಥಿತಿ ಏನಾಗಿದೆ ಎಂದರೆ ಹೇಳಲು ದುಃಖವಾಗುತ್ತದೆ. ನಾವೆಲ್ಲರೂ ಅದರ ಬಗ್ಗೆ ಭಾಷಣ ಮಾಡಿದ್ದೇವೆ, ಅದರ ಬಗ್ಗೆ ಸಂತೃಪ್ತಿ ಪಟ್ಟುಕೊಳ್ಳುವುದೇನೆಂದರೆ ನಾವು ಅವರಿಗೆ ಮೀಸಲಾತಿ ಕೊಟ್ಟುಬಿಟ್ಟದ್ದೇವೆ ಎಂದು ಚುನಾವಣೆಯಲ್ಲಿ ರಿಸರ್ವೇಶನ್ ಶಿಕ್ಷಣದಲ್ಲಿ ರಿಸರ್ವೇಶನ್ ನಾನು ಖಂಡಿತ ಪ್ರಾಮಾಣಿಕವಾಗಿ ಹೇಳುತ್ತಿದ್ದೇನೆ, ನಾನು ಮೀಸಲಾತಿ ವಿರೋಧಿಯಲ್ಲ. ಆದರೆ ಈ ಮೀಸಲಾತಿಯಿಂದ ಅವರನ್ನು ನಾವು ಉದ್ಧಾರ ಮಾಡುತ್ತೇವೆಂದು ಯಾರಾದರೂ ಅಂದುಕೊಂಡಿದ್ದರೆ ಅದು ಖಂಡಿತ ಸಾಧ್ಯವಿಲ್ಲ. ನಾವು 20 ವರ್ಷಗಳಿಂದ ನೋಡಿದ್ದೇವೆ.

ಆದರೆ ಮೂಲಭೂತವಾಗಿ ಅವರಿಗೆ ಏನಾಗಬೇಕು ಅಂದರೆ ಅವರು ಆತ್ಮಗೌರವದಿಂದ ಏನಾದರೂ ಹಳ್ಳಿಯಲ್ಲಿ ಇರಬೇಕಾದರೆ ಮೊದಲನೆಯದಾಗಿ ಅವರು ಸ್ವಂತ ಕಾಲ ಮೇಲೆ ಸ್ವಂತ ದುಡಿಮೆ ಮೇಲೆನಿಂತುಕೊಳ್ಳಬೇಕು. ಅದಕ್ಕೆ ಬೇಕಾದ ಅವಶ್ಯಕತೆ ಒದಗಿಸಿ. ಹಳ್ಳಿಗಾಡುಗಳಲ್ಲಿರುವವರಿಗೆ ಮೊದಲು ಭೂಮಿ ಕೊಡಿ. ಒಂದೊಂದು ಕುಟಂಬಕ್ಕೆ ಎರಡು ಎಕರೆ ಭೂಮಿ ಕೊಡಿ ಮತ್ತು ಅದಕ್ಕೆ ನೀರಿನ ವ್ಯವಸ್ಥೆ ಮಾಡಿಕೊಡಿ ಇನ್ನ್ಯಾವುದೇ ಸಹಾಯ ಅವರಿಗೆ ಮಾಡಬೇಡಿ. ಅವರಿಗೆ ಗೊತ್ತಿದೆ, ಅವರು ಬದುಕುತ್ತಾರೆ, ಅವರು ಪ್ರಾಮಾಣಿಕವಾಗಿ ಕೆಲಸ ಮಾಡುವಂತಹ ಜನ ದುಡಿಯುವಂತಹ ಜನ. ಇವತ್ತು ಆ ಕೃಷಿ ಕಾರ್ಮಿಕರಿಗೆ ಭೂಮಿ ಇಲ್ಲ, ಇನ್ನೊಂದು ಕಡೆಗೆ ಅವರು ಕೊಡುವಂತಹ ಜನ. ಇವತ್ತು ಆ ಕೃಷಿ ಕಾರ್ಮಿಕರಿಗೆ ಭೂಮಿ ಇಲ್ಲ. ಇನ್ನೊಂದು ಕಡೆ ಅವರು ಕೊಡುವಂತಹ ಕೂಲಿ ಪ್ರಶ್ನೆ. ನಾವು ಕೂನೂನು ಮಾಡಿಬಿಟ್ಟದ್ದೇವೆ 11 ರೂ ಎಸ್‌ಆರ್‌ನಲ್ಲಿ ಕೊಡುತ್ತೇವೆ 26 ರೂ ಕೂನಾನು

ಮಾಡಿದ್ದೇವೆ, ಕೃಷಿ ಕಾರ್ಮಿಕರಿಗೆ ವೇತನ ಸಿಗುತ್ತದೆ ಅಂತ. ಅಧ್ಯಕ್ಷರೇ, 26 ರೂ ಕಾನೂನು ಮಾಡಿರಬಹುದು ಅದು ಖಂಡಿತ ಎಲ್ಲೂ ಜಾರಿಗೆ ಬಂದಿಲ್ಲ, ಬರಲೂ ಸಾಧ್ಯವಿಲ್ಲ, ಕಾರಣ ಇಷ್ಟೆ ಕೆಲವು ಒಣ ಬೇಸಾಯ ಇರುವ ಪ್ರದೇಶಗಳಲ್ಲಿ 26 ರೂ. ಕೂಲಿ ಕೊಟ್ಟರೆ ರೈತ ಸತ್ತು ಹೋಗುತ್ತಾನೆ. ಇನ್ನು ವಾಣಿಜ್ಯ ಬೆಳೆ ಬೆಳೆಯುವ ಕಡೆ 26 ರೂ ಕೂಲಿಕೊಟ್ಟು ಬದುಕಲಿಕ್ಕೆ ಸಾಧ್ಯವಿಲ್ಲ. ಇವತ್ತು ನಾವೆಲ್ಲರೂ ಆತ್ಮಶೋಧನೆ ಮಾಡಿಕೊಳ್ಳಬೇಕಾಗಿದೆ. ಈ 26 ರೂ. ಕೊಟ್ಟೆವಿ ಅಂತ ಇಟ್ಟುಕೊಳ್ಳಿ ಕೃಷಿ ಕಾರ್ಮಿಕರಿಗೆ ಅದರಿಂದ ಆ ಮನುಷ್ಯ ಇವತ್ತು ಬದುಕಲಿಕ್ಕೆ ಸಾಧ್ಯವಿದೆಯಾ?

ಅವನ ಹೆಂಡತಿ ಮಕ್ಕಳು ಬದುಕಲು ಸಾಧ್ಯವಿದೆಯೂ? ಅವನು ಇವತ್ತು ಉಪಯೋಗಿಸುತ್ತಿರುವ ವಸ್ತುಗಳ ಬೆಲೆ ಏನಿದೆ? ಅಕ್ಕಿ ಗೋಧಿ ಸಕ್ಕರೆ ಬೆಲೆಗಳು ವಿಪರೀತವಾಗಿ ಏರುತ್ತಿರುವ ಸಂದರ್ಭದಲ್ಲಿ 26 ರೂ 30 ರೂ ನಾವು ಕನಿಷ್ಠ ಕೂಲಿ ನಿಗದಿ ಮಾಡಿದ್ದರೂ ಅದರಿಂದ ಅವನು ತನ್ನ ಹೆಂಡತಿ ಮಕ್ಕಳೊಡನೆ ಬದುಕಲಿಕ್ಕೆ ಸಾಧ್ಯವಿಲ್ಲ, ಎರಡು ಹೊತ್ತು ಊಟ ಮಾಡಲು ಮೈತುಂಬಾ ಬಟ್ಟೆಹಾಕಲು ಸಾಧ್ಯವಿಲ್ಲ. ಅಂತಹ ಪರಿಸ್ಥಿತಿಯಿಂದ ಅವನು ನಾವು ತಪ್ಪಿಸಬೇಕಾಗಿದೆ. ಅವರು ಇವತ್ತು ಏಕೆ ಸ್ವಾಭಿಮಾನ ಕಳೆದುಕೊಂಡಿದ್ದಾರೆ, ಏಕೆ ಇವತ್ತು ಅವರು ಮಾರಾಟದ ಸರಕುಗಳಾಗಿದ್ದಾರೆ? ಯಾಕೆ ಇವತ್ತು ಅವರು ಅವಹೇಳನಕ್ಕೆ ಗುರಿ ಯಾಗಿದ್ದಾರೆ? ಏಕೆಂದರೆ ಅವರಿಗೆ ಆರ್ಥಿಕ ಸ್ವಾತಂತ್ರ್ಯ ಇಲ್ಲ. ಆರ್ಥಿಕವಾಗಿ ತನ್ನ ಕಾಲ ಮೇಲೆ ನಿಂತು ಜೀವಿಸುವ ಶಕ್ತಿ ಇಲ್ಲ. ಅದಕ್ಕೋಸ್ಕರ ಇವತ್ತು ಹಳ್ಳಿಗಾಡುಗಳಲ್ಲಿರುವ ಜಮೀನುದಾರರ ಬಡ್ಡಿ ವ್ಯಾಪಾರಿಗಳ ಮುಂದೆ ಕೈಕಟ್ಟಿ ತಲೆಬಾಗಿ ನಿಂತು ಕೊಳ್ಳುವ ಪರಿಸ್ಥಿತಿ ಬಂದಿದೆ. ಹಳ್ಳಿಗಾಡು ಪ್ರದೇಶಗಳಲ್ಲಿ ಅವರ ವಿರೋಧ ಕಟ್ಟಕೊಂಡರೆ ಬದುಕಲಿಕ್ಕೆ ಸಾಧ್ಯವಿಲ್ಲ. ಎಲ್ಲದಕ್ಕೂ ಅವರ ಮೇಲೆ ಅವಲಂಬಿಸಬೇಕಾಗಿದೆ ಅದಕ್ಕೆ ನಾನು ಸರ್ಕಾರವನ್ನು ಒತ್ತಾಯ ಮಾಡುತ್ತೇನೆ ನೀವು ಏನೆಲ್ಲ ಮಾಡಿದರೂ ಮೊತ್ತಮೊದಲು ಮಾಡಬೇಕಾಗಿರುವುದು ಸರ್ಕಾರ ಆ ಉಳುವ ಕೃಷಿ ಕಾರ್ಮಿಕರಿಗೆ ಭೂಮಿ ಕೊಡಿ, ಅವನು ಕೃಷಿ ಮೊದಲು ಬೇಕಾಗಿರುವ ಪ್ರಾಥಮಿಕ ವ್ಯವಸ್ಥೆ ಮಾಡಿಕೊಟ್ಟರೆ ಮಾತ್ರ ಆತ ಬದುಕಲು ಸಾಧ್ಯವಾಗುತ್ತದೆ. ಆತ ಬದುಕಿದರೆ ಮಾತ್ರ ಈ ದೇಶದ ಕೃಷಿ ಬದುಕಲು ಸಾಧ್ಯವಾಗುತ್ತದೆ ಅವನಿಲ್ಲದೆ ಕೃಷಿ ಬದುಕಲು ಸಾಧ್ಯವಿಲ್ಲ. ಕೃಷಿ ಉತ್ಪಾದನೆ ಹೆಚ್ಚಾಗಲಿಕ್ಕೆ ಸಾಧ್ಯವಿಲ್ಲ.

107 ಲಕ್ಷ ಹೆಕ್ಟೇರ್ ಭೂಮಿ ಕರ್ನಾಟಕದಲ್ಲಿ ಕೃಷಿಯೋಗ್ಯ ಭೂಮಿ ಇದೆ. ಅದರಲ್ಲಿ ನೀವು ಹಂಚಿರುವುದು ಒಂದು ಲಕ್ಷ 25 ಸಾವಿರ ಎಕರೆ ಮಾತ್ರ, ಅದೂ 25 ಸಾವಿರ ಕುಟುಂಬಗಳಿಗೆ ಮಾತ್ರ. ಉಳಿದ ಕೃಷಿಯೋಗ್ಯ ಭೂಮಿ ಬಗ್ಗೆ ನಾನು ಕಳೆದ ಬಜೆಟ್‌ನಲ್ಲಿ ಹೇಳಿದ್ದೇನೆ, ಅದನ್ನು ತೆಗೆದುನೋಡಿ ಮತ್ತೆ ಪುನರಾವರ್ತನೆ ಮಾಡುವುದಿಲ್ಲ. 107 ಲಕ್ಷ ಹೆಕ್ಟರ್ ಭೂಮಿಯನ್ನು ನೀವು ಹಂಚಬೇಕು ಅದನ್ನು ಹಂಚಬೇಕೆಂದು ನಾನು ಒತ್ತಾಯ ಮಾಡುತ್ತಿದ್ದೇನೆ, ಅದನ್ನು ಹಂಚಿದರೆ ಮಾತ್ರ ಕೃಷಿಯಲ್ಲಿ ಉತ್ಪಾದನೆ ಜಾಸ್ತಿಯಾಗುತ್ತದೆ ಇನ್ನೊಂದು ಕಡೆ ಆಧುನಿಕವಾಗಿ ಮನುಷ್ಯನ ಬೆಳವಣಿಗೆ ಹೆಚ್ಚಿ ಆಗ ಅಂತರಿಕ ಮಾರುಕಟ್ಟೆ ಹೆಚ್ಚಾಗುತ್ತದೆ. ಏಕೆ ಕೈಗಾರಿಕೆಗಳು ಇವತ್ತು ರೋಗಗ್ರಸ್ತವಾಗಿದೆ. ಒಂದು ಕೈಗಾರಿಕೆಗಳಲ್ಲಿ ಉತ್ಪನ್ನವಾಗುವ ಸರಕುಗಳಿಗೆ ಮಾರುಕಟ್ಟೆ ಇಲ್ಲ, ಇನ್ನೊಂದು ಆ ಕೈಗಾರಿಕೆಗಳಲ್ಲಿ ಸರಕುಗಳ ಹೆಚ್ಚುವರಿ ಉತ್ಪಾದನೆಯಾಗುತ್ತಿದೆ. ಆದ್ದರಿಂದ ಇವತ್ತು ಕೈಗಾರಿಕೆಗಳು ನಷ್ಟ ಅನುಭವಿಸುತ್ತಿವೆ. ಇನ್ನೊಂದು ಮಿಸ್‌ಮ್ಯಾನೇಜ್‌ಮೆಂಟಿದೆ. ಅದು ವಿವರ ನಾನು ಹೇಳುವುದಕ್ಕೆ ಹೋಗುವುದಿಲ್ಲ. ಅದು ಹೇಳಿದರೆ ದೊಡ್ಡ ಚರಿತ್ರೆಯಾಗುತ್ತದೆ. ನಮ್ಮ ಅಧ್ಯಕ್ಷರಿಗೂ ಗೊತ್ತಿದೆ, ಅವರು ಹಿಂದೆ ಯಾವುದೇ ಒಂದು ಕಮಿಟಿಯ ಅಧ್ಯಕ್ಷರಾಗಿದ್ದಾಗ ಅವರ ಅನುಭವ ನನಗೆ ಹೇಳಿದ್ದಾರೆ. ಸರ್ಕಾರಿ ಕಾರ್ಖಾನೆಗಳು ಹೇಗೆ ವಿತಕ್ಕಾಗಿ ನಷ್ಟ

ಅನುಭವಿಸುತ್ತವೆ ಎಂದು. ಅಧ್ಯಕ್ಷರು ಅವಕಾಶ ಕೊಟ್ಟರೆ ಆ ಪಟ್ಟಿ ಬೇಕಾದರೆ ನಾನು ಕೊಡುತ್ತೇನೆ, ಏತಕ್ಕಾಗಿ ಅವು ನಷ್ಟ ಅನುಭವಿಸುತ್ತಿವೆ ಎಂದು ಇವತ್ತು ಕೈಗಾರಿಕೆಗಳಲ್ಲಿ ಉತ್ಪಾದನಾ ವೆಚ್ಚ ಒಂದು ಕಡೆ ಹೆಚ್ಚಾದರೆ

ಅಧ್ಯಕ್ಷರು : ಇದು ಮೂಲಭೂತವಾದ ನೀತಿ. ನಮ್ಮದು ಫೆಡರಲ್ ಸಿಸ್ಟಂ, ಪ್ರೈಸಿಂಗ್ ಪಾಲಿಸಿ ಕೃಷಿ ನೀತಿ ಕೈಗಾರಿಕೆ ನೀತಿ ಇವೆಲ್ಲ ಮೂಲಭೂತವಾಗಿ ಚರ್ಚೆಯಾಗಿ ರೂಪಿತಗೊಳ್ಳಬೇಕಾಗಿರುವುದು ಲೋಕಸಭೆಯಲ್ಲಿ. ನೀವು ವಿಷಯ ತಿಳಿದುಕೊಂಡಿದ್ದೀರಿ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಆ ಮೂಲಭೂತ ಸಮಸ್ಯೆ ಪರಿಹಾರ ಮಾಡಲಿಕ್ಕೆ ರಾಜ್ಯಸರ್ಕಾರಕ್ಕೆ ಅಧಿಕಾರ ಇಲ್ಲ ಎಂದು ನನಗೆ ಸ್ಪಷ್ಟವಾಗಿ ಗೊತ್ತಿದೆ. ಆದರೆ ರಾಜ್ಯಸರ್ಕಾರ ಪ್ರಾಮಾಣಿಕವಾಗಿ ತನ್ನ ಕರ್ತವ್ಯ ಮಾಡಬೇಕು. ಕೃಷಿ ಕಾರ್ಮಿಕರ ಕೃಷಿವೇತನದ ಪ್ರಶ್ನೆಯನ್ನು 9ನೇ ಶೆಡ್ಯುಲ್‌ಗೆ ಸೇರಿಸಲು ಏಕೆ ಕರ್ನಾಟಕ ಸರ್ಕಾರ ಒತ್ತಾಯ ಮಾಡಬಾರದು? ಭೂಮಿಯನ್ನು ಹಂಚಿಕೆ ಮಾಡುವ ಪ್ರಶ್ನೆಯನ್ನು 9ನೇ ಶೆಡ್ಯುಲ್‌ಗೆ ಸೇರಿಸುವಂತೆ ಏಕೆ ನಮ್ಮ ಸರ್ಕಾರ ಒತ್ತಾಯ ಮಾಡಬಾರದು? ಇದು ರಾಜ್ಯಸರ್ಕಾರದ ವ್ಯಾಪ್ತಿಗೆ ಬರುತ್ತದೆ ಇಷ್ಟಾದರೂ ಮಾಡಬಹುದಲ್ಲ, ವಿದ್ಯುತ್ ರಾಜ್ಯಸರ್ಕಾರದ ವ್ಯಾಪ್ತಿಗೆ ಬರುತ್ತದೆ ಅದು ಮಾಡಬಹುದಲ್ಲ. ರೈತನಿಗೆ ಒಳ್ಳೆಯ ಮಾರುಕಟ್ಟೆ ವ್ಯವಸ್ಥೆ ಮಾಡಿಕೊಡುವುದು ರಾಜ್ಯಸರ್ಕಾರದ ವ್ಯಾಪ್ತಿಗೆ ಬರುತ್ತದೆ. ಅದನ್ನು ಮಾಡಬಹುದಲ್ಲ.

4.10 ಪಿ.ಎಂ

ನಾನು ಅಷ್ಟನ್ನು ಮಾತ್ರ ಹೇಳುತ್ತಿರುವುದು, ನಾನು ಇಡೀ ಆರ್ಥಿಕ ವ್ಯವಸ್ಥೆಯನ್ನು ಬದಲಾವಣೆ ಮಾಡಲಿಕ್ಕೆ ಒಂದು ಕಾರ್ಯಕ್ರಮವನ್ನು ಹಾಕಿ ಎಂದು ಖಂಡಿತವಾಗಯೂ ಹೇಳುತ್ತಿಲ್ಲ. ನನಗೆ ಸ್ಪಷ್ಟವಾಗಿ ಗೊತ್ತಿದೆ. ಅದು ರಾಜ್ಯ ಸರ್ಕಾರದಿಂದ ಸಾಧ್ಯವಿಲ್ಲ ಎಂದು. ಆದರೆ ಆ ದಿಕ್ಕಿನಲ್ಲಿ ಜನತೆ ನಿಮಗೆ ವೋಟನ್ನು ಕೊಟ್ಟಿದ್ದಾರೆ. ಪರ್ಯಾಯವಾದ ವ್ಯವಸ್ಥೆ ಬರಬೇಕು ಎಂದು ಹೇಳಿ.ಆ ದಿಕ್ಕಿನಲ್ಲಿ ಆಲೋಚನೆ ಮಾಡಬೇಕು. ಕನಿಷ್ಠ ನೀವು ಆಲೋಚನೆಯನ್ನೇನಾದರೂ ಮಾಡಬೇಕಲ್ಲ. ನೀವು ಎಷ್ಟು ಮಾಡುತ್ತೀರಿ ಎನ್ನುವ ಪ್ರಶ್ನೆ ಬೇಡ. ಆ ದಿಕ್ಕಿನಲ್ಲಾದರೂ ಕನಿಷ್ಠ ಆಲೋಚನೆ ಮಾಡಬೇಕು. ಆಗ ನಾವು ಸಂಪೂರ್ಣವಾದ ರಾಜ್ಯದ ಬೆಳವಣಿಗೆಯನ್ನು ಕಾಣಬಹುದಾಗಿದೆ. ಅಂಥ ಒಂದು ಕಾರ್ಯಕ್ರಮವನ್ನು ರೂಪಿಸುಬೇಕಾಗಿತ್ತು. ಆದರೆ ಇದರಲ್ಲಿ ರೂಪಿಸಿಲ್ಲ ಎನ್ನುವುದು ಒಂದು ಸ್ಪಷ್ಟವಾಗಿದೆ. ಮತ್ತೆ ವಿಕೇಂದ್ರೀಕರಣದ ಪ್ರಶ್ನೆ ನಾನು ಪದೇ ಪದೇ ಹೇಳುತ್ತಿದ್ದೇನೆ."ಸ್ಥಳೀಯ ಸ್ವಯಂ ಸಂಸ್ಥೆಗಳ ಮೂಲಕ ವಿಕೇಂದ್ರೀಕೃತ ಶಾಸನಬದ್ಧ ಅಧಿಕಾರವನ್ನು ಜನತೆಗೆ ಕೊಡುವಲ್ಲಿ ನನ್ನ ರಾಜ್ಯವೇ ಮೊಟ್ಟ ಮೊದಲನೆಯದು" ಎಂದು ಹೇಳುವುದು ಸರಿಯಲ್ಲ. 1985-86 ನೇ ಇಸವಿಯಲ್ಲಿ ಇದನ್ನು ಜಾರಿಗೆ ತಂದಿರುವುದು. 1978 ನೇ ಇಸವಿಯಲ್ಲಿ ಇಡೀ ದೇಶದಲ್ಲಿ ಮೊಟ್ಟ ಮೊದಲಬಾರಿಗೆ ಗ್ರಾಮ ಪಂಚಾಯಿತಿ ವ್ಯವಸ್ಥೆಯನ್ನು ಜಾರಿಗೆ ತಂದಿದ್ದು ಪಶ್ಚಿಮ ಬಂಗಾಳದ ಸರ್ಕಾರ ಇದಕ್ಕಿಂತ ಮೊದಲು ಕಾನೂನು ಇತ್ತು. 1956ರಲ್ಲಿ ಅಶೋಕ್ ಮೆಹ್ತಾ ಕಮಿಟಿ ರೆಕಮೆಂಡ್ ಮಾಡಿದಾಗಲೇ ಇತ್ತು ಅದಲ್ಲ ಪ್ರಶ್ನೆ. ನಿಜವಾದ ಸ್ವಯಂ ಅಧಿಕಾರವನ್ನು ಕೊಟ್ಟಿದ್ದು ಅಶೋಕ್ ಮೆಹ್ತಾ ಕಮಿಟಿ 1956 ರಲ್ಲಿ ರೆಕಮೆಂಡ್ ಮಾಡಿದ್ದರು. ಅದು ನನಗೂ ಗೊತ್ತಿದೆ. ಆದರೆ ಯಾರೂ ಜಾರಿ ಮಾಡಲಿಲ್ಲ. ಆದರೆ ಅದೇ ಕಾಂಗ್ರೆಸ್ ಸರ್ಕಾರ ನೀವು ಕೂಡ ಕಾಂಗ್ರೆಸ್ ಸರ್ಕಾರದಲ್ಲಿದ್ದರೇ.

ಅಶೋಕ್‌ಮೆಹ್ತಾ ಸಮಿತಿ ವರದಿಯನ್ನು ನೀವು ಕೂಡ ಜಾರಿ ಮಾಡಲಿಲ್ಲ. 74 ನೇ ಅಮೆಂಡ್‌ಮೆಂಟನ್ನು ತಂದಾಗ ಪಾರ್ಲಿಮೆಂಟ್‌ನಲ್ಲಿ ರಾಜೀವ್‌ಗಾಂಧಿ ಪಾರ್ಲಿಮೆಂಟ್‌ನಲ್ಲಿ

ಅಮೆಂಡ್‌ಮೆಂಟ್ ಬಿಲ್ಲನ್ನು ತಂದರೆ ಇದರ ಬಗ್ಗೆ ಹಲವಾರು ರಾಜಕೀಯ ಪಕ್ಷಗಳು ಅದನ್ನು ವಿರೋಧ ಮಾಡಿ ಸಭಾತ್ಯಾಗ ಮಾಡಿದಂಥ ಜನರೂ ಇದ್ದಾರೆ. ಅದನ್ನು ನೀವು ಸಮರ್ಥನೆ ಮಾಡುತ್ತಿದ್ದೀರಿ. ಅದನ್ನು ಸೋಲಿಸಿದ್ದಾರೆ. ಅವರೇ ಇವತ್ತು 74 ನೇ ಅಮೆಂಡ್‌ಮೆಂಟ್ ಬಾರಿ ಚೆನ್ನಾಗಿದೆ ಎಂದು ಹೊಗಳುತ್ತಿದ್ದಾರೆ. ಆ ವಿಪರ್ಯಾಸವನ್ನು ಹೇಳಬೇಕಾದರೆ ಅದು ದೊಡ್ಡ ಚರಿತ್ರೆಯಾಗುತ್ತದೆ. ನಾನು ಹೇಳುವುದಿಲ್ಲ. ಇದು ಸ್ಪಷ್ಟವಾಗಿದೆ. ನಾವು ಈ ರೀತಿ ಹೇಳಬಾರದು. ಅದು ನಿಮಗೂ ಗೊತ್ತಿದೆ. ಯಾರು ಅವತ್ತು ಸಭಾತ್ಯಾಗ ಮಾಡಿದರು ಎಂದು.

ಶ್ರೀಮತಿ ಪ್ರಮೀಳಾ ನೇಸರ್ಗಿ : ನೀವು ಛಾಲೆಂಜ್ ಮಾಡುವುದಕ್ಕೆ ಹೋಗಬೇಡಿ. ಯಾವ ಕಾರಣಕ್ಕೆ ಮಾಡಿದರು ಎಂದು ನಮಗೂ ಗೊತ್ತಿದೆ. ಆದರೆ ಈ ಕಡೆ ತೋರಿಸಿ ಹೇಗೆ ಮಾಡಿದ್ದಾರೆ ಎನ್ನುವುದನ್ನು ನೀವು ಹೇಳಬೇಡಿ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ನೀವು ನನಗಿಂತ ಹೆಚ್ಚು ಓದಿಕೊಂಡವರು. ನಿಮಗೂ ಗೊತ್ತಿದೆ.

ಅಧ್ಯಕ್ಷರು : ನೀವು ಶಿವಕುಮಾರ್ ಕಡೆ ನೋಡ್ರಿ ಶ್ರೀರಾಮರೆಡ್ಡಿಯವರೇ ಪ್ರಮೀಳಾರವರ ಕಡೆ ತಿರುಗಬೇಡಿ.

(ಗೊಂದಲ)

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಮಾಹಿತಿ ಸರಿಯಾಗಿ ತಿಳಿದುಕೊಳ್ಳಿ. ನಾವು ಭಾಗಿಗಳಾಗಿಲ್ಲ. 74ನೇ ಅಮೆಂಡ್‌ಮೆಂಟ್ ಬಗ್ಗೆ ನಿಮ್ಮ ಹಿಂದಿನ ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ನಾರಾಯಣಸ್ವಾಮಿಯವರು ಇದ್ದಾರೆ, ನಮಗೆಲ್ಲರಿಗಿಂತೂ ಹೆಚ್ಚಿಗೆ ಅವರಿಗೇ ಗೊತ್ತಿರುವುದು. ಅವರನ್ನುಕೇಳಿ ಯಾರು ಅದನ್ನು ವಿರೋಧ ಮಾಡಿದರು ಎಂದು. ಮಾನ್ಯ ನಾರಾಯಣ ಸ್ವಾಮಿಯವರೇ, ಸರಿಯಾಗಿ ಮಾಹಿತಿ ತಿಳಿದುಕೊಳ್ಳಿ. ಮಧ್ಯೆ ಮಧ್ಯೆ ಎದ್ದು ನೀವು ಮಾತನಾಡಬೇಡಿ. ಆದ್ದರಿಂದ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಪರಿಣಾಮಕಾರಿಯಾಗಿ ಇವತ್ತು ಜಾರಿಯಾಗಬೇಕು ಎನ್ನುವ ಪ್ರಾಮಾಣಿಕ ಕಳವಳಿ ನಮಗೆ ಇದ್ದರೆ ಆ ಪಂಚಾಯತ್ ರಾಜ್ ವ್ಯವಸ್ಥೆಯನ್ನು ದಯವಿಟ್ಟು ಅಪವಿತ್ರ ಮಾಡಬೇಡಿ. ಆ ಅಪವಿತ್ರತೆ ಪಂಚಾಯತ್‌ರಾಜ್ ಚುನಾವಣೆಯಲ್ಲಿ ನಡೆದಿದೆ ಹೆಂಡ, ಸಾರಾಯಿ ಎಲ್ಲಾ ಸುರಿದುಬಿಟ್ಟದ್ದಾರೆ. ಆದರೆ ಸತ್ಯವಾಗಿ ಅದು ನಡೆಯಬಾರದು. ಜನತೆಗೆ ಕೈಗೆ ಅಧಿಕಾರವನ್ನು ಕೊಡುತ್ತೇವೆ ಎಂದು ಪ್ರಾಮಾಣಿಕವಾಗಿ ಹೇಳಿದ ಜನ ಬಲವಂತದಿಂದ ಮತವನ್ನು ಕಸಿದುಕೊಳ್ಳುವ ಪರಿಸ್ಥಿತಿಗೆ ಅದನ್ನು ತರಬೇಡಿ ಎಂದು ಹೇಳಿ ನನಗೆ ಅವಕಾಶ ಕೊಟ್ಟ ಅಧ್ಯಕ್ಷರಿಗೆ ವಂದನೆ ಸಲ್ಲಿಸಿ ನನ್ನ ಮಾತನ್ನು ಮುಗಿಸುತ್ತೇನೆ.

+ ಶ್ರೀ ಡಿ.ಕೆ. ಶಿವಕುಮಾರ್ (ಸಾತನೂರು) : ಮಾನ್ಯ ಸಭಾಧ್ಯಕ್ಷರೇ, ನನಗೆ ವಿಧಾನಸಭೆಯಲ್ಲಿ ಈ ಎರಡನೇ ಬಾರಿಗೆ ನಾನು ಪ್ರವೇಶ ಮಾಡಿದಮೇಲೆಗೆ ಈ 20ನೇ ತಾರೀಖು ಮಾರ್ಚ್ ಏನು ನಮ್ಮ ರಾಜ್ಯಪಾಲರು ಭಾಷಣವನ್ನು ಮಾಡಿದ್ದಾರೆ, ಅದಕ್ಕೆ ಶ್ರೀ ನಾಗೇಗೌಡರು ವಂದನೆಯನ್ನು ಸಲ್ಲಿಸುವುದಕ್ಕೆ ಈ ಸಭೆಯ ಮುಂದೆ ಏನು ನಿರ್ಣಯವನ್ನು ಇಟ್ಟಿದ್ದಾರೆ, ಆ ನಿರ್ಣಯಕ್ಕೆ ನಾನು ಸ್ವಲ್ಪಮಟ್ಟಿಗೆ ಅವರಿಗೆ ಬೆಂಬಲವನ್ನು ಕೊಡುವುದಕ್ಕೆ ಇಚ್ಛೆಪಡುತ್ತೇನೆ. ಪ್ರಜಾಪ್ರಭುತ್ವದಲ್ಲಿ ಈ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗ, ಮತ್ತು ಪತ್ರಿಕಾ ರಂಗ ಈ ನಾಲ್ಕು ಪಿಲ್ಲರ್‌ಗಳು ಏನಿವೆ, ಈ ನಾಲ್ಕು ಪಿಲ್ಲರ್‌ಗಳು ಸರಿಯಾಗಿದ್ದರೆ ಮಾತ್ರ ಬಹುಶಃ ಪ್ರಜಾಪ್ರಭುತ್ವ ಸರಿಯಾಗಿ ನಡೆದುಕೊಂಡು ಹೋಗುತ್ತದೆ ಎಂದು ನಾನಂತೂ ತಿಳಿದುಕೊಂಡಿದ್ದೇನೆ. ಮಾರುವರೆ ತಿಂಗಳ ಹಿಂದೆ ಏನು ಈ ಸರ್ಕಾರ ಅಧಿಕಾರಕ್ಕೆ ಬಂತು, ಅದು ಬಂದಾಗ

ಮಾನ್ಯ ದೇವೇಗೌಡರು ಮುಖ್ಯಮಂತ್ರಿಯಾದಾಗ ಬಹುಶಃ ಏನು ಆಡಳಿತ ಪಕ್ಷದ ಸದಸ್ಯರು ಎಷ್ಟು ಆಸೆ ಪಟ್ಟರೋ ಬಹುಶಃ ಅದಕ್ಕಿಂತ ಜಾಸ್ತಿ ಸಂತೋಷಪಟ್ಟವರಲ್ಲಿ ನಾನೊಬ್ಬ. ಬಹುಶಃ ಅವರಿಗಿಂತ ಜಾಸ್ತಿ ಆಸೆ ಪಟ್ಟಿದ್ದೇನೆ ಎಂದು ತಿಳಿದು ಕೊಂಡಿದ್ದೇನೆ. ಆದರೆ ದಿನೇ ದಿನೇ ಈ ಕಾರ್ಯವೈಖರಿಯನ್ನು ನೋಡುತ್ತಿದ್ದಾಗ ನನಗಂತೂ ಬಹಳ ನೋವಾಗುತ್ತಿದೆ. ನಮ್ಮ ಈ ಶಾಸನಸಭೆ ಏನು ನಡೆಯುತ್ತಿದೆ, ಇದನ್ನು ನೋಡಿದರೆ ನನಗೆ ಬಹಳ ನೋವಾಗುತ್ತಿದೆ.

ಮಾನ್ಯ ಮುಖ್ಯತ್ರಿಗಳು ಈ ಸಭೆಯಲ್ಲಿದ್ದಾರೆ. ಹಿಂದೆ ವಿರೋಧ ಪಕ್ಷದಲ್ಲಿ ಕೆಲವು ಸದಸ್ಯರುಗಳನ್ನು ನಾನು ನೋಡಿದ್ದೇನೆ. ಮಾನ್ಯ ನಾಣಯ್ಯನವರು ಮಾನ್ಯ ಬಸವಲಿಂಗಪ್ಪನವರು ಮಾನ್ಯ ಅಜೀಜ್‌ಸೇರ್‌ರವರು ಇಂಥವರೆಲ್ಲ ಸಂಭಾಷಣೆ ಮಾಡಿ ಚರ್ಚೆ ಮಾಡಿದ್ದನ್ನು ಮಾನ್ಯೆ ಚಂದ್ರೇಗೌಡ್ರು, ದೇಶಪಾಂಡೆಯವರು, ಸಿಂಧ್ಯಾರವರು ಇಲ್ಲಿ ವಾದ ಮಾಡಿರುವ ಚರಿತ್ರೆಯನ್ನು ನನ್ನ ಅನುಭವದಲ್ಲಿ ಐದು ವರ್ಷಗಳಲ್ಲಿ ನೋಡಿದಾಗ ನಿಜವಾಗಲೂ ನಾವು ಕಲಿಯಬೇಕಾದ್ದು ಬಹಳವಿದೆ.ಇಲ್ಲಿ ಈ ಸಭೆ ನಡೆಯುತ್ತಿರುವಾಗ ಸುಮಾರು ಐದಾರು ದಿನ ದಿಂದ ನಾನು ನೋಡುತ್ತಿದ್ದೇನೆ. ಮಂತ್ರಿಗಳು ಒಬ್ಬರೂ ಇಲ್ಲವಲ್ಲ. ಅಧಿಕಾರಿಗಳು ಒಬ್ಬರೂ ಇಲ್ಲ. ಮುಖ್ಯಮಂತ್ರಿಗಳು ಬಂದಿದ್ದಾರೆ. ಎಂಟು-ಹತ್ತು ಜನ ಮಂತ್ರಿಗಳು ಇಲ್ಲಿ ಬಂದು ಕುಳಿತಿದ್ದಾರೆ ನಾವು ಯಾರಿಗೋಸ್ಕರ ಭಾಷಣವನ್ನು ಮಾಡಬೇಕಾಗಿದೆ. ತಾವು ದಯವಿಟ್ಟು ಹೇಳಿ. ಅಧಿಕಾರಿಗಳು ಇಲ್ಲ, ಸದಸ್ಯರರೂ ಇಲ್ಲ. ಇನ್ನು ನಾವು ಶಾಸಕರಾಗಿ ಮೂರು -ನಾಲ್ಕು ತಿಂಗಳಾಗಿಲ್ಲ. ನಾವು ಸ್ವಲ್ಪ ಸದಸ್ಯರು ಗಳಿದ್ದೇವೆ ಆಳುವ ಪಕ್ಷದ ಸದಸ್ಯರು. ಈ ಪರಿಸ್ಥಿತಿ ಹೀಗೆ ಮುಂದುವರೆದರೆ ನಾವು ಯಾವುದೇ ಪೂರ್ವಪುಣ್ಯ ಮಾಡದ್ದೇವೆ ಎಂದು ನಾನಾದರೂ ತಿಳಿದುಕೊಂಡಿದ್ದೇನೆ.

ನಮ್ಮ ಹಿರಿಯರೆಲ್ಲಾ ಸೇರಿ ನಮ್ಮನ್ನೆಲ್ಲಾ ಆರಿಸಿ ಇಲ್ಲಿಗೆ ಕಳುಹಿಸಿಕೊಟ್ಟಿದ್ದಾರೆ. ಆ ರೀತಿ ಕಳುಹಿಸಿಕೊಟ್ಟಿರುವಾಗ ಸರಿಯಾದ ಆಡಳಿತವನ್ನು ಈ ರಾಜ್ಯದ ಜನತೆಗೆ ಈ ಸಭೆಯ ಮುಖಾಂತರ ನಾವು ಕೊಡಲಿಲ್ಲ ಎಂದರೆ ನಮ್ಮ ಕರ್ತವ್ಯವೇ ತಪ್ಪಾಗುತ್ತದೆ ಎಂದು ನಾನು ತಿಳಿದುಕೊಂಡಿದ್ದೇನೆ. ಆದ್ದರಿಂದ ಮಾನ್ಯ ಮುಖ್ಯಮಂತ್ರಿಗಳು ಇಲ್ಲಿ ಕುಳಿತಿದ್ದಾರೆ, ನಾನು ಮನವಿ ಮಾಡಿಕೊಳ್ಳುತ್ತೇನೆ, ನಮ್ಮ ಮಂತ್ರಿಗಳಿಗೆ ಈ ಮಾತನ್ನು ಹೇಳಲಿಕ್ಕೆ ನನಗೆ ಬಹಳ ಮನಸ್ಸಿಗೆ ನೋವಾಗುತ್ತದೆ. ಇನ್ನು ನಮ್ಮ ಶಾಸಕರಿಗೆ ಕೆಲವು ಮಂತ್ರಿಗಳಿಗೆ ತರಬೇತಿ ಕೊಡುವ ಸಂದರ್ಭ ಇವತ್ತು ಬಂದಿದೆ. ಕೆಲವು ಮಂತ್ರಿಗಳು ಅವರವರ ಇಲಾಖೆಗಳನ್ನು ಬಿಟ್ಟು ಬೇರೆ ಬೇರೆ ಇಲಾಖೆಗಳ ಬಗ್ಗೆ ಮಾತನಾಡುತ್ತಾರೆ. ಮಾನ್ಯ ಜೆ.ಹೆಚ್. ಪಟೇಲರು ಮೀಸಲಾತಿಯ ಬಗ್ಗೆ ಮಾತನಾಡುತ್ತಾರೆ. ಮಾನ್ಯ ಸಿಂಧ್ಯಾರವರು ಗ್ರಾನೈಟ್ ಬಗ್ಗೆ ಮಾತನಾಡುತ್ತಾರೆ. ಮಾನ್ಯ ಜಯಕುಮಾರ್‌ರವರು ಸಮಾಜ ಕಲ್ಯಾಣ ಇಲಾಖೆ ಬಗ್ಗೆ ಮಾತನಾಡುತ್ತಾರೆ. ಈ ರೀತಿಯ ಪರಿಸ್ಥಿತಿ ಆಯಿತು ಎಂದರೆ ಹೇಗೆ ಸರ್ಕಾರವನ್ನು ನಡೆಸುವುದು? ಒಬ್ಬರಿಗೊಬ್ಬರಿಗೆ ವಿಶ್ವಾಸ ಇಲ್ಲವೇ? ಕಂಟ್ರೋಲ್ ಇಲ್ಲವೇ? ನನಗೂಂತೂ ಅರ್ಥವಾಗುತ್ತಿಲ್ಲ. ಆದ್ದರಿಂದ ಇದರ ಬಗ್ಗೆ ತಾವು ದಯವಿಟ್ಟು ಕಾಳಜಿ ವಹಿಸಿ ಎಂದು ಹೇಳುತ್ತೇನೆ.

ಅಧ್ಯಕ್ಷರು : ತಾವು ರಾಜ್ಯಪಾಲರ ಭಾಷಣದ ಮೇಲೆ ಮಾತನಾಡುತ್ತೇನೆ ಎಂದು ಹೇಳಿ ಹಳಿ ತಪ್ಪಿಸಿ ಬಟ್ಟಿದ್ದೀರಲ್ಲ.

ಶ್ರೀ ಡಿ.ಕೆ. ಶಿವಕುಮರ್ : ಇನ್ನು ಹಳಿ ತಪ್ಪಿಲ್ಲ. ಮಾನ್ಯ ಮುಖ್ಯಮಂತ್ರಿಗಳು ಈ ಸಭೆಯಲ್ಲಿ ಇದ್ದಾರೆ ಎಂದು ಹೇಳಿ ನಾನು ಈ ವಿಚಾರದ ಬಗ್ಗೆ ಮಾತನಾಡುತ್ತದ್ದೇನೆ. ಇದರ ಬಗ್ಗೆ ನಾನು ಹೇಳಿದ್ದು. ಬಹಳ ಒಳ್ಳೆಯವರೂ ಇದ್ದಾರೆ. ದೇಶ್‌ಪಾಂಡೆಯವರು ಇರಬಹುದು, ಜಾಲಪ್ಪನವರು, ಜೆ.ಹಚ್. ಪಟೇಲರು ಇದ್ದಾರೆ. ಒಳ್ಳೆಯ ಮಂತ್ರಿಗಳಿದ್ದಾರೆ. ಕೆಲವು ಮಂತ್ರಿಗಳು ಮಾತ್ರ ಇಲ್ಲಿ ಕುಳಿತುಕೊಂಡು ನಾವು

ಹೇಳುವಂಥ ವಿಚಾರವನ್ನು ಗ್ರಹಿಸಿ ಅದಕ್ಕೆ ಸ್ಪಂದಿಸಬೇಕಾಗುತ್ತದೆ. ಈ ಸಭೆಗೆ ಶೋಭಿತೆರುವಂಥ ಕೆಲಸವನ್ನು ತಾವು ಮಾಡುತ್ತೀರಿ ಎಂದು ನಾನು ತಿಳಿದುಕೊಂಡಿದ್ದೇನೆ. ಮಾನ್ಯ ಮುಖ್ಯಮಂತ್ರಿಗಳು ಹೊಸದಾಗಿ ಬಂದರು. ಹೊಸದಾಗಿ ಬಂದಾಗ ನಾನು ಕಳೆದ ವಿಧಾನಸಭೆಯಲ್ಲಿ ಸದಸ್ಯನಾಗಿದ್ದೆ. ತಮಗೂಗೊತ್ತಿದೆ. ಒಂದೆರಡು ವರ್ಷ ಮಂತ್ರಿ ಕೂಡ ಆಗಿದ್ದೆ. ನಾನು ಈ ಸಭೆಗೆ ವಾಪಸ್ ಬರಬೇಕಾದರೆ ಪಕ್ಷೇತರವಾಗಿ ಆರಿಸಿ ಬಂದಿದ್ದೇನೆ. ಕಾಂಗ್ರೆಸ್‌ಪಕ್ಷ ನನಗೆ ಟಿಕೆಟ್‌ನ್ನು ಕೊಡಲಿಲ್ಲ. ಏನೊ ಮಾಡಬಾರದು ಮಾಡಿದ್ದೇನೆ ಎಂದು ಹೇಳಿ ಒಂದು ಆರೋಪವನ್ನು ಹೊರಿಸಿ ನನಗೆ ಟಿಕೆಟ್ ಕೊಡಲಿಲ್ಲ. ಕಳುಹಿಸಿಬಿಟ್ಟರು. ಸ್ವಲ್ಪ ಸುಮ್ಮನಿರಿ ಸ್ವಾಮಿ. ನಿಮ್ಮಿಂದ ನಮ್ಮ ಹಣೆ ಬರಹ ಹೀಗಾಯಿತು? ನೀವು ಸುಮ್ಮನಿರಿ. ನೀವು ನಿಮ್ಮ ಮೊಯಿಲಿಯವರು ಈ ರಾಜ್ಯವನ್ನು ಹಾಳು ಮಾಡಿಬಿಟ್ಟಿದ್ದೀರಿ ಸುಮ್ಮನಿರಿ.ನೀವು (ಮಾನ್ಯ ರಾಮಲಿಂಗಾ ರೆಡ್ಡಿಯವರನ್ನು ಉದ್ದೇಶಿಸಿ) ರಾಮಲಿಂಗಾರೆಡ್ಡಿ ಇವರೆಲ್ಲ ಸೇರಿ ಈ ರಾಜ್ಯವನ್ನು ಈ ಮಟ್ಟಕ್ಕೆ ತಂದುಬಿಟ್ಟರು. ಈಗ 36ಕ್ಕೆ ಬಂದಿದ್ದೀರಿ. ಇದೇ ರೀತಿ ಇತ್ತುಎಂದರೆ ನಿಮ್ಮ ಮೊಯಿಲಿಯವರು ಇದೇ ರೀತಿ ಸ್ಟೇಟ್‌ಮೆಂಟ್ ಕೊಟ್ಟು ಕೊಂಡು ಬರುತ್ತಿದ್ದರೆ 18 ಕ್ಕೆ ಬರುತ್ತೀರಿ. ಸ್ವಲ್ಪ ಹುಷರಾಗಿರಿ.

ಅಧ್ಯಕ್ಷರು : ನೀವು ನಾಗೇಗೌಡರಿಗೇನು ಹೇಳುತ್ತಿರುವುದು.

ಶ್ರೀ ಡಿ.ಕೆ. ಶಿವಕುಮಾರ್ : ಇಲ್ಲಾ. ನಾನು ರಾಮಲಿಂಗರೆಡ್ಡಿಯವರಿಗೆ ಹೇಳಿದ್ದು.

(ಗೊಂದಲ)

ಶ್ರೀ ಕೆ.ಎನ್. ನಾಗೇಗೌಡ : ನನಗೇಕೆ ಹೇಳುತ್ತಾರೆ ಸ್ವಾಮಿ. ಮೊಯಿಲಿಯವರನ್ನು ತೀರಿಸಿರುವವರೇ ನಾವು ಶಿವಕುಮಾರ್ ಹೇಳುತ್ತಿರುವುದು ರಾಮಲಿಂಗರೆಡ್ಡಿಯವರಿಗೆ .

(ಗೊಂದಲ)

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೇ, ಈಗ ನೀವು ಗಮನಿಸಿದ ಹಾಗೆ ಕಾಣುತ್ತದೆ. ನಾಗೇಗೌಡರೇನೋ ಪಿತೂರಿ ಮಾಡುತ್ತಿರಬೇಕು ಎಂದು ನೀವು ಗಮನಿಸಿರಬೇಕಲ್ಲವೇ?

ಶ್ರೀ ಡಿ.ಕೆ. ಶಿವಕುಮಾರ್ : ಏಕೆಂದರೆ ವೀರಪ್ಪಮೊಯಿಲಿಯವರು ಈ ಸರ್ಕಾರಕ್ಕೆ ಆರೇಳು ತಿಂಗಳು ಇಲ್ಲವೇ ಒಂದು ವರ್ಷವಾದರೂ ಸ್ವಲ್ಪ ಅವಕಾಶ ಕೊಡಬೇಕು. ನಾನು ನೋಡುತ್ತಿದ್ದೇನೆ; ಎಲ್ಲಾ ಬರೀ ಸ್ಟೇಟ್‌ಮೆಂಟ್‌ಗಳು. ಮೈಸೂರಿಗೆ ಹೋಗುವಾಗ ಒಂದು ಸ್ಟೇಟ್‌ಮೆಂಟ್ ಗುಲ್ಬರ್ಗಾಕ್ಕೆ ಹೋಗುವಾಗ ಒಂದು ಸ್ಟೇಟ್‌ಮೆಂಟ್. ಹೇಮಾವತಿಗೆ ಹೋಗುತ್ತೇನೆ ಎನ್ನುವುದು. ಇದು ನನಗೆ ಅರ್ಥವಾಗುತ್ತಿಲ್ಲ. ಅದಕ್ಕೆ ತಮ್ಮ ಮುಖಾಂತರ ಮಾನ್ಯ ರಾಮಲಿಂಗಾ ರೆಡ್ಡಿಯವರಿಗೆ ಹೇಳುತ್ತಿದ್ದೇನೆ. ಬಹುಶಃ ಜಗಳವಾದುವುದನ್ನು ನಿಲ್ಲಿಸಬೇಕು. ಇಲ್ಲ ಎಂದರೆ ನಾವು ಈಗ 18ಕ್ಕೆ ಇಳಿದಿದ್ದೇವೆ. ನಮ್ಮನ್ನು ಯಾರೂ ಅಲುಗಾಡಿಸದೇ ಇರತಕ್ಕಂಥ 179 ಸೀಟು ಇದ್ದದ್ದು ಈಗ ಎಂತಹ ಪರಿಸ್ಥಿತಿಗೆ ಬಂದಿದೆ. ದಯವಿಟ್ಟು ಮತ್ತೆ ಆ ಪರಿಸ್ಥಿತಿಗೆ ಬರುವುದು ಬೇಡ.

(ಗೊಂದಲ)

ಶ್ರೀ ಡಿ.ಕೆ. ಶಿವಕುಮಾರ್ : ನಾನು ಮತ್ತೆ ಶಾಸಕನಾಗಿ ಇಲ್ಲಿ ಕಾಂಗ್ರೆಸ್ (ಐ) ನಿಂದ ಬರಲಿಲ್ಲ. ನಾನು ಮತ್ತೆ ಇಲ್ಲಿ ಶಾಸಕನಾಗಿ ಆಯ್ಕೆ ಆಗಿ ಬಂದರೆ ಎಂದರೆ ಬಹುಶಃ ನಮ್ಮ ಬಂಗಾರಪ್ಪನವರು ನಮಗೆ ಕೊಟ್ಟಂಥ ಅವಕಾಶ. ಆ ಅವಕಾಶ ಅಂದರೆ ಆಶ್ರಯ ಯೋಜನೆಯಡಿಯಲ್ಲಿ ನಮ್ಮನ್ನು ಅಧ್ಯಕ್ಷರನ್ನಾಗಿ ಮಾಡಿದ್ದರು. ಬಗರ್‌ಹುಕುಂ ಯೋಜನೆಯಡಿಯಲ್ಲಿ ಅಧ್ಯಕ್ಷರನ್ನು ಮಾಡಿದ್ದಾರೆ. ಒಂದು ಸಾ...

ಭಾಗ್ಯ ಜ್ಯೋತಿ ಯೋಜನೆ ಐಡೆಂಟಿಫೈ ಮಾಡಿರುವುದು. ಈ ಯೋಜನೆ ಯಶಸ್ವಿಯಾಗಿ ಮಾಡಿಕೊಟ್ಟರು. ಹಸಿರು ಕಾರ್ಡ್ ಟ್ರೈ ಕಲರ್ ಮಾಡಿ ಎಷ್ಟುಜನರಿಗೆ ಅವಕಾಶ ಮಾಡಿಕೊಟ್ಟರು, ನೇರವಾಗಿ ಬಡವನಿಗೆ ಅನುಕೂಲ ಆಗುವಂತಹ ಯೋಜನೆ ಮಾಡಿ ಆ ಜನರ ವಿಶ್ವಾಸವನ್ನು ಗಳಿಸಿ ನನ್ನಂಥವರು ಈ ವಿಧಾನ ಸಭೆಗೆ ಆರಿಸಿ ಬಂದಿದ್ದೇವೆ.

ಶ್ರೀ ಎಸ್.ಆರ್. ಲಕ್ಷ್ಮಯ್ಯ : ಮಾನ್ಯ ಬಂಗಾರಪ್ಪನವರು ಬಹಳಷ್ಟು ಕೆಲಸ ಮಾಡಿದ್ದಾರೆ ಎಂದು ಹೇಳುತ್ತಿದ್ದಾರೆ. ಬಹಳ ಸಂತೋಷ. ಆಶ್ರಯ ಯೋಜನೆ ಮತ್ತು ಈ ದರಕಾಸ್ತು ಬಗ್ಗೆ ಅವರು ಮಾಡಿರತಕ್ಕ ಕರ್ಮಕಾಂಡ ಇಡೀ ಕರ್ನಾಟಕ ರಾಜ್ಯದ ಮೂಲೆ ಮೂಲೆಯಲ್ಲಿ ಹರಡಿದೆ.

(ಗೊಂದಲ)

ಶ್ರೀ ಎಲ್.ಆರ್. ಶಿವರಾಮೇಗೌಡ : ನಿಮ್ಮ ತಾಲ್ಲೂಕಿನಲ್ಲಿ ಆಗಿಲ್ಲದೇ ಇರಬಹುದು, ಎಲ್ಲಾ ತಾಲ್ಲೂಕಿನಲ್ಲಿ ಆಗಿದೆ. ಎಲ್ಲಿ ಈ ಕಾರ್ಯಕ್ರಮ ಯಶಸ್ವಿ ಆಗಿದೆ ಅದರ ಬಗ್ಗೆ ಹೇಳಿ.

(ಗೊಂದಲ)

ಶ್ರೀ ಎಸ್.ಆರ್. ಲಕ್ಷ್ಮಯ್ಯ : ಮುಗ್ಧ ಜನರು ಬಂಗಾರಪ್ಪ ಬಂದರು, ಬಂಗಾರಪ್ಪಬಂದರು ಎಂದು ಹೇಳುತ್ತಾರೆ ಅದೇ ರೀತಿ ಕರ್ನಾಟಕದ ಸುಳ್ಳಿನ ಸರದಾರ ಮೊಯಿಲಿ ಬಂದರು ಎಂದು ಹೇಳಿದರು.

ಶ್ರೀ ಖಮರುಲ್ ಇಸ್ಲಾಂ : ಅಧ್ಯಕ್ಷರೇ, ನನ್ನದು point of order ಇದೇ ಏನೆಂದರೆ, The Hon.Member cannot charge on all the Ashraya Committees. In Gulbarga in one stretch, 786 houses have come up in one place beautifully. At the time of inauguration I will definitely invite you. If you see it, you will change your mind. Don't tell all the Commites are so. 4-5 committees may be so.

(ಗೊಂದಲ)

ಶ್ರೀ ಎಸ್.ಆರ್. ಲಕ್ಷ್ಮಯ್ಯ : ನಾನು ಒಪ್ಪುತ್ತೇನೆ. ಮುಗ್ಧ ಜನರು ಏನು ಹೇಳುತ್ತಿದ್ದರೆಂದರೆ ಬಂದರು ಬಂದರು ಬಂಗಾರಪ್ಪ. ಬಂದರು ಬಂದರು ಕರ್ನಾಟಕದ ಸುಳ್ಳನ್ನು ಮೈಯಲ್ಲಿ ಹಚ್ಚಿಕೊಂಡಿಂತಹ ವೀರಪ್ಪ ಮೊಯಿಲಿ ಅಂತ ಇವರ ಕಾಲದಲ್ಲಿ ಆಗಿರತಕ್ಕ ಕರ್ಮಕಾಂಡ.

(ಗೊಂದಲ)

ಅಧ್ಯಕ್ಷರು : ಮಾನ್ಯ ಶಿವಕುಮಾರ್‌ರವರೇ, ಒಂದು ತೀರ್ಮಾನಕ್ಕೆ ಬರೋಣ. ಈಗ ಎಲ್ಲೆಲ್ಲಿ ಆಶ್ರಯ ಹಾಗೂ ಬೇರೆ ಕಮಿಟಿಗಳು ವ್ಯವಸ್ಥಿತವಾಗಿ ಕೆಲಸ ಮಾಡಿದ್ದವು, ಜನರಿಗೆ ಅನುಕೂಲ ಆಗಿದೆ, ಅಲ್ಲಿ ನಿಮ್ಮ ಶಾಸಕರು ಆರಿಸಿ ಬಂದಿದ್ದಾರೆ. ಎಲ್ಲಿ ಕೆಲಸ ಸರಿಯಾಗಿ ನಡೆಯಲಿಲ್ಲ, ಅವರೆಲ್ಲಾ ವಾಪಸ್ ಹೋದರು. ಹೆಚ್ಚಿಗೆ ಜನ ಬರಲಿಲ್ಲ ಎಂದರೆ ಸಾರ್ವತ್ರಿಕವಾಗಿ ಕೆಲಸ ಸರಿಯಾಗಿ ಆಗಲಿಲ್ಲ ಎಂದು ತಿಳಿದುಕೊಳ್ಳೋಣ.

ಶ್ರೀ ಡಿ.ಕೆ. ಶಿವಕುಮಾರ್ : ಅದೂ ಆಗಿರಬಹುದು. ಸ್ವಲ್ಪ ಮಟ್ಟಿಗೆ ಅದೂ ಆಗಿರಬಹುದು. ಇನ್ನು ಮಿಕ್ಕದ್ದ ಮಟ್ಟಿಗೆ ನಾವೆಲ್ಲ ಹೊಡೆದಾಟ ಮಾಡಿಕೊಂಡು,

ಗಲಾಟೆ ಮಾಡಿಕೊಂಡು, ಕಪ್ಪು ಸಾಸರ್ ಎಸೆದುಕೊಂಡು ಮಾಡಿದ್ದಕ್ಕೆ ನಾವು ಇಲ್ಲಿ ಕುಳಿತಿದ್ದೇವೆ. ಅದಕ್ಕಾಗಿ ಹೇಳುತ್ತಿದ್ದೇವೆ. ನೀವೂ ಒಳ್ಳೆಯ ಅವಕಾಶ ಇತ್ತು. ಬಗರ್‌ಹುಂ ಸಾಗುವಳಿ 20 ಅಂಶದ ಕಾರ್ಯಕ್ರಮ. ಇವೆಲ್ಲಕ್ಕೂ ನಮಗೆ ಏನು ಒಂದು ಅಧ್ಯಕ್ಷಸ್ಥಾನ ಇತ್ತು, ಅವೆಲ್ಲಾ ಸ್ಥಾನವನ್ನುತ್ತೆ ಶಾಸಕರಿಗೆ ಉಳಿಸಿಕೊಡಬೇಕೆಂದು ಈ ಸಂದರ್ಭದಲ್ಲಿ ಮನವಿಮಾಡಿಕೊಳ್ಳುತ್ತಾ, ಇವತ್ತು ರಾಜ್ಯಪಾಲರ ಮೂಲಕ ಏನು ಒಂದು ಬಹಳ ಚಿಕ್ಕದ 12 ಪುಟದ ಭಾಷಣವನ್ನು ಮಾಡಿಸಿದ್ದಾರೆ, ಇದು ಕಳೆದ 5-6 ವರ್ಷದಲ್ಲಿ ಇದೇ ಒಂದು ಚಿಕ್ಕ ಭಾಷಣ ಎಂದು ನಾನು ತಿಳಿದುಕೊಂಡಿದ್ದೇನೆ. ಈದ್ಗಾ ಮೈದಾನದ ವಿಚಾರವನ್ನು ಮೊದಲನೆಯದಾಗಿ ಪ್ರಸ್ತಾಪ ಮಾಡಿದ್ದಾರೆ ಬಹುಶಃ ಅದನ್ನು ಒಪ್ಪಬೇಕಾದ್ದೆ ಆದರೆ ಈದ್ಗಾ ಮೈದಾನದ ಒಂದು ಸಮಸ್ಯೆ ಬಗೆಹರಿಸಿದ್ದಾರೆ ಎಂದು ತಮ್ಮ ಕ್ಯಾಪ್‌ಗೆ ಫೆಡರ್ ಬಂದಿದೆ ಎಂದು ತಿಳಿದುಕೊಂಡರೆ ತಪ್ಪು ಆಗುತ್ತದೆ. ಅದು ಬಿಟ್ಟರೆ ಕಾನೂನಿನ ಸುವ್ಯವಸ್ಥೆಯಲ್ಲಿ ಸ್ವಲ್ಪ ಹಳಿ ತಪ್ಪಿದ್ದಾರೆ. ಬಹಳಷ್ಟು ಹಳ್ಳಿಗಳಲ್ಲಿ ಗಲಾಟೆ ಆಗುತ್ತಿದೆ. ಗಲಾಟೆ ಹೆಚ್ಚಿದೆ. ಪೋಲೀಸ್ ಸಿಬ್ಬಂದಿ ಕಡಿಮೆ ಇದೆ. ವಿಶೇಷವಾಗಿ ಹರಿಜನ ಗಿರಿಜನರ ಮೇಲೆ ದೌರ್ಜನ್ಯವನ್ನು ಮೇಲ್ವರ್ಗದ ಜನ ಮಾಡಿಕೊಂಡು ಬರುತ್ತಿದ್ದಾರೆ. ಹಳ್ಳಿಗಳಲ್ಲಿ ಇದಕ್ಕೆ ಹೋಮ್ ಮಿನಿಸ್ಟರ್ ಅವರಿಗೆ ಪವರ್ಸ್ ಇಲ್ಲ ಎಂದು ನಾನು ತಿಳಿದುಕೊಂಡಿದ್ದೇನೆ. ಐಪಿಎಸ್ ಆಫೀಸರ್ಸ್ ಬಗ್ಗೆ ಕೂಡ ಮುಖ್ಯಮಂತ್ರಿಗಳು ಅವರ ರಕ್ಷಣೆಗೆ.

ಶ್ರೀ ಪಿ.ಜಿ.ಆರ್. ಸಿಂಧ್ಯ : ಮಾನ್ಯ ಶಿವಕುಮಾರ್ ಅವರು ಏನು ಹೇಳುತ್ತಿದ್ದಾರೋ ನನಗೆ ಗೊತ್ತಿಲ್ಲ. ಹೋಮ್ ಮಿನಿಸ್ಟರ್‌ಗೆ ಏನೂ ಅಧಿಕಾರ ಇಲ್ಲ ಎಂದು ಹೇಳಿದ್ದಾರೆ. ಎಲ್ಲಾ ಅಧಿಕಾರವನ್ನು ಸರ್ವತಂತ್ರ ಸ್ವತಂತ್ರವಾಗಿ ಕಾನೂನು ಬದ್ಧವಾಗಿ ಬದಲಾವಣೆ ಮಾಡುವುದಕ್ಕೆ ನನಗೆ ಅಧಿಕಾರವನ್ನು ಮಾನ್ಯ ಮುಖ್ಯಮಂತ್ರಿಗಳು ಕೊಟ್ಟಿದ್ದಾರೆ.

ಅಧ್ಯಕ್ಷರು : ನೀವು ಅವರು ಹೇಳಿದ ಯಾವುದೇ ಕೆಲಸ ಮಾಡಿಕೊಟ್ಟಿಲ್ಲ ಎಂದು ಕಾಣುತ್ತದೆ.

ಶ್ರೀ ವಾಟಾಳ್ ನಾಗರಾಜ್ : ನನಗೆ ಒಂದು ಅನುಮಾನ. ಈಗ ಅವರಿಬ್ಬರೂ ಪಕ್ಕಪಕ್ಕದ ಕಾನ್‌ಸ್ಟಿಟ್ಯುಯೆನ್ಸಿಗಳು ಮೊದಲಿನಿಂದಲೂ ಬಹಳ ಸ್ನೇಹಿತರು. ಅವರು ಏಕೆ ಹೀಗೆ ಹೇಳಿದರು. ಇವರು ಏಕೆ ಹೀಗೆ ಹೇಳಿದರು ಎಂದು ನನಗೆ ಸ್ವಲ್ಪ ಅನುಮಾನಗಳು ಬಂದು ಬಿಟ್ಟಿದೆ.

ಅಧ್ಯಕ್ಷರು : ಅವರು ಯಾವುದೇ ಕೆಲಸ ಹೇಳಿದ್ದಾರೆ. ಇವರು ಮಾಡಿಲ್ಲ. ಅದಕ್ಕೆ ಅವರಿಗೆ ಅನುಮಾನ ಬಂದಿದೆ.

ಶ್ರೀ ಡಿ.ಕೆ. ಶಿವಕುಮಾರ್ : ನಮ್ಮದು ಸಿಂಧ್ಯ ಅವರದ್ದು ಬಾರ್ಡರ್ ಕಾನಿಸ್ಟಿಟ್ಯುಯೆನ್ಸಿ. 80 ಕಿಲೋ ಮೀಟರ್ ದೂರ ಇದ್ದರೂ ಗುಲ್ಬರ್ಗಾ ರಾಯಚೂರು ಇದ್ದ ಹಾಗೆ. ಪಕ್ಕದಲ್ಲಿಯೇ ತಮಿಳುನಾಡು. ಒಂದು ವೇಳೆ ಪೋಲೀಸ್ ಸ್ಟೇಷನ್ ಅಪ್‌ಗ್ರೇಡ್ ಮಾಡಿಕೊಡಿ ಎಂದು ಕೇಳಿದರೆ ಅದಕ್ಕೆ ಅವಕಾಶ ಇಲ್ಲ, ದುಡ್ಡಿಲ್ಲ. ಹಾಗೆ ಮಾಡುವುದಕ್ಕೆ ಬರುವುದಿಲ್ಲ ಎಂದು ಹೇಳುತ್ತಾರೆ. ಅದೇ ಧರ್ಮಸಿಂಗ್ ಅವರ ಕಾಲದಲ್ಲಿ ಐದು ನಿಮಿಷದಲ್ಲಿ ಈ ಕೆಲಸದ ಬಗ್ಗೆ ಹೇಳಿದ್ದರೆ ಆಗಿಬಿಡುತ್ತಿತ್ತು. ಆದ್ದರಿಂದ ಪರಿಸ್ಥಿತಿ ಈಗ ಈ ರೀತಿ ಇದೆ ಐಪಿಎಸ್ ಆಫೀಸರ್ ಮೇಲೆ ಕಂಟ್ರೋಲ್ ಮಾಡಬೇಕು, ಕಂಟ್ರೋಲ್ ಇದ್ದರೆ ಸಂತೋಷ. ಏನೂ ತೊಂದರೆ ಇಲ್ಲ. ಬಹುಶಃ ಇನ್ನೂ ಹೆಚ್ಚು ಶಕ್ತಿ ಕೊಟ್ಟರೆ ನಮ್ಮ ಗ್ರಾಮಾಂತರ ಮಟ್ಟದಲ್ಲಿ ಶಾಂತಿ ಪರಿಪಾಲನೆಗೆ ಅನುಕೂಲ ಆಗುತ್ತದೆ ಎಂದು ನಾನು ತಿಳಿದುಕೊಂಡಿದ್ದೇನೆ. ಎರಡನೆಯದಾಗಿ ತಾಲ್ಲೂಕ್ ಪಂಚಾಯತಿ ಜಿಲ್ಲಾ ಪಂಚಾಯತ್ ಚುನಾವಣೆ ಆಯಿತು.

ಚುನಾವಣೆ ನಡೆದಾಗ ಬಹುಶಃ 15 ಪರ್ಸೆಂಟ್ ಓಟು ಅಸೆಂಬ್ಲಿ ಚುನಾವಣೆಗೂ ಪಂಚಾಯತಿ ಚುನಾವಣೆಗೂ ಹೆಚ್ಚು ಜನತಾದಳಕ್ಕೆ ಬಂದಿದೆ. ಈ ಚುನಾವಣೆಯನ್ನು ಬಹುಶಃ ಬಜೆಟ್ ಆದ ಮೇಲೆ ಮಾಡಿದ್ದರೆ ಇವರ ಹಣೆಬರಹ ಏನು ಎಂದು ಗೊತ್ತಾಗುತ್ತಿತ್ತು. ನಮ್ಮ ಹಣೆಬರಹ ಏನು ಎಂದು ಗೊತ್ತಾಗುತ್ತಿತ್ತು. ಬಜೆಟ್ ಮುಂಚೆ ಮಾಡಬೇಕು. ವೈಟ್ ಪೇಪರ್ ಎನ್ನುವುದನ್ನು ಕೂಡ ಪಂಚಾಯತಿ ಚುನಾವಣೆಗೆ ಮುನ್ನ ಮಾಡಿದ್ದರೆ ಆಗ ನಿಮ್ಮ ಹಣೆಬರಹ ಗೊತ್ತಾಗುತ್ತಿತ್ತು. ಸ್ವಲ್ಪ ಏನಾದರೂ ನ್ಯೂನತೆ ಇದೆ ಎಂದು ಹೇಳಿ ಕೃಷ್ಣ ಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ಏನು ಒಂದು ಸಮಿತಿ ಮಾಡಿದ್ದಾರೆ, ಇದು ನಮ್ಮ ಪಬ್ಲಿಕ್ಸ್ ಅನ್ನು ಫೂಲ್ ಮಾಡಲಿಕ್ಕೆ ಎಂದು ಹೇಳಿ ನಾನಾದರೂ ತಿಳಿದುಕೊಂಡಿದ್ದೇನೆ. ನಿನ್ನೆ ಒಂದು ಬಿಲ್ ತಂದರು. ಡಿಫೆಕ್ಷನ್ ಮತ್ತುಇತರೆ ಬಿಲ್‌ಗಳನ್ನು ತಂದರು.

ಅಧ್ಯಕ್ಷರ ಉಪಾಧ್ಯಕ್ಷರ ಚುನಾವಣೆ ಆಗುತ್ತಿದೆ ತಾಲ್ಲೂಕು ಪಂಚಾಯತಿ ಅಧ್ಯಕ್ಷರು ಚುನಾಯಿತರಾಗುತ್ತಿದ್ದಾರೆ ರಿಸರ್ವೇಷನ್ ಎಲ್ಲಾ ಮುಗಿದು ಹೋಗಿದೆ. ಯಾವಾಗ ಯಾರು ಇರಬೇಕು ಎಂದು ಮಾಡಿದ್ದಾರೆ. ಆದರೂ ಕೃಷ್ಣಸ್ವಾಮಿ ಅವರ ಅಧ್ಯಕ್ಷತೆಯಲ್ಲಿ ಸಮಿತಿ ತರುವಂಥ ಅವಕಾಶ ಏನು ಇತ್ತು? ಸಂದರ್ಭ ಏನು ಇದೆ? ಏಕೆ ಮಾಡಿದರು? ಎಲ್ಲಾ ಆಗಿ ಹೋಗಿದೆಯಲ್ಲಾ ಇನ್ನು ಅವರು ಬಂದು ಐದು ವರ್ಷಕ್ಕೆ ಅಧ್ಯಯನ ಮಾಡಿ ತಿರುಗಿ ಬರುವ ಹೊತ್ತಿಗೆ ಯಾವ ಸರ್ಕಾರ ಇರುತ್ತದೋ? ಕೃಷ್ಣಸ್ವಾಮಿ ವರದಿ ಇರುತ್ತದೋ ಎಂದು ನನಗಂತೂ ಗೊತ್ತಿಲ್ಲ. ದಯಮಾಡಿ ಕೃಷ್ಣ ಸ್ವಾಮಿ ವರದಿಯನ್ನು ದಯವಿಟ್ಟು ನಿಲ್ಲಿಸಿ. ಇದನ್ನು ತಾವೇ ಮುಂದುವರಿಸಿಕೊಂಡು ಹೋಗುವಂತಹ ಕೆಲಸವನ್ನು ಮಾಡಬೇಕು.

ಶ್ರೀ ಕೆ.ಎನ್. ನಾಗೇಗೌಡ : ಈಗ ಕೃಷ್ಣಸ್ವಾಮಿ ಅವರು ಅಧ್ಯಕ್ಷರಾಗಿ ಒಪ್ಪಿಕೊಂಡಿದ್ದೇ ಮಹತ್ವ ಎಂದು ಹೇಳುತೇನೆ. ಈ ದೇಶದ ಅತ್ಯಂತ ಎತ್ತರದ ವ್ಯಕ್ತಿ ಆರ್ಥಿಕ ತಜ್ಞ ಈ ಅಧ್ಯಕ್ಷತೆಯನ್ನು ಒಪ್ಪಿಕೊಂಡಿದ್ದೇ ಮಹತ್ವತ. ಅವರು ಯಾವಾಗ ಸಮಿತಿಯ ಕೆಲಸ ಮಾಡುತ್ತಾರೆ, ಯಾವ ಹಂತದಲ್ಲಿ ವರದಿ ಇದೆ, ಇವೆಲ್ಲಾ ಮುಂದೆ ನೋಡೋಣ. ಅವರು ಅಧ್ಯಕ್ಷತೆಯನ್ನು ಒಪ್ಪಿಕೊಂಡಿದ್ದೇ ಒಂದು ಸುಯೋಗ. ದಯಮಾಡಿ ಅದನ್ನು ನಿಲ್ಲಿಸಿ ಎಂದು ಹೇಳಬೇಡಿ. ಕಾದು ನೋಡಿ.

ಶ್ರೀ ಡಿ.ಕೆ. ಶಿವಕುಮಾರ್ : ಇನ್ನು ಮಾನ್ಯ ಮುಖ್ಯಮಂತ್ರಿಗಳು ಹಾಗೂ ಕೈಗಾರಿಕಾ ಮಂತ್ರಿಗಳು ವಿದೇಶಕ್ಕೆ ಹೋಗಿ ಹಲವಾರು ಇಂಡಸ್ಟ್ರಿಗಳಿಗೆ ಇನ್‌ವೈಟ್ ಮಾಡಿ ಬಂದಿದ್ದಾರೆ. ಹಲವಾರು ಎಂ.ಓ.ಯುಗಳು ಬರುತ್ತಿವೆ. ನಾನು ಕೈಗಾರಿಕಾ ಮಂತ್ರಿಯಾಗಿದ್ದಾಗ ಜಪಾನ್ ದೇಶದಿಂದ ಒಂದು ಟೀಮ್ ನನ್ನ ಕ್ಷೇತ್ರಕ್ಕೆ ಬಂದಿತ್ತು. ನಮ್ಮ ಸಾತನೂರು ಹಾಗೂ ಬಿಡದಿಯನ್ನು ಅವರು ಅಳತೆ ಮಾಡಿಕೊಂಡು ಹೋದರು. ಅವತ್ತಿನ ಸಂದರ್ಭದಲ್ಲಿ ಇದೇ ದಳದ ಮುಖಂಡರುಗಳು ಪಕ್ಕದಲ್ಲಿ ಏನು ಕುಳಿತಿದ್ದಾರೆ, ಅವರಲ್ಲಿ ಮಾನ್ಯ ಬೈರೇಗೌಡರು ಈ ಸಭೆಯಲ್ಲಿ ಇವತ್ತು ಇಲ್ಲ, ವಿಧಾನ ಪರಿಷತ್‌ಗೆ ಹೋಗಿರಬಹುದು ಎಂದು ಕಾಣುತ್ತದೆ. ಅವರು ಮತ್ತುನಮ್ಮ ನಂಜುಂಡಸ್ವಾಮಿ ಅವರು ಎಲ್ಲಾ ಸೇರಿ ಈ ಯೋಜನೆಯಿಂದ ರೈತರಿಗೆ ಬಹಳ ಅನ್ಯಾಯ ಆಗುತ್ತದೆ, ಬಹಳ ತೊಂದರೆ ಆಗುತ್ತದೆ. ಮತ್ತೆ ಬ್ರಿಟೀಷ್ ರಾಜ್ಯ ಬರುತ್ತದೆ ಎನ್ನುವಂಥ ವಾದನ್ನು ಮಂಡಿಸಿದ್ದರು. ಆದ್ದರಿಂದ ದಯವಿಟ್ಟು ಈ ಒಂದು ಅವಕಾಶವನ್ನು ತರಬೇಕು. ಇಂಡಸ್ಟ್ರೀಸ್ ಅನ್ನು ಸ್ಥಾಪನೆ ಮಾಡಬೇಕು ಎಂದು ಹೇಳುತ್ತಿದ್ದೀರಿ. ಇದು ಬೆಂಗಳೂರು ಸುತ್ತ ಮುತ್ತ ಮಾತ್ರ ಬರಬಾರದು. ಎಲ್ಲಾ ತಾಲ್ಲೂಕು ಮಟ್ಟಕ್ಕೆ ಹೋಗಬೇಕು. ಹಳ್ಳಿಗಳು, ಸಾತನೂರು ಕ್ಷೇತ್ರಕ್ಕೆ ಬಾಗೇಪಲ್ಲಿ ಕ್ಷೇತ್ರಕ್ಕೆ ಇಲ್ಲಾ ಹಳ್ಳಿಗಳ ಮಟ್ಟಕ್ಕೆ ಹೋಯಿತು ಎಂದರೆ ಆಗ ಏನು ನಿರುದ್ಯೋಗದ ಸಮಸ್ಯೆ ಇದೆ, ತಾಲ್ಲೂಕು ಮಟ್ಟ ಏನು ಇದೆ ವಿದ್ಯಾ ವಿಚಾರದಲ್ಲಿ ಅಥವಾ ಆರೋಗ್ಯದ ವಿಚಾರದಲ್ಲಿ ಕೈಗಾರಿಕಾ ವಿಚಾರದಲ್ಲಿ ಅದೆಲ್ಲಾ ಸರಿ ಹೋಗಬಹುದು ಎಂದು ನನಗನ್ನಿಸುತ್ತದೆ.

ಕೈಗಾರಿಕೆ ಮತ್ತು ವಿದ್ಯುತ್ ವಿಚಾರದಲ್ಲಿ ಬಹುಶಃ ಅನುಕೂಲವಾಗುತ್ತದೆ. ಮತ್ತು ನಿರುದ್ಯೋಗ ಸಮಸ್ಯೆ ಏನಿದೆ, ಅದೂ ಕೂಡ ಬಗೆಹರಿಯುತ್ತದೆಯೆಂದು ನಾನು ತಿಳಿದುಕೊಂಡಿದ್ದೇನೆ. ವಿಶೇಷವಾಗಿ 58 ವರ್ಷಗಳಿಗೆ ನಿವೃತ್ತಿ ವಯಸ್ಸು ಏನಿದೆ, ಅದನ್ನು 55 ವರ್ಷಕ್ಕೆ ಇಳಿಸಿದಕ್ಕೆ ನಿರುದ್ಯೋಗಿ ಯುವಕರಿಗೆ ಅವಕಾಶ ಸಿಗುತ್ತದೆ. ಕನಿಷ್ಠ 3 ಲಕ್ಷದಿಂದ 5 ಲಕ್ಷದವರೆಗೂ ಉದ್ಯೋಗ ಸಿಗುತ್ತದೆ. ಯುವಕರಿಗೆ ಒಂದು ಪ್ರತ್ಯೇಕ ಕಮಿಷನ್ ನೇಮಕ ಮಾಡುತ್ತೇವೆಂದು ಬರೀ ಭಾಷಣ ಹೇಳಿದರೆ ಸಾಲದು. ಈಗ ಏನು ಬೆಂಗಳೂರಿನಲ್ಲಿ ಕೈಗಾರಿಕೆ ಸ್ಥಾಪಿಸಬೇಕೆಂದಿದ್ದೀರಿ, ಅದನ್ನು ಬೆಂಗಳೂರಿನಿಂದ 80-100 ಕಿಲೋಮೀಟರ್ ದೂರದಲ್ಲಿ ಗ್ರಮಾಂತರ ಪ್ರದೇಶದ್ದು ಸ್ಥಾಪಿಸಿ ಅಲ್ಲಿಗೆ ವಿದ್ಯುಚ್ಛಕ್ತಿ ನೀರಿನ ಸೌಲಭ್ಯ ಒದಗಿಸಿ ಉದ್ಯೋಗ ಸೃಷ್ಟಿಸಿದರೆ ಮಾತ್ರ ಯುವಕರ ಬಗ್ಗೆ ಚಿಂತನೆ ಮಾಡಿದಂತಾಗುತ್ತದೆ. ಕುಡಿಯುವ ನೀರಿನ ವಿಚಾರವಾಗಿ ಹೇಳುವುದಾದರೆ, ಸರ್ಕಾರ ಇದರ ಬಗ್ಗೆ ಸರಿಯಾದ ಕಾರ್ಯಕ್ರಮ ಹಾಕಿಕೊಂಡಿಲ್ಲವೆಂದು ನಾನು ತಿಳಿದುಕೊಂಡಿದ್ದೇನೆ. ಕೋಲಾರ ಜಿಲ್ಲೆಯ ಬಗ್ಗೆ ಅಲ್ಲಿನ ಶಾಸಕರೊಬ್ಬರು ಹೇಳುತ್ತಿದ್ದರು ಏನೆಂದರೆ ನಮ್ಮ ಭೂಮಿಯಲ್ಲಿ ನೀರಿಲ್ಲ, ಒಂದು ವೇಳೆ ಬೋರ್‌ವೆಲ್ ಕೊರೆಸಿದರೂ ನೀರಿನ ಮಟ್ಟ ಅತ್ಯಂತ ಕೆಳಕ್ಕೆ ಹೋಗಿದೆ. ಎಂದು ನಮ್ಮ ಭಾಗದಲ್ಲಿ ಹರಿಯುತ್ತಿರುವ ಕಾವೇರಿ ನೀರು ಇವೊತ್ತು 400 ಅಡಿಗಳವರೆಗೆ ಮುಟ್ಟಿದೆ. ಹಿಂದೆ 200-250 ಅಡಿಗಳಷ್ಟಿತ್ತು. ನನ್ನ ತಾಲ್ಲೂಕಿನಲ್ಲಿ ಸುಮಾರು 2,000 ಬೋರ್‌ವೆಲ್‌ಗಳನ್ನು ಹಾಕಿಸಿದ್ದು ಈಗ ಅವುಗಳಲ್ಲಿ 50 ರಿಂದ 150 ಬೋರ್‌ವೆಲ್‌ಗಳು ಕೆಲಸ ಮಾಡುತ್ತಿಲ್ಲ. ಅಂತಹ ಪರಿಸ್ಥಿತಿ ಇದೆ.

ಮಾನ್ಯ ಮುಖ್ಯಮಂತ್ರಿಗಳು ಈಗ ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಪ್ರತಿನಿಧಿಸುತ್ತಿದ್ದಾರೆಯೇ ಹೊರತು ಹಾಸನವಲ್ಲವೆಂದು ತಿಳಿದುಕೊಂಡಿದ್ದೇನೆ. ನನ್ನ ಕ್ಷೇತ್ರದಲ್ಲೇ ಅವರು ಈ ಹಿಂದೆ ಚುನಾವಣೆಯಲ್ಲಿ ಎರಡು ಭಾರಿ ಸ್ಪರ್ಧಿಸುದ್ದರು. ಹಾಗೆಯೇ ಕನಕಪುರದಲ್ಲೂ ಸ್ಪರ್ಧಿಸಿದ್ದರು. ನನ್ನ ಕ್ಷೇತ್ರ ಬೆಂಗಳೂರು ಪಕ್ಕದಲ್ಲಿರುವುದರಿಂದ ಅವರಿಗೆ ಆ ಕುರಿತು ಹೆಚ್ಚಿನ ಗಮನವಿದೆ.ಆದರೆ ಅಲ್ಲಿ ಕಾವೇರಿ ನದಿ ಹರಿಯುತ್ತಿದ್ದು, ನೀರು ಸಾಕಷ್ಟಿದ್ದು ಅಲ್ಲಿ ಕುಡಿಯುವ ನೀರಿನ ಯೋಜನೆ ಹಮ್ಮಿಕೊಳ್ಳದಿರುವ ಭಾವನೆಯಿಟ್ಟುಕೊಳ್ಳಬಾರದು. ಅಲ್ಲಿ ಕುಡಿಯುವ ನೀರಿಗೆ ವಿಶೇಷವಾದ ಆದ್ಯತೆ ಒದಗಿಸಿಕೊಡಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತಾ, ಸಾರಿಗೆ ವಿಚಾರದಲ್ಲಿ ಹೇಳುವುದಾದರೆ, ಸಾರಿಗೆ ಇಲಾಖೆ ಇವೊತ್ತು ಸಂಪೂರ್ಣವಾಗಿ ಸತ್ತು ಹೋಗಿದೆಯೆಂದು ತಿಳಿದಿದ್ದೇನೆ. ಪಿ.ಜಿ.ಆರ್. ಸಿಂಧ್ಯರವರು ಮತ್ತು ಅಜೀಜ್ ಸೇಠ್‌ರವರು ಸಾರಿಗೆ ಮಂತ್ರಿಗಳಾಗಿದ್ದರೋ ಆ ಅವಧಿಯಲ್ಲಿ ಇಲಾಖೆ ಸತ್ತು ಹೋಯಿತು. ಇವೊತ್ತು ಯಾವುದೇ ಹೊಸ ಮಾರ್ಗ ಇಂಟ್ರಡ್ಯೂಸ್ ಆಗಿಲ್ಲ, 1,000 ಬಸ್ಸುಗಳನ್ನು ಹೊಸದಾಗಿ ಖರೀದಿಸಿಲ್ಲ. ತಾವು ನೋಡುತ್ತಿದ್ದೀರಿ, ಕೋಲಾರ, ರಾಮನಗರ ಕನಕಪುರ, ಚಿಕ್ಕಬಳ್ಳಾಪುರ ಮುಂತಾದ ಕಡೆಗಳಿಂದ ಬೆಂಗಳೂರಿಗೆ 100-150 ವ್ಯಾನ್‌ಗಳು ಬರುತ್ತಿವೆ.

ಸರಿಯಾಗಿ ಕೆಎಸ್‌ಆರ್‌ಟಿಸಿ ಬಸ್ಸುಗಳ ಸೌಲಭ್ಯವಿಲ್ಲ. ಕೆಲವು ಜನರಿಗೆ ಅನುಕೂಲವಾಗುತ್ತಿರಬಹುದು ಆದರೆ,ಈ ರೀತಿ ಜನರನ್ನು ಬೆಂಗಳೂರಿಗೆ ಹೊತ್ತು ತರುವ ವ್ಯಾನ್‌ಗಳ ಮಾಲೀಕರಿಗೆ ಆರ್.ಟಿ.ಎ. ನವರು ಕೊಡುತ್ತಿರುವ ಕಿರುಕುಳ ಆ ಭಗವಂತನಿಗೇ ಗೊತ್ತು. ಪೋಲೀಸ್ ಇಲಾಖೆಯೊಂದಿಗೆ ಹೋಲಿಸಿದರೆ , ಆರ್‌ಟಿಎ ನವರು ಬಹಳಷ್ಟು ಕಿರುಕುಳ ಕೊಡುತ್ತಾರೆ. ಉದಾಹರಣೆಗೆ ಮೈಸೂರು ರಸ್ತೆಯಲ್ಲಿ ನೋಡಿದರೆ ತಮಗೆ ಗೊತ್ತಾಗುತ್ತದೆ. ಪ್ರಯಾಣಿಕರನ್ನು ವಿವಿಧ ಊರುಗಳಿಗೆ ತಲುಪಿಸಲು ಅಲ್ಲಿ ಸಾಲುಗಟ್ಟಿ ಸುಮಾರು 20 ವಾಹನಗಳು ನಿಂತಿರುತ್ತವೆ. ಆರ್‌ಟಿಎ ಅಧಿಕಾರಿ ಇವರಿಂದ ಅಕ್ರಮವಾಗಿ ಹಣ ವಸೂಲು ಮಾಡುತ್ತಾನೆ. ಕನಿಷ್ಠ ಪಕ್ಷ ಒಂದು ದಿವಸಕ್ಕೆ 5,000 ರೂಪಾಯಿಗಳಷ್ಟು ವಸೂಲಿ ಮಾಡದೆ ಮನೆಗೆ ಹೋಗುವುದಿಲ್ಲ. ಇದಕ್ಕೆ ಸಾರಿಗೆ ಇಲಾಖೆಯವರು ಕಡಿವಾಣ ಹಾಕಬೇಕಾಗುತ್ತದೆ. ಮತ್ತು ಗ್ರಾಮಾಂತರ ಪ್ರದೇಶಗಳಿಗೆ ಹೆಚ್ಚು ಬಸ್ಸಿನ ಸೌಕರ್ಯ ಒದಗಿಸಿಕೊಡುವಂಥ ಕೆಲಸ ಈ ಸರ್ಕಾರ ಮಾಡುತ್ತದೆಂದು ಈ ಸಂದರ್ಭದಲ್ಲಿ ಹೇಳುತ್ತಾ ನೀರಾವರಿ ವಿಚಾರದಲ್ಲಿ ಬರುವ

10ನೇ ತಾರೀಖಿನಂದು ಸರ್ಕಾರ ವಿಶೇಷವಾದ ಚರ್ಚೆ ಇಡುತ್ತದೆ ಎರಡು ಮಾನ್ಯ ಸದಸ್ಯರಾದ ನಾಗೇಗೌಡರು ಹೇಳುತ್ತಿದ್ದರು.

ಆಗ ನಾನು ಸಮಯವನ್ನು ಉಪಯೋಗಿಸಿಕೊಳ್ಳಲು ಪ್ರಾಮಾಣಿಕ ಪ್ರಯತ್ನ ಮಾಡುತ್ತೇನೆ. ಇನ್ನು ನಮ್ಮ ರಾಜ್ಯದ ಕೇಂದ್ರೀಯ ಯೋಜನೆಗಳೇನಿವೆ, ಇದಕ್ಕೆ ಸಂಬಂಧಿಸಿದಂತೆ, ದೆಹಲಿಯಲ್ಲಿ ನಮ್ಮ ರಾಜ್ಯದಿಂದ ಒಬ್ಬ ಕ್ಯಾಬಿನೆಟ್ ಮಿನಿಸ್ಟರ್ ಮಟ್ಟದ ರಾಜಕಾರಣಿಯನ್ನು ನೇಮಕ ಮಾಡಿ ಕಛೇರಿಯನ್ನು ತೆರೆಯುವ ಬಗ್ಗೆ ಕೇಂದ್ರದಲ್ಲಿ ಪ್ರಸ್ತಾಪವನೆಯಿದೆಯೆಂದು ನಾಗೇಗೌಡರು ಹೇಳಿದರು. ಈ ದಿಸೆಯಲ್ಲಿ ಕೆಲಸ ಮಾಡಲು ಪ್ರಸ್ತಾವನೆಯಿದೆಯೆಂದು ನಾಗೇಗೌಡರು ಹೇಳಿದರು. ಈ ದಿಸೆಯಲ್ಲಿ ಕೆಲಸ ಮಡಲು ಅನುಕೂಲವಾಗುವಂತೆ ವ್ಯವಸ್ಥೆ ಮಾಡಬೇಕೆಂದು ಮನವಿ ಮಾಡಿಕೊಳ್ಳುತ್ತೇನೆ. ನಾನು ಕಂದಾಯ ಇಲಾಖೆ, ಆಹಾರ ನಿಗಮ ಹಾಗೂ ಕೆ.ಇ.ಬಿ. ಬಗ್ಗೆ ಮಾತನಾಡಲು ಬೇಕಾದಷ್ಟು ವಿಚಾರಗಳಿರುವುದರಿಂದ ಕಾಲಾವಕಾಶ ಕಡಿಮೆಯಿರುವುದರಿಂದಾಗಿ ಕಬ್ಬಿನ ವಿಚಾರವಾಗಿ ಮಾತ್ರ ಈಗ ಮಾತನಾಡುತ್ತೇನೆ. ನಮ್ಮ ರಾಜ್ಯದಲ್ಲಿ ರೈತರು ಏನು ಕಬ್ಬನ್ನು ಬೆಳೆಯುತ್ತಿದ್ದಾರೆ, ಅದರಲ್ಲಿ ಶೇಕಡ 20-25ರಷ್ಟು ಪ್ರಮಾಣದಲ್ಲಿ ಕೂಡ ಸರಿಯಾಗಿ ಕಾರ್ಖಾನೆಗಳಿಗೆ ಒದಗಿಸುವುದಕ್ಕಾಗುತ್ತಿಲ್ಲ. ಕಬ್ಬಿನ ಬೆಲೆ ಟನ್ನಿಗೆ 700 ರೂಪಾಯಿಗಳೆಂದು ನಿಗದಿಯಾಗಿದ್ದರೂ ದಳ್ಳಾಳಿಗಳು 300ರಿಂದ 350 ರೂಪಾಯಿಗಳಿಗೆ ಕೊಳ್ಳುವ ಪರಿಸ್ಥಿತಿ ಬಂದಿದೆ. ಆದುದರಿಂದ,ಕಬ್ಬು ಬೆಳೆಯುವ ರೈತರಿಗಾಗಿ ವಿಶೇಷವಾದ ಕಾರ್ಯಕ್ರಮ ಹಾಕಿಕೊಂಡು ನಮ್ಮಲ್ಲಿ ಬೆಳೆದಂಥ ಕಬ್ಬಿಗೆ ವಿಶೇಷ ಬೆಲೆ ನಿಗದಿಪಡಿಸುವುದಲ್ಲದೆ ಕಬ್ಬನ್ನು ಸರಿಯಾದ ಕಾಲದಲ್ಲಿ ಕಟಾವುಗೊಳಿಸುವ ಕಾರ್ಯಕ್ರಮವನ್ನು ಸರ್ಕಾರ ಹಮ್ಮಿಕೊಳ್ಳಬೇಕೆಂದು ಈ ಸಂದರ್ಭದಲ್ಲಿ ಒತ್ತಾಯಿಸುತ್ತಾ, ಇದುವರೆವಿಗೂ ನಾನು ಯಾವ್ಯಾವ ವಿಚಾರಗಳನ್ನು ಪ್ರಸ್ತಾಪಿಸಿ ಸಲಹೆಗಳನ್ನು ಕೊಟ್ಟಿದ್ದೇನೆ, ಅದೆಲ್ಲವನ್ನೂ ಸರ್ಕಾರ ಗಮನದಲ್ಲಿಟ್ಟುಕೊಂಡು ಸರಿಯಾಗಿ ಕೆಲಸ ಮಾಡುತ್ತದೆ, ಮತ್ತು ಐದು ವರ್ಷಗಳ ಕಾಲ ಈ ರಾಜ್ಯವನ್ನು ಆಳುತ್ತಿದೆಂದು ಆಶಿಸುತ್ತಾ ಇಷ್ಟು ಹೊತ್ತು ಮಾತನಾಡಲು ಅವಕಾಶಮಾಡಿಕೊಟ್ಟ ತಮಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ. ಜೈ ಕರ್ನಾಟಕ.

+ ಶ್ರೀಮತಿ ಪ್ರಮೀಳಾ ನೇಸರ್ಗಿ (ಚಾಮರಾಜಪೇಟೆ) : ಮಾನ್ಯ ಸಭಾಧ್ಯಕ್ಷರೆ, ಮಾನ್ಯ ರಾಜ್ಯಪಾಲರ ಭಾಷಣಕ್ಕೆ ವಂದನಾ ನಿರ್ಣಯದ ಪ್ರಸ್ತಾವವನ್ನು ಮಾನ್ಯ ಸದಸ್ಯರಾದ ಕೆ.ಎನ್. ನಾಗೇಗೌಡರು, ಮಂಡಿಸಿದರೆ, ಅದನ್ನು ಸದಸ್ಯರಾದ ಜಿ. ಬಸವಣ್ಯಪ್ಪನವರು ಅನುಮೋದಿ ಸುತ್ತಾ ಮಾತನಾಡಿದ್ದಾರೆ. ರಾಜ್ಯಪಾಲರು ತಮ್ಮ ಭಾಷಣದಲ್ಲಿ ಕರ್ನಾಟಕದಲ್ಲಿ ಎಲ್ಲವನ್ನೂ ಸರ್ಕಾರ ಮಾಡುವುದಕ್ಕೆ ಸಿದ್ಧವಿದೆ. ಎನ್ನುವ ಧೋರಣೆಯಲ್ಲಿ ಮಾತನಾಡಿದರು. ಮತ್ತು ಸರ್ಕಾರ ಮೂರು ದೊಡ್ಡ ಸಾಧನೆಗಳನ್ನು ಮಾಡಿದೆಯೆಂದು ಹೇಳಿದರು. ಅವು ಏನೆಂದರೆ ಮೊದಲನೆಯದಾಗಿ ಹುಬ್ಬಳ್ಳಿ ವಿವಾದ ಇತ್ಯರ್ಥ, ಎರಡನೆಯದಾಗಿ ಸಾಲದ ಮೇಲಿನ ಬಡ್ಡಿಮನ್ನಾ, ಮೂರನೆಯದು ಬಡವರಿಗೆ ಕಡಿಮೆ ದರದಲ್ಲಿ ಅಕ್ಕಿ ವಿತರಣೆ. ಹುಬ್ಬಳ್ಳಿ ಈದಗಾ ಮೈದಾನದ ಬಗ್ಗೆ ಸರ್ಕಾರದ ವಿಶೇಷ ಸಾಧನೆಯೇನು? ಸರ್ಕಾರ ಅಧಿಕಾರಕ್ಕೆ ಬಂದ ನಂತರ ತಾವು ಒಬ್ಬರೇ ಇದನ್ನು ಮಾಡಿದ್ದು, ಇದಕ್ಕೆ ಬೇರೆ ಯಾರದೇ ಸಹಕಾರ ಇಲ್ಲವೆನ್ನುವ ರೀತಿಯಲ್ಲಿ ಸನ್ಮಾನ್ಯ ಸದಸ್ಯರು ಮಾತನಾಡಿದರು. ಇದರ ಕುರಿತು ನಾನು ಇವೊತ್ತು ಹೇಳುವುದಾದರೆ ಭಾರತೀಯ ಜನತಾ ಪಕ್ಷ ಈ ವಿಷಯದಲ್ಲಿ ಮೂಲಭೂತಹಕ್ಕಾದ, ಈ ದೇಶದಲ್ಲಿ ಪ್ರತಿಯೊಬ್ಬ ಪ್ರಜೆಗೂ ಕೂಡ ರಾಷ್ಟ್ರಧ್ವಜ ಹಾರಿಸಲು ಹಕ್ಕು ಇದೆಯೆಂದು ಮೊದಲಿನಿಂದಲೂ ಪ್ರತಿಪಾದನೆ ಮಾಡಿಕೊಂಡು ಬರುತ್ತಿದ್ದು,

ಇದೇ ಪ್ರತಿಪಾದನೆಯನ್ನು ರಾಜ್ಯದಲ್ಲಿ ಸರ್ಕಾರ ಅಧಿಕಾರಕ್ಕೆ ಬಂದಾಗ ಕೂಡ ಅದರ ಮುಂದಿಟ್ಟು ನೀವೇ ರಾಷ್ಟ್ರಧ್ವಜ ಹಾರಿಸಿ ಎಂದು ಕೇಳಿಕೊಳ್ಳಲಾಯಿತು. ಅಲ್ಲದೆ ರಾಜ್ಯಪಾಲರು ಸಹ ಇದರಲ್ಲಿ ತಪ್ಪೇನಿದೆ, ಸರ್ಕಾರವೇ ರಾಷ್ಟ್ರಧ್ವಜ ಹಾರಿಸುವ ಕೆಲಸ ಮಾಡಬಹುದಿತ್ತು. ಎಂಬ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ಭಾರತೀಯ ಜನತಾ

ಪಕ್ಷ ಜನತಾ ದಳ ಸರ್ಕಾರ ಅಧಿಕಾರಕ್ಕೆ ಬಂದಾಗ ತನ್ನ ಬೇಡಿಕೆ ಇಟ್ಟು ರಾಷ್ಟ್ರಧ್ವಜಕ್ಕೆ ಅಗೌರವವಾಗಿದೆ, ಅವಮಾನವಾಗಿದೆ, ಅದನ್ನು ಸರಿಪಡಿಸಿ, ಮುಖ್ಯಮಂತ್ರಿಗಳಾಗಿ ನೀವು ಹುಬ್ಬಳ್ಳಿಗೆ ಬಂದು ರಾಷ್ಟ್ರಧ್ವಜ ಹಾರಿಸಿ, ಇಲ್ಲವೇ ಜಿಲ್ಲಾಧಿಕಾರಿಯಿಂದಲಾದರೂ ಹಾರಿಸಿ. ಎಂದಾಗ ಅದಕ್ಕೆ ಗಮನಕೊಡದಿದ್ದರಿಂದ ಅಲ್ಲಿ ಗೋಲಿಬಾರ್ ಆಗಿ ಜನರು ಸತ್ತ ನಂತರ, ನಾವೇ ಇದನ್ನು ಬಗೆಹರಿಸಿದ್ದೇವೆಂದು ಹೇಳಿಕೊಂಡು ಮುಂದೆ ಬಂದಿದ್ದೀರಿ ಇದಕ್ಕೋಸ್ಕರ ನಾನು ನಿಮಗೆ ಅಭಿನಂದನೆ ಸಲ್ಲಿಸುವುದಿಲ್ಲ. ಆ ವಿಷಯದಲ್ಲಿ ನಮ್ಮ (ಬಿಜೆಪಿ) ಸಹಕಾರ ಅಪಾರವಾಗಿತ್ತು. ನಮ್ಮ ಸಹಕಾರವಿಲ್ಲದಿದ್ದರೆ ವಿವಾದ ಇತ್ಯರ್ಥವಾಗುತ್ತಿರಲಿಲ್ಲ. ಇದರ ಬಗ್ಗೆ ನಿಮ್ಮ ಬೆನ್ನನ್ನು ನೀವೇ ತಟ್ಟಿಕೊಳ್ಳಲು ಹೋಗಬೇಡಿ. ಇದೊಂದು ದೊಡ್ಡ ಬಗ್ಗೆ ನಿಮ್ಮ ಬೆನ್ನನ್ನು ನೀವೇ ತಟ್ಟಿಕೊಳ್ಳಲು ಹೋಗಬೇಡಿ. ಇದೊಂದು ದೊಡ್ಡ ಸಾಧನೆ ಮಾಡಿದ್ದೇವೆಂದು ಏನು ಹೇಳಿದ್ದೀರಿ, ಅದು ಹೆಚ್ಚಿನ ಸಾಧನೆಯೇನೂ ಅಲ್ಲ.

4.40 ಪಿ.ಎಂ

ಸಭಾಧ್ಯಕ್ಷರೆ, ಒಂದು ಕಡೆ ಈದ್ಗಾ ಮೈದಾನದ ಬಗ್ಗೆ ನಾವು ತಾಳ್ಮೆಯಿಂದ ಎಲ್ಲಾ ಪರಿಶೀಲನೆ ಮಾಡಿ ರಾಷ್ಟ್ರಧ್ವಜವನ್ನು ಹಾರಿಸಿಬಿಟ್ಟಿದ್ದೇವೆ ಎಂದು ಹುಬ್ಬಳ್ಳಿಯ ಬಗ್ಗೆ ಹೇಳಿ ಬೆಂಗಳೂರಿನ ಚಾಮರಾಜಪೇಟೆಯಲ್ಲಿ ಇರತಕ್ಕ ಈದ್ಗಾ ಮೈದಾನದ ಬಗ್ಗೆ ಇವತ್ತು ಸುಪ್ರೀಂ ಕೋರ್ಟಿನಲ್ಲಿ ತೀರ್ಮಾನವಾಗಿದೆ. ಅಲ್ಲಿರತಕ್ಕ . ಎಲ್ಲ ನಾಗರೀಕರು, ಎಲ್ಲ ಮಕ್ಕಳು ಸಾರ್ವಜನಿಕರು ಈದ್ಗಾ ಮೈದಾನದಲ್ಲಿ ಓಡಾಡಬಹುದು ಎಂದು ತೀರ್ಮಾನವಾಗಿದ್ದರೂ ಕೂಡ 15 ದಿವಸದ ಹಿಂದೆ ಸರ್ಕಾರ ಅಥವಾ ವಕ್ಫ್ ಬೋರ್ಡಿನಿಂದ ಕಾರ್ಪೊರೇಷನ್ ಅಧಿಕಾರಿಗಳಿಗೆ ಒಂದು ಪತ್ರ ಹೋಗಿದೆ. ಏನೆಂದರೆ ಚಾಮರಾಜಪೇಟೆ ಈದ್ಗಾ ಮೈದಾನವನ್ನು ವಕ್ಫ್ ಬೋರ್ಡಿಗೆ ವಹಿಸಿಕೊಡಬೇಕೆಂದು ಹೇಳಿದ್ದಾರೆ. ಆದ್ದರಿಂದ ನಾಗೇಗೌಡರೆ, ಒಂದು ಕಡೆ ಸಮಾಧಾನಕರವಾಗಿ ನಾವು ಈದ್ಗಾ ಮೈದಾನದ ಸಮಸ್ಯೆಯನ್ನು ಪರಿಹಾರ ಮಾಡಿದ್ದೇವೆ ಎಂದು ಹೇಳಿ ಚಾಮರಾಜಪೇಟೆ ಈದ್ಗಾ ಮೈದಾನದ ವಿಚಾರಕ್ಕೆ ಹೋಗಿ ಗಲಾಟೆಗೆ ಅವಕಾಶ ಮಾಡಿಕೊಡಬೇಡಿ. ಸಮಾಧಾನವಾಗಿ ನಾವು, ಅಲ್ಪಸಂಖ್ಯಾಂತರು ಸೆಂಟ್ರಲ್ ಮುಸ್ಲಿಂ ಅಸೋಸಿಯೇಷನ್ ಎಲ್ಲರೂ ಕೂಡಿ ಅಣ್ಣತಮ್ಮಂದಿರಂತೆ ನಮ್ಮ ಕ್ಷೇತ್ರದಲ್ಲಿ ಬಾಳ್ವೆ ಮಾಡುತ್ತಿದ್ದೇವೆ. ಅಲ್ಲಿ ಒಂದು ಒಡಕನ್ನು ತರುವ ಪ್ರಯತ್ನವನ್ನು ಮಾಡಬೇಡಿ. ಅಲ್ಲಿ ತಮ್ಮ ಸಾಧನೆಯನ್ನು ತೋರಿಸತಕ್ಕ ಕೆಲಸವನ್ನು ತಾವು ಮಾಡಬೇಡಿ ಎಂದು ನಾನು ಕೇಳಿಕೊಳ್ಳುತ್ತೇನೆ. ಮಾನ್ಯ ಸಭಾಧ್ಯಕ್ಷರೆ ಅವರು ಎರಡನೇ ಮಾತು ಹೇಳಿದ್ದು ದೊಡ್ಡ ಸಾಧನೆ ಏನೆಂದರೆ ಬಡ್ಡಿ ಸಾಲ ಮನ್ನಾ ಮಾಡಿದ್ದೇವೆ, ಮೂರು ತಿಂಗಳು ಬಡ್ಡಿ ಸಾಲವನ್ನು ರೈತರ ಸಾಲವನ್ನು ಮನ್ನಾ ಮಾಡಿದ್ದೇವೆ, ಯಾವ ಸರ್ಕಾರವೂ ಮಾಡದೇ ಇರತಕ್ಕ ಸಾಲವನ್ನು ಮನ್ನಾ ಮಾಡಿದ್ದೇವೆ ಎಂದು ಹೇಳಿದ್ದಾರೆ. ನಾನು ಕೇಳುತ್ತಿದ್ದೇನೆ ತಮಗೆ ಮಧ್ಯಪ್ರದೇಶದಲ್ಲಿದ್ದಂಥ ಭಾರತೀಯ ಜನತಾ ಪಾರ್ಟಿ ಈ ಸಾಲ ಮನ್ನಾ ಮಾಡಿತ್ತೋ ಅಥವಾ ಇಲ್ಲವೋ? ನಮ್ಮ ಪಾರ್ಟಿ ಭಾರತೀತಯ ಜನತಾ ಪಾರ್ಟಿ ಸಾಲ ಮನ್ನಾಮಾಡಿದಂಥ ಪ್ರಥಮ ರಾಜಕೀಯ ಪಕ್ಷ. ಆದ್ದರಿಂದ ನಮ್ಮ ಸಾಧನೆ ಎಂದು ಮಾತನಾಡುವುದಕ್ಕೆ.

ಶ್ರೀ ಎಂ. ನಾರಾಯಣಸ್ವಾಮಿ : ಕೇಂದ್ರದಲ್ಲಿ ವಿ.ಪಿ. ಸಿಂಗ್ 1990ರಲ್ಲೇ ಮಾಡಿದ್ದರು.

ಶ್ರೀಮತಿ ಪ್ರಮೀಳಾ ನೇಸರ್ಗಿ : ನಾನು ಈಲ್ಡ್ ಆಗಿಲ್ಲ. ನಾನು ಈಲ್ಡ್ ಆಗುವುದಿಲ್ಲ.

ಶ್ರೀ ಎಂ. ನಾರಾಯಣಸ್ವಾಮಿ : ಅವರ ಸರ್ಕಾರ ಮನ್ನಾ ಮಾಡಿದ್ದಲ್ಲ. ಕೇಂದ್ರ ಸರ್ಕಾರದಲ್ಲಿ ವಿ.ಪಿ.ಸಿಂಗ್. ಅವರು ಪ್ರಧಾನ ಮಂತ್ರಿಗಳಾಗಿದ್ದಾಗ ಪ್ರಥಮವಾಗಿ ಸಾಲವನ್ನು ಮನ್ನಾ ಮಾಡಿದ್ದಾರೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಬಡ್ಡಿ ಮತ್ತು ಸುಸ್ತಿ ಬಡ್ಡಿ ಬಗ್ಗೆ ನಾನು ಹೇಳಿದ್ದು.

ಶ್ರೀ ಎಂ. ನಾರಾಯಣ ಸ್ವಾಮಿ : 1983-84ರಲ್ಲಿ ಹಗಡೆಯವರು ಮಾಡಿದ್ದರು.

ಶ್ರೀಮತಿ ಪ್ರಮೀಳಾ ನೇಸರ್ಗಿ : ಸ್ವಲ್ಪ ಸಮಾಧಾನದಿಂದ ಇರಿ. ಹೆಚ್ಚು ಆತುರ ಬೇಡ. ಸಾಲ ಬಡ್ಡಿ ಮನ್ನಾ ಎಂದು ಒಂದು ಕಡೆ ಹೇಳುತ್ತಾರೆ. ಸುಸ್ತಿ ಬಡ್ಡಿ ಮನ್ನಾ ಮಾಡಿದ್ದಾರೋ ಸಾಲ ಬಡ್ಡಿ ಮನ್ನಾ ಮಡಿದ್ದಾರೋ. ನಾನು ಇವತ್ತು ಕೇಳುತ್ತಿದ್ದೇನೆ, ರಸಗೊಬ್ಬರಕ್ಕೆ ಕೊಡುತ್ತಿದ್ದ ಸಬ್ಸಿಡಿಯನ್ನು ಕೊಡುತ್ತಿಲ್ಲ, ನಾನೇನು ಮಾಡಲಿ ಎಂದು ಕೈಕಟ್ಟಿ ಕುಳಿತುಕೊಳ್ಳುವುದು ಒಂದು ಕಡೆಯಾದರೆ ಮತ್ತೊಂದು ಕಡೆ ಸಾಲ ಬಡ್ಡಿ ಮನ್ನಾ ಮಾಡಿದ್ದೇವೆ ಎಂದು ಹೇಳುತ್ತಿದ್ದಾರೆ. ಮಾನ್ಯ ಸಭಾಧ್ಯಕ್ಷರೆ, ನಾನು ಇವತ್ತು ಕೇಳುತ್ತಿದ್ದೇನೆ, ಈ ಸರ್ಕಾರ ಅಧಿಕಾರಕ್ಕೆ ಬರುವುದಕ್ಕಿಂತ ಮುಂಚೆ ರಸಗೊಬ್ಬರದ ಬೆಲೆ ಏನಿತ್ತು ಇವತ್ತು ಏನು ಬೆಲ ಇದೆ? ಅವತ್ತಿನಿಂದ ಇವತ್ತಿಗೆ 600 ರಿಂದ 700 ರೂಪಾಯಿವರೆಗೆ ರಸಗೊಬ್ಬರದ ಬೆಲೆ ಹೆಚ್ಚಾಗಿದೆ. ಒಂದು ಕಡೆ ಸಾಲದ ಹೊರೆ ಕಡಿಮೆ ಮಾಡುತ್ತೇವೆ ಎಂದು ಹೇಳುತ್ತಿರಿ. ಮತ್ತೊಂದು ಕಡೆ ಬೆಲೆಯನ್ನು ಹೆಚ್ಚು ಮಾಡುತ್ತಿದ್ದೀರಿ. ಇದರಿಂದ ಯಾವ ರೈತರಿಗೂ ಕೂಡ ಅನುಕೂಲ ಆಗುತ್ತಿಲ್ಲ. ಇದನ್ನು ನೀವು ಯೋಚನೆ ಮಾಡಬೇಕು. ಮಾನ್ಯ ಸಭಾಧ್ಯಕ್ಷರೆ, ಇವತ್ತು ಏನಾಗಿದೆ ಎಂದರೆ ಇಡೀ ಕರ್ನಾಟಕದಲ್ಲಿ ರಸಗೊಬ್ಬರದ ಕಾರ್ಖಾನೆಗಳು ಏನಿದ್ದವು ಅದೆಲ್ಲಾ ಮುಚ್ಚಿದ್ದಾರೆ. ಕೇರಳದಲ್ಲಿಲ್ಲ, ಆಂಧ್ರದಲ್ಲಿಲ್ಲ, ಕಾರಣ ಏನು ಹೇಳತ್ತೀರಾ? ಕರ್ನಾಟಕಕದಲ್ಲಿರತಕ್ಕ ರಸಗೊಬ್ಬರದ ಕಾರ್ಖಾನೆಗಳನ್ನು ಏತಕ್ಕೋಸ್ಕರ ಮುಚ್ಚಿದ್ದಾರೆ?

ಶ್ರೀ ಕೆ.ಎನ್. ನಾಗೇಗೌಡ : ಒಂದು ಟನ್ ರಸಗೊಬ್ಬರಕ್ಕೆ 600 ರೂಪಾಯಿಗಳಿಂದ 700 ರೂಪಾಯಿಗಳಿಗೆ ನಿಮ್ಮ ಸರ್ಕಾರ ಬಂದಮೇಲೆ ಹೆಚ್ಚಾಗಿದೆ ಎಂದು ಹೇಳಿದ್ದೀರಿ. ದಯವಿಟ್ಟು ರಾಜ್ಯ ಸರ್ಕಾರ ರಸಗೊಬ್ಬರದ ಬೆಲೆ ನಿಗದಿ ಮಾಡಿದೆಯೂ? ನಿಗದಿ ಮಾಡಿದ್ದರೆ ಎಷ್ಟು ಮಾಡಿದ್ದಾರೆ ಹೇಳುತ್ತೀರಾ?

ಶ್ರೀಮತಿ ಪ್ರಮೀಳಾ ನೇಸರ್ಗಿ : ಇಲ್ಲಿ ಇರತಕ್ಕದ್ದು ವಂದನಾ ನಿರ್ಣಯ ಪ್ರತಿಪಾದನೆ ಮಾಡುತ್ತಾ ನಿಮ್ಮ ಕಡೆ ಸದಸ್ಯರು ಏನು ಪ್ರತಿಪಾದನೆ ಮಾಡಿದರೋ ಅದಕ್ಕೆ ಉತ್ತರ ಕೊಡುವುದಕ್ಕೆ ನಿಂತಿದ್ದೇನೆ. ಬೇರೆ ಚರ್ಚೆ ಮಾಡುವುದಕ್ಕೆ ನಿಂತಿಲ್ಲ. ಅಧ್ಯಕ್ಷರು ಅಪ್ಪಣೆ ಕೊಟ್ಟರೆ ಉತ್ತರ ಕೊಡುವುದಕ್ಕೆ ತಯಾರಿದ್ದೇನೆ. ರಾಜ್ಯಪಾಲರ ವಂದನಾ ನಿರ್ಣಯಕ್ಕೆ...

ಶ್ರೀ ಎನ್. ಕೃಷ್ಣಪ್ಪ : ರೈತರ ಬಗ್ಗೆ ಕಳವಳಿ ಮಾಡುವಾಗ...

ಶ್ರೀಮತಿ ಪ್ರಮೀಳಾ ನೇಸರ್ಗಿ : ನಾನು ಈಲ್ಡ್ ಆಗಿಲ್ಲ.

ಶ್ರೀ ಎಸ್. ಕೃಷ್ಣಪ್ಪ : ತಮ್ಮ ಪಕ್ಷ ಏನೂ ಮಾಡಲಿಲ್ಲ.

ಶ್ರೀಮತಿ ಎಸ್.ಪ್ರಮೀಳಾ ನೇಸರ್ಗಿ : ನಾನು ಈಲ್ಡ್ ಆಗಿಲ್ಲ.

(ಗೊಂದಲ)

ಶ್ರೀಮತಿ ಪ್ರಮೀಳಾ ನೇಸರ್ಗಿ : ನಾನು ನಿಂತರೆ ನಿಮಗೇನಾಗುತ್ತದೆ? ಏತಕ್ಕೆ ಹೀಗೆ ಮಾಡುತ್ತೀರಿ? ಏನಾಗುತ್ತದೆ ನಿಮಗೆ?

(ಗೊಂದಲ)

ಶ್ರೀ ವಾಟಾಳ್ ನಾಗರಾಜ್ : ಅಧ್ಯಕ್ಷರೆ, ನಾನು ಕ್ರಿಯಾಲೋಪ ಎತ್ತುತ್ತಿದ್ದೇನೆ. ಜನತಾ ದಳ ಸರ್ಕಾರ ಅಧಿಕಾರಕ್ಕೆ ಬಂದಮೇಲೆ ಮಹಿಳೆಯರ ಬಗ್ಗೆ ಬಹಳ

ಅಪಾರವಾದ ಗೌರವ ಇಟ್ಟುಕೊಂಡಿದ್ದಾರೆ. ತಾವು ಇಟ್ಟುಕೊಂಡಿದ್ದೀರಿ. ಮತ್ತು ಶೇಕಡ 30 ಭಾಗ ಮಹಿಳೆಯರು ಜಿಲ್ಲಾ ಪಂಚಾಯಿತಿಯಲ್ಲಿ ಮಹಿಳೆಯರಿಗೆ ಹೆಚ್ಚಿನ ಸ್ಥಾನವನ್ನು ಕೊಡಬೇಕೆಂದು ಹೇಳಿದ್ದಾರೆ. ಕೊಟ್ಟಾಗಿದೆ. ಆ ಕಡೆ ನಾಲ್ಕುಜನ ಮಹಿಳೆಯರು ಸದ್ಯಕ್ಕೂತೂ ಇಲ್ಲ. ಇಡೀ ಸಭೆಗೆ ಒಬ್ಬರೇ ಒಬ್ಬರು ಮಹಿಳೆ ಕಣ್ಣಿಗೆ ಕಾಣುತ್ತಿರುವುದು. ಒಬ್ಬ ಮಹಿಳೆ ಎದ್ದು ಮಾತನಾಡುತ್ತಾ ಇದ್ದರೆ ಕೇಳತಕ್ಕ ಸೌಜನ್ಯ ಜನತಾ ದಳದವರಿಗೆ ಇಲ್ಲವೆ ಈ ರೀತಿ ಮೇಲೆ ಬಿದ್ದರೆ ತಾವು ರಕ್ಷಣೆ ಕೊಡಬೇಕಾಗುತ್ತದೆ.ಚ ಇದು ಒಳ್ಳೆಯದಲ್ಲ. ಇದು ಹೆಂಗಸರ ಮೇಲೆ ಗಂಡಸರ ದಾಳಿ. ಇದನ್ನು ನಾನು ಒಪ್ಪುವುದಿಲ್ಲ. ಪ್ರಾಮಾಣಿಕವಾಗಿ ಹೆಂಗಸರ ಬಗ್ಗೆ ಗೌರವ ಇಟ್ಟುಕೊಳ್ಳಬೇಕೇ ಹೊರತು ದಾಳಿ ಮಾಡಬಾರದು. ನಾವು ದಾಳಿ ಮಾಡುವುದಕ್ಕೆ ಹೋದರೆ ನಾವು ಗಂಡಸರಲ್ಲ.

ಅಧ್ಯಕ್ಷರು : ನಮಗೇನು ಸಂತೋಷ ಅಂದರೆ ನೀವು ಈ ರೂಪದಲ್ಲಾದರೂ ಅವರನ್ನು ಹೆಣ್ಣುಮಕ್ಕಳು ಎಂದು ಒಪ್ಪಿಕೊಂಡಿರಲ್ಲ. ಯಾವಾಗಲೂ ಚಾಲೆಂಜ್ ಮಾಡುತ್ತಿದ್ದಿರಿ.

ಶ್ರೀ ವಾಟಾಳ್ ನಾಗರಾಜ್ : ಪ್ರಾಮಾಣಿಕವಾಗಿ ಅವರು ಹೆಣ್ಣುಮಗಳು.

ಶ್ರೀಮತಿ ಪ್ರಮೀಳಾ ನೇಸರ್ಗಿ : ಮಾನ್ಯ ಸಭಾಧ್ಯಕ್ಷರೆ, 224 ಜನ ಅಲ್ಲ, 2 ಸಾವಿರ ಜನ ಬಂದು ಆ ಕಡೆ ನಿಂತರೂ ಕೂಡ ಅವರ ಪ್ರಶ್ನೆಗಳಿಗೆ ಉತ್ತರ ಕೊಡುವುದಕ್ಕೆ ನಾನು ಸಿದ್ಧವಾಗಿದ್ದೇನೆ. ಅವರಾರೂ ಹೆದರಿಕೊಳ್ಳಬೇಕಾಗಿಲ್ಲ. ಅವರಿಗೇನು ಭಯ ಅಂದರೆ ಸಭಾಧ್ಯಕ್ಷರೆ, ತಪ್ಪು ಎಲ್ಲಾ ಹೊರಗಡೆ ಬಂದುಬಿಡುತ್ತದಲ್ಲ ಪ್ರಮೀಳ ಏನಾದರೂ ಮಾತನಾಡುವುದಕ್ಕೆ ಶುರು ಮಾಡಿದರೆ ಎಲ್ಲಾ ಹುಳುಕುಗಳು ಹೊರಗೆ ಬರುತ್ತದಲ್ಲ, ಹೇಗಾದರೂ ಮಾಡಿ ಇದನ್ನು ತಪ್ಪಿಸೋಣ ಅಂತ ಅವರು ಹೀಗೆ ಮಾಡುತ್ತಿದ್ದಾರೆ. ಏನೂ ಹದರಿಕೊಳ್ಳಬೇಡಿ. ಇದ್ದದ್ದನ್ನು ಇದ್ದಹಾಗೆ ಹೇಳತಕ್ಕವಳು ನಾನು ರೆಕಾರ್ಡ್‌ನಲ್ಲಿ ಇರತಕ್ಕದ್ದನ್ನು ಹೇಳತಕ್ಕವಳು.

ಏನು ಬೇಕಾದರೂ ರೆಕಾರ್ಡನ್ನು ಕೊಡುವುದಕ್ಕೆ ಸಿದ್ಧವಾಗಿದ್ದೇನೆ. ಯೋಚನೆ ಮಾಡಬೇಡಿ. ನಿಮ್ಮ ರೆರ್ಕಾಡ್ಸ್ ಇವತ್ತು ತೆಗೆದುನೋಡಿ. ನಾನು ಮುಖ್ಯಮಂತ್ರಿಗಳನ್ನು ಕೇಳುತ್ತಿದ್ದೇನೆ, ತಮ್ಮ ನಾಯಕರ ಹತ್ತಿರ ಕೇಳುತ್ತಿದ್ದೇನೆ. ಕೇರಳದಲ್ಲಲ್ಲ, ತಮಿಳುನಾಡಿನಲ್ಲಲ್ಲ, ನಮ್ಮ ಕರ್ನಾಟಕದಲ್ಲಿ ರಸಗೊಬ್ಬರ ಕಾರ್ಖಾನೆಗಳು ಮುಚ್ಚಿಹೋಗಿವೆ. ಏತಕ್ಕೆ ಮುಚ್ಚಿವೆ ಎಂದು ಕೇಳುತ್ತಿದ್ದೇನೆ. ಅದರ ಪರಿಣಾಮವಾಗಿ ಇವತ್ತು ಬೆಲೆಗಳು ಹೆಚ್ಚಾಗುತ್ತಿವೆ. ಕರ್ನಾಟಕದಲ್ಲಿ ಇರತಕ್ಕ ರೈತರಿಗೆ ರಸಗೊಬ್ಬರ ಸರಿಯಾದ ಬೆಲೆಯಲ್ಲಿ ಸಿಗುತ್ತಿಲ್ಲ. ಸಿಗುವುದಕ್ಕೆ ಸಾಧ್ಯವಿಲ್ಲ. ಇದೇ ರೀತಿ ಮುಚ್ಚುತ್ತಾ ಹೋದರೆ ಬೆಲೆಗಳು ಗಗನಕ್ಕೆ ಏರುತ್ತಾ ಹೋಗುತ್ತವೆ. ಕರ್ನಾಟಕದ ರೈತರ ಸ್ಥಿತಿ ಅಧೋಗತಿಯಾಗುತ್ತದೆ. ಆದ್ದರಿಂದ ರೈತರ ಸಾಲ ಮನ್ನಾ ಮಾಡಿಬಿಟ್ಟಿದ್ದೇವೆ ಎಂದು ಹೆಗ್ಗಳಿಕೆ ತೆಗೆದುಕೊಳ್ಳುತ್ತಿದ್ದೀರಲ್ಲ, ತಮಗೆ ಹೆಗ್ಗಳಿಕೆ ಬೇಕಾದರೆ ಮೊಟ್ಟಮೊದಲು ರಸಗೊಬ್ಬರ ಕಾರ್ಖಾನೆಗಳು ಏನು ಮುಚ್ಚಿವೆ ಅವುಗಳನ್ನೆಲ್ಲಾ ತೆಗೆಯುತಕ್ಕ ಪ್ರಯತ್ನ ಮಾಡಿ. ರಸಗೊಬ್ಬರದ ಬೆಲೆಯನ್ನು ಕಡಿಮೆ ಮಾಡುವುದಕ್ಕೆ ಪ್ರಯತ್ನವನ್ನು ಮಾಡಿ, ರೈತರಿಗೆ ಕಡಿಮೆ ಬೆಲೆಯಲ್ಲಿ ಸಿಗುವಹಾಗೆ ಮಾಡಿ, ಆಗ ನಿಮ್ಮ ಹೊಗಳಿಕೆ ತೆಗಳಿಕೆ ಆಮೇಲೆ ನೋಡೋಣ. ಇನ್ನು ಮೂರನೇ ಸಾಧನೆ....

ಶ್ರೀ ಕೆ.ಎನ್.ನಾಗೇಗೌಡ : ಒಂದು ನಿಮಿಷ ಕೇಳಿ. ಅವರು ತಪ್ಪು ಮಾಹಿತಿ ಕೊಡುತ್ತಿದ್ದಾರೆ.ರಾಜ್ಯಸರ್ಕಾರದವರು...

ಶ್ರೀಮತಿ ಪ್ರಮೀಳಾ ನೇಸರ್ಗಿ : ಸಭಾಧ್ಯಕ್ಷರೆ, ದಯವಿಟ್ಟು ತಾವು ಹೇಳಬೇಕು. ಒಂದು ಸಾರಿ ಎರಡು ಸಾರಿ ಸುಮ್ಮನಿರಬಹುದು. ನಾನು ಈಲ್ಡ್ ಆಗುವುದಿಲ್ಲ ಈಗ. ನಾನು ತಪ್ಪು ಮಾಹಿತಿ ಕೊಟ್ಟರೆ ಪ್ರಿವಿಲೈಜ್ ತನ್ನಿ. ತಪ್ಪು ಮಾಹಿತಿಯನ್ನು

ಕೊಡುವುದಕ್ಕೂ ಸಾಧ್ಯವಿಲ್ಲ, ಕೊಡುವುದೂ ಇಲ್ಲ. ಮಾನ್ಯ ಸಭಾಧ್ಯಕ್ಷರೆ, ಮೂರನೆಯ ಸಾಧನೆ ಏನು? ಬಡವರಿಗೆ ಅಕ್ಕಿಯನ್ನು ಸುಲಭದರದಲ್ಲಿ ಏಪ್ರಿಲ್ 1ನೇ ತಾರೀಖಿನಿಂದ ಕೊಟ್ಟಿದ್ದೇವೆ ಎಂದು. ಎಂಥ ಅಕ್ಕಿ ಸ್ವಾಮಿ ಕೊಟ್ಟಿರುವುದು? ರೇಷನ್ ಅಂಗಡಿಯಲ್ಲಿ ಇರತಕ್ಕ ಅಕ್ಕಿ ತಿಂದರೆ ಇನ್ನೊಂದು ತಿಂಗಳಲ್ಲಿ ನೋಡಬಹುದು ವಿಕ್ಟೋರಿಯಾ ಆಸ್ಪತ್ರೆ ಮತ್ತು ಎಲ್ಲಾ ಆಸ್ಪತ್ರೆಗಳಲ್ಲೂ ಕೂಡ ಗ್ರಾಹಕರ ಪ್ರಮಾಣ ಹೆಚ್ಚಾಗಿಹೋಗುತ್ತದೆ.

ಔಷಧಿಗಳು ಸಿಗುತ್ತಿಲ್ಲ ಎನ್ನುವುದನ್ನು ತಾವು ನೋಡಿಕೊಳ್ಳಬೇಕು. ತಾವು ಈ ಅಕ್ಕಿಯನ್ನು ತಿನ್ನಬೇಕಾಗಿತ್ತು, ಅಕ್ಕಿಯನ್ನು ತಿಂದು ನೋಡಿ ಯಾರಾದರೂ ತಿನ್ನತಕ್ಕಂತಹ ಯೋಗ್ಯ ವಾಗಿರತಕ್ಕಂತಹ ಅಕ್ಕಿ ಏನಾದರೂ ಈ ರೇಷನ್ ಸಭಾಧ್ಯಕ್ಷರೆ ನಾನು ಕೇಳುತ್ತಿದ್ದೇನೆ, ಕೇವಲ ಅನ್ನ ತಿಂದು ಬದುಕುವುದಕ್ಕೆ ಸಾಧ್ಯ ಇದೆಯಾ, ಅನ್ನದ ಜೊತೆ ಬೇಳೆ ಬೇಕು. ಬೇಳೆ ಬೆಲೆ ಏನಾಗಿದೆ ಅಂದರೆ ಗಗನಕ್ಕೆ ಏರಿದೆ ಕೆ.ಜಿ.ಗೆ 11ರಿಂದ 12ರೂ ಇದ್ದುದು ತೊಗರಿಬೇಳೆ 22ರಿಂದ 30 ರೂಪಾಯಿ ವರೆಗೆ ಹೊರಟುಹೋಗಿದೆ. ಬೇಳೆ ಒಂದು ಕೇಜಿ ಆದರೆ ಅಕ್ಕಿ ಮೂರು ಕೇಜಿ ಲೆಕ್ಕದಲ್ಲಿ ಕೊಡಬೇಕು. 10 ಕೇಜಿ ಅಕ್ಕಿ ಕಡಿಮೆ ಬೆಲೆಯಲ್ಲಿ ಕೊಡುತ್ತೀರಿ.

ಶ್ರೀ ಎಂ. ನಾರಾಯಣ ಸ್ವಾಮಿ : ಅಕ್ಕಿ ಇನ್ನೂ ಬಂದೇ ಇಲ್ಲ.

(ಗೊಂದಲ)

ಶ್ರೀ ವಾಟಾಳ್ ನಾಗರಾಜ್ : ಹೆಣ್ಣು ಮಕ್ಕಳ ಮೇಲೆ ದಾಳಿ ನಡೆಯುತ್ತಿದೆ ತಾವು ರಕ್ಷಣೆ ಕೊಡದೆ ಇದ್ದರೆ ಹೇಗೆ? ನಿಮ್ಮಿಂದ ರಕ್ಷಣೆ ಸಿಗಬೇಕು ಸಿಗುತ್ತಿಲ್ಲ. ಈ ತರಹ ದಾಳಿ ಮಾಡಿದರೆ ಸರಿಯಲ್ಲ.

ಅಧ್ಯಕ್ಷರು : ಕೊಡುತ್ತೇನೆ. ಈ ಪರಿಸ್ಥಿತಿ ಹತೋಟಿ ಮೀರುವ ಹಾಗೆ ಮಾಡುತ್ತಾ ಇರತಕ್ಕಂಥವರೇ ವಾಟಾಳ್‌ರವರು.

ಶ್ರೀ ವಾಟಾಳ್ ನಾಗರಾಜ್ : ಇಲ್ಲ,ನಾನು ಪಾಪ ಪ್ರಮೀಳಾರವರು ಆಡುತ್ತಿರುವ ಮಾತುಗಳನ್ನು ಬಹಳ ಗಂಭೀರವಾಗಿ ಕೇಳುತ್ತಿದ್ದೇನೆ.

ಅಧ್ಯಕ್ಷರು : ಪ್ರಮೀಳಾರವರು ಏನು ಹೇಳಿದರು ಅಂದರೆ, ಒಂದರಿಂದ ಅಕ್ಕಿ ಕೊಡುತ್ತೇವೆ ಎಂದು ಹೇಳಿದರು, ಈಗ 5 ದಿವಸ ಆಯಿತು ಕಳಪೆ ಅಕ್ಕಿ ಇನ್ನೂ ಕೊಟ್ಟಿಲ್ಲ ಎಂದು ಹೇಳಿದರು.

ಶ್ರೀಮತಿ ಪ್ರಮೀಳಾ ನೇಸರ್ಗಿ : ಈಗ ಕೊಟ್ಟಿರತಕ್ಕಂತಹ ಅಕ್ಕಿ ಮುಂದೆ ಕೊಡುವ ಅಕ್ಕಿ ಯಾವ ರೀತಿ ಇದೆ ಎಂದು ಹೇಳಿದರೆ ನಾವು....

ಅಧ್ಯಕ್ಷರು : ಆದರಿಂದ ಡಿಫೆನ್ಸ್ ವೀಕ್ಸ್ ಆಯಿತು.

ಶ್ರೀ ವಾಟಾಳ್ ನಗರಾಜ್ : ನನ್ನ ವಾದ ಯಾವುದು ಅಂದರೆ ಅವರು ಮುಂದೆ ಬರುವ ಅಕ್ಕಿ ಯಾವುದೆಂದು ನೋಡಿದ್ದಾರೆಯೇ? ಒಂದನೇ ತಾರೀಕು ಹಂಚುವ ಅಕ್ಕಿ ನೀವು ತಂದು ಇಟ್ಟಿರಬಹುದು ನಿಮ್ಮ ಸರ್ಕಾರದವರು ದಾಸ್ತಾನು ಮಾಡಿದ್ದಾರೆ ಅದನ್ನು ನೋಡಿದ್ದಾರೆ ಅಕ್ಕಿ ಸರಿಯಲ್ಲ ಎಂದು. ಆ ಅಕ್ಕಿ ತಿಂದರೆ ವಾಂತಿ, ಬೇದಿ, ಕಾಲರಾ ಎಲ್ಲಾ ಬರುತ್ತದೆ. ಎಂದು ಹೇಳಿ ಅವರು ನಮ್ಮ ಮುಖಕ್ಕೆ ತಿವಿಯುತ್ತಿದ್ದಾರೆ.

ಅಧ್ಯಕ್ಷರು : ತಮಗೆ ಗೊತ್ತಿದ್ದ ಹಾಗೆ ನಾವು ಇಲ್ಲಿ ಇಮ್ಯಾಜಿನೇಷಮ್ ಮೇಲೆ ಪ್ರಿಸಂಪ್ಷನ್ ಮೇಲೆ ಮಾತನಾಡುವುದಕ್ಕೆ ಅವಕಾಶವಿಲ್ಲ. ಸರ್ಕಾರದ ನೀತಿ ಪ್ರಕಾರ ಏಪ್ರಿಲ್ ಒಂದರಿಂದ ಪ್ರಾರಂಭ ಮಾಡುತ್ತಾರೆ. ಅದು ಹೋಗಿ ಸಾಂಕೇತಿಕವಾಗಿ ಪ್ರಾರಂಭ ಮಾಡಿ ಬಂದಿದ್ದಾರೆ. ಇನ್ನು ಈಗ ಹೊರಗೆ ಬಂದು ಅಕ್ಕಿ ಸರಬರಾಜು

ಆಗಿಲ್ಲ ಆದ್ದರಿಂದ ಬಾರದೆ ವಸ್ತುವಿನ ಬಗ್ಗೆ ನೀವು ಮಾತನಾಡಿದರೆ ಆಧಾರ ಇಲ್ಲದ ಮಾತಾಗುತ್ತದೆ.

ಶ್ರೀ ವಾಟಾಳ್ ನಾಗರಾಜ್ : ಅಧ್ಯಕ್ಷರೆ, ತಾವು ಏಪ್ರಿಲ್ ಒಂದು ಎಂದು ಹೇಳುತ್ತಿದ್ದೀರಿ, ಇದು ನನಗೆ ಅನುಮಾನ ಏಕೆಂದರೆ ಅದು ಮೂರ್ಖರ ದಿನ. ಅವತ್ತು ಏನಾದರೂ ಅವರು ಅಕ್ಕಿ ಕೊಟ್ಟರೆ ನಮ್ಮನ್ನು ಅಪಾಯಕ್ಕೆ ಸಿಗುಸುತ್ತಾರೆ. ಆದ್ದರಿಂದ ಬೇರೆ ದಿನ ಕೊಡಲಿ ಎಂದು ನಾನು ಹೇಳುತ್ತೇನೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಸನ್ಮಾನ್ಯ ಸಭಾಧ್ಯಕ್ಷರೇ, ನಾನು ನೋಡದೆ ಹೇಳುತ್ತೇನೆ ಎಂದು ತಾವು ದಯವಿಟ್ಟು ತಿಳಿದುಕೊಳ್ಳಬೇಡಿ. ಏಕೆಂದರೆ, ನಾವೂ ಸಹ ರೇಷನ್‌ನಲ್ಲಿ ಅಕ್ಕಿ ತೆಗೆದುಕೊಳ್ಳುವುದು. ಏಕೆಂದರೆ ಸಾರ್ವಜನಿಕರು ಏನು ತಿನ್ನುತ್ತಾರೆ ಅದನ್ನೇ ನೋಡೋಣ ಎಂದು. ಬಹಳ ಅಗ್ಗದ ಬೆಲೆಯಲ್ಲಿ ಅಕ್ಕಿ ಕೊಡುತ್ತೇವೆಂದು ಹೇಳುತ್ತಾರಲ್ಲಾ, ನಮಗೆ ಕೊಡುವ ಅಕ್ಕಿಯೇನ್ನೇ ಅವರಿಗೂ ಕೊಡುವುದು, ಅವರಿಗೆ ಕೊಡುವುದು ಕಡಿಮೆ ದರ ಅಷ್ಟೆ, ಅವರಿಗೆ ಬೇರೆ ಸ್ಪೆಷಲ್ ಅಕ್ಕಿ, ನಮಗೆ ಬೇರೆ ಸ್ಪೆಷಲ್ ಅಕ್ಕಿ ಎಂದು ರೇಷನ್ ಕಾರ್ಡಿನಲ್ಲಿ ಕೊಡುವುದಿಲ್ಲ. ಅವರಿಗೆ ಕೊಡುವ ಅಕ್ಕಿಯನ್ನೇ ನಮಗೂ ಕೊಡತಕ್ಕಂಥಾದ್ದು. ಒಂದೇ ವ್ಯತ್ಯಾಸವೆಂದರೆ ಅವರಿಗೆ ಕಡಿಮೆ ದರದಲ್ಲಿ ಕೊಡುತ್ತಾರೆ.ಅಕ್ಕಿ ಮಾತ್ರ ಒಂದೇ.

ಅಧ್ಯಕ್ಷರು : ಮೊನ್ನೆ ಮಂಗಳೂರಿನಲ್ಲಿ ಆಹಾರ ಮಂತ್ರಿಗಳು ಸ್ವಲ್ಪ ಸೂಕ್ಷ್ಮವಾಗಿ ಕ್ಲ್ಯಾರಿಫೈ ಮಾಡಿದ್ದಾರೆ ಅಂತಹ ಅಕ್ಕಿಯನ್ನು ನಾವು ಸರಬರಾಜು ಮಾಡುವ ಹಾಗಿಲ್ಲ. ಹಾಗೆ ಒಂದು ವೇಳೆ ಸಪ್ಲೈ ಮಾಡಿದರೆ ಕನ್‌ಸ್ಯೂಮರ್ಸ್ ಯಾರು ತೆಗೆದುಕೊಳ್ಳಬೇಡಿ. ಎಂದೇ ಸಾಕಷ್ಟು ಪ್ರಚಾರ ಮಾಡಿದ್ದಾರೆ. ಅಂಥದ್ದು ಇದ್ದರೆ ನಮ್ಮ ಗಮನಕ್ಕೆ ತನ್ನಿ. ಅದಕ್ಕೆ ನಾವು ಅವಕಾಶ ಕೊಡುವುದಿಲ್ಲ ಎಂದು ಬಹಳ ಕ್ಲೀಯರ್ ಆಗಿ ಮಾನ್ಯ ಮಂತ್ರಿಗಳು ಹೇಳಿದ್ದಾರೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಸಭಾಧ್ಯಕ್ಷರೆ ,ನಾವು ಹೇಳತಕ್ಕಂಥಾದ್ದು ಇವರು ಇಲ್ಲಿ ಕ್ಲಿಯರೆನ್ಸ್ ಕೊಡುತ್ತಾರೆ. ಆದರೆ ಫೇರ್ ಪ್ರೈಸ್ ಡಿಪೋನವರು ಅಲ್ಲಿ ಹೋಗಿ ಅಕ್ಕಿ ತೆಗೆದುಕೊಳ್ಳಬೇಕಾದರೆ, ನೀವು ಇದೇ ಅಕ್ಕಿಯನ್ನು ತೆಗೆದುಕೊಂಡು ಹೋದರೆ ಬೇರೆ ಸಕ್ಕರೆ ಎಲ್ಲಾ ಕೊಡುತ್ತೇವೆಂದು ಹೇಳುತ್ತಾರೆ. ಇನ್ನೂ ಇದರ ಬಗ್ಗೆ ತಾವು ಹೇಳಿದಂತೆ ಕೇವಲ ನಾಲ್ಕು ದಿನ ಆಗಿದೆ ನಿಜ. ಬೇಳೆ ಬೆಲೆ ಹೆಚ್ಚಿದೆ ಅನ್ನಕ್ಕೆ ಸಾರು ಬೇಡವೇ? ಸಾರಿಗೆ ವಗ್ಗರಣೆ ಹಾಕಬೇಕೋ ಬೋಡವ್ಹೋ? ವಗ್ಗರಣೆ ಹಾಕುವಂತಹ ಎಣ್ಣೆ ಬೆಲೆ ಗಗನಕ್ಕೆ ಹೋಗಿದೆ. ಮಕ್ಕಳಿಗೆ ಒಂದು ಚಮಚ ತುಪ್ಪ ಹಾಕೋಣ ಅಂದರೆ ತುಪ್ಪದ ಬೆಲೆ ಗಗನಕ್ಕೆ ಹೋಗಿದೆ. ಮೆಣಸಿನ ಕಾಯಿ ಬೆಲೆ ಗಗನಕ್ಕೆ ಹೋಗಿದೆ. ಅತಿಥಿಗಳು ಬರುತ್ತಾರೆ, ಪಾಯಸ ಮಾಡೋಣ ಅಂದರೆ ಗೋಡಂಬಿ ದ್ರಾಕ್ಷಿ ಅದಕ್ಕೂ ತೆರಿಗೆ, ಬೆಲೆ ಜಾಸ್ತಿ. ಸರ್ಕಾರಕ್ಕೆ ಏನಾಗಿದೆ?

ಶ್ರೀ ವಾಟಾಳ್ ನಾಗರಾಜ್ : ಅವರು ಬೇರೆ ವಿಷಯ ತೆಗೆದುಕೊಳ್ಳಲಿ, ಬರೀ ದ್ರಾಕ್ಷಿ ಗೊಡಂಬಿ ಹೇಳುವುದಕ್ಕೆ ಪ್ರಯತ್ನ ಮಾಡಿದರೆ ನಮ್ಮ ಪರಿಸ್ಥಿತಿ ಏನು? ಅದರಿಂದ ಎಲ್ಲರೂ ಈಗ ಊಟ ಮಾಡಿಕೊಂಡು ಬಂದರೂ ನಮಗೆ ಬಾಯಿ ರುಚಿಯಾಗಿ ಬಾಯಿಲ್ಲಿ ನೀರು ಬರುತ್ತದೆ.

(ಗೊಂದಲ)

ಶ್ರೀಮತಿ ಪ್ರಮೀಳಾ ನೇಸರ್ಗಿ : ಸಭಾಧ್ಯಕ್ಷರೇ,ನಾನು ಹೇಳುವುದನ್ನು ದಯವಿಟ್ಟು ತಾವು ಅರ್ಥ ಮಾಡಿಕೊಳ್ಳಬೇಕು. ಅಕ್ಕಿ ಬೆಲೆ ಕಡಿಮೆಯಾಗಿದೆ ಎಂದು ಹೇಳಿ ಬೇರೆ ಎಲ್ಲಾ ಬೆಲೆಗಳನ್ನು ಹೆಚ್ಚು ಮಾಡಿದರೆ ಆ ಅಕ್ಕಿ ಬೆಲೆ ಸನ್ಮಾನ್ಯ ನಾಗೇಗೌಡರು

ಹೇಳಿದ ಹಾಗೆ ಅಕ್ಕಿ ಬೆಲೆ ಕಡಿಮೆ ಮಾಡಿದೆ ಎಂದು ಹೇಳಿ, ಬೆಣ್ಣೆ ಎಣ್ಣೆ ಎಲ್ಲದಕ್ಕೂ ಹೆಚ್ಚು ಮಾಡಿದರು. ರಾಗಿ ಬೆಲೆ ಏನು ಮಾಡಿದಿರಿ ರಾಗಿ ತಿನ್ನುವುದು ಬೇಡವೇ? ಮಂಡ್ಯದಲ್ಲಿ ಎಲ್ಲೆಲ್ಲದ....

ಶ್ರೀ ಆರ್. ಕೃಷ್ಣಪ್ಪ : ಇನ್ನು ಸರ್ಕಾರ ಅದರ ಬಗ್ಗೆ ಯೋಚಿಸಿಲ್ಲ. ಆದರಿಂದ ತಾವು ದಯವಿಟ್ಟು ಸರ್ಕಾರದ ನ್ಯಾಯ ಬೆಲೆ ಅಂಗಡಿಗಳ ಬಗ್ಗೆ ಮಾತನಾಡಿ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಬೇಳೆ ಕೂಡ ನ್ಯಾಯಬೆಲೆ ಅಂಗಡಿಯಲ್ಲಿ ವಿತರಣೆ ಮಾಡುತ್ತಾರೆ ತಮಗೆ ಗೊತ್ತಿದೆಯೋ ಅಥವಾ ಇಲ್ಲವೋ ಆದ್ದರಿಂದ ಇದನ್ನು ನಾವು ಜನಕ್ಕೆ ಬೆಲೆ ಕಡಿಮೆ ಮಾಡಬೇಕೆಂದರೆ ಅದನ್ನು ಏನಾದರೂ ನಿಜವಾಗಿ ಮಾಡುವುದಾದರೆ ಅಕ್ಕಿ ಜೊತೆಯಲ್ಲಿ ಇವೆಲ್ಲವನ್ನೂ ಕೂಡ ವಿತರಣೆ ಮಾಡಿದರೆ ಜನರಿಗೆ ಅನುಕೂಲವಾಗುತ್ತದೆ. ಅದು ಬಿಟ್ಟು ಅಕ್ಕಿಯನ್ನು ಕಡಿಮೆ ಮಾಡುತ್ತೇವೆಂದರೆ ಹೇಗೆ? ಜೋಳಕ್ಕೆ ಇವತ್ತು ಒದ್ದಾಡುತ್ತಿದ್ದಾರೆ. ಉತ್ತರ ಕರ್ನಾಟಕದ ಜನ ರೆಲ್ಲರಿಗೂ ಕೂಡ ಜೋಳದ ರೊಟ್ಟಿ ಅವರಿಗೆ ಪ್ರತಿ ದಿನದ ಆಹಾರ. ಜೊಳದ ಬೆಲೆ ಏನಾದರೂ ಕಡಿಮೆ ಮಾಡಿ ಕೊಡುತ್ತಿದ್ದೀರಾ ಅಂದರೆ ಇಲ್ಲ. ಹೋಗಲಿ ಪಂಜಾಬಿನಲ್ಲಿ ಇರುವುದನ್ನು ನಾನು ಹೇಳುತ್ತಿದ್ದೇನೆ. ರಾಗಿ ಮುದ್ದೆ ತಿನ್ನತಕ್ಕಂತಹವರಿಗೆ ರಾಗಿ ಬೆಲೆ ಏನಾದರೂ ಕಡಿಮೆ ಬೆಲೆ ಕೊಡವುದಕ್ಕೆ ವ್ಯವಸ್ಥೆ ಮಾಡಿದ್ದೀರಾ? ಅಕ್ಕಿ ಮಾತ್ರ ಮಾಡಿದ್ದೀರಿ. ರಾಗಿ ಇಲ್ಲ, ಜೋಳ ಇಲ್ಲ, ಮಿಕ್ಕಿದ್ದು ಯಾವ ವಸ್ತುಗಳು ಇಲ್ಲ ಎಂದು ಹೇಳಿ. ಅಕ್ಕಿ ಬೆಲೆ ಬಹಳ ಕಡಮೆ ಮಾಡಿದ್ದೇವೆ ಎಂದು ಹೇಳುವುದಕ್ಕೆ ಹೋಗಬೇಡಿ. ತಾವು ಹೇಳಿದಂತಹ ಮೂರು ಹೆಗ್ಗಳಿಕೆಯೂ ಕೂಡ ಸಾರ್ವಜನಿಕರಿಗೆ ಅನ್ಯಾಯ ಆಗತಕ್ಕಂಥ ವಿಷಯ ಅದರಲ್ಲಿ ಏನೂ ಕೂಡ ನ್ಯಾಯವಾದ ಬೆಲೆ ಯಾರಿಗೂ ಸಿಕ್ಕಿಲ್ಲ, ಯಾರಿಗೂ ಕೊಡುವ ಹಕ್ಕಿಲ್ಲ. ಇದರಿಂದ ಹೊಗಳಿಕೆ ಮಾಡಿಕೊಂಡು ಅಂದರೆ ನಮ್ಮ ಸರ್ಕಾರ ಮಾಡಿದೆ ಎಂದು ಹೊಗಳಿಕೆ ಪಡೆದುಕೊಳ್ಳುವುದಕ್ಕೆ ಹೋಗಬೇಡಿ. ಹೊಗಳಿ ಹೊಗಳಿ ಎನ್ನ ಹೊನ್ನ ಸೂಲಕ್ಕೆ ಏರಿಸಬೇಡಿ ಅಂತ ಬಸವಣ್ಣನವರು ಹೇಳಿದ್ದಾರೆ.

ಹಾಗೆ ನೀವು ಮಾತನಾಡಬೇಡಿ. ಆ ರೀತಿ ಕೆಲಸ ಮಡಾಬೇಡಿ. ನಾವೇ ಆರಿಸಿದಂತಹ ನಮ್ಮ ನಾಯಕನ ಕೆಲಸವನ್ನು ಹೊಗಳಿಕೆ ರೀತಿಯಲ್ಲಿ ಮಾಡಬೇಡಿ. ಶಾಶ್ವತವಾಗಿ ಕೆಲಸ ಕೊಡಿ ಎಂದು ನಾನು ಈ ಸಂದರ್ಭದಲ್ಲಿ ಹೇಳುತ್ತೇನೆ. ಮಾನ್ಯ ಸಭಾಧ್ಯಕ್ಷರೆ, ನಮ್ಮ ಸಭಾ ನಾಯಕರಿದ್ದಾರೆ. ಅವರು 22.3.1975ನೇ ಇಸವಿಯಲ್ಲಿ ಈ ಸದನದಲ್ಲಿ ಭಾಷಣ ಮಾಡುತ್ತಾ ಒಂದು ಮಾತು ಹೇಳಿದರು. ಏನೆಂದರೆ ಆಡಳಿತದಲ್ಲಿ ಹೆಚ್ಚು ದಕ್ಷತೆ ಬರಬೇಕಾದರೆ ಮುಖ್ಯಮಂತ್ರಿಗಳಿಗೆ ಹೆಚ್ಚು ಕೆಲಸ ಇರಬಾರದು ಎಂದು. ಬರೀ ಟಿ.ಎ.ಡಿ.ಎ. ಯನ್ನು ಮಾತ್ರ ಇಟ್ಟುಕೊಂಡು ಪೋಲೀಸ್ ಇಲಾಖೆ, ಇಂಟಲಿಜೆನ್ಸ್ ಇಲಾಖೆ, ಹೈಕೋರ್ಟ್ ಸಿಎಸ್‌ಡಿ ಗಳನ್ನು ಇಟ್ಟುಕೊಂಡು ಉಳಿದ ಎಲ್ಲಾ ಖಾತೆಗಳನ್ನು ತಮಗೆ ವಿಶ್ವಾಸವಿರುವ ತಮ್ಮ ಸಹೋದ್ಯೋಗಿಗಳಿಗೆ ಕೊಟ್ಟು ಅವರು ಎಷ್ಟರ ಮಟ್ಟಿಗೆ ಕೆಲಸ ಮಾಡುತ್ತಾರೆ ಎನ್ನತಕ್ಕದ್ದನ್ನು ಮೇಲ್ವಿಚಾರಣೆ ಮಾಡುವುದು ಬಹಳ ಒಳ್ಳೆಯದು ಎಂದು ಹೇಳಿದ್ದರು. ಯಾರು ಅಧ್ಯಕ್ಷರೇ? ನಮ್ಮ ನಾಯಕರಾದ ಶ್ರೀಮಾನ್ ದೇವೇಗೌಡರು 22 ಮಾರ್ಚ್ 1975ನೆ ಇಸವಿಯಲ್ಲಿ ಇದೇ ಸದನದಲ್ಲಿ ವಿಧೇಯಕವನ್ನು ತರುವ ಸಂದರ್ಭದಲ್ಲಿ ವಿರೋಧ ಪಕ್ಷದ ನಾಯಕರಾಗಿ ಮಾತನಾಡಿದರು. ನಾನು ಇವತ್ತಿನ ದಿವಸ ಕೇಳುತ್ತಿದ್ದೇನೆ. ಅವತ್ತು ತಾವು ಹೇಳಿದ ಕೆಲಸವನ್ನು ತಾವು ಏನಾದರೂ ಮಾಡಿದ್ದೀರಾ? ಇವತ್ತು ಪೋರ್ಟ್‌ಫೋಲಿಯೋಗಳನ್ನು ಹಂಚಿದ್ದಾರೆ. ಮುಖ್ಯಮಂತ್ರಿಗಳು ಇರಿಗೇಷನ್ ಬಿಡಿಎ, ಬಿಡಬ್ಲ್ಯುಎಸ್‌ಎಸ್‌ಬಿ, ಬಿಎಮ್‌ಆರ್‌ಡಿಎ, ವಕ್ಫ್, ಕ್ಯಾಬಿನೆಟ್ ಅಫೇರ್ಸ್ ಡಿಪಿಎಆರ್ ಪೋಲೀಸ್ ಇಂಟರಿಜೆನ್ಸ್ ಫ್ರಮ್ ಹೋಂ ಎಲ್ಲಾ ತೆಗೆದುಕೊಂಡಿದ್ದಾರೆ.

ತಾವು ಅವತ್ತು ಹೇಳಿದ್ದು ಒಂದು ಇವತ್ತು ಹೋಮ್ ಇಂಟಲಿಜೆನ್ಸ್‌ನ್ನು ಸಿಂಧ್ಯರವರಿಗೆ ಕೊಟ್ಟಿದ್ದಾರೆ. ಅವತ್ತು ಅದನ್ನು ಇಟ್ಟುಕೊಳ್ಳಬೇಕೆಂದು ಹೇಳಿದರು, ಹೋಗಲಿ ಬಿಡಿ. ಮಿಕ್ಕಿದ್ದು ಏನು ಇವರು ಅವತ್ತು ಏನು ಹೇಳಿದ್ದರು, ಯಾವುದು ಬೇರೆಯವರಿಗೆ ಕೊಡಬೇಕೆಂದು ಹೇಳಿದರು, ಅದನ್ನೆಲ್ಲಾ ತಾವು ಇಟ್ಟುಕೊಂಡು ಅವತ್ತು ಹೇಳಿದ್ದು ಒಂದು ಇವತ್ತು ಆಗಿರುವುದು ಒಂದು. ಆದರಿಂದ ಅವರೇ ಹೇಳಿರುವ ಪ್ರಕಾರ ದಕ್ಷತೆ ಬರಬೇಕಾದರೆ ನಮ್ಮ ಸರ್ಕಾರದಲ್ಲಿ ಅವರು ಕ್ಯಾಬಿನೆಟ್‌ನಲ್ಲಿ ಯಾವ್ಯಾವುದು ಇದೆ ಅದನ್ನು ಇಟ್ಟುಕೊಂಡು ಮಿಕ್ಕಿದ್ದನು ಬೇರೆ ಮಂತ್ರಿಗಳಿಗೆ ಕೊಡುತ್ತಿರೋ ಕೊಡುವ ವ್ಯವಸ್ಥೆಯನ್ನು ಮಾಡುತ್ತೀರೋ ಅಥವಾ ಈ ಹಿಂದೆ ನಾನು ಹೇಳಿದ್ದು ವಿರೋಧ ಪಕ್ಷದ ನಾಯಕನಾಗಿ ಹೇಳಿದೆ, ಇವತ್ತು ನಾನು ಸಭಾ ನಾಯಕ ಆಗಿದ್ದೇನೆ. ನನಗೆ ಇಷ್ಟ ಬಂದ ಹಾಗೆ ಮಾಡಬಹುದು. ಆದರಿಂದ ನಾನು ಯಾವುದು ಬೇಕಾದರೂ ಕ್ಯಾಬಿನೆಟ್‌ನಲ್ಲಿ ಇಟ್ಟುಕೊಳ್ಳಬಹುದು ಎಂದು ಅನ್ನುತ್ತೀರೋ ತಾವೇ ಹೇಳಬೇಕು.

(ಗೊಂದಲ)

ಶ್ರೀಮತಿ ಪ್ರಮೀಳಾ ನೇಸರ್ಗಿ : ಸಭಾ ನಾಯಕರು ಈ ಸಭೆಯಲ್ಲಿ ಏನು ಮಾತನಾಡಿದ್ದರು ಅದನ್ನು ಹೇಳುತ್ತಿದ್ದೇನೆ. ಅವತ್ತು ನೀವು ಹೇಳಿದ್ದು ಒಂದು ಇವತ್ತು ನೀವು ಮಾಡುತ್ತಿರುವುದು ಒಂದು, ಇದು ಸರಿಯೇ? ಎಂದು ಪ್ರಶ್ನೆ ಮಾಡುತ್ತಿದ್ದೇನೆ. ತಮ್ಮಲ್ಲಿ ಆಭಾಷಣದ ಪ್ರತಿ ಇರಲಿಲ್ಲ ಅಂದರೆ ಈ ಭಾಷಣದ ಪ್ರತಿ ನನ್ನ ಹತ್ತಿರ ಇದೆ ನಿಮಗೆ ಕಳುಹಿಸಿಕೊಡುತ್ತೇನೆ. ತಾವು ಓದಿಕೊಳ್ಳಿ. ಇವತ್ತು ಅವರು ಏನು ಹೇಳಿದ್ದಾರೆ ಅದನ್ನು ಕೇಳುತ್ತಿದ್ದೇನೆ. ಇವತ್ತು ಆ ರೀತಿಯ ದಕ್ಷತೆ ಬರಬೇಕಾದರೆ ನಾನು ಹೇಳುತ್ತಿದ್ದೇನೆ. ಆ ಕೆಲಸವನ್ನು ತಾವೂ ಮಾಡಬೇಕು. ನಮ್ಮ ರಾಜ್ಯಪಾಲರು ತಮ್ಮ ಭಾಷಣದಲ್ಲಿ ಕನ್ನಡದ ಬಗ್ಗೆ ಒಂದು ಮಾತು ಹೇಳಿದ್ದಾರೆ ಬಹಳ ದುಃಖಕರವಾದ ಸಂಗತಿ. ಏನು ಹೇಳುತ್ತಾರೆಂದರೆ,

"My Government will vigorusly foster the use of kannada in administration at all levels. the existing schemes for the promotion of kannada are being previewed. The institutions working in this field will be strengthened."

ನಾವು ಇಲ್ಲಿ ಏನು ಕೇಳುತ್ತದ್ದೇವೆ. "vigerusly forther use of Kannada in administration"ಅಂತ ಹೇಳಿದ್ದರಲ್ಲ ಏನು ಕ್ರಮ ತೆಗೆದುಕೊಂಡಿದ್ದೀರಿ? ಹೋದವರ್ಷ ಇದೇ ಮಾರ್ಚ್ ತಿಂಗಳಿನಲ್ಲಿ ಸನ್ಮಾನ್ಯ ಮೊಯಿಲಿಯವರು ಒಂದು ಆದೇಶ ತಂದರು. ಸುತ್ತೋಲೆ ಹೊರಡಿಸಿದರು. ಅದು ಏನೆಂದರೆ ಸರ್ಕಾರದಲ್ಲಿ ಕೆಲಸದಲ್ಲಿ ಇರತಕ್ಕಂಥ 'ಸಿ' ಕ್ಲಾಸ್ ಉದ್ಯೋಗಿಗಳಿಗೆ ಕನ್ನಡ ಕಡ್ಡಾಯ ಎಂದು ಹೇಳಿ ಒಂದು ಆದೇಶವನ್ನು ಹೊರಡಿಸಿದರು. ಅದಕ್ಕೆ ಅಡ್ಡ ಬಂತು. ಮೇ ತಿಂಗಳಿನಲ್ಲಿ ಆ ಆದೇಶವನ್ನು ಹಿಂದಕ್ಕೆ ತೆಗೆದುಕೊಂಡರು. ಎಲ್ಲಾ ಕನ್ನಡದ ಅಭಿಮಾನಿಗಳು ವಿರೋಧ ಮಾಡಿದರು. ಮಾರ್ಚ್ ತಿಂಗಳಿನಲ್ಲಿ (ಸಿ) ಗ್ರೂಪ್ ಸರ್ಕಾರಿ ಉದ್ಯೋಗಿಗಳಿಗೆ ಕನ್ನಡ ಕಡ್ಡಾಯ ಎಂದು ಆದೇಶ ತಂದರು. ಮೇ ತಿಂಗಳಿನಲ್ಲಿ ಅದನ್ನು ವಿತ್‌ಡ್ರಾ ಮಾಡಿದರು.

ಶ್ರೀ ವಾಟಾಳ್ ನಾಗರಾಜ್ : ಏಪ್ರಿಲ್ ಒಂದು ಎಂದರೆ ಗೊತ್ತಾಯಿತಲ್ಲ, ಏಪ್ರಿಲ್ ಒಂದನೇ ಕನ್ನಡಿಗರನ್ನು ಮೂರ್ಖರನ್ನಾಗಿ ಮಾಡಿದರು.

ಶ್ರೀಮತಿ ಪ್ರಮೀಳಾ ನೇಸರ್ಗಿ : ಮೇ ತಿಂಗಳಲ್ಲಿ ನೋಟಿಫಿಕೇಷನನ್ನು ವಾಪಸ್ಸು ತೆಗೆದುಕೊಂಡರು. ಕಾರಣ ಏನು? ಇದು ಏನು ಆಡಳಿತ? ಎಲ್ಲಾ ಕನ್ನಡ ಸಂಘಸಂಸ್ಥೆಗಳು ಹೋದರು. ಮಂತ್ರಿಗಳನ್ನು ಕೇಳಿದರು. ಮುಖ್ಯಮಂತ್ರಿಗಳನ್ನು ಕೇಳಿದರು. ಮುಖ್ಯಮಂತ್ರಿಆಗಿದ್ದಂಥವರು ಏನು ಹೇಳಿದರೆಂದರೆ ಆಯಿತು ಇದನ್ನು ಸರಿಪಡಿಸುತ್ತೇನೆ

ಎಂದರು. ಕಾರ್ಯದರ್ಶಿಯವರಿಗೆ ಕಳುಹಿಸಿದರು. ಚೀಫ್ ಸೆಕ್ರೆಟರಿಯವರ ಹತ್ತಿರ ಹೋದರು. ಅಲ್ಲಿಗೆ ಹೋದಾಗ ಅವರು ನಾನು ಅದಕ್ಕೆ ಆದೇಶ ಹೊರಡಿಸುತ್ತೇನೆ ಎಂದು ಹೇಳಿದರು. ಆದರೆ ಏನಾಯಿತು? ನಂತರ ಹೇಳಿದರು, ಎಲೆಕ್ಷನ್ ನೋಟೀಫಿಕೇಷನ್ ಬಂದುಬಿಡ್ತು. ಆದುದರಿಂದ ಚುನಾವಣೆಯ ಆದಮೇಲೆ ಇದನ್ನು ಜಾರಿಗೆ ತರುವುದಕ್ಕೆ

ಪ್ರಯತ್ನ ಮಾಡುತ್ತೀವಿ ಎಂದು ಹೇಳುವಂತಹ ಮಾತು. ನಾನು ಕೇಳುತ್ತಿದ್ದೇನೆ, ಕರ್ನಾಟಕ ರಾಜ್ಯದಲ್ಲಿ ಇರತಕ್ಕಂಥ ಸರ್ಕಾರಿ ಉದ್ಯೋಗಿಗಳ ಬಗ್ಗೆ ತಂದ ನೋಟೀಫೀಕೇಷನ್‌ನ್ನು ಏನು ವಾಪಸ್ಸು ತೆಗೆದುಕೊಂಡಿದ್ದರು ಅದರ ಬಗ್ಗೆ ಇನ್ನು ಕೂಡ ಏನೂ ಮಾಡಲಿಲ್ಲ. "Vigorously foster the use of Kannada in administration" ಅಂತ ಹೇಳಿದ್ದಾರೆ. ಅದರ ಬಗ್ಗೆ ಆ ನೋಟಿಫೀಕೇಷನ್‌ನ್ನು ಇದುವರೆಗೂ ಕೂಡ ಕಂಡಿಲ್ಲ, ಯಾರೂ ಅದನ್ನು ನೋಡಲಿಲ್ಲ ಹೋಗಲಿ, ಅದನ್ನು ಇಲ್ಲಿ ಆಡಳಿತದಲ್ಲಿ ತರದೇ ಇದ್ದರೆ ಹೋಗಲಿ. ಕನ್ನಡದ ಸಾಹಿತ್ಯ ಮತ್ತು ಸಂಗೀತದ ಬಗ್ಗೆ ಹೇಳುವುದಾದರೆ, ಇವತ್ತು ಕೆಂಗೇರಿಯಲ್ಲಿ ಒಂದು ನೃತ್ಯಗ್ರಾಮ ಇದೆ. ಕರ್ನಾಟಕದಲ್ಲಿ ಇರತಕ್ಕಂಥ ಕನ್ನಡ ಸಾಹಿತಿಗಳು, ಸಂಗೀತಗಾರರಿಗೆ, ನೃತ್ಯಗಾರರಿಗೆ ಇವತ್ತು ದುಡ್ಡು ಕೊಡುತ್ತಾ ಇಲ್ಲ. ಆದರೆ ಈ ಸರ್ಕಾರ ಅಧಿಕಾರಕ್ಕೆ ಬಂದಮೇಲೆ ನೃತ್ಯಗ್ರಾಮದ ಹೆಸರಿನಲ್ಲಿ ಕರ್ನಾಟಕದವರಲ್ಲದವರಿಗೆ ಎರಡು ಲಕ್ಷ ರೂಪಾಯಿಯನ್ನು ತಕ್ಷಣ ಸ್ಯಾಂಕ್ಷನ್ ಮಾಡಿದ್ದಾರೆ. ಹೇಗೆ ಆಯಿತು? ಅಧಿಕಾರಿಗಳು ಬರೆದರು. ಹೆಡ್ ಆಫ್ ಡಿಪಾರ್ಟ್‌ಮೆಂಟ್ ಬರೆದರು, ಇದನ್ನು ಕೊಡುವುದಕ್ಕೆ ಬರುವುದಿಲ್ಲ ಎಂದು ಬರೆದರು, ಹಾಗೂ ಕೊಡಬಾರದು ಎಂದು ಬರೆದರು. ಏನಾಯಿತು? ಅವರು ಹೋದರು, ಅಲ್ಲಿ 2 ಲಕ್ಷ ರೂಪಾಯಿಗಳನ್ನು ಸ್ಯಾಂಕ್ಷನ್ ಮಾಡಿಸಿಕೊಂಡು ಬಂದರು.

ಅಲ್ಲಿ ನೃತ್ಯಗ್ರಾಮವಾಯಿತು. ನಾನು ಕೇಳುತ್ತೇನೆ, ನಮ್ಮಲ್ಲಿ ಅಂತಹ ಪ್ರತಿಭಾನ್ವಿತ ನೃತ್ಯಗಾರರು ಇಲ್ಲವೇ? ಯು.ಆರ್. ಕೃಷ್ಣರಾವ್, ರಾಧಾ ಶ್ರೀನಿವಾಸ್ ಅಂತಹವರು ನಮ್ಮಲ್ಲಿ ಎಷ್ಟು ಜನ ಇಲ್ಲ. ನಮ್ಮಲ್ಲಿ ಪದ್ಮಿನಿ ರಾವ್, ಉಷಾದಾತಾರ್ ಅಂತಹವರು ಎಷ್ಟು ಜನ ಇದ್ದಾರೆ. ಯಾರಿಗೂ ಇಲ್ಲ, ನೃತ್ಯ ಕಲೆಗೂ ಇಲ್ಲ, ಕರನಾಟಕದವರಿಗೂ ಇಲ್ಲ. ಆದರೆ ಬೇರೆಯವರಿಗೆ ಕೊಟ್ಟರು. ಮಧ್ಯಪ್ರದೇಶ ಬೇರೆ ಕಡೆಯಿಂದ ಬಂದವರಿಗೆ ನೃತ್ಯ ಗ್ರಾಮದ ಹೆಸರಿನಲ್ಲಿ ಅವರಿಗೆ 2 ಲಕ್ಷ ರೂಪಾಯಿಯನ್ನು ಕೊಟ್ಟರು. ಇವತ್ತು ಬಿಇಎಲ್ ಏನಾಗಿದೆ. ಅಲ್ಲಿ ಕನ್ನಡದವರನ್ನು ಪ್ರಮೋಷನ್ ಮಾಡುತ್ತೇವೆ ಎಂದು ಮಾಡಿದರು. ಅದಕ್ಕೆ ಮಾನ್ಯ ಮುಖ್ಯಮಂತ್ರಿಗದು ಕೂಡ ಪತ್ರ ಬರೆದರು. ಕೇಂದ್ರ ಸರ್ಕಾರದಕ್ಕೂ ಕೂಡ ಪತ್ರ ಬರೆದರು. ಕನ್ನಡದವರನ್ನು ಕಳುಹಿಸಿಕೊಡಿ ಹಾಗೆ ಎಂದು ಹೇಳಿದರು. ಕರ್ನಾಟಕದ 18 ಎಂಪಿಗಳು ಪ್ರಧಾನ ಮಂತ್ರಿಗಳಿಗೆ ಕಾಗದ ಬರೆದರು. ಕರ್ನಾಟಕದವರಿಗೆ ಅಲ್ಲಿ ಅಧಿಕಾರ ಕೊಡಿ ಎಂದು. ಕನ್ನಡಿಗರಿಗೆ ಅಲ್ಲಿ ಸೀನಿಯಾರಿಟಿ ಇದ್ದರೂ ಕೂಡ, ಎಫಿಷಿಯಂಟ್ ಇದ್ದರೂ ಕೂಡ ಅವರಿಗೆ ಆಡಳಿತದಕ್ಷತೆ ಇದ್ದರೂ ಕೂಡ ಕನ್ನಡದವರನ್ನು ಬಿಟ್ಟು ಬೇರೆ ಒಬ್ಬರನ್ನು ತೆಲುಗು ದೇಶದವರನ್ನು, ಇವತ್ತು ಅಲ್ಲಿ ಮುಖ್ಯ ಅಧಿಕಾರಿಯನ್ನಾಗಿ ಮಾಡಿದರು. ನಾನು ಹೇಳುತ್ತೇನೆ....

ಅಧ್ಯಕ್ಷರು : ಬಿಇಎಲ್‌ನಲ್ಲಿ ಆಗೋ ಪೋಸ್ಟಿಂಗ್ಸ್‌ಗೆ ಸ್ಟೇಟ್ ಗವರ್ನ್‌ಮೆಂಟ್‌ನವರು ಏನು ಮಾಡುತ್ತಾರೆ?

ಶ್ರೀಮತಿ ಪ್ರಮೀಳಾ ನೇಸರ್ಗಿ : ನಾನು ಹೇಳುತ್ತೇನೆ, ಅದಕ್ಕೆ ಕಾರಣ ಇವ ನಮ್ಮ ಮುಖ್ಯಮಂತ್ರಿಗಳು, ನಮ್ಮ ಎಂಪಿಗಳು ಬರೆದಂತಹ ಕಾಗದಕ್ಕೆ ಇವತ್ತು ಕೇಂ ಸರ್ಕಾರದಲ್ಲಿ ಬೆಲೆ ಇಲ್ಲ. ನಮ್ಮ ಮುಖ್ಯಮಂತ್ರಿಗಳು ಬರೆದಂತಹ ಪತ್ರಕ್ಕೆ ಪ್ರಧಾ

ಮಂತ್ರಿಗಳು ಬೆಲೆ ಕೊಡುತ್ತಾ ಇಲ್ಲ. ಕರ್ನಾಟಕದಲ್ಲಿ ಇರತಕ್ಕಂಥ ಎಲ್ಲಾ ಪಬ್ಲಿಕ್ ಅಂಡರ್ ಟೇಕಿಂಗ್ಸ್, ಸೆಂಟ್ರಲ್ ಗವರ್ನ್‌ಮೆಂಟ್ ಅಂಡರ್ ಟೇಕಿಂಗ್ಸ್ ಇವತ್ತು ಏನಾಗಿದೆಯೆಂದರೆ ಸುಮಾರು 60 ಸಾವಿರ ಕನ್ನಡಿಗರ ಸ್ಥಾನ ಖಾಲಿ ಉಳಿಯುತ್ತವೆ. ಸನ್ಮಾನ್ಯ ದೇಶಪಾಂಡೆಯವರು ಕೇಳಬೇಕು. ಕರ್ನಾಟಕದಲ್ಲಿ ಇನ್ನು ಒಂದೆರಡು ವರ್ಷಗಳಲ್ಲಿ 60 ಸಾವಿರ ಕನ್ನಡದ ಉದ್ಯಮಗಳು ಖಾಲಿ ಆಗುತ್ತವೆ. ನಾನು ನಿಮ್ಮನ್ನು ಕೇಳುತ್ತಿದ್ದೇನೆ, ತಾವು ಏನಾದರೂ ಕ್ರಮ ತೆಗೆದುಕೊಳ್ಳುತ್ತೀರಾ? ಕರ್ನಾಟಕದಲ್ಲಿ ಇರತಕ್ಕಂಥ ಜನಗಳನ್ನು, ಕರ್ನಾಟಕದ ಪ್ರಜೆಗಳನ್ನು ಕನ್ನಡದ ಜನಗಳನ್ನು ಅಲ್ಲಿ ಕೆಲಸಕ್ಕೆ ತೆಗೆದುಕೊಳ್ಳುವುದಕ್ಕೆ ಕ್ರಮ ತೆಗೆದುಕೊಳ್ಳುತ್ತೀರಾ? ಸರೋಜಿನಿ ಮಹಿಷಿಯವರ ಒಂದು ರಿಪೋರ್ಟ್ ಬಂತು. ಆ ಪ್ರಕಾರವಾಗಿ ತಾವು ಏನಾದರೂ ಕ್ರಮ ತೆಗೆದುಕೊಂಡು ಕನ್ನಡಿಗರಿಗೆ ಆದ್ಯತೆಯ ಮೇಲೆ ಕೆಲಸ ದೊರೆಯುವಂತೆ ಮಾಡಿಕೊಡುತ್ತೀರಾ? ಇದರ ಬಗ್ಗೆ ಏನಾದರೂ ಯೋಜನೆಯನ್ನು ಹಾಕಿಕೊಂಡಿದ್ದೀರಾ ಎಂದು ಪ್ರಶ್ನೆಯನ್ನು ಕೇಳಬೇಕಾಗಿದೆ. ಒಂದು ಕಡೆ ಆಂಧ್ರದವರು ಪ್ರಭಾವಶಾಲಿಗಳಾಗಿ ಕರ್ನಾಟಕದಲ್ಲಿ ತಮ್ಮವರನ್ನೇ ಹಾಕಿಸಿಕೊಂಡರು. ಇನ್ನು ಮಂಗಳೂರಿನ ಕೊಂಕಣ ರೈಲ್ವೆ ಏನಾಗುತ್ತದೆ. ಮಂಗಳೂರು ಕುಂದಾಪುರ ರೈಲ್ವೆಯಲ್ಲಿ....

ಶ್ರೀ ಎಂ. ನಾರಾಯಣ ಸ್ವಾಮಿ : ಮಾನ್ಯ ಅಧ್ಯಕ್ಷರೇ, ಚರ್ಚೆ ಬೇರೆ ಕಡೆ ಹೋಗುತ್ತಿದೆ, ಇದು ಕೇಂದ್ರ ಸರ್ಕಾರದ ಕಡೆ ಹೋಗುತ್ತಿದೆ, ರಾಜ್ಯ ಸರ್ಕಾರದ ಕಡೆ ತಿರುಗಿಸಬೇಕು.

ಶ್ರೀಮತಿ ಪ್ರಮೀಳಾ ನೇಸರ್ಗಿ : ಕರ್ನಾಟಕದಲ್ಲಿ ಕನ್ನಡ ಏನಾಗುತ್ತಿದೆ ಎಂದು ಹೇಳಬೇಕಾಗುತ್ತದೆ. ಕುಂದಾಪುರದಲ್ಲಿ ಉಡುಪಿಯಲ್ಲಿ ರೈಲು ಮಾರ್ಗವನ್ನು ಹಾಕಿದ್ದಾರೆ. ಸನ್ಮಾನ್ಯ ಜಾಫರ್ ಶರೀಫ್‌ರವರು ಕರ್ನಾಟಕಕ್ಕೆ ರೈಲು ಕೊಟ್ಟಿದ್ದಾರೆ. ಆದರೆ ನಮ್ಮ ಕರ್ನಾಟಕದ ಜನರ ಭೂಮಿಗಳನ್ನು ಅಕ್ವೈರ್ ಮಾಡಿದರು. ನಮ್ಮ ಜನಗಳನ್ನು ಮೂಲೆಗೆ ಒತ್ತಿದರು. 4 ಸಾವಿರ ರೂಪಾಯಿ ಪರಿಹಾರ ಕೊಡುವ ಕಡೆ ಕರ್ನಾಟಕದ ಜನ 200, 300 ರೂಪಾಯಿಗೆ ಒಪ್ಪಿ ನಮಗೆ ರೈಲ್ವವೆ ಬರಲಿ ಎಂದು ಸಂತೋಷದಿಂದ ಜಮೀನು ಕೊಟ್ಟರು. ಆದರೆ ಆ ರೈಲ್ವೆ ಸ್ಟೇಷನ್‌ನಲ್ಲಿ ಕನ್ನಡಿಗರಿಗೆ ಜಾಗ ಇಲ್ಲ. ಅಲ್ಲಿ ಐದು ಅಂಗಡಿಗಳು ಇದ್ದರೆ ಒಬ್ಬರೂ ಕನ್ನಡಿಗರು ಇಲ್ಲ. ಅಧಿಕಾರಿಗಳನ್ನು ಅಲ್ಲಿ ಕನ್ನಡಿಗರನ್ನು ಹಾಕುತ್ತಾ ಇಲ್ಲ. ಅಲ್ಲಿ 4 ಸಾವಿರ ಎಂಪ್ಲಾಸ್ ಇದ್ದರು. 6 ಸಾವಿರ ಸಂಬಳ ತೆಗೆದುಕೊಳ್ಳುತ್ತಿದ್ದರು. ಆ ಕನ್ನಡಿಗರನ್ನೆಲ್ಲಾ ಮನೆಗೆ ಕಳುಹಿಸಿದ್ದಾರೆ. ಅಲ್ಲಿ ಬೇರೆಯವರನ್ನು ತಂದರು. ಸಂಬಳ 1200 ರೂ. ಮಾಡಿದರು. ಈಗ 900 ರೂ. ಮಾಡಿದ್ದಾರೆ.

ಅಧ್ಯಕ್ಷರು : ಅಲ್ಲಿಗೆ ಏನು ಮಾಡುತ್ತಾರೆಂದರೆ ಫ್ಲಾಟ್‌ಫಾರಂ ಮತ್ತು ರೆಸ್ಟೋರೆಂಟ್‌ಗೆ ಟೆಂಡರ್ ಕರೆಯುತ್ತಾರೆ. ಟೆಂಡರ್ ಕರೆದಾಗ ಯಾರು ಹೈಯೇಸ್ಟ್ ಬೆಡ್ ಮಾಡುತ್ತಾರೆ ಅವರಿಗೆ ಹೋಗುತ್ತದೆ.

ಶ್ರೀ ವಾಟಾಳ್ ನಾಗರಾಜ್ : ಟೆಂಡರ್ ಫಾರಂ ಕೊಡುವುದರಲ್ಲಿ ಅನ್ಯಾಯ ನಡೆಯುತ್ತಿದೆ. ನೀವು ಒಂದು ಮನವಿಯನ್ನು ಸ್ವೀಕಾರ ಮಾಡಬೇಕು. ಕುಂದಾಪುರದಲ್ಲಿ ಆಗಲಿ, ಉಡುಪಿಯಲ್ಲಾಗಲಿ, ಮಂಗಳೂರಿನಲ್ಲಿ ಆಗಲಿ, ಇದು ಸ್ಪಷ್ಟ, ಅಲ್ಲಿ ಟೆಂಡರ್‌ಫಾರಂ ಕೊಡುತ್ತಾ ಇಲ್ಲ. ಅಲ್ಲಿ ಮಲೆಯಾಳಿಗಳು ಬುದ್ಧಿವಂತರಾಗಿ ಫಾರಂ ತೆಗೆದುಕೊಳ್ಳುತ್ತಿದ್ದಾರೆ.

ಅಧ್ಯಕ್ಷರು : ಟೆಂಡರ್ ಫಾರಂ ಅಲ್ಲಿ ಸಿಕ್ಕುತ್ತಾ ಇಲ್ಲ ಎಂದು ಹೇಳಬಹುದು.

ಶ್ರೀ ವಾಟಾಳ್ ನಾಗರಾಜ್ : ಅದನ್ನು ಕೊಡುತ್ತಾ ಇಲ್ಲ. ಕೊಡದೇ ಗುಟ್ಟಾಗಿ ಅನ್ಯಾಯ ಮಾಡಿ ಫಾರಂ ತೆಗೆದುಕೊಂಡು ಹೋಗುತ್ತಾರೆ. ಈ ರೀತಿಯಾಗಿ ಅಲ್ಲಿ ಮೋಸ ನಡೆಯುತ್ತಿದೆ. ಮತ್ತು ಒಂದು ಅಂಗಡಿಗಳು ಸಹ ಕನ್ನಡಿಗರದ್ದು ಇಲ್ಲ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಟೆಂಡರ್ ಫಾರಂ ಹಾಗಿದ್ದಲ್ಲಿ, ಮಂಗಳೂರಿನಿಂದ ಅಲ್ಲಿ ಹೋಗುವವರೆಗೆ ಮಲೆಯಾಳಿ ಹಾಡುಗಳನ್ನು ಕೇಳಬೇಕು. ನಮ್ಮ ಕರ್ನಾಟಕದಲ್ಲಿ ಕನ್ನಡ ಹಾಡು ಕೇಳತಕ್ಕಂಥ ಸುಯೋಗ ಬೇಡವೇ? ಅದು ಕೂಡ ಇಲ್ಲ. ಇದು ಉತ್ತರದ ಕಡೆ. ಇನ್ನು ಬೆಳಗಾಂನಲ್ಲಿ ಮಾನ್ಯ ವಾಟಾಳ್ ನಾಗರಾಜ್‌ರವರು ಅಲ್ಲಿ ಏನಾಗಬಹುದು ಎಂದು ಹೇಳಿದ್ದಾರೆ. ತಮಿಳುನಾಡಿನಲ್ಲಿ ಏನಾಗುತ್ತಿದೆ, ಕನ್ನಡ ಜನರು ಏನಾಗುತ್ತಿದ್ದಾರೆ ಎಂದು ತಾವು ನೋಡುತ್ತಿದ್ದೀರಿ. ನಮ್ಮ ಮುಖ್ಯಮಂತ್ರಿಗಳು ಕರ್ನಾಟಕದಿಂದ ಎಂದರೆ ಸರ್ಕಾರದ ವತಿಯಿಂದ ಯಾವುದಾದರೂ ಪತ್ರವನ್ನು ಪ್ರಧಾನ ಮಂತ್ರಿಗಳಿಗೆ ಬರೆದರೆ ಅದಕ್ಕೆ ಆದ್ಯತೆ ಕೊಡಬೇಕಾದ್ದು ಅವರ ಕರ್ತವ್ಯ. ಇದರ ಬಗ್ಗೆ ಕರ್ನಾಕದಲ್ಲಿರತಕ್ಕಂಥ ಎಲ್ಲಾ ಶಾಸಕರ ಒತ್ತಾಯ. ಇದನ್ನು ನೆಗ್ಲೆಟ್ ಮಾಡುವುದಕ್ಕೆ ಆಗುವುದಿಲ್ಲ. ಅದು ನಮ್ಮನ್ನು ಅವಮಾನ ಮಾಡಿದ ಹಾಗೆ ಆಗುತ್ತದೆ. ಆ ಕೆಲಸವನ್ನು ಮಾಡಬೇಕಾಗುತ್ತದೆ. ಅದಕ್ಕೆ ಆ ವಿಷಯವನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಒಂದು ಕಡೆ ಪ್ರಧಾನ ಮಂತ್ರಿಯವರು ಹೇಳಿದರು. ನಮ್ಮ ಮುಖ್ಯಮಂತ್ರಿಯವರ ಕೈಕೆಳಗೆ ಇರತಕ್ಕಂಥ ಅಧಿಕಾರಿಗಳು ಇವತ್ತು ಏನು ಮಾಡುತ್ತಿದ್ದಾರೆ. ಹೋಗಲಿ ಅವರಾದರೂ ಅವರ ಮಾತನ್ನು ಕೇಳುತ್ತಿದ್ದಾರೆಯೇ? ಅದನ್ನು ತಾವು ಇವತ್ತು ನೋಡಬೇಕಾಗುತ್ತದೆ. ನಾನು ಮಾನ್ಯ ಮುಖ್ಯಮಂತ್ರಿಗಳಿಗೆ ಒಂದು ಪತ್ರ ಬರೆದೆ. ಏನೆಂದರೆ ನನ್ನ ಕ್ಷೇತ್ರದಲ್ಲಿ ಒಂದು ಸಾರಾಯಿ ಅಂಗಡಿ ಇದೆ, ಅದರ ಎದುರುಗಡೆ ಆಸ್ಪತ್ರೆ ಇದೆ. ಆದ್ದರಿಂದ ಆ ಅಂಗಡಿಯನ್ನು ಎತ್ತಿಸಬೇಕು ಎಂದು. ತಕ್ಷಣ ಮುಖ್ಯಮಂತ್ರಿಗಳು ಆದೇಶ ಕೊಟ್ಟರು. ಅದನ್ನು ಶಾಶ್ವತವಾಗಿ ಎತ್ತಬೇಕೆಂದು ಡೆಪ್ಯೂಟಿ ಕಮಿಷನರ್‌ಗೆ ಪತ್ರ ಬರೆದರು. ಆದರೆ ಆ ಡಿ.ಸಿ. ಏನು ಮಾಡಿದ್ದಾರೆಂದರೆ ಇವತ್ತಿನ ದಿವಸ ಮಾನ್ಯ ಮುಖ್ಯಮಂತ್ರಿಗಳು ಕೊಟ್ಟಂಥ ಆದೇಶಕ್ಕೆ ಬೆಲೆ ಕೊಡದೆ, ಶಾಸಕರಾಗಿ ಹೇಳಿದಂಥ ಮಾತುಗಳಿಗೆ ಬೆಲೆ ಕೊಡದೆ ಏಕೆ ಅದನ್ನು ಸ್ಥಳಾಂತರಿಸಬೇಕು ಎಂದು ಶೋ ಕಾಸ್ ನೋಟೀಸ್ ಕೊಟ್ಟಿದ್ದಾರೆ. ಇನ್ನೊಂದು ಜಾಗಕ್ಕೆ ಏಕೆ ಹೋಗಬೇಕು. ಇದು ನಮ್ಮ ಮುಖ್ಯಮಂತ್ರಿಗಳು ಕೊಟ್ಟಂತಹ ಪತ್ರಕ್ಕೆ ಅವರ ಸಬ್ ಆರ್ಡಿನೇಟ್ಸ್ ಹೊರಡಿಸಿದರು. ತಾವು ಬೆಳಿಗ್ಗೆ ಹೇಳಿದ್ದೀರಿ. ಅಖಿಲ ಭಾರತ ಮಹಿಳಾ ವಕೀಲಾ ವೇದಿಕೆಗೆ 15 ಸಾವಿರ ರೂಪಾಯಿಗಳನ್ನು ಕೊಡಬೇಕು ಎಂದು ಆದೇಶ ಹೊರಡಿಸಿದರು. ಇದನ್ನು ಹೇಳುವುದಕ್ಕೆ ನನಗೆ ಬಹಳ ದುಃಖವಾಗುತ್ತದೆ. 31ನೇ ತಾರೀಖಿನ ದಿವಸ ಕಾನೂನಿನ ಕಾರ್ಯದರ್ಶಿಗಳು ಕೂಡ ಕೊಡಬೇಕು ಎಂದು ಬರೆದರು. ಆದರೆ ಫೈನಾನ್ಸ್ ಡಿಪಾರ್ಟ್‌ಮೆಂಟ್‌ನಲ್ಲಿ ನೋಟ್ ಹಾಕುತ್ತಾರೆ. ಅವರಿಗೆ ಕೊಡಬೇಕಾದಂತಹ ಅಗತ್ಯ ಇಲ್ಲ ಎಂದು.

5.10 ಪಿ.ಎಂ

ಇವರಿಗೆ ಏಕೆ ಕೊಡಬೇಕು? ಇವರಿಗೆ ಏನು ಯೋಗ್ಯತೆ ಇದೆ? ಎಂದು ಹೇಳುತ್ತಾರೆ. ಕಾನೂನು ಮಂತ್ರಿಗಳು ಕೊಟ್ಟ ಆದೇಶವನ್ನು ಧಿಕ್ಕರಿಸಿ, ನ್ಯಾಯಾಂಗದ ಅಧಿಕಾರ ವರ್ಗದವರನ್ನು ಧಿಕ್ಕರಿಸಿ, ಫೈನಾನ್ಸ್ ಡಿಪಾರ್ಟ್‌ಮೆಂಟ್‌ನಲ್ಲಿ ಅದನ್ನು 5 ಸಾವಿರ ರೂ.ಗಳಿಗೆ ಕಡಿಮೆ ಮಾಡಿದರು. ಅಷ್ಟೇ ಅಲ್ಲ, ಇನ್ನು ಮೂರು ವರ್ಷಗಳು ಗ್ರಾಂಟ್ ಕೇಳಬಾರದೆಂಬ ಷರತ್ತಿಗೆ ಒಳಪಡಿಸಿ ಇದನ್ನು ಬಿಡುಗಡೆ ಮಾಡಿದರು. ಇದರ ಬಗ್ಗೆ ನಾನು ಕೇಳುತ್ತೇನೆ. ಕರ್ನಾಟಕದಲ್ಲಿ ಮಹಿಳೆಯರಿಗೆ, ಮಹಿಳಾ ವಕೀಲರುಗಳಿಗೆ ಕೊಡತಕ್ಕಂಥ ಪಾಶಸ್ತ್ಯ ಇದೇನಾ? ಕಾನೂನು ಮಂತ್ರಿಗಳು ಹೇಳಿದಂತಹ ಮಾತಿಗೆ ಅಧಿಕಾರವಿಲ್ಲವೇ? ಈ ರೀತಿ ತೆಗೆಯುವಂತಹ ಕೆಲಸವನ್ನು ಅಧಿಕಾರಿಗಳು

ಮಾಡಬಹುದಾ? ನಿಮ್ಮ ಅಧಿಕಾರಿಗಳು ನೀವು ಹೇಳಿದ ಮಾತಿಗೆ ಬೆಲೆ ಕೊಡುತ್ತಿಲ್ಲ. ನೀವು ಪೇಳಳಿದೆ ಮಾತಿಗೆ ಕೇಂದ್ರಸರ್ಕಾರದಲ್ಲಿ ಬೆಲೆ ಇಲ್ಲ, ಈ ರೀತಿಯಾದರೆ ಇನ್ನು ಪ್ರಜೆಗಳ ಸ್ಥಿತಿ ಏನಾಗಬೇಕು? ಎಂಬ ಚಿತ್ರವನ್ನು ತಮ್ಮ ಮುಂದೆ ಇಟ್ಟಿದ್ದೇನೆ. ತಾವು ಇವರ ಬಗ್ಗೆ ಯೋಚನೆ ಮಾಡಬೇಕು. ಇನ್ನು ಮದ್ಯಪಾನ ಸಂಯಮ ಮಂಡಳಿ, ಹಾಗೆಂದರೆ ಮದ್ಯಪಾನವನ್ನು ಜಾರಿಗೆ ತರುವುದು ಎಲ್ಲಾ ಕುಡಿಯಿರಿ ಎಂದು ಹೇಳುವುದು. ಅದನ್ನು ಸಂಯಮ ಮಾಡುವುದಕ್ಕೆ ಈ ಮಂಡಳಿಯನ್ನು ತಂದಿರುವುದು. ಈ ಮದ್ಯಪಾನ ಸಂಯಮ ಮಂಡಳಿಗೆ ಒಬ್ಬ ಅಧ್ಯಕ್ಷರನ್ನು ನೇಮಕ ಮಾಡುವುದು. ಸನ್ಮಾನ್ಯ ವೀರಪ್ಪ ಮೊಯಿಲಿಯವರು ಇದ್ದಾಗ ಒಂದು ಆದೇಶವನ್ನು ಹೊರಡಿಸಿದರು. ಅದರಲ್ಲಿ ಅದನ್ನು ಮೇಲ್ದರ್ಜೆಗೆ ಏರಿಸಿದ್ದೇನೆಂದು ಹೇಳಿ ಕ್ಯಾಬಿನೆಟ್ ಮಿನಿಸ್ಟರ್ ದರ್ಜೆಗೇರಿಸಿದರು. ಆಗ ಅಧ್ಯಕ್ಷರ ದರ್ಜೆ ಮಿನಿಸ್ಟರ್ ಗ್ರೇಡ್ ಆಯಿತು.

ತಾವು ಮಾಡಿಕೊಳ್ಳಿ, ನಾವೇನು ಬೇಡವೆನ್ನುವುದಿಲ್ಲ. ಈ ಮದ್ಯಪಾನ ಸಂಯಮ ಮಂಡಳಿಗೆ ಕೊಟ್ಟಿರುವಂತಹ ಗ್ರಾಂಟ್ 10 ಲಕ್ಷ ರೂ.ಗಳು ಇದರಲ್ಲಿ ಎಂಟೂವರೆ ಲಕ್ಷ ಮತ್ತು ಒಂದೂವರೆ ಲಕ್ಷ ರೂ.ಗಳು. ಎಲ್ಲಾ ಸಿಬ್ಬಂದಿವರ್ಗದವರಿಗೆ ಹಿಂದಿನ ಸರ್ಕಾರದವರು ಇಟ್ಟಿದ್ದಾರೆ. ಈಗ ಸರ್ಕಾರ ಕೂಡ ಅದನ್ನು ಚಾಚು ತಪ್ಪದೆ 10 ಲಕ್ಷ ರೂ.ಗಳನ್ನು ಮದ್ಯಪಾನ ಸಂಯಮ ಮಂಡಳಿಗೆ ಕೊಡುತ್ತಿದೆ. ಈ ಮಂಡಳಿ ಏಕೆ ಬೇಕು? ಕ್ಯಾಬಿನೆಟ್ ದರ್ಜೆ ಏಕೆ ಬೇಕು? ಅದರಿಂದ ಉಪಯೋಗವಿಲ್ಲ. ಅದನ್ನು ರದ್ದು ಮಾಡಿ. ಇಂತಹ Posigಳು ಹಲವಾರು ಇವೆ. ಇವತ್ತು ಇನ್ನೂರು ಕೋಟಿ ರೂ.ಗಳಷ್ಟು ಟ್ಯಾಕ್ಸ್‌ನ್ನು ಹಾಕಿದ್ದೀರಿ. ಇಂಥದ್ದನ್ನು ರದ್ದು ಮಾಡಿದರೆ ಟ್ಯಾಕ್ಸ್ ಹಾಕುವುದೇ ಬೇಕಾಗುವುದಿಲ್ಲ. ಜನರಿಗೂ ಒಳ್ಳೆಯದಾಗುತ್ತದೆ. ಆ ಕಾರಣಕ್ಕಾಗಿ ನಾನು ಈ ಸಂದರ್ಭದಲ್ಲಿ ಸರ್ಕಾರದ ಗಮನಕ್ಕೆ ತರುತ್ತಿದ್ದೇನೆ. ಇವತ್ತು ಕಾವೇರಿಯ ನೀರು ಮಹಿಳೆಯರಿಗೆ ಅತ್ಯಂತ ಅವಶ್ಯಕವಾಗಿ ಬೇಕಾಗಿರುವಂಥಾದ್ದು. ಇದನ್ನು ನಾನು ಏಕೆ ಹೇಳುತ್ತಿದ್ದೇನೆಂದರೆ ರಾತ್ರಿ ವೇಳೆಯಲ್ಲಿ ಹೋಗಿ ನೀರು ತರುವವರು ನಾವು, ಅಡಿಗೆ ಮಾಡುವವರು ನಾವು, ನೀರು ಇಲ್ಲದೆ ಅಡಿಗೆ ಮಾಡಲು ಆಗುವುದಿಲ್ಲ. ಅದಕ್ಕೋಸ್ಕರ ನೀರಿನ ಬಗ್ಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಬೇಕು.

ಶ್ರೀ ವಾಟಾಳ್ ನಾಗರಾಜ್ : ನೀವು ಏನೇ ಆಗಿದ್ದರೂ ಪತಿಯೆ ಪರಮ ದೈವ.

ಶ್ರೀಮತಿ ಪ್ರಮೀಳ ನೇಸರ್ಗಿ : ಮಾನ್ಯ ವಾಟಾಳ್ ನಾಗರಾಜ್‌ರವರೆ, ಪತಿಯೆ ಪರಮ ದೈವಕ್ಕೆ ಮುಂಚೆ ಮಾತೃ ದೇವೋಭವ ಎಂದು ಹೇಳಿದ್ದಾರೆ.

ಅಧ್ಯಕ್ಷರು : ನಾರಾಯಣ ಸ್ವಾಮಿಯವರೆ, ನೀವು ಆಗಾಗ ಎದ್ದು ನಿಲ್ಲುತ್ತಿದ್ದರೆ ಜಾಲಪ್ಪನವರ ಮೇಲೆ ಕ್ರಮ ತೆಗೆದುಕೊಳ್ಳಬೇಕಾಗುತ್ತದೆ.

ಶ್ರೀ ಎಂ. ನಾರಾಯಣ ಸ್ವಾಮಿ : ಹೆಣ್ಣುಮಕ್ಕಳನ್ನು ನಾವು ಗೌರವದಿಂದ ನೋಡುತ್ತೇವೆ. ನಾವೆಲ್ಲ ನಿಮ್ಮ ಮಕ್ಕಳಲ್ಲವೆ?

ಶ್ರೀಮತಿ ಪ್ರಮೀಳ ನೇಸರ್ಗಿ : ಮಕ್ಕಳ ತರಹ ಇರ್ರೀ, ಬೇರೆ ತರಹ ಆಗಬೇಡಿ ಎಂದು ನಾವು ಹೇಳೋದು. ಮಾನ್ಯ ಅಧ್ಯಕ್ಷರೆ, ನೀವು ಕಾಲು ಗಂಟೆ ಮಾತನಾಡುವುದಕ್ಕೆ ನನಗೆ ಅವಕಾಶ ಕೊಟ್ಟಿದ್ದೀರಿ ಆದುದರಿಂದ, ಮಾತನಾಡುವುದಕ್ಕೆ ಅವಕಾಶ ಮಾಡಿ ಕೊಡಿ. ಮಾನ್ಯ ನಾಣಯ್ಯನವರು ಒಂದು ಮಾತು ಹೇಳಿದ್ದು ಜ್ಞಾಪಕಕ್ಕೆ ಬಂತು. ಏನೆಂದರೆ, ಇಬ್ಬರು ಹೆಣ್ಣು ಮಕ್ಕಳು ಇರುವ ಕಡೆ ಬೇರೆ ಬೇರೆ ಅಭಿಪ್ರಾಯಗಳು ಇರುತ್ತವೆ ಎಂದು, ಇದು ಸರಿಯಾಗಿರುವುದಿಲ್ಲ. ಇದನ್ನು ಪೇಪರ್‌ನಲ್ಲಿ ಓದಿದೆ. ಇವತ್ತು ವಿಧಾನಸಭೆಯಲ್ಲಿ ನಾವು ಹೆಣ್ಣು ಮಕ್ಕಳು 7 ಜನರು ಇದ್ದೇವೆ. ನಮ್ಮಲ್ಲಿ ಬೇಧ ಇಲ್ಲ, ಭಿನ್ನಾಭಿಪ್ರಾಯವಿಲ್ಲ, ನಾವೆಲ್ಲ ಒಗ್ಗಟ್ಟಾಗಿ ಕೆಲ

ಮಾಡುತ್ತಿದ್ದೇವೆ. ನಾವೆಲ್ಲಾ ಹೆಣ್ಣು ಮಕ್ಕಳು 7 ಜನರು ಇದ್ದೇವೆ. ನಮ್ಮಲ್ಲಿ ಭೇದವಿಲ್ಲ, ಭಿನ್ನಾಭಿಪ್ರಾಯವಿಲ್ಲ, ನಾವೆಲ್ಲ ಒಗ್ಗಟ್ಟಾಗಿ ಕೆಲಸ ಮಾಡುತ್ತಿದ್ದೇವೆ. ನಾವೆಲ್ಲಾ ಹೆಣ್ಣು ಮಕ್ಕಳು ಒಗ್ಗಟ್ಟಿಗೆ ಅವರ ಏಳಿಗೆಗೆ, ಕೆಲಸ ಮಾಡುತ್ತಿದ್ದೇವೆ.

ಶ್ರೀ ವಾಟಾಳ್ ನಾಗರಾಜ್ : ನಾವು 224 ಜನ ಶಾಸಕರು ಹೊಡೆದಾಟಬೇಕೆಂದರೆ ಹೆಣ್ಣು ಮಕ್ಕಳೊಬ್ಬಳು ಸಾಕು.

ಅಧ್ಯಕ್ಷರು : ಅವರು ಏನು ಹೇಳುತ್ತಿದ್ದಾರೆಂದು ನೀವು ಕೇಳಿಸಿಕೊಂಡಿರಾ? 224 ಜನರು ಹೊಡೆದಾಡುವುದಕ್ಕೆ ಒಬ್ಬ ಹೆಣ್ಣುಮಗಳು ಸಾಕು ಎಂದು ಹೇಳುತ್ತಿದ್ದಾರೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಅದು ಇತಿಹಾಸ. ಚರಿತ್ರೆಯಲ್ಲಿ ಹೇಳಿದ್ದು ಬೇಡ. ಅಂತಹ ಕ್ಲಿಯೋಪಾತ್ರಾ ಬಂದರೆ ಆಗುತ್ತದೆ. ಈ ಸದನದಲ್ಲಿ ಅದು ಆಗುವುದಕ್ಕೆ ಸಾಧ್ಯವಿಲ್ಲ. ಅಂತಹ ಯಾವ ಹೆಣ್ಣುಮಗಳು ಚುನಾಯಿತಳಾಗಿ ಇದುವರೆಗೆ ಇಲ್ಲಿಗೆ ಬಂದಿಲ್ಲವೆಂದು ನಾನು ಆಶ್ವಾಸನೆ ಕೊಡುತ್ತಿದ್ದೇನೆ. ಅದರ ಬಗ್ಗೆ ಯೋಚನೆ ಬೇಡ. ಒಂದು ವೇಳೆ ಆ ರೀತಿಯ ಪರಿಸ್ಥಿತಿ ಬಂದರೆ ನಿಮಗೆಲ್ಲಾ ಸಮಾಧಾನ ಮಾಡಿ ಸರಿಯಾದ ದಾರಿಗೆ ನಿಮ್ಮನ್ನು ತರುವುದಕ್ಕೆ ಕಾರ್ಯಕ್ರಮ ಹಾಕಿಕೊಳ್ಳುತ್ತೇವೆ, ಯೋಚಿಸಬೇಡಿ.

ಶ್ರೀ ವಾಟಾಳ್ ನಾಗರಾಜ್ : ಹೆಣ್ಣು ಮಾಯೆ ಎಂಬರು, ಹೆಣ್ಣು ಮಾಯೆಯಲ್ಲ ಇದನ್ನು ನೀವು ಒಪ್ಪುತ್ತೀರಾ?

ಶ್ರೀಮತಿ ಪ್ರಮೀಳಾ ನೇಸರ್ಗಿ : ಗಂಡು ಮಾಯೆ ಎಂಬರು, ಗಂಡು ಮಾಯೆಯಲ್ಲ, ಆತ್ಮಕ್ಕೆ ಹೆಣ್ಣೂ ಇಲ್ಲ, ಗಂಡೂ ಇಲ್ಲ.

ಶ್ರೀ ವಾಟಾಳ್ ನಾಗರಾಜ್ : ಗಂಡು ಮಾಯೆ ಎಂದು ಎಲ್ಲಿಯೂ ಹೇಳಿಲ್ಲ. ಹೆಣ್ಣು ಮಾಯೆ ಎಂಬರು, ಹೆಣ್ಣು ಮಾಯೆಯಲ್ಲ, ಗಂಡು ಮಾಯೆ ಎಂಬರು, ಗಂಡು ಮಾಯೆಯಲ್ಲ, ಹೊನ್ನು ಮಾಯೆ ಎಂಬರು, ಹೊನ್ನು ಮಾಯೆಯಲ್ಲ, ಮನವ ಮುಂದಣ ಆಸೆಯೇ ಮಾಯೆ ಕಾಣಾ, ಅಂತ ಹೇಳಿದ್ದಾರೆ

ಶ್ರೀಮತಿ ಪ್ರಮೀಳಾ ನೇಸರ್ಗಿ : ನಮ್ಮ ಮೈಸೂರು ಅರಮನೆಯಲ್ಲಿ ಇರುವ ಸಂಚಿ ಹೊನ್ನಮ್ಮ ಹದಿಬದೆಯ ಧರ್ಮದಲ್ಲಿ ಈ ರೀತಿ ತಿಳಿಸಿದ್ದಾರೆ. ಪೆಣ್ಣು ಪೆಣ್ಣೆಂದೇಕೆ ಬೀಳುಗಳೆವಿರಿ ಕಣ್ಣು ಕಾಣದ ಗಾವಿಲರು. ಅಂತ ಇದರ ಬಗ್ಗೆ ತಾವು ಯೋಚನೆ ಮಾಡಿ.

ಶ್ರೀ ವಾಟಾಳ್ ನಾಗರಾಜ್ : ಇಬ್ಬರು ಹೆಂಡಿರ ಕಾಟ, ಇರುಳು ತಿಗಣೆಯ ಕಾಟ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಅದಕ್ಕೋಸ್ಕರ ಇಬ್ಬರು ಹೆಂಡಿರುಬೇಡ, ಒಬ್ಬಳು ಹೆಣ್ಣೇ ಸಾಕು. ಕಾಮನ್ ಸಿವಿಲ್ ಕೋಡ್ ತನ್ನಿ ಎಂದು. ನಮ್ಮ ಪಕ್ಷ ಪ್ರತಿಪಾದನೆ ಮಾಡುತ್ತಿದೆ.

ಅಧ್ಯಕ್ಷರು : ಪ್ರಮೀಳಾ ನೇಸರ್ಗಿಯರ, ಅನುಭವ ದೊಡ್ಡದು, ಅನುಭವಸ್ಥರಾಗಿರುವವರು ಹೇಳುತ್ತಿದ್ದಾರೆ. ಅದನ್ನು ನಾವು ಒಪ್ಪಿಕೊಳ್ಳಬೇಕಾಗುತ್ತದೆ.

ಶ್ರೀ ವಾಟಾಳ್ ನಾಗರಾಜ್ : ಅನುಭವಸ್ಥರು ಬಹಳ ಜನ ಇದ್ದಾರೆ. ಅವರು ಗಂಭೀರವಾಗಿ ಕುಳಿತಿದ್ದಾರೆ.

ಅಧ್ಯಕ್ಷರು : ನೀವು ಏತಕ್ಕೆ ವೈಜನಾಥ್ ಪಾಟೀಲ್‌ರವರ ಕಡೆ ಕೈ ತೋರಿಸುತ್ತಿದ್ದೀರಲ್ಲಾ.

ಶ್ರೀ ವಾಟಾಳ್ ನಾಗರಾಜ್ : ನಮ್ಮನ್ನು ಏಕೆ ನೀವು ಬೀದಿಗೆಳೆಯುತ್ತೀರಿ? ಅನುಭವಸ್ಥರು, ಪಂಡಿತರು, ಮೇಧಾವಿಗಳು ಇಲ್ಲಿ ಬಹಳ ಜನರಿದ್ದು ಗಂಭೀರವಾಗಿದ್ದಾರೆ.

ಶ್ರೀಮತಿ ಪ್ರಮೀಳಾ ನೇಸರ್ಗಿ : ಕನ್ನಡ ಅಭಿವೃದ್ಧಿ ಪ್ರಾಧಿಕಾರವಿದ್ದು, ಅದಕ್ಕೊಬ್ಬರು ಅಧ್ಯಕ್ಷರಿದ್ದು, ಕನ್ನಡವನ್ನು ಆಡಳಿತದಲ್ಲಿ ಅನುಷ್ಠಾನಕ್ಕೆ ತರುವಲ್ಲಿ ನಿಮಗೆ ಯೋಚನೆಯಿದೆಯೇ? ಎಂದು ಕೇಳುತ್ತಿದ್ದೇನೆ. ಕಾವೇರಿ ಜಲದ ಬಗ್ಗೆ ಮಾತನಾಡುವ ಸಂದರ್ಭದಲ್ಲಿ ಇವೊತ್ತು ಎಲ್ಲಾ ಸದಸ್ಯರುಗಳಿದ್ದಾರೆ. ಒಂದು ವಿಷಯವನ್ನು ತಮ್ಮ ಗಮನಕ್ಕೆ ತರುವುದೇನೆಂದರೆ, ಕಾವೇರಿ ಜಲ ವಿವಾದ ಇದೆಯೆಲ್ಲಾ, ಇದರ ಬಗ್ಗೆ ಎಷ್ಟು ಹೇಳಿದರೂ ಸಾಲದು. ಇದನ್ನು ಖೋಡ್ಡ ಇಂಜನಿಯರಿಂಗ್ ಎನ್ನುವವರೆಗೆ IIIrd stage ಕೊಟ್ಟಿತ್ತು.

ಯಾವಾಗ ಮುಗಿಯಬೇಕಾಗಿತ್ತು, ಕೆಲಸ ಪ್ರಾರಂಭವಾಗಿದ್ದು 2-1-89ಕ್ಕೆ ಮುಗಿಯಬೇಕಾದದ್ದು 1-7-91ಕ್ಕೆ, ಇನ್ನು ಮುಗಿದಿಲ್ಲ, ಇವತ್ತು ಬೆಳಿಗ್ಗೆ ಪೇಪರ್‌ನಲ್ಲಿ ಇದಕ್ಕೆ 50 ಕೋಟಿ ರೂಪಾಯಿ ಬಿಡುಗಡೆ ಮಾಡಿದ್ದಾರೆ ಅಂತ ಇತ್ತು. ಕಾವೇರಿ 4ನೇ ಹಂತದ ಯೋಜನೆಯನ್ನು ಪ್ರಾರಂಭಿಸಲಾಗುವುದೆಂದು ಹೇಳಿದ್ದೀರಿ ಮೂರನೆಯದೆ ಇನ್ನೂ ಮುಗಿದಿಲ್ಲ, ಕಾವೇರಿ ನಾಲ್ಕನೇ ಹಂತದ ಯೋಜನೆಗೆ ದುಡ್ಡು ಕೊಡುವುದಕ್ಕೆ ಎಲ್ಲಿಂದ ಬಂತು? ಸನ್ಮಾನ್ಯ ಸಭಾಧ್ಯಕ್ಷರೆ, 16 ಕೋಟಿಯನ್ನು ಅವರು ಕೊಡಬೇಕಾಗಿತ್ತು. ಈಗಾಗಲೇ 25 ಕೋಟಿಗೂ ಹೆಚ್ಚು ಕೊಟ್ಟಿದ್ದಾರೆ. ಹತ್ತು ಕೋಟಿಗಿಂತಲೂ ಹೆಚ್ಚಾಗಿ ಖೋಡೆ ಇಂಜನಿಯರ್‌ರವರಿಗೆ ಕೊಟ್ಟಿದ್ದಾರೆ ಈ ಒಂದು ಇಂಜನಿಯರ್‌ರವರು ಐದು ಕೋಟಿ ರೂಪಾಯಿಗಳ ಸ್ಕ್ರ್ಯಾಪ್‌ನ್ನು ಜಲಮಂಡಳಿಯ ಅಧ್ಯಕ್ಷರು ಮಾಡಿದ್ದಾರೆ, ಅದು ಅವರಿಗೆ ಸೇರಿದ್ದಲ್ಲ, ಐದು ಕೋಟಿ ರೂಪಾಯಿಗೋಸ್ಕರ ಜಲಮಂಡಳಿಯ ಅಧ್ಯಕ್ಷರು ಈ ಖೋಡೆ ಇಂಜನಿಯರ್ ಗ್ರೂಪ್‌ರವರಿಗೆ ಮಾರಾಟ ಮಾಡಿದ್ದಾರೆ. ಅದು ಲೆಕ್ಕಕ್ಕೆ ಬಂದಿಲ್ಲ, ಸೆಂಟ್ರಲ್ ಎಕ್ಸೈಜ್‌ನವರಿಗೆ 2.5 ಕೋಟಿ ರೂಪಾಯಿಗಳನ್ನು ಕಟ್ಟಬೇಕಾಗಿದೆ, ಅದನ್ನು ಕಟ್ಟಿಲ್ಲ. ಮಂಡ್ಯ ಜಿಲ್ಲೆಯ ಎಕ್ಸೈಜ್ ಆಫೀಸರ್‌ರವರು ಅವರನ್ನು ಅರೆಸ್ಟ್ ಮಾಡುವುದಕ್ಕೆ ಬಂದರು, ಮಾಡುವುದಕ್ಕೆ ಬಂದವರನ್ನು ತೆಗೆದುಹಾಕಿದರು, ಅವರನ್ನು ಬಿಟ್ಟುಬಿಟ್ಟರು, ಇಲ್ಲಿ ಟೆಂಡರ್‌ಗಳನ್ನು ಕರೆದರು, ಸಭಾಧ್ಯಕ್ಷರೆ, ನಾನು ಇವತ್ತು ಕೇಳುತ್ತಿದ್ದೇನೆ ಆ ಟೆಂಡರ್ ಪ್ರಿಂಟಾಗಿರುವುದೆ ಅವತ್ತು.

ಇದರ ಪೂರ್ತಿ ರೆಕಾರ್ಡ್ಸ್ ನನ್ನ ಹತ್ತಿರ ಇದೆ. ಅದನ್ನು ನಾನು ಕೊಡುತ್ತೇನೆ, ಅವತ್ತೇ ಟೆಂಡರ್ ಕರೆದಿರತಕ್ಕಂಥದ್ದು, ಟೆಂಡರ್ ಹಾಕುವುದಕ್ಕೂ ಅವತ್ತೇ ಕೊನೆಯ ದಿನ. ಇದರ ಬಗ್ಗೆ ಅಕೌಂಟ್ ಸೂಪರಿಂಟೆಂಡೆಂಟ್ ಅವರು ಬಹಳ ಚೆನ್ನಾಗಿ ಪರಿಶೀಲಿಸಿ ಇವರೆಲ್ಲಾ ಮಾಡಿರುವುದು ತಪ್ಪು ಅಂಥ ಹೇಳಿ ರಿಪೋರ್ಟ್ ಕೊಟ್ಟು ಮಾಡಿದರೆ ಅವನ ಎತ್ತಂಗಡಿ ಆಯಿತು, ಅವರನ್ನು ಅಲ್ಲಿ ಇರಲಿಕ್ಕೆ ಬಿಡಲಿಲ್ಲ, ನಾನು ಕೇಳುತ್ತಿದ್ದೇನೆ, ನಜೀರ್ ಅಹಮ್ಮದ್ ಎಂಬತಕ್ಕಂಥ ಏಕಮಾತ್ರ ವ್ಯಕ್ತಿ ಆ ಇಲಾಖೆಯಲ್ಲಿ ಏನೆಲ್ಲಾ ಅಕ್ರಮಗಳು ನಡೆಯುತ್ತಿದೆ ಕಾರ್ಯಪಾಲಕ ಅಭಿಯಂತ್ರರು ಈ ರೀತಿ ಅಕ್ರಮಗಳನ್ನು ಮಾಡಿದ್ದಾರೆ. ಅಂತ ಹೇಳಿ ನೋಟ್ ಹಾಕಿದರೆ ಅವನನ್ನು ಅಲ್ಲಿಂದ ಟ್ರಾನ್ಸ್‌ಫರ್ ಮಾಡಿದರು. ಅವರನ್ನು ಕೇಳುವವರೇ ಇಲ್ಲ. ಸ್ವಾಮಿ ಒಂದೇ ದಿವಸ ಟೆಂಡರ್, ಆ ಟೆಂಡರ್ ಕಾಪಿ ನನ್ನ ಬಳಿಯೇ ಇದೆ. ಒಂದೂ ಟೆಂಡರ್‌ನ್ನೂ ಓಪನ್ ಮಾಡಿಲ್ಲ.....

ಶ್ರೀ ಆರ್ ರೋಷನ್ ಬೇಗ್ (ಬೆಂಗಳೂರು ಮಹಾನಗರ ಪಾಲಿಕೆ ರಾಜ್ಯ ಸಚಿವರು) : ಅದು ಯಾವಾಗ ಆಗಿದ್ದು?

ಶ್ರೀಮತಿ ಪ್ರಮೀಳ ನೇಸರ್ಗಿ : ಅದು ಕಾಂಗ್ರೆಸ್ ಪಕ್ಷ ಇದ್ದ ಕಾಲದಲ್ಲೇ ಆಗಿದೆ. ನಿಮ್ಮ ಕಾಲದಲ್ಲಿ ಅಲ್ಲ. ನಾನು ಏತಕ್ಕೆ ಹೇಳುತ್ತೇನೆ ಎಂದರೆ ಇವತ್ತು ನೀವು ಕುಡಿಯುವ ನೀರಿಗಾಗಿ ಹಣ ಬಿಡುಗಡೆ ಮಾಡಿದ್ದೀರಿ ಎಂಬುದು ಪತ್ರಿಕೆ...

ಬಂತು. ಅದನ್ನು ನೋಡಿ ನನಗೆ ಬಹಳ ದುಃಖ ಆಯಿತು. ಇವರು ಕೊಡುವುದೇ ಕೊಟ್ಟಿಲ್ಲ, ಸ್ಕ್ರಾಪ್ ಬೇರೆ ಮಾರಿಕೊಂಡಿದ್ದಾರೆ, ಇಂಜಿನಿಯರ್‌ಗಳು ಹಣವನ್ನು ಮಾಡಿಕೊಂಡಿದ್ದಾರೆ, ಟೆಂಡರ್‌ಗಳಲ್ಲಿ ಅಕ್ರಮವಾಗಿದೆ, ಈ ಟೆಂಡರನ್ನು ಧನಲಕ್ಷ್ಮಿ ಮತ್ತು ಇನ್ನೊಂದು ಕಂಪನಿಗೆ ಕೊಟ್ಟಿದ್ದಾರೆ, ಅವರಿಗೆ ಕೊಟ್ಟು ಕೆಲಸಗಳನ್ನು ಮಾಡಿಕೊಳ್ಳುತ್ತಾರೆ. ಆದರೆ ಕೆಲಸ ಇವತ್ತಿನವರೆಗೂ ಮುಗಿದಿಲ್ಲ. ಆದರೂ ಕೂಡ ಜಲಮಂಡಳಿಯಲ್ಲಿ ದುಡ್ಡಿಲ್ಲ ಎಂದು ಹೇಳಿ ಹಣವನ್ನು ಬಿಡುಗಡೆ ಮಾಡಿಸಿಕೊಳ್ಳತಕ್ಕಂಥ ಪರಿಸ್ಥಿತಿ ಇವತ್ತು ಬಂದಿದೆ. ನೀವು ಇವತ್ತಿನದಿವಸ ಈ ಸೂಪರಿಟೆಂಡೆಂಟ್ ಹಾಕಿರತಕ್ಕಂಥ ನೋಟ್‌ನ್ನು ತೆಗೆಸಿ ನೋಡಿದರೆ ಈ ಕಾವೇರಿ ಕಾಲದಲ್ಲಿ ಎಷ್ಟು ಅಕ್ರಮಗಳು ಆಗಿವೆ ಎಂಬುದು ಗೊತ್ತಾಗುತ್ತದೆ. ಸನ್ಮಾನ್ಯ ಅಧ್ಯಕ್ಷರೆ, ನಾನು ಒಂದಲ್ಲ, ಎರಡಲ್ಲ, ಇಲ್ಲಿ ಆಗಿರತಕ್ಕ ಹತ್ತು ಅಕ್ರಮಗಳ ಬಗ್ಗೆ ದಾಖಲೆಗಳನ್ನು ಸಂಗ್ರಹಿಸಿದ್ದೇನೆ. ದಯವಿಟ್ಟು ನಾನು ಅದನ್ನು ತಮ್ಮ ಮುಖಾಂತರ ಕೊಡುವುದಕ್ಕೆ ಸಿದ್ಧನಿದ್ದೇನೆ. ಬೇರೆ ಏನಾಗಿದೆ ಎಂದರೆ ಐವತ್ತು ಲಕ್ಷದ ಬೆಲೆಗೆ ಇಂಜಿನಿಯರ್‌ಗೆ ಕೊಟ್ಟರು, ಐವತ್ತು ಲಕ್ಷ ರೂಪಾಯಿಗಳ ಚೆಕ್‌ಗೆ ಕಾರ್ಯನಿರ್ವಾಹಕ ಅಭಿಯಂತರರು ಸಹಿ ಹಾಕದೆ ಕೊಡಬಹುದಾ? ನಾನು ಕೇಳುತ್ತಿದ್ದೇನೆ ಕಾರ್ಯನಿರ್ವಾಹಕ ಅಭಿಯಂತರರ ಸಹಿ ಇಲ್ಲ, ದುಡ್ಡು ಕೊಟ್ಟರು, ಕೌಂಟರ್‌ಸಹಿ ಆಗಿಲ್ಲ, ದುಡ್ಡು ಹೋಯಿತು, ಏತಕ್ಕೆ ಕೇಳುತ್ತಿದ್ದೇನೆಂದರೆ ನಿಮ್ಮ ಕಾಲದಲ್ಲಿ ಆಗಿದೆ, ನೀವು ಮಾಡಿದ್ದೀರಿ ಎಂದು ಹೇಳುತ್ತಿಲ್ಲ. ಹಿಂದಿನವರು ಮಾಡಿರತಕ್ಕಂಥ ಅಕ್ರಮಗಳನ್ನು ತೆಗೆದುನೋಡಿ, ಯಾರು ತಪ್ಪಿತಸ್ಥರು ಆಗಿದ್ದಾರೋ, ಯಾರು ಅನ್ಯಾಯವನ್ನು ಮಾಡಿದ್ದಾರೋ ಯಾರು ಅಕ್ರಮಗಳನ್ನು ಮಾಡಿದ್ದಾರೋ ಅವರುಗಳ ಬಗ್ಗೆ ಕ್ರಮ ತೆಗೆದುಕೊಳ್ಳಬೇಕಾದುದು ಪ್ರತಿಯೊಂದು ಸರ್ಕಾರದ ಕರ್ತವ್ಯ.

ಆ ಕಾರಣದಿಂದ ಹೇಳುತ್ತಿದ್ದನೆಯೇ ಹೊರತು ಬೇರೆ ಕಾರಣದಿಂದ ಅಲ್ಲ. ಸನ್ಮಾನ್ಯ ಸಭಾಧ್ಯಕ್ಷರೆ, ಸೆಂಟ್ರಲ್ ಎಕ್ಸೈಜ್, ಮಂಡ್ಯ, ಇವರು ಖೋಡೆ ಇಂಜಿನಿಯರ್‌ರನ್ನು ಅರೆಸ್ಟ್ ಮಾಡಲು ಬಂದಿದ್ದರು, ತಾವು ಬೇಕಾದರೆ ರೆಕಾರ್ಡ್ಸ್‌ಗಳನ್ನು ತರಿಸಿ ನೋಡಿ. ಎಕ್ಸೈಜ್ ಡ್ಯೂಟಿ ಕೊಟ್ಟಿಲ್ಲ, ಹಣ ಹೊರಟುಹೋಯಿತು, ಸನ್ಮಾನ್ಯ ಸಭಾಧ್ಯಕ್ಷರೆ, ಅವುಗಳ ಹೆಸರನ್ನು ಮಾತ್ರ ಹೇಳಿಬಿಡುತ್ತೇನೆ. ಬಾಲಾಜಿ ಇಂಜಿನಿಯರಿಂಗ್ ವರ್ಕ್ಸ್‌ಗೆ ಕೊಟ್ಟಿರತಕ್ಕಂಥ ವರ್ಕ್ಸ್‌ನಲ್ಲಿ ಅಕ್ರಮ, ಧನಲಕ್ಷ್ಮಿ ಕನಸ್ಟ್ರಕ್ಷನ್‌ಗೆ ಕೊಡಬಾರದು ಎಂದು ಹೇಳಿ, ಸನ್ಮಾನ್ಯ ಅಧ್ಯಕ್ಷರೆ ಏನು ಮಾಡಿದ್ದರೆಂದರೆ, ಟೆಂಡರ್ ಕರೆಯಬೇಕಾದರೆ ಒಂದು ಬುಕ್ ಇರುತ್ತದೆ. ಒಂದು, ಎರಡು ಅಂತ ನಂಬರ್ ಇರುತ್ತದೆ, ಇವರು ಯಾರೂ ಟೆಂಡರ್ ಫಾರಂನ್ನು ತೆಗೆದುಕೊಂಡಿಲ್ಲ, ಅದಕ್ಕೆ ಏನು ಮಾಡಿದ್ದಾರೆ 200/ಎ, 200/ಬಿ ಅಂದರೆ ಪಕ್ಕದಲ್ಲಿ ಎ, ಬಿ ಅಂಥ ಹಾಕಿಕೊಂಡು ಬಿಟ್ಟು ಅವರಿಗೆ ಬೇಕಾದವರಿಗೆ ಟೆಂಡರನ್ನು ಕೊಟ್ಟು ಮಾಡಬಾರದಂಥ ಅಕ್ರಮಗಳನ್ನು ಈ ಜಲಮಂಡಳಿಯವರು ಮಾಡಿದ್ದಾರೆ. ಅದಕ್ಕೋಸ್ಕರ ತಮ್ಮ ಗಮನವನ್ನು ಸೆಳೆಯುತ್ತಿದ್ದೇನೆ, ಇಲ್ಲಿ ನಾವು ನೀರಿಲ್ಲ, ನೀರಿಲ್ಲ ಎಂದು ಹೋರಾಡುತ್ತಿದ್ದೇವೆ. ಆದರೆ, ಅವರು ನೀವು ದುಡ್ಡು ಕೊಟ್ಟಿಲ್ಲ ಎಂದು ಹೇಳುತ್ತಾರೆ. ಆದರೆ ಅಕ್ರಮ ಆಗಿರತಕ್ಕಂಥದ್ದು ಆಗಿರತಕ್ಕ ಅವ್ಯವಹಾರದಲ್ಲೇ ಹೊರತು ಬೇರೆ ಆಗಿಲ್ಲ. ಅದಕ್ಕೋಸ್ಕರ ತಮ್ಮ ಗಮನವನ್ನು ಈ ಸಂದರ್ಭದಲ್ಲಿ ನಾನು ಸೆಳೆಯುತ್ತಿದ್ದೇನೆ.

ಅಧ್ಯಕ್ಷರೆ, ಸಬ್ ರಿಜಿಸ್ಟ್ರಾರ್‌ಗಳ ಬಗ್ಗೆ ಸನ್ಮಾನ್ಯ ಮುಖ್ಯಮಂತ್ರಿಗಳ ಗಮನಕ್ಕೆ ತರಬೇಕಾದುದು ನನ್ನ ಆದ್ಯ ಕರ್ತವ್ಯ ಎಂದು ತಿಳಿದುಕೊಂಡಿದ್ದೇನೆ. ಈ ಚುನಾವಣೆ ನಡೆಯುವುದಕ್ಕೆ ಮುಂಚೆ ಸಬ್ ರಿಜಿಸ್ಟ್ರಾರ್ ಆಫೀಸ್‌ಗಳಲ್ಲಿ ಬ್ರೀಫ್‌ಕೇಸ್‌ಗಳು ಇರುತ್ತಿತ್ತು, ಅದರ ಜೊತೆಗೆ ಮನೆಗೆ ಹೋಗುತ್ತಿದ್ದರು. ಸ್ವಾಮಿ, ಇವತ್ತು ಗೋಣಿಚೀಲಗಳ ಬೆಲೆ ಹೆಚ್ಚಾಗಿದೆ. ಏಕೆ ಅಂಥ ವಿಚಾರಿಸಿದರೆ ಸಬ್ ರಿಜಿಸ್ಟ್ರಾರ್ ಆಫೀಸಿನಲ್ಲಿ ದುಡ್ಡುಗಳನ್ನು ಗೋಣಿಚೀಲದಲ್ಲಿ ತೆಗೆದುಕೊಂಡು ಹೋಗುತ್ತಿದ್ದಾರೆ. ಸನ್ಮಾನ್ಯ ಮುಖ್ಯಮಂತ್ರಿಗಳನ್ನು

ಕೇಳುತ್ತಿದ್ದೇನೆ, ದಯವಿಟ್ಟು ಇದರ ಬಗ್ಗೆ ವಿಚಾರಣೆ ಮಾಡಲು ಇಬ್ಬರು ಅಧಿಕಾರಿಗಳನ್ನು ಹಾಕಿದರೆ ತಮಗೆ ಗೊತ್ತಾಗುತ್ತದೆ. ಸಬ್ ರಿಜಿಸ್ಟ್ರಾರ್ ಆದವರು ಗೋಣಿಚೀಲದಲ್ಲಿ ಹಣವನ್ನು ತುಂಬಿಕೊಂಡು ಮನೆಗೆ ಹೋಗುವಂಥ ಪರಿಸ್ಥಿತಿ ಇವತ್ತು ಬಂದಿದೆ, ನಮಗೆ ಯಾರು ಹೇಳುವವರು ಕೇಳುವವರು ಇಲ್ಲ ಎಂಬಂತೆ ಸಬ್ ರಿಜಿಸ್ಟ್ರಾರ್‌ರವರು ವರ್ತನೆ ಮಾಡುತ್ತಿದ್ದಾರೆ. ಸನ್ಮಾನ್ಯ ಅಧ್ಯಕ್ಷರೆ, ಕೆಂಪಯ್ಯನವರು ಸಬ್ ರಿಜಿಸ್ಟ್ರಾರ್ ಆಗಿದ್ದಾಗ ಸನ್ಮಾನ್ಯ ಬೈರೇಗೌಡರು ವಿಚಾರಣೆ ಮಾಡಿಸಿದರು, ತೆಗೆಯಬೇಕು ಎಂದೂ ಹೇಳಿದರು, ಸಸ್ಪೆನ್‌ಷನ್‌ನಲ್ಲಿ ಇಟ್ಟರು, ಎಲ್ಲಾ ವಿಚಾರಣೆ ಆಯಿತು, ರಿಪೋರ್ಟ್ ಬಂತು. ಇವತ್ತು ಅದು ಡಿವಿಜನಲ್ ಕಮಿಷನರ್ ಪಾರ್ಥಸಾರಥಿಯವರ ಬಳಿಗೆ ಹೋಗಿ ಅದು ಮೂಲೆಗುಂಪಾಗಿದೆ ಮತ್ತೆ ಅವರನ್ನು ಕೆಲಸಕ್ಕೆ ತೆಗೆದುಕೊಳ್ಳತಕ್ಕಂಥ ಪರಿಸ್ಥಿತಿ ಒದಗಿ ಬಂದಿದೆ. ಇದೇ ರೀತಿ ಹಲವಾರು ಸಬ್ ರಿಜಿಸ್ಟ್ರಾರ್ ಆಫೀಸ್‌ನ ಪರಿಸ್ಥಿತಿ ಆಗಿದೆ. ಸನ್ಮಾನ್ಯ ಮುಖ್ಯಮಂತ್ರಿಗಳೇ ದಯವಿಟ್ಟು ಇದರ ಬಗ್ಗ ಗಮನಕೊಡಿ, ಇಂತಹ ಅಕ್ರಮಗಳಲ್ಲಿ ತೊಡಗಿರತಕ್ಕಂಥ ಆಫೀಸರ್‌ಗಳನ್ನು ಮತ್ತೆ ತರತಕ್ಕಂಥ ಪ್ರಯತ್ನವನ್ನು ತಾವು ದಯವಿಟ್ಟು ಮಾಡಬೇಡಿ. ಸಬ್ ರಿಜಿಸ್ಟ್ರಾರ್‌ರವರ ಆಫೀಸಿನಲ್ಲಿ ಈ ರೀತಿಯ ಅಕ್ರಮಗಳು ಆಗುವುದಕ್ಕೆ ಅವಕಾಶ ಕೊಡಬೇಡಿ, ತಮಗೆ ಹೇಳುವುದಾದರೆ ತಮ್ಮ ಕ್ಷೇತ್ರವಾದ ರಾಮನಗರದಲ್ಲಿ ಒಬ್ಬ ಸಬ್ ರಿಜಿಸ್ಟ್ರಾರ್ ಇದ್ದಾನೆ, ಏನಾಗಿದೆ ಎಲ್ಲಾ ಕ್ರಯಪತ್ರ, ಪವರ್ ಆಫ್ ಅಟಾರ್ನಿ ಕ್ಯಾನ್ಸಲ್ ಮಾಡಿ ಆ ವ್ಯಕ್ತಿ ತೆಗೆದುಕೊಂಡು ಹೋಗಿ ಸಬ್ ರಿಜಿಸ್ಟ್ರಾರ್ ವಶಕ್ಕೆ ಕೊಡುತ್ತಾನೆ, ಪವರ್ ಆಫ್ ಅಟಾರ್ನಿ ಅಂದಮೇಲೆ ಕ್ಯಾನ್ಸಲ್ ಮಾಡುತ್ತಾರೆ, ರಿಜಿಸ್ಟ್ರು ಮಾಡುವುದಿಲ್ಲ, ಎದುರುಗಡೆಯ ಪಾರ್ಟಿಗೆ ಹೇಳಿಕಳುಹಿಸಿ ಅವರನ್ನು ಕರೆಸಿಕೊಂಡು ಆ ಪವರ್ ಆಫ್ ಅಟಾರ್ನಿ ಮೇಲೆ ಪತ್ರಗಳನ್ನು ಬರೆಸಿಕೊಂಡು ರಿಜಿಸ್ಟ್ರು ಮಾಡಿಕೊಂಡು ಬಿಡುತ್ತಾರೆ. ಪತ್ರಗಳನ್ನು ರಿಜಿಸ್ಟ್ರು ಮಾಡಿಕೊಂಡು ಆಮೇಲೆ ಪವರ್ ಆಫ್ ಅಟಾರ್ನಿ ಕೊಡುತ್ತಾರೆ, ಅಷ್ಟೆ ಅಲ್ಲ ಸನ್ಮಾನ್ಯ ಮುಖ್ಯ ಮಂತ್ರಿಗಳೇ ಸುಪ್ರೀಂ ಕೋರ್ಟ್‌ನಲ್ಲಿ ಆ ಜಮೀನು ಅವರದು ಎಂದು ತೀರ್ಮಾನವಾಗಿದೆ.

ಅದಾದನಂತರ ಅವರನ್ನು ಕರೆಸಿಕೊಂಡು ಅಗ್ರಿಮೆಂಟು, ಸೇಲು ಅಂಥ ಹೇಳಿ ರಿಜಿಸ್ಟ್ರು ಮಾಡಿಸಿಕೊಳ್ಳುತ್ತಾರೆ, ರಾತ್ರಿ ಒಂಭತ್ತೂವರೆಯವರೆಗೂ ಪಾರ್ಟಿಯನ್ನು ಕೂಡಿ ಹಾಕಿ ಇಟ್ಟುಕೊಂಡು ಪತ್ರಗಳನ್ನು ಬರೆಸಿಕೊಳ್ಳತಕ್ಕಂಥ ಸಬ್‌ರಿಜಿಸ್ಟ್ರಾರ್ ನಮ್ಮಲ್ಲಿದ್ದರೆ ಪರಿಸ್ಥಿತಿ ಏನಾಗಬಹುದು, ಇವತ್ತು ಪೇಪರ್‌ನಲ್ಲಿ ಈ ವಿಷಯಗಳು ಬಂದಾಗ ನನಗೆ ಬಹಳ ಆಶ್ಚರ್ಯವಾಯಿತು. ಅಂತಹ ಪರಿಸ್ಥಿತಿ ಇಲ್ಲಿ ಆಗಬಾರದು, ಈ ರೀತಿಯ ಪರಿಸ್ಥಿತಿ ನಮ್ಮ ಕರ್ನಾಟಕಕ್ಕೆ ಬರಬಾರದು. ಇಂತಹ ಸಬ್ ರಿಜಿಸ್ಟ್ರಾರ್‌ರವರನ್ನು ಎಲ್ಲಿ ಇರಬೇಕೋ ಅಲ್ಲಿ ಇಡಬೇಕಾದ್ದು ತಮ್ಮ ಕರ್ತವ್ಯ. ಇಂತಹ ಸಬ್ ರಿಜಿಸ್ಟ್ರಾರ್‌ಗಳು ಏನಾದರು ತಪ್ಪು ಮಾಡಿದ್ದರೆ ದಯವಿಟ್ಟು ತಾವು ವಿಚಾರಣೆಯನ್ನು ಮಾಡಿದರೆ ಸಂಪೂರ್ಣವಾಗಿ ಮಾಹಿತಿ ತಮಗೆ ಬರುತ್ತದೆ. ಇದರ ಬಗ್ಗೆ ಆಗಿರತಕ್ಕಂಥ ಗೊಂದಲ ಮಯವಾದ ಪರಿಸ್ಥಿತಿಯನ್ನು ದೂರಕ್ಕೆ ಎಸೆಯತಕ್ಕಂಥಾದ್ದು ತಮ್ಮ ಕರ್ತವ್ಯ. ಈ ಕೆಲಸವನ್ನು ತಾವು ಖಂಡಿತವಾಗಿಯೂ ಮಾಡಬೇಕೆಂದು ಕೇಳಿಕೊಳ್ಳುತ್ತಿದ್ದೇನೆ ಮತ್ತು ತಾವು ಇದನ್ನು ಖಂಡಿತವಾಗಿ ಮಾಡುತ್ತೀರಿ ಎಂಬ ಆಶ್ವಾಸನೆ ನನಗೆ ಇದೆ. ಸನ್ಮಾನ್ಯ ಸಭಾಧ್ಯಕ್ಷರೆ, ಒಂದೇ ಒಂದು ಮಾತನ್ನು ಹೇಳುತ್ತಿದ್ದೇನೆ.....

ಶ್ರೀ ಆರ್.ಎಲ್. ಜಾಲಪ್ಪ : ದಯವಿಟ್ಟು ಆ ವಿವರಗಳನ್ನು ತೋರಿಸಿ.

ಶ್ರೀಮತಿ ಪ್ರಮೀಳಾ ನೇಸರ್ಗಿ : ನಾನು ಆ ಎಲ್ಲಾ ರೆಕಾರ್ಡುಗಳನ್ನು ತಂದಿದ್ದೇನೆ, ತಮಗೆ ಕೊಡುತ್ತೇನೆ. ಈಗಾಗಲೇ ಮಾನ್ಯ ಸಭಾಧ್ಯಕ್ಷರು ನನಗೆ ಜಾಸ್ತಿ [illegible] ಮಾತನಾಡಬೇಡಿ ಎಂದು ಹೇಳಿ ಆದೇಶ ಕೊಟ್ಟಿರತಕ್ಕ ಸಂದರ್ಭದಲ್ಲಿ [illegible]

ಗಮನದಲ್ಲಿಟ್ಟುಕೊಂಡು ನಾನು ಮಾತನಾಡುವುದಕ್ಕೆ ಹೋಗುವುದಿಲ್ಲ. ಸನ್ಮಾನ್ಯ ಅಧ್ಯಕ್ಷರೆ, ಶ್ರೀಮಾನ್ ಶ್ರೀರಾಮರೆಡ್ಡಿಯವರು ಮಹಾಚೈತ್ರದ ಬಗ್ಗೆ ವ್ಯಾಖ್ಯಾನ ಮಾಡಿದರು, ಇದು ಒಂದು ದೊಡ್ಡ ಸಮುದಾಯದ ಒಂದು ಸಮಾಜದ ಪ್ರಶ್ನೆ ಇಲ್ಲಿರತಕ್ಕಂಥ ಸಮಾಜದ ಪ್ರಶ್ನೆಯಲ್ಲ ಅವಮಾನವಾದಂಥ, ಅವಹೇಳನಕಾರಿಯಾದಂಥ ಮಾತುಗಳನ್ನು ನಮ್ಮ ನಾಯಕರಾದಂಥ ಬಸವಣ್ಣನವರ ಬಗ್ಗೆ ಏನಾದರೂ ಅವಹೇಳನಕಾರಿಯಾಗತಕ್ಕಂಥದ್ದು ಬಂದಾಗ ನಮ್ಮ ಸನ್ಮಾನ್ಯ ಮುಖ್ಯಮಂತ್ರಿಗಳೇ ಅದನ್ನು ಗಮನಕ್ಕೆ ತೆಗೆದುಕೊಂಡು ಅದನ್ನು ವಿತ್‌ಡ್ರಾ ಮಾಡಿದ್ದಾರೆ. ಅದಕ್ಕೋಸ್ಕರ ಇಡೀ ವೀರಶೈವ ಸಮಾಜ ಅವರನ್ನು ಅಭಿನಂದಿಸುತ್ತದೆ. ಆದರೆ ಇದರ ಬಗ್ಗೆ ಹೇಳತಕ್ಕಂಥ ಸಂದರ್ಭದಲ್ಲಿ ಇತಿಹಾಸ, ಚರಿತ್ರೆ ಇದರ ಬಗ್ಗೆ ಕೂಡ ತಾವು ತಿಳಿದುಕೊಳ್ಳಬೇಕಾಗುತ್ತದೆ. ಸನ್ಮಾನ್ಯ ಚಿದಾನಂದಮೂರ್ತಿಗಳು ಮಹಾಚೈತ್ರದಲ್ಲಿ ಚರಿತ್ರೆಗೆ, ಇತಿಹಾಸಕ್ಕೆ ಅಪಚಾರವಾಗಿದೆ ಎಂದು ಹೇಳುತ್ತಿದ್ದಾರೆ. ಮಹಾಚೈತ್ರ ನಾಟಕದ ಐತಿಹಾಸಿಕ ಧಾರ್ಮಿಕ ಪುರುಷ ಬಸವಣ್ಣನವರ ಸಾಮಾಜಿಕ ಅಂಧೋಲನ ಇಲ್ಲಿ ಬಳಕೆ ಆಗಿರತಕ್ಕಂಥದ್ದು ಇತಿಹಾಸಕ್ಕೆ, ಎಲ್ಲರಿಗೂ ಕೂಡ ಅಪಚಾರವಾಗಿದೆ ಎಂದು ಚಿದಾನಂದಮೂರ್ತಿಯವರು ಹೇಳಿದ್ದಾರೆ, ಪಾಟೀಲ್ ಪುಟ್ಟಪ್ಪನವರು ಬರೆದಿದ್ದಾರೆ, ಬಹಳ ದೊಡ್ಡ ದೊಡ್ಡ ಮೇಧಾವಿಗಳು ಬರೆದಿದ್ದಾರೆ. ಸನ್ಮಾನ್ಯ ಅಧ್ಯಕ್ಷರೆ, ನಿನ್ನೆ ಸನ್ಮಾನ್ಯ ಸದಸ್ಯರಾದ ಜೀವರಾಜ ಆಳ್ವರವರು ಪತ್ರಿಕೆಗಳು ಏನು ಬೇಕಾದರೂ ಬರೆದು ತಪ್ಪಿಸಿಕೊಳ್ಳಬಹುದು ಎಂದು ತಿಳಿದುಕೊಂಡಿದ್ದರೆ ಅದು ತಪ್ಪು ಎಂದು ಹೇಳಿದರು. ಇವತ್ತು ನಾವು ಕೂಡ ಹೇಳತಕ್ಕಂಥದ್ದೆ ಯಾರು ಸಾಹಿತಿಗಳಿದ್ದಾರೆ, ಯಾರೂ ಕೂಡ ಈ ಸಮಾಜದಲ್ಲಿ ಏನು ಬೇಕಾದರೂ ಬರೆಯಬಹುದು. ಯಾವ ಸಮುದಾಯಕ್ಕಾದರೂ ನೋವನ್ನು ಉಂಟುಮಾಡತಕ್ಕಂಥ, ನಮ್ಮ ಚರಿತ್ರೆಗೆ, ಇತಿಹಾಸಕ್ಕೆ ಅಪಚಾರ ಆಗತಕ್ಕಂಥದ್ದನ್ನು ಬರೆದು ತಪ್ಪಿಸಿಕೊಳ್ಳಬಹುದು ಎಂದು ತಿಳಿದುಕೊಂಡಿದ್ದರೆ ಅದು ತಪ್ಪು ಅದರ ಬಗ್ಗೆ ಕ್ರಮ ತೆಗೆದುಕೊಳ್ಳಬೇಕಾಗುತ್ತದೆ ಎಂದು ಈ ಸಂದರ್ಭದಲ್ಲಿ ಹೇಳುತ್ತಿದ್ದೇನೆ.

ಬಸವಣ್ಣನವರ ಬಗ್ಗೆ ಏನು ಹೇಳಿದ್ದಾರೆ ಎಂದರೆ ಬಿಜ್ಜಳನ ಆಸ್ತಿಯನ್ನು ಲೂಟಿ ಮಾಡಿ ಅವರು ದಾಸೋಹವನ್ನು ನಡೆಸುತ್ತಿದ್ದರು ಎಂಬುದಾಗಿ ಹೇಳಿದ್ದಾರೆ. ನಾನು ಇವತ್ತು ಈ ಸದನದಲ್ಲಿ ಕೇಳುತ್ತಿದ್ದೇನೆ. ಬಸವಣ್ಣನವರ ಬಗ್ಗೆ ಯಾರಾದರೂ ಈ ರೀತಿಯಾಗಿ ಹೇಳುವುದು ಸಾಧ್ಯವೇ? ಯಾವುದಕ್ಕೂ ಆಸೆ ಪಡದೇ ಇರತಕ್ಕಂತಹ ಬಸವಣ್ಣನವರ ಬಗ್ಗೆ ಈ ಮಾತನ್ನು ಹೇಳಿದ್ದಾರೆ. ಅವರು ಹೇಳಿದ ಒಂದೊಂದು ಮಾತನ್ನೂ ಕೂಡ ನಾನು ಈ ಸಂದರ್ಭದಲ್ಲಿ ಹೇಳಬೇಕಾಗುತ್ತದೆ. ಬಸವಣ್ಣನವರು ಜಾತಿಗಳ ನಡುವೆ ಯಾವ ವ್ಯತ್ಯಾಸವನ್ನೂ ಕೂಡ ಮಾಡುವುದಕ್ಕೆ ಇಷ್ಟಪಡುತ್ತಾ ಇರಲಿಲ್ಲ. ಸಮಾಜದಲ್ಲಿರತಕ್ಕ ಎಲ್ಲಾ ದೋಷಗಳನ್ನು ದೂರ ಮಾಡತಕ್ಕ ಮಹಾನ್ ವ್ಯಕ್ತಿ ಬಸವಣ್ಣನವರು. ಅವರು ಜಂಗಮರ ಬಗ್ಗೆ ಇನ್ನೊಂದು ಮಾತು ಹೇಳಿದ್ದಾರೆ. ಇವತ್ತು ಎಷ್ಟೋ ಜನ ಜಂಗಮರು ಇರಬಹುದು, ಈ ಸದನದಲ್ಲೂ ಕೂಡ ಕೆಲವು ಮಾನ್ಯ ಸದಸ್ಯರು ಜಂಗಮರು ಇರಬಹುದು. ಅವರು ಸಾರಾಸಗಟಾಗಿ ಜಂಗಮರ ಬಗ್ಗೆ ಏನು ಹೇಳಿದ್ದಾರೆ ಎಂದರೆ ಮಹಾ ಮಹಿಮರಾದ ಜಂಗಮರನ್ನು ಅವರು ಕುಲಗೆಟ್ಟವರು ಉಗಿದು ಬಿಟ್ಟವರು ಎಂದು ಹೇಳಿದ್ದಾರೆ. ಇದನ್ನು ನೀವು ಒಪ್ಪುತ್ತೀರಾ? ನಮ್ಮ ಮಕ್ಕಳು ಇದನ್ನು ಒಪ್ಪುತ್ತಾರೆ?

(ಗೊಂದಲ)

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಅವರು ಬಹುಶಃ ಪುಸ್ತಕವನ್ನು ಓದಿಲ್ಲವೆಂದು ಕಾಣುತ್ತದೆ. ಅವರ ಅಭಿಪ್ರಾಯವನ್ನು ನಾನು ಒಪ್ಪುವುದಿಲ್ಲ.

(ಗೊಂದಲ)

ಶ್ರೀಮತಿ ಪ್ರಮೀಳ ನೇಸರ್ಗಿ : ಮಾನ್ಯ ಅಧ್ಯಕ್ಷರೇ, ನಾನು ಬಹಳ ಮನನೊಂದು ಈ ಮಾತನ್ನು ಹೇಳುತ್ತಿದ್ದೇನೆ. ಬಿಜ್ಜಳನ ಆಸ್ತಿಯನ್ನು ಲೂಟಿ ಮಾಡಿ ದಾಸೋಹ ಮಾಡಿದ್ದಾರೆಯೇ? ಬಸವಣ್ಣನವರು. ಇದನ್ನು ನಾವು ಕೇಳಬಾರದೇ? ಎಂತಹ ಮಹಾಮಹಿಮರು ಬಸವಣ್ಣನವರು.

ಹೊನ್ನಿನೊಳಗೊಂದೊರೆಯ
ವಸ್ತ್ರದೊಂದು ಎಳೆಯ
ಅನ್ನದೊಳಗೊಂದಗುಳ
ಇಂದಿಂಗೆ ನಾಳಿಂಗೆ ಬೇಕೆಂದೆ
ನೆಂದರೆ ನಿಮ್ಮಾಣೆ,
ನಿಮ್ಮ ಪ್ರಮಥರಾಣೆ

ಎಂದು ಬಸವಣ್ಣನವರು ತಮ್ಮ ವಚನವೊಂದರಲ್ಲಿ ಹೇಳಿದ್ದಾರೆ. ಇಂತಹವರಿಗೆ ಅಪಚಾರ ಮಾಡಿದ್ದಾರೆ. ಚರಿತ್ರೆಗೆ, ಇತಿಹಾಸಕ್ಕೆ ಅಪಚಾರ ಮಾಡಿದ್ದಾರೆ. ಬಸವಣ್ಣನವರ ಹುಟ್ಟಿನ ಬಗ್ಗೆ ಅಪಹಾಸ್ಯ ಮಾಡಿದ್ದಾರೆ. ಇದನ್ನು ಸಹಿಸಿಕೊಂಡು ನೀವು ಇರುತ್ತೀರಾ? ಒಂದು ಸಮಾಜದಲ್ಲಿರತಕ್ಕಂಥ ಮಹಾಮಹಿಮರ ಬಗ್ಗೆ ಇಂತಹ ಮಾತು ಬಂದಾಗ ನೀವು ಸುಮ್ಮನೆ ಇರುತ್ತೀರಾ? ಇವತ್ತಿನ ದಿವಸ ಅನುಮತಿ ಕೊಡಿ, ನಾವು ಪ್ರಾಸಿಕ್ಯೂಟ್ ಮಾಡುತ್ತೇವೆ ಎಂದು ಜನ ಕೇಳಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳೇ ಅವರಿಗೆ ಅನುಮತಿ ಕೊಡಿ. ಕ್ಯಾಬಿನೆಟ್‌ನಲ್ಲಿ ಒಂದು ತೀರ್ಮಾನ ತೆಗೆದುಕೊಳ್ಳಿ. ಕೋರ್ಟಿನಲ್ಲಿ ಏನು ತೀರ್ಮಾನ ಆಗುತ್ತದೋ ಅದಕ್ಕೆ ನಾವು ಬದ್ಧರಾಗಿದ್ದೇವೆ. ಮಹಾಚೈತ್ರ ಪಠ್ಯ ಪುಸ್ತಕವನ್ನು ರದ್ದು ಮಾಡಿ ಸರ್ಕಾರದವರು ಬಹಳ ಒಳ್ಳೆಯ ಕೆಲಸವನ್ನು ಮಾಡಿದ್ದಾರೆ. ಒಂದು ಸಮುದಾಯಕ್ಕೆ ಸಮಾಜಕ್ಕೆ ಆಗಿರತಕ್ಕ ಅನ್ಯಾಯವನ್ನು ಈ ಮೂಲಕ ಸರಿಪಡಿಸಿದ್ದಾರೆ. ಅದಕ್ಕಾಗಿ ನಾನು ನಿಮ್ಮನ್ನು ಅಭಿನಂದಿಸುತ್ತಿದ್ದೇನೆ. ಇಂತಹ ಪುಸ್ತಕಗಳನ್ನು ಪಠ್ಯಪುಸ್ತಕಗಳನ್ನಾಗಿ ಇನ್ನು ಮುಂದೆ ದಯವಿಟ್ಟು ಇಡಬೇಡಿ. ಅಂತಹವರ ಬಗ್ಗೆ ಕ್ರಮ ತೆಗೆದುಕೊಳ್ಳಿ ಎಂದು ನಾನು ಈ ಸಂದರ್ಭದಲ್ಲಿ ಹೇಳುತ್ತಿದ್ದೇನೆ. ಈ ರೀತಿಯಾಗಿ ಆಗದಂತೆ ನೋಡಿಕೊಳ್ಳಬೇಕಾದ್ದು ಪ್ರತಿಯೊಬ್ಬರ ಕರ್ತವ್ಯ. ನಮ್ಮ ಮಕ್ಕಳು ಭವಿಷ್ಯದಲ್ಲಿ ಇಂತಹ ತಪ್ಪು ಚರಿತ್ರೆಯನ್ನು ಇತಿಹಾಸದಲ್ಲಿ ಕಲಿಯಬಾರದು, ಕಲಿಯುವುದಕ್ಕೆ ಅವಕಾಶ ಮಾಡಿಕೊಡಬಾರದೆಂದು ನಾನು ತಮ್ಮಲ್ಲಿ ವಿನಂತಿಸಿಕೊಳ್ಳುತ್ತೇನೆ. ಅಧ್ಯಕ್ಷರೇ, ನೀವು ಒಂದು ಗಂಟೆ ಸಮಯದೊಳಗೆ ಮಾತನಾಡಬೇಕೆಂದು ಹೇಳಿದ್ದೀರಿ. ಆದರೆ ನಾನು ಇನ್ನೂ ಕೇವಲ ಅರ್ಧ ಗಂಟೆ ಮಾತ್ರ ಮಾತನಾಡಿದ್ದೇನೆ.

ಅಧ್ಯಕ್ಷರು : ನಿಮ್ಮ ಗಡಿಯಾರ ಸರಿಯಾಗಿ ಕೆಲಸ ಮಾಡುವಂತೆ ಕಾಣುತ್ತಿಲ್ಲ. ನೀವು ಈಗಾಗಲೇ ಒಂದು ಗಂಟೆ ಮಾತನಾಡಿದ್ದೀರಿ.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೇ, ಮಹಿಳೆಯರು ಸುಳ್ಳು ಹೇಳುವುದಿಲ್ಲ ಎಂದುಕೊಂಡಿದ್ದೆ. ಆದರೆ ಪ್ರಮೀಳರವರು ಒಂದು ಗಂಟೆ ಮಾತನಾಡಿ, ಕೇವಲ ಅರ್ಧ ಗಂಟೆ ಅಷ್ಟೇ ಮಾತನಾಡಿದ್ದೇನೆ ಎನ್ನುತ್ತಾರಲ್ಲ.

ಶ್ರೀಮತಿ ಪ್ರಮೀಳ ನೇಸರ್ಗಿ : ನಾನು ಇನ್ನು ಜಾಸ್ತಿ ಮಾತನಾಡಲ್ಲಿ ಹೋಗುವುದಿಲ್ಲ. ಮಾನ್ಯ ಗ್ರಾಮೀಣಾಭಿವೃದ್ಧಿ ಸಚಿವರು ನಿನ್ನೆ ಜಿಲ್ಲಾ ಪಂಚಾಯ[illegible] ಅಮೆಂಡ್‌ಮೆಂಟ್ ಬಿಲ್ ಮೇಲೆ ಮಾತನಾಡುತ್ತಾ, ಅಲ್ಪಸಂಖ್ಯಾತರನ್ನು ಹಿಂದು[illegible] ವರ್ಗದವರನ್ನು ನಾವು ಉದ್ಧಾರ ಮಾಡಿದ್ದೇವೆ. ನಾವು ಬಿಟ್ಟರೆ ಮತ್ತೆ ಜ[illegible]

ಯಾರೂ ಅವರ ಉದ್ಧಾರ ಮಾಡಿಲ್ಲ ಎಂದು ಹೇಳಿದರು. ಈ ದೇಶದಲ್ಲಿ ಅಲ್ಪಸಂಖ್ಯಾತರು ಎಂದರೆ ಏನು ಕೇವಲ ಒಂದೇ ಧರ್ಮದವರಾ? ಕ್ರೈಸ್ತರೂ ಅಲ್ಪಸಂಖ್ಯಾತರೇ ಆಗಿದ್ದಾರೆ. ಇವತ್ತು ಸರ್ಕಾರದವರು ಅಲ್ಪಸಂಖ್ಯಾತರ ಆಯೋಗವನ್ನು ಮಾಡಿದ್ದೀರಿ. ಅದಕ್ಕೆ ಒಬ್ಬ ಕ್ರೈಸ್ತ ಧರ್ಮವರನ್ನು ಅಧ್ಯಕ್ಷರನ್ನಾಗಿ ಮಾಡತಕ್ಕ ಔದಾರ್ಯವನ್ನು ಸರ್ಕಾರವು ತೋರಿಸಲಿ. ಕ್ರೈಸ್ತರೂ ಕೂಡ ಅಲ್ಪಸಂಖ್ಯಾತರು. ಕ್ರೈಸ್ತ ಧರ್ಮದವರಿಗೂ ಕೂಡ ಅಲ್ಪಸಂಖ್ಯಾತರ ಆಯೋಗದ ಅಧ್ಯಕ್ಷರಾಗತಕ್ಕ ಅವಕಾಶ ಕಲ್ಪಿಸಿ ಕೊಡಿ ಎಂದು ನಾನು ಈ ಸಂದರ್ಭದಲ್ಲಿ ಹೇಳುತ್ತಾ ನನಗೆ ಇಷ್ಟು ಮಾತನಾಡಲು ಅವಕಾಶ ಮಾಡಿ ಕೊಟ್ಟ ಅಧ್ಯಕ್ಷರಿಗೆ ನನ್ನ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ಅಧ್ಯಕ್ಷರು : ಕ್ಯಾಂಡಿಡೇಟ್ಸ್ ಯಾರಾದರೂ ಇದ್ದರೆ ಹೇಳಿ.

ಶ್ರೀಮತಿ ಪ್ರಮೀಳ ನೇಸರ್ಗಿ : ರಾಮಕೃಷ್ಣರವರು ಇದ್ದಾರೆ, ಫರ್ನಾಂಡೀಸ್‌ರವರು ಇದ್ದಾರೆ. ಎಲ್ಲರಿಗೂ ಅವಕಾಶ ಮಾಡಿ ಕೊಡಿ.

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಮಾನ್ಯ ಅಧ್ಯಕ್ಷರೇ....

ಅಧ್ಯಕ್ಷರು : ತಾವು ಹೇಳಿದ್ದೂ ರೆಕಾರ್ಡ್‌ಗೆ ಹೋಗಿದೆ. ಅವರು ಹೇಳಿದ್ದೂ ರೆಕಾರ್ಡ್‌ಗೆ ಹೋಗಿದೆ. ಇದಕ್ಕೆ ಒಂದು ಲಿಮಿಟ್ ಇರಲಿ

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಮಾನ್ಯ ಅಧ್ಯಕ್ಷರೇ, ಇತಿಹಾಸವನ್ನು ಅವರ ಮೂಗಿನ ನೇರಕ್ಕೆ ಬರೆಯಲಿಕ್ಕೆ ಸಾಧ್ಯವಿಲ್ಲ. ಅವರು ಹೇಳಿದ್ದೆಲ್ಲಾ ಮಹಾಚೈತ್ರ ಪುಸ್ತಕದಲ್ಲಿ ಇಲ್ಲ.

(ಗೊಂದಲ)

ಅಧ್ಯಕ್ಷರು : ಅವರವರ ಅಭಿಪ್ರಾಯಕ್ಕೆ ಅವರು ಬದ್ಧರು.

(ಗೊಂದಲ)

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಇಷ್ಟ ದೈವದ ಆರಾಧನೆ ಮಾಡಿಕೊಂಡು ಕಾಲ ಕಳೆಯುವವರು ಇಲ್ಲಿ ಇತಿಹಾಸ ಹೇಳಲಿಕ್ಕೆ ಹೊರಟರೆ ಹೇಗೆ?

(ಗೊಂದಲ)

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ರಾಮನ ಹೆಸರು ಹೇಳಿಕೊಂಡು ಓಟು ಕೇಳುವಂತಹ ಜನ, ಇವತ್ತು ನಮಗೆ ಪಾಠ ಹೇಳುತ್ತಾರಲ್ಲ.

(ಗೊಂದಲ)

ಅಧ್ಯಕ್ಷರು : ಮಾನ್ಯ ಶ್ರೀರಾಮರೆಡ್ಡಿಯವರೇ, ದಯಮಾಡಿ ಕುಳಿತುಕೊಳ್ಳಿ.

(ಗೊಂದಲ)

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ರಾಷ್ಟ್ರಪಿತನ ಕೊಲೆಗೆ ಅಪವಾದವನ್ನು ಹೊತ್ತುಕೊಂಡಿರತಕ್ಕಂತಹ ಜನ ನೀವು.

(ಗೊಂದಲ)

ಶ್ರೀ ಜಿ.ವಿ. ಶ್ರೀರಾಮರೆಡ್ಡಿ : ಅಡ್ಡ ದಾರಿ ಹಿಡಿಯುತ್ತಿರುವವರು ನೀವು. ಇನ್ನೊಬ್ಬರ ಅಭಿಪ್ರಾಯವನ್ನು ಮನ್ನಣೆ ಮಾಡಲಿಕ್ಕೆ ನಿಮಗೆ ಸಾಧ್ಯವಾಗುತ್ತಿಲ್ಲ.....

(ಗೊಂದಲ)

ಅಧ್ಯಕ್ಷರು : ಮಾನ್ಯ ಶ್ರೀರಾಮರೆಡ್ಡಿಯವರೇ, ದಯ ಮಾಡಿ ಕುಳಿತುಕೊಳ್ಳಿ.

(ಗೊಂದಲ)

ಅಧ್ಯಕ್ಷರು : ನಾನು ಅನೇಕ ಸಂದರ್ಭಗಳಲ್ಲಿ ಹೇಳಿದ್ದೇನೆ. ಭಿನ್ನಾಭಿಪ್ರಾಯಗಳು ಏನಿದ್ದರೂ ಕೂಡ ಅದನ್ನು ಪರಿಣಾಮಕಾರಿಯಾಗಿ ಪ್ರತಿಪಾದನೆ ಮಾಡತಕ್ಕ ಕೆಲಸವನ್ನು ಈ ಸದನದಲ್ಲಿ ನೀವು ಮಾಡಬಹುದು. ಅದನ್ನು ಒಂದು ಹತೋಟಿ ಮೀರಿ ಹೋಗುವಂತಾದ್ದು ಸಾಧುವಲ್ಲ. ಅದನ್ನು ಮಾಡಿಕೊಳ್ಳುವುದಕ್ಕೆ ಹೊರಗೆ ಬೇಕಾದಷ್ಟು ಜಾಗ ಇದೆ. ಈ ಸದನದಲ್ಲಿ ಅದಕ್ಕೆ ಅವಕಾಶ ಇಲ್ಲ. ನಿಮ್ಮ ನಿಮ್ಮ ಅಭಿಪ್ರಾಯಗಳಿಗೆ ನೀವು ಸ್ವತಂತ್ರರು. ನಿಮ್ಮ ಅಭಿಪ್ರಾಯವನ್ನು ನೀವು ಪ್ರತಿಪಾದನೆ ಮಾಡಬಹುದು. ಎಲ್ಲರೂ ಸಾಕಷ್ಟು ಹೇಳಿದ್ದೀರಿ. ಪರಸ್ಪರ ನೀವೇ ಜಗಳ ಶುರು ಮಾಡಿಕೊಂಡು ಎಲ್ಲಿಗೆ ಅಂದರೆ ಅಲ್ಲಿಗೆ ಹೋದರೆ ಏನು ಪ್ರಯೋಜನ?

ಶ್ರೀ ಹೆಚ್.ಎನ್. ನಂಜೇಗೌಡ : ಮಾನ್ಯ ಅಧ್ಯಕ್ಷರೆ, ಕೆಲವು ವಿಭೂತಿ ಪುರುಷರು ಈ ನಾಡಿನಲ್ಲಿ ಜನ್ಮ ತಾಳಿದ್ದಾರೆ. ಬಹುಶಃ 800 ವರ್ಷಗಳ ಹಿಂದೆ ನಮ್ಮ ಸಮಾಜದ ಅಂದಿನ ಪರಿಸ್ಥಿತಿಯಲ್ಲಿದ್ದಂತಹ ಒಬ್ಬ ದಾರ್ಶನಿಕರು, ಸಮಾಜ ಸುಧಾರಕರು ಬಸವಣ್ಣನವರು. ಇವತ್ತು ನಾವು ಆಧುನಿಕ ಸಮಾಜದಲ್ಲಿ ಇದ್ದೇವೆ ಎನಿಸಿಕೊಂಡಿರುವವರು. ಏನೇನು ಪ್ರಗತಿಪರವಾದಂತಹ ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತೇವೆ. ಜಾತ್ಯಾತೀತರಾಗಿ ಇರುತ್ತೇವೆ ಎಂದು ಹೇಳುತ್ತೇವೆ. ಆದರೆ ಅಂದಿನ ಪರಿಸರದಲ್ಲಿ ಅದನ್ನು ಅಕ್ಷರಶಃ ಜಾರಿಗೆ ತಂದಂತಹ ಒಬ್ಬ ವಿಭೂತಿ ಪುರುಷರು ಮಹಾನುಭಾವರು ಬಸವಣ್ಣನವರು. ಜೊತೆಗೆ ಅವರು ಸಮಾಜದ ಸುಧಾರಕರೂ ಆಗಿದ್ದರು. ಇಡೀ ಸಮಾಜಕ್ಕೆ ಅವರು ಪೂಜ್ಯರಾಗಿದ್ದರು. ಯಾರೇ ಆಗಲಿ, ಅವರ ಬಗ್ಗೆ ಲಘುವಾಗಿ ಮಾತನಾಡತಕ್ಕದ್ದು ಸರಿಯಲ್ಲ. ಭಿನ್ನಾಭಿಪ್ರಾಯಗಳು ಇದ್ದರೆ ಇರಲಿ. ಆ ಪ್ರಶ್ನೆ ಬೇರೆ. ಹೋಗುವವರ ದಾರಿ ಬೇರೆ ಬೇರೆ ಇರಬಹುದು. ಆದರೆ ಲಘುವಾಗಿ ಪರಿಗಣಿಸತಕ್ಕದ್ದು ಬೇರೆಯವರ ಮನಸ್ಸಿಗೆ ಒಂದು ಸಮಾಜಕ್ಕೆ ನೋವು ಉಂಟು ಮಾಡತಕ್ಕದ್ದು ಆಗಬಾರದು.

+ಶ್ರೀ ಬಿ.ಆರ್. ಯಾವಗಲ್ (ನರಗುಂದ) : ಮಾನ್ಯ ಅಧ್ಯಕ್ಷರೇ ರಾಜ್ಯಪಾಲರ ಭಾಷಣದ ಮೇಲಿನ ವಂದನಾ ನಿರ್ಣಯದ ಪ್ರಸ್ತಾವವನ್ನು ನಾನು ಬೆಂಬಲಿಸುತ್ತೇನೆ. ಇವತ್ತು ಅನೇಕ ವಿಚಾರಗಳ ಬಗ್ಗೆ ರಾಜ್ಯಪಾಲರ ಭಾಷಣದಲ್ಲಿ ಹೇಳಿದ್ದಾರೆ. ಕಳೆದ ನಾಲ್ಕು ತಿಂಗಳ ನಮ್ಮ ಸರ್ಕಾರದ ಕಾರ್ಯ ವೈಖರಿ ಸ್ಪಷ್ಟವಾದ ನಿಲುವನ್ನು ತೆಗೆದುಕೊಳ್ಳಬೇಕು, ಇಚ್ಛಾ ಶಕ್ತಿ ವ್ಯಕ್ತ ಮಾಡಬೇಕೆನ್ನುವುದರ ಸಂಕೇತವಾಗಿದೆ ಎಂದು ತಮ್ಮೆದುರಿಗೆ ನಮ್ರವಾಗಿ ಹೇಳಬಯಸುತ್ತೇನೆ. ಇವತ್ತು ಅನೇಕ ವಿಚಾರಗಳ ಬಗ್ಗೆ ರಾಜ್ಯದ ಹಿತಾಸಕ್ತಿಯನ್ನು ಗಮನದಲ್ಲಿಟ್ಟುಕೊಂಡು ಹೊಸ ವಿಚಾರಗಳನ್ನು ಪ್ರತಿಪಾದನೆ ಮಾಡಿರುವಂತಹ ರಾಜ್ಯಪಾಲರ ಭಾಷಣವನ್ನು ನಾವು ನೋಡುತ್ತಿದ್ದೇವೆ. ಅದರಲ್ಲಿ ಬಹಳ ಮುಖ್ಯವಾದುದು ಈದ್ಗಾ ವಿಚಾರ. ನನ್ನ ದೃಷ್ಟಿಯಲ್ಲಿ ವೈಯಕ್ತಿಕವಾಗಿ ಇದು ಪ್ರಮುಖ ವಿಚಾರ. ನಮ್ಮ ಜಿಲ್ಲೆಯ ಒಂದು ಕೇಂದ್ರವಾದ ಹುಬ್ಬಳ್ಳಿ, ಧಾರವಾಡ ನಗರಗಳಲ್ಲಿ ಕಳೆದ 3-4 ವರ್ಷಗಳಿಂದ ಈ ಒಂದು ಸಮಸ್ಯೆ ಉಲ್ಬಣಗೊಂಡಿತ್ತು. ಇದು ರಾಷ್ಟ್ರ ಮಟ್ಟದವರೆಗೂ ಹಬ್ಬಿತ್ತು. ಇದು ಬೇಕಾಗಿತ್ತೋ, ಬೇಕಾಗಿರಲಿಲ್ಲವೋ ಎನ್ನುವುದರ ಬಗ್ಗೆ ನಾನು ಚರ್ಚೆ ಮಾಡುವುದಿಲ್ಲ. ಆ ಸಮಸ್ಯೆ ಬೆಳೆದು ಅದರ ದುಷ್ಪರಿಣಾಮ ರಾಷ್ಟ್ರದ ರಾಜ್ಯದ ಎಲ್ಲೆಡೆ ಆಯಿತು. ವಿಶೇಷವಾಗಿ ಹುಬ್ಬಳ್ಳಿ, ಧಾರವಾಡದಲ್ಲಿರತಕ್ಕ ಜನತೆಗೆ ಆಗಸ್ಟ್ 15 ಮತ್ತು ಜನವರಿ 26 ದಿನಾಂಕಗಳು ಬಂದರೆ ಭಯದ ವಾತಾವರಣ ಉಂಟಾಗುತ್ತಿತ್ತು. ಹುಬ್ಬಳ್ಳಿ, ಧಾರವಾಡ ನಗರಗಳ ಮೂಲಕ

ಹಾದು ಹೋಗತಕ್ಕಂತಹ ಜನಗಳಿಗೂ ಒಂದು ಭಯದ ದಿನವಾಗಿ ಪರಿವರ್ತನೆ ಆಗಿತ್ತು. ಕಳೆದ ಹಲವಾರು ವರ್ಷಗಳಲ್ಲಿ ನಾವು ಇದನ್ನು ನೋಡಿದ್ದೇವೆ.

5.40 ಪಿ.ಎಂ

ಇದೊಂದು ಜಟಿಲ ಸಮಸ್ಯೆ ಆಗಿದ್ದು ಇದನ್ನು ಬಿಡಿಸುವುದಕ್ಕೆ ಸಾಧ್ಯವಿಲ್ಲ. ಕಾರಣ ಯಾರೇ ಇರಲಿ. ಒಟ್ಟಾರೆ ಇದು ಮುಗಿದು ಹೋದರೆ ಸಾಕು ಎನ್ನತಕ್ಕ ಪರಿಸ್ಥಿತಿ ಇತ್ತು. ಆಗಿನ ಸರ್ಕಾರಗಳು ಯಾವುದೇ ಇದ್ದರೂ ಕೂಡ ಅದರ ಬಗ್ಗೆ ಪ್ರಾಮಾಣಿಕ ಪ್ರಯತ್ನವನ್ನು ಮಾಡಿದ್ದುವೋ, ಅಥವಾ ಇಲ್ಲವೋ ಎಂಬುದಕ್ಕಿಂತ, ಅದು ಆಗಲಿಲ್ಲ, ಅದರಿಂದಾಗತಕ್ಕ ದೊಡ್ಡ ಅನಾಹುತ, ನಾಲ್ಕಾರು ಜನರು ಅಮಾಯಕರು ಸಂಕಟಕ್ಕೆ ಸಿಕ್ಕಿ, ತೊಂದರೆಯನ್ನು ಅನುಭವಿಸಿದ್ದನ್ನು ನಾವು ನೋಡಿದ್ದೇವೆ. ಅವತ್ತು ಒಳಗಡೆ ಇದ್ದವರು ಹೊರಗಡೆಗೆ ಹೋಗುವಂತಿರಲಿಲ್ಲ, ಹೊರಗಡೆ ಇದ್ದವರು ಒಳಗಡೆ ಬರುವಂತಿರಲಿಲ್ಲ. ದೂರದೂರದ ಪ್ರದೇಶದಿಂದ ಬಸ್ಸುಗಳಲ್ಲಿ ಬಂದವರು ಬಸ್ ಸ್ಟ್ಯಾಂಡ್, ರೈಲ್ವೆ ಸ್ಟೇಷನ್‌ಗಳಿಂದ ಪೊಲೀಸರು ತಾತ್ಕಾಲಿಕವಾಗಿ ಒದಗಿಸಿದ ವಾಹನಗಳಲ್ಲಿ ತಮ್ಮ ತಮ್ಮ ಮನೆಗಳಿಗೆ ಹೋದುದನ್ನು ನೋಡಿದ್ದೇವೆ. ಆಗಿನ ರಾಜಕೀಯ ಪರಿಸ್ಥಿತಿ ಪಲ್ವೆರೈಸೇಷನ್ ಏನಿತ್ತು ಅದನ್ನು ಯಾವರೀತಿ ಬಿಡಿಸಬೇಕೆಂದು ಸರ್ಕಾರ ಯೋಚಿಸುತ್ತಿದೆ. ಅಲ್ಪಸಂಖ್ಯಾತರ ಭಾವನೆಗಳನ್ನು ಹತ್ತಿಕ್ಕಬಾರದು, ಅದೇ ರೀತಿ ಬೇರೆ ಜನರ ಭಾವನೆಗಳನ್ನು ನಿವಾರಿಸಬೇಕೆಂದು ಏನು ಸಂಧಿಗ್ಧ ಪರಿಸ್ಥಿತಿ ಇತ್ತು. ಅವತ್ತಿನ ಸರ್ಕಾರ ಏನು ಮಾಡಿರಲಿಲ್ಲ. ಯಾರು ಈ ಕೆಲಸವನ್ನು ಮಾಡುವುದಕ್ಕೆ ಆಗಿರಲಿಲ್ಲ, ಯಾರು ಈ ಸಮಸ್ಯೆಯನ್ನು ಬಿಡಿಸುವುದಕ್ಕೆ ಹೋಗಿರಲಿಲ್ಲವೋ ಈ ಸಮಸ್ಯೆಯ ಸೃಷ್ಟಿಗೆ ಕಾರಣರಾಗಿದ್ದರೋ ಅಂಥ ಈ ಸಮಸ್ಯೆಯನ್ನು ಈ ಸರ್ಕಾರ ಪರಿಹಾರ ರಾಜಕೀಯ ಪಕ್ಷಗಳು ಎಂದರೆ ಇದ್ದಿದ್ದೇ ಬಿಡಿ. ಅದರ ಕ್ರೆಡಿಟ್‌ನ್ನು ಜನತಾ ದಳದವರು ತೆಗೆದುಕೊಂಡರೋ, ಅಥವಾ ಬಿ.ಜೆ.ಪಿ. ಯವರು ತೆಗೆದುಕೊಂಡರೋ ಅಥವಾ ಕಾಂಗ್ರೆಸ್‌ನವರು ತೆಗೆದುಕೊಂಡರೋ ಅಥವಾ ಬೇರೆ ಇನ್ನಾವ ಪಕ್ಷದವರು ತೆಗೆದುಕೊಂಡರೋ ಎಂಬುದಕ್ಕಿಂತ ಆ ಭಾಗದ ಜನರ ದೃಷ್ಟಿಯಿಂದ ಒಂದು ದೊಡ್ಡ ಸಾಧನೆಯನ್ನು ಈ ಸರ್ಕಾರ ಮಾಡಿದೆ. ಆ ಭಯದ ವಾತಾವರಣ ಮೋಡಿದಂತೆ ಏನು ಕವಿದಿತ್ತೋ ಅದನ್ನು ದೂರ ಮಾಡುವುದಕ್ಕೆ ಮಾಡಿದ ಪ್ರಯತ್ನ ಒಂದು ಹೆಗ್ಗಳಿಕೆಯಾಗಿದೆ. ಈ ರಾಜ್ಯಪಾಲರ ಭಾಷಣದಲ್ಲಿ ಏನು ಪ್ರಸ್ತಾಪ ಮಾಡಿದ್ದಾರೆ ಅದು ಅತ್ಯಂತ ಸೂಕ್ತವಾದುದೆಂದು ನಾನು ಭಾವಿಸುತ್ತೇನೆ.

ಇನ್ನು ಅಲ್ಲಿ ಪರಿಸ್ಥಿತಿ ಏನು ಉತ್ಕಟ ಮಟ್ಟಕ್ಕೆ ಮುಟ್ಟಿತ್ತು, ಬೇರೆ ಬೇರೆ ಸಮಾಜದವರು ಪರಸ್ಪರ ಪ್ರೀತಿ ವಿಶ್ವಾಸಗಳಿಂದ ನೋಡುವುದಕ್ಕೆ ಸಾಧ್ಯವೇ ಇಲ್ಲವೇನೋ ಎನ್ನತಕ್ಕ ಪರಿಸ್ಥಿತಿ ಇತ್ತು. ಅನೇಕ ಅಂದರೆ ನೂರಾರು ವರ್ಷಗಳಿಂದ ನಡೆದುಕೊಂಡು ಬಂದಿರುವ ಹೋಳಿ ಹಬ್ಬದ ಆಚರಣೆಯಲ್ಲಿ ಯಾರೋ ಒಬ್ಬ ವ್ಯಕ್ತಿ ಹಿಂದಿ ಮಾತನಾಡಿದ ಎಂದು ಒಂದು ಕೋಮಿನವರು, ಅಥವಾ ಇನ್ನ್ಯಾರೋ ಕೋಮಿನವರು ಗಡ್ಡ ಬಿಟ್ಟಿದ್ದ ಎಂದು ಮತ್ತೊಂದು ಕೋಮಿನವರು ಹೀಗೆ ಒಬ್ಬರನ್ನೊಬ್ಬರು ಇರಿದುಕೊಂಡು ಅವರು ಇಷ್ಟು ಜನರನ್ನು ಕೊಂದಿದ್ದಾರೆ, ಅದೇ ರೀತಿ ನಾವೂ ಇಷ್ಟು ಜನರನ್ನು ಕೊಲ್ಲಬೇಕು ಎಂದು ಕೊಂದಿದ್ದಾರೆ. ಆ ಸಮಸ್ಯೆಯನ್ನು ಬಿಡಿಸುವುದಕ್ಕೆ ಇದೇ ಪೊಲೀಸ್ ಇಲಾಖೆ, ಅವತ್ತಿನ ಮುಖ್ಯಮಂತ್ರಿಗಳು, ನಮ್ಮ ಪಕ್ಷದ ಅಧ್ಯಕ್ಷರು, ವಿರೋಧ ಪಕ್ಷದ ನಾಯಕರು ಎಲ್ಲರೂ ಪ್ರಯತ್ನ ಮಾಡಿದರೂ ಈ ಒಂದು ಸಣ್ಣ ಘಟನೆಯನ್ನು ನಡೆಯುವುದನ್ನು ತಪ್ಪಿಸುವುದಕ್ಕೆ ಆಗಲಿಲ್ಲ. ಅಲ್ಲಿನ ಪರಿಸ್ಥಿತಿ ಏನಿದೆ ಅದರ ಹಿನ್ನೆಲೆಯಲ್ಲಿ ಕೋಮು ಭಾವನೆ ಬರದಂತೆ ತಡೆಗಟ್ಟುವ ವ್ಯವಸ್ಥೆ, ಆ ಮನೋಭಾವನೆಯನ್ನು ಮೆಟ್ಟನಿಲುವಂಥ ವ್ಯವಸ್ಥೆಯನ್ನು ಮಾಡಬೇಕಾಗಿರುವುದು ಅತ್ಯಂತ ಅಗತ್ಯವೆಂದು ಹೇಳಬಯಸುತ್ತೇನೆ. ಇದನ್ನು ನಾವು ತಡೆಯದೇ ಹೋದರೆ ಉತ್ತರ

ಭಾರತದ ಕಡೆಗಳಲ್ಲಿ ನಡೆಯುತ್ತಿರುವುದನ್ನು ನಾವು ಇಲ್ಲೂ ಕಾಣಬೇಕಾಗಬಹುದು. ಅಂಥದ್ದು ಇಲ್ಲಿ ಆಗಬಾರದು.

ಇನ್ನು ಜಿಲ್ಲಾ ಪಂಚಾಯಿತಿಗಳ ಬಗ್ಗೆ ಒಂದೆರಡು ವಿಚಾರಗಳನ್ನು ಪ್ರಸ್ತಾಪ ಮಾಡಬಯಸುತ್ತೇನೆ. ತಮಗೆ ಗೊತ್ತಿದೆ, ಜಿಲ್ಲಾ ಪಂಚಾಯಿತಿ ವ್ಯವಸ್ಥೆ ವಿಕೇಂದ್ರೀಕರಣ ವ್ಯವಸ್ಥೆ. ಮಾನ್ಯ ದಿವಂಗತ ನಜೀರ್ ಸಾಬ್‌ರವರು ಹಿಂದೆ ಗ್ರಾಮೀಣಾಭಿವೃದ್ಧಿ ಮಂತ್ರಿಗಳಾಗಿದ್ದಾಗ, ಈ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ವ್ಯವಸ್ಥೆ ವಿಕೇಂದ್ರೀಕರಣದ ಬಗ್ಗೆ ಒಂದು ಕಲ್ಪನೆ ಬಗ್ಗೆ ಅವರು ಕನಸ್ಸನ್ನು ಕಂಡಿದ್ದರು. ತಮಗೂ ಗೊತ್ತಿದೆ. ಇದಕ್ಕಾಗಿ ಜಾಯಿಂಟ್ ಸೆಲೆಕ್ಟ್ ಕಮಿಟಿಯೂ ಕೂಡ ರಚನೆಯಾಗಿತ್ತು, ಅದರಲ್ಲಿ ಅನೇಕ ಹಿರಿಯ ಸದಸ್ಯರು ಸದಸ್ಯರಾಗಿದ್ದಿರಿ. ಇಡೀ ದೇಶದಲ್ಲೇ ಅತ್ಯಂತ ಮಾದರಿಯಾದ ರೀತಿಯಲ್ಲಿ ವಿಕೇಂದ್ರೀಕರಣ ವ್ಯವಸ್ಥೆಯನ್ನು ಜಾರಿಗೆ ತರುವುದಕ್ಕೇ ವ್ಯವಸ್ಥೆ ಆಯಿತು. ಪಶ್ಚಿಮ ಬಂಗಾಳ ಮತ್ತು ಕೇರಳಗಳನ್ನು ಬಿಟ್ಟರೆ ಎಲ್ಲೂ ಕಾನೂನಾಗಿ ಇದು ಜಾರಿಗೆ ಬಂದಿರಲಿಲ್ಲ. ಅದಕ್ಕೆ ಬೇರೆ ಬೇರೆ ಕಾರಣಗಳು ಇರಬಹುದು. ಅದಕ್ಕೆ ತಾಂತ್ರಿಕ ಕಾರಣ ಇರಬಹುದು, ಅದು ಮಾನ್ಯ ರಾಷ್ಟ್ರಾಧ್ಯಕ್ಷರ ಅಂಕಿತಕ್ಕೆ ಹೋಗಬೇಕಾದ ಪರಿಸ್ಥಿತಿ ಇದ್ದಿರಬಹುದು. ಆದರೆ ಎಕ್ಸಿಕ್ಯುಟಿವ್ ಆರ್ಡರ್ ಮೇಲೆ ಅದು ನಮ್ಮಲ್ಲಿ ನಡೆಯುತ್ತಿತ್ತು. ಸರ್ಕಾರದ ಮರ್ಜಿಯ ಮೇಲೆ ಅದು ಅಸ್ತಿತ್ವದಲ್ಲಿ ಇತ್ತು. ರಾಜ್ಯದಲ್ಲಿ ಅತ್ಯಂತ ಮಾದರಿಯಾದ ವ್ಯವಸ್ಥೆಯನ್ನು ತರುವುದಕ್ಕೆ ಸಾಧ್ಯವಾಯಿತು.

ಅಂಥ ವ್ಯವಸ್ಥೆಯನ್ನು ಮತ್ತೆ ಬದಲಾಯಿತಿ ಈಗ ಆ ವ್ಯವಸ್ಥೆಗೆ ಹೋಗುವುದು ಬೇಡ ಹೆಗ್ಗಳಿಕೆ ಬೇಡ ಎಂದು ಹೇಳುವುದಾದರೆ ಇದು ಎಷ್ಟರಮಟ್ಟಿಗೆ ಸರಿ ಎಂದು ನಾನು ತಮ್ಮ ಮೂಲಕ ಕೇಳಬಯಸುತ್ತೇನೆ. ಹಿಂದಿನ ಸರ್ಕಾರ ಏತಕ್ಕೆ ಮುಂದಕ್ಕೆ ಹಾಕಿತ್ತು ಎಂಬುದನ್ನು ತಾವು ನೋಡಬೇಕು. ಬಹಳ ಸಣ್ಣ ಸಣ್ಣ ಕಾರಣಗಳಿಂದಾಗಿ ಇದನ್ನು ಮುಂದಕ್ಕೆ ಹಾಕುತ್ತಾ ಬಂತು. ಸುಪ್ರೀಂ ಕೋರ್ಟ್‌ನವರು ಇವರ ಮೇಲೆ ಎಷ್ಟೇ ಒತ್ತಡ ತಂದರೂ, ಎಷ್ಟು ನೋಟೀಸನ್ನು ಕೊಟ್ಟರೂ, ಎಷ್ಟೇ ತಾಕೀತನ್ನು ಮಾಡಿದರೂ ಇದನ್ನು ಮುಂದಕ್ಕೆ ಹಾಕುತ್ತಾ ಬಂದಿತ್ತು. ಇವತ್ತು ಅದು ಒಂದು ಅಂತಿಮ ರೂಪಕ್ಕೆ ಬಂದಿದೆ. ಹೊಸ ಒಂದು ಸಾಮಾಜಿಕ ನ್ಯಾಯವನ್ನು ಅಳವಡಿಸಿ ಯಾರು ಇದನ್ನು ಕನ್ಸೀವ್ ಮಾಡಿ ತರುವುದಕ್ಕೆ ಪ್ರಯತ್ನ ಮಾಡಿದ್ದರೋ ಅವರ ಕಲ್ಪನೆಯನ್ನೂ ಮೀರಿ, ಅಷ್ಟೇ ಅಲ್ಲ ಎಲ್ಲರ ಕಲ್ಪನೆಯನ್ನೂ ಮೀರಿ ಇವತ್ತು ಅ ಚುನಾವಣೆಗಳು ನಡೆದಿವೆ. ಕೇವಲ ಚುನಾವಣೆ ನಡೆದಿರುವುದು ಅಷ್ಟೇ ಅಲ್ಲ, ಅದಕ್ ಅಕೌಂಟಬಿಲಿಟಿಯೂ ಕೂಡ ಇದೆ. ಇವತ್ತು ಕೆಲವು ಮಾನ್ಯ ಹಿರಿಯ ಸದಸ್ಯರು ಮಾತನಾಡುವಾಗ ಹೇಳಿದರು. ವಿವಿಧ ವರ್ಗಗಳು ಅಂದರೆ ಯಾರಿಗೆ ರಾಜಕೀಯವಾಗಿ ಅಧಿಕಾರವನ್ನು ಹಿಡಿಯುವುದಕ್ಕೆ ಸಾಧ್ಯವಿಲ್ಲವೋ ಅಂಥವರೂ ಕೂಡ ಜಿಲ್ಲಾಪಂಚಾಯಿತಿಗಳಲ್ಲಿ ಅಧ್ಯಕ್ಷರಾಗುವುದಕ್ಕೆ ಅವಕಾಶವಿದೆ, ಸದಸ್ಯರಾಗುವುದಕ್ಕೋ ಸಾಧ್ಯತೆ ಇದೆ. ಈ ದೇಶದ ಈ ರಾಜ್ಯದ ರಾಜಕೀಯದಲ್ಲಿ ತಮ್ಮ ಪಾಲನ್ನು ಪಡೆಯುವುದಕ್ಕೆ ಇದರಲ್ಲಿ ಅವಕಾಶವಿದೆ.

ಮಾನ್ಯ ಅಧ್ಯಕ್ಷರೆ, ದಿವಂಗತ ಮಾನ್ಯ ನಜೀರ್ ಸಾಬ್‌ರವರು ನಮಗೆ, ನಿಮಗ ಎಲ್ಲರಿಗೂ ಅವರು ಬಹಳ ಒಳ್ಳೆಯ ಸ್ನೇಹಿತರು. ಅವರು ಯಾವ ರೀತಿ ಈ ಕಾನೂನನ್ನು ಮಾಡಿದರೆಂದು ತಮಗೆ ನೆನಪಿರಬಹುದು. ಈ ಕಾನೂನಿನ ಮೂಲಕ ತಮ್ಮ ಜೀವನದ ಕೊನೆಯ ಉದ್ದೇಶವನ್ನು ಈಡೇರಿಸುತ್ತಿದ್ದೇನೆ ಎಂಬ ಮಟ್ಟಕ ಅವರು ತರುವುದಕ್ಕೆ ಪ್ರಯತ್ನ ಮಾಡಿದರು. ಕೇವಲ ಅಷ್ಟೇ ಅಲ್ಲ. ದೇಶಾದ್ಯಂತ ಅತ್ಯಂತ ಅನೇಕ ಮೇಧಾವಿಗಳನ್ನು, ಮಾನ್ಯ ಎಸ್.ಕೆ.ದೇ. ಅವರಂಥವರನ್ನು ಭೇಟಿ ಮಾಡಿ ಅವರನ್ನು ಇಲ್ಲಿಗೆ ಕರೆಸಿಕೊಂಡು ಪ್ರತಿಯೊಂದು ವಿಷಯದ ಮೇ ಪ್ರತಿಯೊಂದು ಪ್ರೊವಿಷನ್ ಮೇಲೆ, ಸಣ್ಣ ಸಣ್ಣ ಅಧಿಕಾರಿಗಳ ಜೊತೆಯಲ್ಲಿ ಸ ಚರ್ಚೆ ಮಾಡಿ ಮಾಡಿದ್ದಾರೆ. ಉದಾಹರಣೆಗೆ ಹೇಳುವುದಾದರೆ, ಮಂಡಲ ಪಂಚಾ

ಕಾರ್ಯದರ್ಶಿ ಯಾರು ಆಗಬೇಕೆಂಬ ಬಗ್ಗೆ ಒಂದು ಡಾಕ್ಯುಮೆಂಟ್‌ನ್ನೂ ತಯಾರು ಮಾಡಿದ್ದರು. ಯಾರ್ಯಾರಿಗೆ ಏನೇನು ಅಧಿಕಾರಗಳನ್ನು ಕೊಡಬೇಕು, ಯಾರ್ಯಾರಿಗೆ ಏನೇನು ಜವಾಬ್ದಾರಿಯನ್ನು ನಿರ್ವಹಿಸುವ ಸಾಮರ್ಥ್ಯವಿದೆ, ಯಾರನ್ನು ಇಟ್ಟರೆ ಏನಾಗುತ್ತದೆ, ಅವರಿಗೆ ಪೂರಕವಾಗಿ ಯಾರ್ಯಾರು ಬೇಕು ಎನ್ನುವಂಥ ಪ್ರತಿಯೊಂದು ಅಂಶವನ್ನೂ ಅವರು ಗಮನಿಸಿದ್ದರು ಎಂಬುದು ತಮಗೆ ಗೊತ್ತಿದೆ.

ಅಷ್ಟು ವ್ಯವಸ್ಥಿತ ರೂಪದಿಂದ ಅದನ್ನು ಜಾರಿಗೆ ತರುವುದಕ್ಕೆ ಅವರು ಪ್ರಯತ್ನ ಮಾಡಿದ್ದರು. ಆದರೆ ದುರ್ದೈವದಿಂದ ಅದು ಪೂರ್ಣ ಜಾರಿಗೆ ಬರಲಿಲ್ಲ. ನಾವು ಪದೇ ಪದೇ ಹೇಳುತ್ತಿದ್ದೇವೆ? ಒಂದು ಫೈನಾನ್ಸ್ ಕಮಿಷನ್‌ನ್ನು ಮಾಡಬೇಕು, ಅದು ಪ್ರತಿಯೊಂದನ್ನೂ ರಿವ್ಯೂ ಮಾಡುವಂತೆ ಇರಬೇಕು, ಎಂಬುದರ ಜೊತೆಗೆ ಪ್ರತಿಯೊಂದು ಮಂಡಲಕ್ಕೂ ಹೋಗಿ ನೋಡಿಕೊಂಡು ಬರಬೇಕೆಂಬ ಆಸೆ ಅವರಿಗಿತ್ತು. ಆದರೆ ದುರ್ದೈವದಿಂದ ದೇವರು ಅವರಿಗೆ ಆಯುಷ್ಯವನ್ನು ಕೊಡಲಿಲ್ಲ. ಅವರು ವಿಕೇಂದ್ರೀಕರಣ ವ್ಯವಸ್ಥೆಯನ್ನು ಬಿಟ್ಟುಹೋಗಿರುವುದು ತಮಗೆ ಗೊತ್ತಿದೆ., ಇವತ್ತು ಉದಾಹರಣೆಗೆ ಹೇಳುವುದಾದರೆ, ಯಾವುದೇ ಒಂದು ಸಂಸ್ಥೆ ಬೆಳೆಯಬೇಕಾದರೆ ಒಂದೆರಡು ವರ್ಷಗಳಲ್ಲಿ ಬೆಳೆಯುವುದಿಲ್ಲ. ಈ ಸಂಸ್ಥೆ ಹುಟ್ಟಿ ನೂರಾರು ವರ್ಷವಾಗಿತ್ತು. ಸ್ವಾತಂತ್ರ್ಯಪೂರ್ವದಿಂದ ಇದು ಇತ್ತು. ಇವತ್ತು ನಮ್ಮ ಈ ವೇದಿಕೆಯಲ್ಲಿ ಭಾಷಣ ಮಾಡಬೇಕಾದರೆ, ತಾವು ಆ ಅಧ್ಯಕ್ಷ ಪೀಠದಲ್ಲಿ ಕೂತುಕೊಳ್ಳಬೇಕಾದರೆ ವ್ಯವಸ್ಥಿತವಾಗಿ ಬರಬೇಕಾದರೆ ಇಷ್ಟು ವರ್ಷಗಳು ಬೇಕಾಯಿತು. ತಮಗೆ ಗೊತ್ತಿದೆ, ಯಾವ ರೀತಿ ಈ ಲೆಜಿಸ್ಲೇಚರ್ ಕೆಲಸ ಮಾಡುತ್ತಿವೆ, ಮಂಡಲ್ ಪಂಚಾಯಿತಿಗಳು ಕೆಲಸ ಮಾಡುತ್ತಿದ್ದುವು ಎಂಬುದು. ಸುಮಾರು 20-25 ಸಾವಿರ ಸಣ್ಣ ಸಣ್ಣ ಹ್ಯಾಮ್ಲೆಟ್ಸ್‌ಗಳಲ್ಲಿ ಬೀದಿ ದೀಪಗಳನ್ನು ಹಾಕುವುದಕ್ಕೆ ಸಾಧ್ಯ ಆಗಿರಲಿಲ್ಲ. ಕುಡಿಯುವ ನೀರನ್ನು ಕೊಡುವುದಕ್ಕೆ ಸಾಧ್ಯವಾಗಿರಲಿಲ್ಲ. ರಸ್ತೆಗಳನ್ನು ಮಾಡಿ ಕೊಡುವುದಕ್ಕೆ ಸಾಧ್ಯವಾಗಿರಲಿಲ್ಲ. ಅಂಥ ಕೆಲಸವನ್ನು ಕಳೆದ 2-3 ವರ್ಷಗಳ ಅವಧಿಯಲ್ಲಿ ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯಿತಿ ವ್ಯವಸ್ಥೆಯಲ್ಲಿ ಮಾಡುವುದಕ್ಕೆ ಸಾಧ್ಯವಾಯಿತು.

ಈ ಒಂದು ಯಂತ್ರವನ್ನು ಇನ್ನೂ ಹೆಚ್ಚು ಬಲಪಡಿಸಲು ಅದನ್ನು ತಿರುಚಿ ರಾಜಕೀಯ ಕಾರಣಕ್ಕೆ ಬಳಸುತ್ತಿದ್ದಾರೆ. ಇದನ್ನು ಸರಿಪಡಿಸಬೇಕೆಂಬ ಉದ್ದೇಶದಿಂದ ಇದಕ್ಕೆ ಬೆಂಬಲ ಬೇಕು. ಅಷ್ಟೇ ಅಲ್ಲ, ಇದಕ್ಕೆ ಪೂರಕವಾಗಿ ಏನು ಆಯೋಗ ರಚನೆ ಮಾಡಿದ್ದಾರೆ ಅದರ ನೇತೃತ್ವವನ್ನು ಕೃಷ್ಣಸ್ವಾಮಿಯವರು ವಹಿಸಿದ್ದಾರೆ. ಅವರನ್ನು ಗ್ಯಾಟ್ ಬಗ್ಗೆ ಭಾಷಣ ಮಾಡುವುದಕ್ಕೆ ಕರೆದಿದ್ದೆವು. ಈ ಸಂಸ್ಥೆಗಳು ಗ್ರಾಮೀಣ ಮಟ್ಟದಲ್ಲಿ ಕೆಲಸ ಮಾಡಬೇಕಾಗಿರುತ್ತದೆ. ಅವರು ರಿಸರ್ವ್ ಬ್ಯಾಂಕಿನಲ್ಲಿ ಒಬ್ಬ ಅಧಿಕಾರಿಗಳು ಇರಬಹುದು, ಮತ್ತೊಂದು ಆಗಿರಬಹುದು, ಆದರೆ ಎಷ್ಟರಮಟ್ಟಿಗೆ ಈ ಸಂಸ್ಥೆಗಳಲ್ಲಿ ಪ್ರಾಯೋಗಿಕವಾಗಿ ಕೆಲಸ ಮಾಡುವ ಬಗ್ಗೆ ಯಾವ ಮಟ್ಟಿಗೆ ಕೊಡಬಹುದು? ಅವರಿಂದ ಎಷ್ಟರಮಟ್ಟಿಗೆ ಈ ಸಮಿತಿ ಆಗಬಹುದೆಂಬುದನ್ನು ನೋಡಬೇಕಾದುದು ಅವಶ್ಯಕವಿದೆ. ಅದಕ್ಕೆ ಅಗತ್ಯವಾಗಿ ಏನೇನು ಬದಲಾವಣೆಗಳು ಬೇಕು ಅದು ಇವರಿಂದ ಆಗಲಿ ಎಂದು ನಾನು ಹಾರೈಸುತ್ತೇನೆ. ಇನ್ನು ನಾನು ಮುಖ್ಯವಾಗಿ ಕೃಷಿ ಇಲಾಖೆ ಬಗ್ಗೆ ಪ್ರಸ್ತಾಪ ಮಾಡಬಯಸುತ್ತೇನೆ. ಇದನ್ನು ಯಾರು ತಪ್ಪಾಗಿ ಭಾವಿಸಬಾರದು. ಇದು ಒಂದು ರೀತಿಯಿಂದ ಬಿಳಿ ಆನೆ ಇದ್ದ ಹಾಗೆ, ಇದರಿಂದ ರೈತರಿಗೆ ಏನೂ ಪ್ರಯೋಜನವಿಲ್ಲ. ಯಾರಿಗೂ ಪ್ರಯೋಜನ ಇಲ್ಲವೆಂಬುದು ಅದು ವಾಸ್ತವಿಕ ಸತ್ಯ. ಬರೀ ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರದಿಂದ ಬರುವಂತಹ ಸಬ್ಸಿಡಿ ಎಷ್ಟರಮಟ್ಟಿಗೆ ರೈತರಿಗೆ ಮುಟ್ಟುತ್ತದೋ ಗೊತ್ತಿಲ್ಲ. ಅದನ್ನು ಕೊಡತಕ್ಕ ವ್ಯವಸ್ಥೆಯಲ್ಲಿ ಅಶಾಸ್ತ್ರೀಯ ವ್ಯವಸ್ಥೆ ಇದೆ ಎಂದರೆ ತಪ್ಪಾಗುವುದಿಲ್ಲ.

ಯಾವುದೋ ಒಂದು ಕಾರ್ಯಕ್ರಮ ಬಂತು ಎಂದು ತಾಲ್ಲೂಕಿಗೆ ಒಬ್ಬ ಸೀನಿಯರ್ ಗೆಜೆಟ್ಟೆಡ್ ಆಫೀಸರ್, ಅಸಿಸ್ಟೆಂಟ್ ಡೈರೆಕ್ಟರ್ ಆಫ್ ಅಗ್ರಿಕಲ್ಚರ್, ಅವರ ಕೈಕೆಳಗೆ ಅಗ್ರಿಕಲ್ಚರಲ್ ಆಫೀಸರ್ಸ್, ಅಸಿಸ್ಟೆಂಟ್ಸ್ ಅಗ್ರಿಕಲ್ಚರಲ್ ಆಫೀಸರ್ಸ್ ಗ್ರಾಮಸೇವಕರು ಎಲ್ಲಾ ಸೇರಿ ಜಾಸ್ತಿ ಸಿಬ್ಬಂದಿಯನ್ನು ಒದಗಿಸುತ್ತಿದ್ದೀರಿ. ಆದರೆ ಪ್ರಯೋಜನ ಮಾತ್ರ ಬಹಳ ಶೂನ್ಯವೆಂದರೆ ತಪ್ಪಾಗುವುದಿಲ್ಲ. ಬಹುಶಃ ಅವರಿಗೆ ಮಾರ್ಗದರ್ಶನ ಇರಲಿಕ್ಕಿಲ್ಲ. ಮಾಡಬೇಕಾದ ಕಾರ್ಯಕ್ರಮದ ಬಗ್ಗೆ ಸ್ಪಷ್ಟವಾದ ಕಲ್ಪನೆ ಇರಲಿಕ್ಕಿಲ್ಲ. ಅಥವಾ ಬೇಕಾದ ಹಣಕಾಸಿನ ಬೆಂಬಲ ಇಲ್ಲವೆಂದು ನಾನು ತಿಳಿದುಕೊಳ್ಳುವುದಿಲ್ಲ. ಏಕೆಂದರೆ ಬಜೆಟ್‌ನಲ್ಲಿ ಬರುವಂತಹ ಅನುದಾನಗಳನ್ನು ಸೆಂಟ್ರಲ್ ಸ್ಪಾನ್ಸರ್ ಸ್ಕೀಂನಿಂದ ಬರತಕ್ಕ ಐದಾರು ಕೋಟಿ ರೂಪಾಯಿಗಳ ಹಣವನ್ನು ಈ ಇಲಾಖೆಗೆ ಖರ್ಚು ಮಾಡಲಾಗುತ್ತದೆ. ಇದರ ಪರಿಣಾಮ ಏನು? ರೈತರಿಗೆ ಏನಾದರೂ ಬೇಕಾದರೆ ಅವರೇ ಪಡೆದುಕೊಂಡು ಬರಬೇಕೇ ಹೊರತು ಇವರಿಂದ ಒಂದು ಕಾಸೀನ ಪ್ರಯೋಜನ ಕೂಡ ಆಗುವುದಿಲ್ಲ. ಈ ಇಲಾಖೆಯನ್ನು ವಾಸ್ತವಿಕವಾಗಿ, ಶಾಸ್ತ್ರೀಯವಾಗಿ ಪುನರ್ ಸಂಘಟನೆ ಮಾಡುವುದು ಅಗತ್ಯ ಎಂದು ಹೇಳಬಯಸುತ್ತೇನೆ. ಇದರ ವಿಸ್ತರಣೆಯಿಂದ ರೈತರಿಗೆ ಏನು ಲಾಭವಾಗುತ್ತದೆ? ಆದ್ದರಿಂದ ಆ ಕೆಲಸ ಆಗಬೇಕಾದರೆ ಇದರ ಪುನರ್‌ಸಂಘಟನೆ ಆಗಬೇಕು. ಇದು ಹೊಸ ರೀತಿಯಲ್ಲಿ ಬರುವಂತೆ ಆಗಬೇಕೆಂದು ಹೇಳುತ್ತೇನೆ. ಒಂದು ರೀತಿಯಲ್ಲಿ ಪ್ರಾಮಾಣೀಕರು, ಹಿಡಿದ ಕೆಲಸ ಮಾಡುವುದು ಬೈರೇಗೌಡರು, ಅವರು ಇದರ ನೇತೃತ್ವವನ್ನು ವಹಿಸಿದ್ದಾರೆ.

ಅವರು ಮಾಡಲಿ, ಮಾಡಲಿಕ್ಕೆ ಸಮಯ ಇಲ್ಲ. ಪ್ರಾಯೋಗಿಕವಾಗಿ ಏನಾಗಿದೆ ಎಂದು ನಮಗೂ ಗೊತ್ತಿಲ್ಲ. ಅನೇಕ ಭಾಗಗಳಲ್ಲಿ ಅಲ್ಪಸಲ್ಪ ಕೆಲಸ ನಡೆಯುತ್ತಿದ್ದರೂ ಸಹ ಅದು ಬೈರೇಗೌಡರ ಹೆದರಿಕೆಯಿಂದ ನಿಂತುಹೋಗಿದೆ. ಎಲ್ಲಿ ಏನಾಗುತ್ತದೋ, ಎಲ್ಲಿ ಮನೆಗೆ ಹೋಗುತ್ತೇವೆ ಎಂದು ಇಡೀ ಇಲಾಖೆಯೇ ಆ ರೀತಿ ಆಗಿದೆ. ಅವರು ಮಾಡುವುದು ತಪ್ಪು ಎಂದು ನಾನು ಹೇಳುವುದಿಲ್ಲ. ಬಹಳ ವ್ಯವಸ್ಥಿತವಾಗಿ ಹೊಸ ವಾತಾವರಣ ನಿರ್ಮಾಣ ಮಾಡಿ ಅವರ ನೇತೃತ್ವದಲ್ಲಿ ಈ ಕೆಲಸ ಮುಂದುವರಿಯಲಿ ಎಂದು ನಾನು ಆಶಿಸುತ್ತೇನೆ. ಇನ್ನು ಕೃಷಿ ವಿಶ್ವವಿದ್ಯಾನಿಲಯದ ಬಗ್ಗೆ ಕೆಲವು ವಿಚಾರಗಳನ್ನು ತಮ್ಮ ಗಮನಕ್ಕೆ ತರಬಯಸುತ್ತೇನೆ. ಕೃಷಿ ವಿಶ್ವವಿದ್ಯಾನಿಲಯ 8-9 ವರ್ಷಗಳ ಹಿಂದೆ ಎಂದಾಗಿ ಧಾರವಾಡದಲ್ಲಿ ಒಂದು, ಬೆಂಗಳೂರಿನಲ್ಲಿ ಒಂದು ನಿರ್ಮಾಣ ಆಯಿತು. ಕೃಷಿ ವಿಶ್ವವಿದ್ಯಾನಿಲಯ ಎಷ್ಟು ಪ್ರಾಮುಖ್ಯ? ಇತ್ತೀಚಿನ ದಿನಗಳಲ್ಲಿ ಪ್ರತಿಯೊಂದಕ್ಕೂ, ನಾವು ಹೈಬ್ರೀಡ್ ಬಳಸುತ್ತೇವೆ, ನಾವು ಪರಾವಲಂಬಿಗಳಾಗಿದ್ದೇವೆ, ನಾವು ತಯಾರಿಸಿದ ಬೀಜಗಳನ್ನು ಹಾಕುವುದಕ್ಕೆ ನಾವು ತಯಾರಿಲ್ಲ. ನಾವು ತಯಾರಿಸಿದ ಗೊಬ್ಬರವನ್ನು ಉಪಯೋಗಿಸಿ ಬೆಳೆ ಬೆಳೆಯುವುದಕ್ಕೆ ನಾವು ತಯಾರಿಲ್ಲ. ಪುರಾತನ ಕಾಲದಿಂದ ಬಂದಂತಹ ಆಯಿಲ್, ಬೇವಿನ ಎಣ್ಣೆ ಹೊಡೆದು ಹುಳುಗಳನ್ನು ಕಂಟ್ರೋಲ್ ಮಾಡುವುದಕ್ಕೆ ಸಾಧ್ಯವಿಲ್ಲ. ಇದೆಲ್ಲಾ ನೋಡಿದರೆ ಇವತ್ತು ಬಹಳ ಪೈಪೋಟಿ ಇದೆ.

ನಾವು ಬದಲಾವಣೆ ಮಾಡದಿದ್ದರೆ ನಾವು ಇನ್‌ವೆಸ್ಟ್‌ಮೆಂಟ್ ಮಾಡದಿದ್ದರೆ ನಾವು ಬಂಡವಾಳ ಹೂಡದಿದ್ದರೆ ನಾವು ಬದುಕುವುದಕ್ಕೆ ಸಾಧ್ಯವಿಲ್ಲ. ಬರೀ ಯಾವುದೋ ಓಬಿರಾಯನ ಕಾಲದ ಸಂಶೋಧನೆಯಿಂದ ಹೊಸ ತಳಿಯಿಂದ ನಾವು ಬಹಳಷ್ಟು ಸಾಧನೆ ಮಾಡುತ್ತೇವೆ, ಯಶಸ್ಸು ಕಾಣುತ್ತೇವೆ ನಾವು ಇದರಲ್ಲಿ ಲಾಭ ಮಾಡಿಕೊಳ್ಳುತ್ತೇವೆ ಎಂದರೆ ಸಾಧ್ಯವಿಲ್ಲ, ಇದಕ್ಕೆ ಬೇಕಾದುದು ನವೀನ ರೀತಿಯ ಸಂಶೋಧನೆ. ಕಾಲಕಾಲಕ್ಕೆ ತಕ್ಕಂತೆ ಎಲ್ಲಾ ರೀತಿಯ ಹೊಸ ಹೊಸ ತಳಿಗಳನ್ನು ಮಾಡದಿದ್ದರೆ ಉಳಿಗಾಲ ಇಲ್ಲವೆಂದು ಸೂಕ್ಷ್ಮವಾಗಿ ಹೇಳಬಯಸುತ್ತೇನೆ. ಮಲ್ಟಿ ನ್ಯಾಷನಲ್ಸ್ ಮೇಲೆ ಬಹು ರಾಷ್ಟ್ರೀಯ ಕಂಪನಿಗಳ ಮೇಲೆ ನಾವು ಅಪೇಕ್ಷೆ ಮಾಡುವುದು ತಪ್ಪಲ್ಲವೆಂದು ಹೇಳುತ್ತೇನೆ. ಅವರು ನೂರಾರು ಕೋಟಿ ರೂಪಾಯಿಗಳ ಬಂಡವಾಳ ಹಾಕಿ

ಸಂಶೋಧನೆ ಮಾಡುವುದು ಒಳ್ಳೆಯ ತಳಿಗಳು ಬರಲಿ ಎಂದು. ನಾವು ವಿಶ್ವವಿದ್ಯಾನಿಲಯಗಳಲ್ಲಿ ಏನು ಮಾಡುತ್ತಿದ್ದೇವೆ ಎಂದರೆ ಬಹಳಷ್ಟು ಕಡಿಮೆ ರೀತಿಯಲ್ಲಿ ಅನುದಾನ ಕೊಡುತ್ತಿದ್ದೇವೆ. ಅಲ್ಲಿ ಯಾವುದೇ ಸಂಶೋಧನಾ ಕಾರ್ಯಕ್ರಮಗಳು ನಡೆಯುತ್ತಿಲ್ಲ. ಇನ್ನೂ ಓಬಿರಾಯನ ಕಾಲದಲ್ಲಿ ಇವೆ. ಏನೋ ಕೆಲಸ ಮಾಡಬೇಕು ಆ ರೀತಿ ನಡೆಸಿಕೊಂಡು ಬರುತ್ತಿದ್ದಾರೆ. ಉದಾಹರಣೆಗೆ ಹೇಳುತ್ತೇನೆ, ಇವತ್ತು ಕರ್ನಾಟಕ ಕೃಷಿ ವಿಶ್ವವಿದ್ಯಾನಿಲಯದಲ್ಲಿ 300 ಅಧ್ಯಾಪಕರುಗಳ ಹುದ್ದೆಗಳು ಖಾಲಿ ಇವೆ. ಇವನ್ನು ತುಂಬಬೇಕಾದರೆ ರಾಜ್ಯಸರ್ಕಾರ ಪಾಲು ಕೊಡುವುದಿಲ್ಲ.

ಇಂಡಿಯನ್ ಕೌನ್ಸಿಲ್ ಫಾರ್ ಅಗ್ರಿಕಲ್ಚರ್‌ಗೆ ನೂರಾರು ಕೋಟಿ ರೂಪಾಯಿಗಳನ್ನು ಸಂಶೋಧನೆಗಾಗಿ ಕೊಡುತ್ತಾರೆ. ಅದಕ್ಕೆ ಬೇಕಾದ ಸಿಬ್ಬಂದಿಯನ್ನು ಒದಗಿಸುತ್ತಾರೆ. ಅದರ ಲಾಭ ಪಡೆದುಕೊಂಡು ಸಿಬ್ಬಂದಿ ನೇಮಿಸಬೇಕಾದರೆ ಹಣಕಾಸಿನ ಬೆಂಬಲ ಕೊಡುತ್ತಾರೆ. 25-50 ಕೆಲವು ವೇಳೆ 100ಕ್ಕೆ 100 ಕೊಡುತ್ತಾರೆ. ಆದರೆ ಅವರಿಗೆ ಅದನ್ನು ಪಡೆಯುವುದಕ್ಕೆ ಸಾಧ್ಯವಾಗುವುದಿಲ್ಲ. ಇದನ್ನು ಮಾಡದಿದ್ದರೆ ಸಂಶೋಧನೆಯನ್ನು ಮುಂದುವರಿಸಲು ಹೋದರೆ ನಮ್ಮ ಭಾಗದಲ್ಲಿರುವ ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕ ಹತ್ತಿಗೆ ಹೆಚ್ಚು ಒತ್ತು ಕೊಟ್ಟು ಬೆಳೆಯುವಂತಹ ಪ್ರದೇಶ. ಬಹಳ ಹೆಚ್ಚು ಪ್ರಮಾಣದಲ್ಲಿ ಹತ್ತಿ ಬೆಳೆಯುತ್ತಾರೆ. ಅದರಲ್ಲೂ ವಿಶೇಷವಾಗಿ ಉತ್ತರ ಕರ್ನಾಟಕ ಭಾಗದಲ್ಲಿ ಎರಡು ಡಿವಿಜನ್‌ಗಳಿವೆ. ಹೈದರಾಬಾದ್ ಕರ್ನಾಟಕ, ಗುಲ್ಬರ್ಗಾ, ಬೆಳಗಾಂ ಡಿವಿಜನ್. ಮಲೆನಾಡಿನಲ್ಲಿ ಶಿವಮೊಗ್ಗ ಮತ್ತು ಅನೇಕ ಕಡೆ ಹತ್ತಿ ಬೆಳೆಯನ್ನು ವಾಣಿಜ್ಯ ಬೆಳೆಯಾಗಿ ಬೆಳೆಯುತ್ತಾರೆ. ತಮಗೆ ಗೊತ್ತಿರಬಹುದು, ಹತ್ತಿ ಬಹಳ ದುಃಖದ ಬೆಳೆಯಾಗಿ ಪರಿವರ್ತನೆ ಆಗುತ್ತಿದೆ. ನಾವು ಬೆಳೆ ಹಾಕುತ್ತೇವೆ, ಆದರೆ ಯಾವ ರೀತಿ ಫಲ ಇರಬೇಕು ಇಳುವರಿ ಕೊಡತಕ್ಕದ್ದು ಇರಬೇಕು ಅದು ಇರುವುದಿಲ್ಲ. ಹೋದ ವರ್ಷ ಮತ್ತು ಈ ವರ್ಷ ಬೀಜಕ್ಕಾಗಿ ದೊಡ್ಡ ಹೋರಾಟ ಆದದ್ದು ನೋಡಿದ್ದೇವೆ. ಸರಿಯಾಗಿ ಬೀಜ ಮಾಡತಕ್ಕ ವ್ಯವಸ್ಥೆ ಇಲ್ಲ.

ಇದರಿಂದಾಗಿ ನಾವು ಪಡೆಯುವಂತಹ ಹತ್ತಿ ಬೀಜವನ್ನು ತೆಗೆದುಕೊಂಡು ಹೋಗಿ ಹಾಕಿದರೆ ನಾಲ್ಕಾರು ಸಾವಿರ ರೂಪಾಯಿ ಖರ್ಚು ಮಾಡಿ ಕೊನೆಗೆ ಒಂದು ಕ್ವಿಂಟಾಲ್ ಅಲ್ಲ ಕೆ.ಜಿ. ಕೂಡ ಬೆಳೆದುಕೊಂಡು ಬರಲಾರದೆ ಅನೇಕ ಜನ ರೈತರು ಸಾಲದ ಭಾರ ಹೊರಲಾರದೆ ಆತ್ಮಹತ್ಯೆ ಮಾಡಿಕೊಂಡ ಪ್ರಸಂಗ ಇದೆ. ಇದನ್ನು ತಾವು ಗಮನಿಸಿದ್ದೀರೆಂದು ನಾನು ಭಾವಿಸಿದ್ದೇನೆ. ಹತ್ತಿ ಬೆಳೆ ಎಷ್ಟು ಹಿಂದೆ ಇದೆ ಎಂದರೆ 1972-73ರಲ್ಲಿ ಬಿಡುಗಡೆ ಮಾಡಿದ ವರಲಕ್ಷ್ಮಿ ಹತ್ತಿಯನ್ನು ಬಿಟ್ಟು ಬೇರೆ ಬೆಳೆ ಇವತ್ತಿನವರೆಗೂ ಬೆಳೆದಿಲ್ಲ. ಹತ್ತಿ ಬೆಳೆಯನ್ನು ಅಪ್‌ಗ್ರೇಡ್ ಮಾಡತಕ್ಕ ಕೆಲಸ ಅಲ್ಲೇ ನಿಂತು ಹೋಗಿದೆ. ಹೀಗಾಗಿ ರೈತರು ಬಹಳ ತೊಂದರೆಗೆ ಈಡಾಗುತ್ತಿದ್ದಾರೆ. ಇದರಿಂದ ಏನು ಆಗುತ್ತದೆ ಎಂದರೆ ಆ ತಳಿಗಳಿಂದ ಲಾಭ ಬರುವುದಿಲ್ಲ. ಇಳುವರಿ ಬರುವುದಿಲ್ಲ. ಹೊರ ರಾಜ್ಯಗಳಿಂದ ಗೊತ್ತಿಲ್ಲದ ಹಾಗೆ ಬೀಜಗಳನ್ನು ತಂದು, ಕಾಟನ್ ಕಂಟ್ರೋಲ್ ಆಕ್ಟ್‌ನಲ್ಲಿ ಕಂಟ್ರೋಲ್ ಮಾಡಿದರೂ ಕೂಡ ಇಲ್ಲೀಗಲ್ ಆಗಿ ತಂದು ಬೆಳೆಯುವಂತಹ ಪ್ರಯತ್ನ ಮಾಡುತ್ತಿದ್ದರು. ಇದರಿಂದಾಗಿ ಇಳುವರಿ ಹೋಗುತ್ತದೆ. ತಾವು ಕೂಡ ಹತ್ತಿ ಬೆಳೆದಿದ್ದೀರಿ. ಇವತ್ತು ಆ ಹಳೆ ಹತ್ತಿ ಬರುತ್ತಿಲ್ಲ ಎಂಬುದನ್ನು ಈ ಸಂದರ್ಭದಲ್ಲಿ ನಾನು ತಮ್ಮ ಗಮನಕ್ಕೆ ತರಬಯಸುತ್ತೇನೆ. "ಚಿಲ್ಲಿ"ಯಾಗಿರಬಹುದು, "ಕಬ್ಬು" ಆಗಿರಬಹುದು "ರಾಗಿ" ಆಗಿರಬಹುದು, "ರೇಷ್ಮೆ" ಆಗಿರಬಹುದು ಇಂಥ ಎಲ್ಲ ಬೆಳೆಗಳ ಮೇಲೆ ಸಂಶೋಧನೆ ಆಗತಕ್ಕದ್ದು ಅಗತ್ಯ. ಇದಕ್ಕೆ ಸರ್ಕಾರದ ಬೆಂಬಲ ಬೇಕು. ಸರ್ಕಾರ ಇದಕ್ಕೆ ಬೆಂಬಲ ಕೊಡತಕ್ಕದ್ದು ಅಗತ್ಯ ಎಂದು ನಾನು ಈ ಸಂದರ್ಭದಲ್ಲಿ ಮಾನ್ಯ ಅಧ್ಯಕ್ಷರು ಮೂಲಕ ಹೇಳಬಯಸುತ್ತೇನೆ. ನೀರಾವರಿ ಬಗ್ಗೆ ತಾವು ಪ್ರತ್ಯೇಕವಾಗಿ ಚರ್ಚೆಯನ್ನು ಇಟ್ಟಿದ್ದೀರಿ. ನಾನು ಸಹ ಆ ವಿಶೇಷವಾದ ಚರ್ಚೆಯಲ್ಲಿ ಭಾಗವಹಿಸಲಿಕ್ಕೆ ಬಯಸುತ್ತೇನೆ. ಆದರೆ ಕೆಲವು ವಿಷಯಗಳ ಬಗ್ಗೆ ಮಾತ್ರ ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

ಅಧ್ಯಕ್ಷರೆ, ನೀರಾವರಿ ಪ್ರದೇಶಗಳು ಏನಿವೆ, ಒಂದು ರೀತಿಯಿಂದ ವಿಚಿತ್ರ ಪರಿಸ್ಥಿತಿಯಲ್ಲಿ ಅವು ನಡೆಯುತ್ತಿವೆ. ಅಲ್ಲಿ ರೈತರಿಗೆ ನೀರನ್ನು ಕೊಡುತ್ತಿದ್ದಾರೆ. ಅವರುಗಳಿಗೆ ನಿರ್ವಹಣಾ ವೆಚ್ಚಕ್ಕಾಗಿ ದುಡ್ಡು ಏನು ಕೊಡಬೇಕೋ ಅದನ್ನು ಕೊಡುವುದಿಲ್ಲ. ವರ್ಷದ ಕೊನೆಯಲ್ಲಿ ನಿರ್ವಹಣಾ ವೆಚ್ಚದ ಹಣವನ್ನು ರಿಲೀಸ್ ಮಾಡುತ್ತಾರೆ. ದಿನಗೂಲಿ ಮೇಲೆ ನೀರು ಬಿಡುವುದಕ್ಕೆ ಏನಿದ್ದರು ಅವರೆಲ್ಲಾ ರೆಗ್ಯುಲರೈಸ್ ಆಗಿದ್ದಾರೆ. ಅಲ್ಲಿ ಕೆಲಸ ಮಾಡುವಂಥ, ಕೂಲಿ ಮಾಡುವಂಥ, ಗೇಟ್ ತೆಗೆಯುವಂಥ ಸೂಪರ್‌ವೈಸ್ ಮಾಡುವಂಥ ಜನ ಬೇಕು. ಅವರನ್ನು ತೆಗೆದುಕೊಳ್ಳುವುದಕ್ಕೆ ಅಧಿಕಾರ ಇಲ್ಲ. ಆದರೂ ನಿರ್ವಹಣೆ ಮಾಡಬೇಕು. ಅದಕ್ಕಾಗಿ ಅವರದೇ ಆದಂಥ ವ್ಯವಸ್ಥೆಯನ್ನು ಮಾಡಿಕೊಂಡಿರುತ್ತಾರೆ. ಇವರು ಕೊಡುವ ಹಣ ವರ್ಷದ ಕೊನೆಗೆ ಬರುತ್ತದೆ. ಅಲ್ಲಿಯವರೆಗೆ ಇವರು ಮಾಡುತ್ತಾ ಹೋಗಬೇಕು. ಇವರು ಮಾಡುತ್ತಾ ಹೋಗುವಂಥ ವ್ಯವಸ್ಥೆಯಲ್ಲಿ ನಿರ್ವಹಣಾ ವೆಚ್ಚ ಏನು ಬರುತ್ತದೆ ಅದಕ್ಕೆ ಒಂದು ರೀತಿಯಾಗಿ ಪ್ಯಾರಲಲ್ಲಾಗಿ ಕಾಯಿದೆಗೆ ವಿರೋಧವಾದಂಥ ಒಂದು ವ್ಯವಸ್ಥೆ ನಿರ್ಮಾಣವಾಗುವಂಥ ಪರಿಸ್ಥಿತಿಯನ್ನು ನಾವು ನೋಡಿದ್ದೇವೆ. ಆ ಜನರಿಗೆ ಹಣ ಕೊಡಬೇಕು, ಅದನ್ನು ನಡೆಸಿಕೊಂಡು ಹೋಗುವುದಕ್ಕೆ. ಅದಕ್ಕಾಗಿ ಬೇರೆ ಬೇರೆ ಎಸ್ಟಿಮೇಟುಗಳನ್ನು ಮಾಡಿ ಬೇರೆ ಬೇರೆ ರೀತಿಯಿಂದ ಹಣ ಖರ್ಚು ಹಾಕಿ ಅವರಿಗೆ ಕೊಡುತ್ತಾರೆ.

ನೀರಾವರಿ ಇಲಾಖೆಯಲ್ಲಿ ಈ ರೀತಿಯಾದ ಸಂದರ್ಭದಲ್ಲಿ 100ಕ್ಕೆ 20ರಷ್ಟು ಹಣ ಕೂಡ ಸಮುಪಯೋಗವಾಗುವುದಿಲ್ಲ ಎನ್ನುವಂಥ ಒಂದು ಆಪಾದನೆಯನ್ನೂ ಸಹ ನಾನು ಕೇಳಿದ್ದೇನೆ. ಅದನ್ನು ಸರಿ ಮಾಡುವಂಥ ಹೊಸ ವ್ಯವಸ್ಥೆಯನ್ನು ರೂಢಿಸದೇ ಹೋದರೆ ಕಷ್ಟವಾಗುತ್ತದೆ. ಏನಾದರೂ ಒತ್ತಡಗಳನ್ನು ನಾವು ಮಾಡಿದರೆ ಅಲ್ಲಿ ನೀರು ಬರುವುದಿಲ್ಲ. ಮಾಡುವುದಕ್ಕೆ ಬಿಟ್ಟರೆ ಅವ್ಯವಸ್ಥೆಯಾಗುತ್ತದೆ. ಇದಕ್ಕೆ ಏನಾದರೂ ಪರ್ಯಾಯ ವ್ಯವಸ್ಥೆಯನ್ನು ಮಾಡಬೇಕು. ಎಷ್ಟು ಅನಾಹುತ ಈ ವ್ಯವಸ್ಥೆಯಲ್ಲಿದೆ ಎಂದರೆ ಒಂದು ರೀತಿಯಿಂದ ಕಾನೂನಿಗೆ ವಿರುದ್ಧವಾದ ಕೆಲಸಗಳು ಹಿರಿಯ ಅಧಿಕಾರಿಗಳ ಮಟ್ಟಿಗೆ ನಡೆಯುತ್ತಿದೆ ಎಂದು ಹೇಳುತ್ತಾರೆ. ಅದು ಎಷ್ಟರಮಟ್ಟಿಗೆ ನಿಜವೋ ಗೊತ್ತಿಲ್ಲ. ಹಿರಿಯ ಅಧಿಕಾರಿಗಳ ಹತ್ತಿರ 100 ರೂಪಾಯಿಗಳ ಎಸ್ಟಿಮೇಟ್ ಹೋದರೆ ಅದರಲ್ಲಿ 10 ಪರ್ಸೆಂಟ್‌ಕಮಿಷನನ್ನು ಕೊಡದೇ ಹೋದರೆ ಆ ಎಸ್ಟಿಮೇಟ್ ಸ್ಯಾಂಕ್ಷನ್ ಆಗುವುದಿಲ್ಲ ಎಂದು ಹೇಳುತ್ತಾರೆ. ಹೊಸ ಸರ್ಕಾರ ಈ ವಿಷಯದಲ್ಲಿ ಬಿಗಿ ನಿಲುವನ್ನು ತೆಗೆದುಕೊಳ್ಳಬೇಕು ಎಂದು ನಾನು ಹೇಳಬಯಸುತ್ತೇನೆ. ಕೊನೆಯದಾಗಿ, ಓಂದಿನ ರಾಜ್ಯಪಾಲರ ಭಾಷಣದಲ್ಲೂ ಸಹಿತ ನಾನು ಪ್ರಸ್ತಾಪ ಮಾಡಿದ್ದೆ. ಮಾನ್ಯ ಅಧ್ಯಕ್ಷರೆ, ಮಾನ್ಯ ಸದಸ್ಯರಾದ ಚಿಮ್ಮನಕಟ್ಟಿಯವರ ಪ್ರಶ್ನೆಗೆ ಉತ್ತರ ಕೊಡುವಾಗ "ನದಿಗಳಿಂದ ಪ್ರವಾಹ ಬಂದಾಗ ಆಗಬಹುದು ಅಥವಾ ಡ್ಯಾಮ್‌ನಿಂದ ನೀರು ಬಿಡುವಾಗ ಆಗಬಹುದು. ಪದೇ ಪದೇ ಸಬ್‌ಮರ್ಜ್ ಆಗುವಂಥ ಹಳ್ಳಿಗಳನ್ನು ಸ್ಥಳಾಂತರ ಮಾಡುವುದಕ್ಕೆ ಸುಮಾರು 40 ಕೋಟಿ ರೂಪಾಯಿ ಹಣ ಬೇಕಾಗುತ್ತದೆ" ಎಂದು ಹೇಳಿದರು.

ನಾನು ಒಂದೆ ಕೇಳಿದಾಗ ಮಾನ್ಯ ಮೊಯಿಲಿಯವರು ಮುಖ್ಯಮಂತ್ರಿಗಳಾಗಿದ್ದಾಗ ಆಗ ಭೂಕಂಪ ಆಗಿತ್ತು. ಆಗ ಬಹಳಷ್ಟು ಮನೆಗಳೆಲ್ಲಾ ನಾಶವಾದವು. ಆಗ ನಾವು ಜಾಗತಿಕ ಬ್ಯಾಂಕಿಗೆ [illegible]ಹಿಸುತ್ತೇವೆ ಎಂದು ಹೇಳಿದ್ದರು. ನಿಜಕ್ಕೂ ಬಹಳ ತೊಂದರೆಯಲ್ಲಿ ಆ ಜನ ಜೀವನ ಮಾಡುತ್ತಿದ್ದಾರೆ. ನನ್ನ ಮತ ಕ್ಷೇತ್ರದಲ್ಲಿ ಸುಮಾರು 20-30 ಹಳ್ಳಿಗಳಲ್ಲಿ ಇನ್ನೂ ಅವರು ಸುಧಾರಿಸಿಕೊಳ್ಳುವುದಕ್ಕೆ ನಾಲ್ಕಾರು ವರ್ಷಗಳೇ ಬೇಕು ಅಂಥ ಪರಿಸ್ಥಿತಿಯಲ್ಲಿದ್ದಾರೆ. ಮನೆ ಕಳೆದುಕೊಂಡಿದ್ದಾರೆ, ಬೆಳೆ ಕಳೆದುಕೊಂಡಿದ್ದಾರೆ. ಮತ್ತೆ ಮಳೆ ಬಂತು ಎಂದು ಹೇಳಿದರೆ ಯಾವಾಗಲೂ ಅವರು ಭಯದಿಂದ

ಜೀವನ ಮಾಡುವಂಥ ಪರಿಸ್ಥಿತಿ ಇವತ್ತಿದೆ. ಅವರು ಹೊಸ ಜಾಗವನ್ನು ಪಡೆದುಕೊಂಡು ಹೋಗಲಿಕ್ಕೆ ಅವರಿಗೆ ಸಾಧ್ಯ ಇಲ್ಲ. ಕಾನೂನು ಚೌಕಟ್ಟಿನಲ್ಲಿ ಜಿಲ್ಲಾಧಿಕಾರಿಗಳು ಅಥವಾ ಸರ್ಕಾರಕ್ಕೆ ಕೇಳಿದರೆ ಅದಕ್ಕೆ ಅಷ್ಟು ಕೋಟಿ ಬೇಕು, ಇಷ್ಟು ಕೋಟಿ ಬೇಕು ಎಂದು ಹೇಳುತ್ತಾರೆ. ಅತ್ಯಂತ ಧಾರುಣವಾದ ಪರಿಸ್ಥಿತಿಯಲ್ಲಿ ಅವರಿದ್ದಾರೆ. ಅದಕ್ಕಾಗಿ 40 ಕೋಟಿ ಆಗಬಹುದು, 20 ಕೋಟಿ ಆಗಬಹುದು, ಒಟ್ಟಾರೆ ಸಮಸ್ಯೆ ನೋಡಿದಾಗ ಅದೇನೂ ಬಹಳ ದೊಡ್ಡ ಹಣ ಅಲ್ಲ. ಪ್ರಕೃತಿ ವಿಕೋಪಕ್ಕೆ ಒಳಗಾಗುವಂಥ ಸಮಸ್ಯೆಗಳಿಗೆ ಕೇಂದ್ರ ಸರ್ಕಾರದಲ್ಲಿರಬಹುದು, ವಿದೇಶಿ ನೆರವಿನಿಂದ ಇರಬಹುದು ಹಣ ಪಡೆದು ಸ್ಥಳಾಂತರ ಮಾಡುವಂಥ, ಶಾಶ್ವತವಾಗಿ ಖಾಯಂ ಆಗಿ ಪರಿಹಾರ ದೊರಕಿಸಿಕೊಡುವಂಥ ಕೆಲಸ ಮಾಡಬೇಕೆಂದು ಹೇಳಿ ಇವತ್ತು ಏನು ನನಗೆ ಮಾತನಾಡುವುದಕ್ಕೆ ತಾವು ಏನು ಅವಕಾಶವನ್ನು ಕೊಟ್ಟಿದ್ದೀರಿ, ಅದಕ್ಕಾಗಿ ತಮಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ, ನಮಸ್ಕಾರ.

+ ಶ್ರೀ ಮಂಜುನಾಥ ಸಿ. ಕುನ್ನೂರು (ಶಿಗ್ಗಾಂವ್) : ಸನ್ಮಾನ್ಯ ಅಧ್ಯಕ್ಷರೆ, ರಾಜ್ಯಪಾಲರು ರಾಜ್ಯ ವಿಧಾನಮಂಡಲದಲ್ಲಿ ಮಾಡಿದ ಭಾಷಣವನ್ನು ವಿರೋಧಿಸುತ್ತಾ ಕೆಲವೊಂದು ಮಾತುಗಳನ್ನು ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಪ್ರಪ್ರಥಮವಾಗಿ ಅವರ ಭಾಷಣವನ್ನು ತೆಗೆದುನೋಡಿದಾಗ ನಮ್ಮ ಜಿಲ್ಲೆಯ ಹುಬ್ಬಳ್ಳಿ ಈದ್ಗಾ ಮೈದಾನದ ಸಮಸ್ಯೆಯನ್ನು ಪರಿಹರಿಸಲಾಗಿದೆ ಎಂದು ಹೇಳಿ ಪ್ರಶಂಸೆಯನ್ನು ಜನತಾ ದಳ ಸರ್ಕಾರ ಪಡೆಯುವುದಕ್ಕೆ ಪ್ರಯತ್ನ ಮಾಡಿದೆ. ನಾವೂ ಕೂಡ ಈ ಧ್ವಜವಂದನೆ ಮಾಡಿದ್ದನ್ನು ಅಭಿನಂದಿಸುತ್ತೇವೆ. ಆದರೆ ಅದರ ಜೊತೆಗೆ ಇವತ್ತು ಆ ಧ್ವಜರೋಹಣ ಮಾಡಲಿಕ್ಕೆ ಅಲ್ಲಿರತಕ್ಕ ಅಂಜುಮಾನ್ ಸಂಸ್ಥೆಯವರಾಗಲೀ ಅಥವಾ ನಮ್ಮ ಜಿಲ್ಲೆಯ ನಮ್ಮ ಪಕ್ಷದ ವಿರೋಧಪಕ್ಷದ ನಾಯಕರಾದ ಶ್ರೀಮಾನ್ ಹೆಚ್.ಕೆ. ಪಾಟೀಲರು ಕೂಡ ಇದರಲ್ಲಿ ತುಂಬಾ ಸಹಕಾರವನ್ನು ಮಾಡಿದ್ದಾರೆಅನ್ನತಕ್ಕ ಮಾತನ್ನು ಈ ಸಂದರ್ಭದಲ್ಲಿ ಹೇಳುವುದಕ್ಕೆ ಇಚ್ಛೆಪಡುತ್ತೇನೆ. ಒಟ್ಟಾರೆ ಶಾಂತಿ ನಮ್ಮೆಲ್ಲರಿಗೂ ಬೇಕಾಗಿದೆ. ಈ ದಿಸೆಯಲ್ಲಿ ಇವತ್ತು ಪ್ರಯತ್ನವನ್ನು ಮಾಡಿದ್ದು ಒಳ್ಳೆಯದು ಎನ್ನತಕ್ಕ ಮಾತನ್ನು ಈ ಸಂದರ್ಭಭದಲ್ಲಿ ಹೇಳುತ್ತಾ ಈಗಾಗಲೇ ರಾಜ್ಯದಲ್ಲಿ ಶಾಂತಿ ಮತ್ತು ಕಾನೂನಿನ ವ್ಯವಸ್ಥೆ ಸಾಕಷ್ಟು ಹದಗೆಟ್ಟಿದೆ ಎಂಬ ಮಾತನ್ನು ಅನೇಕರು ಇವತ್ತು ಹೇಳುತ್ತಿದ್ದಾರೆ. ಈ ಒಂದು ವಿಚಾರದಲ್ಲಿ ಇವತ್ತು ಹುಬ್ಬಳ್ಳಿ ಮತ್ತು ಧಾರವಾಡ ಉತ್ತರ ಕರ್ನಾಟಕದ ಕೇಂದ್ರ ಸ್ಥಳಗಳು. ಇವತ್ತು ಅಲ್ಲಿ ಧಾರವಾಡ ಜಿಲ್ಲೆಯಲ್ಲಿ ಅನೇಕ ಪ್ರದೇಶಗಳನ್ನು ಸೂಕ್ಷ್ಮ ಸ್ಥಳಗಳನ್ನಾಗಿ ಗುರುತು ಮಾಡಿದ್ದಾರೆ. ಅದರಲ್ಲಿ ಹುಬ್ಬಳ್ಳಿ ಧಾರವಾಡ ಇದೆ, ಶಿಗ್ಗಾವಿ ನನ್ನ ಮತಕ್ಷೇತ್ರ ಇದೆ,ಜೊತೆಗೆ ಹಾನಗಲ್ ಮತ್ತು ಇನ್ನಿತರ ಕೆಲವು ಪ್ರದೇಶಗಳಲ್ಲಿ ಅಲ್ಪಸಂಖ್ಯಾಂತರು ಮತ್ತು ಮುಸಲ್ಮಾನ್ ಬಾಂಧವರು ಇರತಕ್ಕ ಪ್ರದೇಶಗಳನ್ನು ಕೂಡ ಸೂಕ್ಷ್ಮ ಪ್ರದೇಶಗಳನ್ನಾಗಿ ಮಾಡಿದ್ದಾರೆ.

ಅಲ್ಲಿ ಏನಾದರೂ ಗಲಾಟೆ ಆದಂಥ ಸಂದರ್ಭಗಳಲ್ಲಿ ಹುಬ್ಬಳ್ಳಿ ಧಾರವಾಡದದಲ್ಲಿರತಕ್ಕ ಪೋಲೀಸ್ ಸಿಬ್ಬಂದಿ ಹೆಚ್ಚು ಸಿಗದೇ ಇದ್ದಾಗ ಬೆಳಗಾಂ ಕಾರವಾರ ಮತ್ತು ಇನ್ನಿತರ ಅನೇಕ ಪ್ರದೇಶಗಳಿಂದ ಈ ಒಂದು ಫೋರ್ಸ್‌ನ್ನು ತರತಕ್ಕ ವ್ಯವಸ್ಥೆ ಇದೆ. ಈ ಒಂದು ವಿಚಾರದಲ್ಲಿ ನಾನು ಸರ್ಕಾರಕ್ಕೆ ವಿನಂತಿಯನ್ನು ಮಾಡಿಕೊಳ್ಳಲಿಕ್ಕೆ ಇಚ್ಛೆಪಡುತ್ತಿದ್ದೇನೆ. ಏನೆಂದರೆ ನಮ್ಮ ಧಾರವಾಡ ಜಿಲ್ಲೆಯಲ್ಲಿ ಇವತ್ತು ಕೆ.ಎಸ್.ಆರ್.ಪಿ. ಪರ್ಮನೆಂಟ್ ಬೆಟಾಲಿಯನ್ ಸಿ.ಆರ್.ಪಿ.ಯಂಥ ಫೋರ್ಸ್‌ಗಳು ಅಲ್ಲಿ ಕೂಡಲೇ ಸ್ಥಾಪನೆಯಾಗಬೇಕು ಎನ್ನತಕ್ಕದ್ದನ್ನು ಕೂಡ ನಾನು ಹೇಳಲಿಕ್ಕೆ ಇಚ್ಛೆಪಡುತ್ತಿದ್ದೇನೆ. ನಾನು ಮೊನ್ನೆ ಒಂದು ಪ್ರಶ್ನೆಯನ್ನು ಹಾಕಿದ್ದೆ. ಅದಕ್ಕೆ ಉತ್ತರವನ್ನೂ ಕೂಡ ಕೊಟ್ಟಿದ್ದಾರೆ. ನಮ್ಮ ಶಿಗ್ಗಾವಿ ಮತಕ್ಷೇತ್ರಕ್ಕೆ ರಾಷ್ಟ್ರೀಯ ಹೆದ್ದಾರಿಗೆ ಹೊಂದಿದಂತೆ 100 ಎಕರೆ ಜಮೀನನ್ನು ನಾನು ಈಗಾಗಲೇ ಪೋಲೀಸ್ ಇಲಾಖೆಗೆ ರವಿನ್ಯೂ ಇಲಾಖೆಯಿಂದ ಕೊಡಿಸಿಕೊಟ್ಟಿದ್ದೇನೆ.

ಅಲ್ಲಿ ಒಂದು ಕೆ.ಎಸ್.ಆರ್.ಪಿ. ಬೆಟಾಲಿಯನ್ ಮಂಜೂರಾಗಿದೆ. ಅಲ್ಲಿ 1200 ಜನರು ಆ ಒಂದು ಕೆ.ಎಸ್.ಆರ್.ಪಿ. ಬೆಟಾಲಿಯನ್‌ನಲ್ಲಿ ಕೆಲಸ ಮಾಡತಕ್ಕವರಿದ್ದಾರೆ. ಒಬ್ಬ ಎಸ್.ಪಿ. ಇದ್ದಾರೆ, ನಾಲ್ಕು ಡಿ.ಎಸ್.ಪಿ. ಐವತ್ತು ಇನ್‌ಸ್ಪೆಕ್ಟರ್ ಹಾಗೂ ಇನ್ನಿತರ ಅನೇಕ ಪೋಲೀಸ್ ಸಿಬ್ಬಂದಿ ಇದ್ದಾರೆ.ಅಲ್ಲಿಗೆ ಒಬ್ಬ ಎಸ್.ಪಿ.ಯನ್ನು ವರ್ಗಾವಣೆಮಾಡಿದರೂ ಕೂಡ ಬೆಟಾಲಿಯನ್ನು ಅಲ್ಲಿ ಅವರು ಪ್ರಾರಂಭ ಮಾಡಲಿಕ್ಕೆ ಇಚ್ಛಿಸುತ್ತಾ ಇಲ್ಲ. ಅವರು ಮತ್ತೆ ಬೆಂಗಳೂರು ಮತ್ತು ತುಮಕೂರು ಕಡೆಗೆ ಬರಬೇಕು ಎನ್ನತಕ್ಕ ಒಂದು ಪ್ರಯತ್ನವನ್ನು ಅವರು ಮಾಡುತ್ತಿದ್ದಾರೆ ಎಂದು ನನಗೆ ತಿಳಿದುಬಂದಿದೆ. ಆ ಕಾರಣ ಅದಕ್ಕೆ ಅನುಮತಿಯನ್ನು ಕೊಡದೇ ಯಾವ ಒಂದು ಉದ್ದೇಶಕ್ಕಾಗಿ ಸರ್ಕಾರದವರು ಆ ಒಂದು ಪ್ರದೇಶವನ್ನು ಗುರುತು ಮಾಡಿ ಅಲ್ಲಿ ಜಮೀನನ್ನು ತೆಗೆದುಕೊಂಡು ಇವತ್ತು ಮಂಜೂರಾತಿಯನ್ನು ಕೂಡ ನೀಡಿದ್ದಾರೆ, ಆ ಕಾರಣ ಆ ಬೆಟಾಲಿಯನ್ನನ್ನು ಕೂಡಲೇ ಅಲ್ಲಿ ಪ್ರಾರಂಭ ಮಾಡುತ್ತೇವೆ ಎನ್ನತಕ್ಕ ಮಾತನ್ನು ಕೂಡ ಸರ್ಕಾರದವರು ಕೊಟ್ಟಿದ್ದಾರೆ. ಅದಕ್ಕೆ ಸರ್ಕರದವರು ಯಾವುದೇ ಒತ್ತಡಕ್ಕೆ ಅಧಿಕಾರಿಗಳಿಗೆ ಮಣಿಯದೆ ಆ ಒಂದು ಬೆಟಾಲಿಯನ್ನನ್ನು ಶಿಗ್ಗಾಂವ್‌ನಲ್ಲಿ ಪ್ರಾರಂಭ ಮಾಡಬೇಕು ಎಂಬ ಒಂದು ವಿನಂತಿಯನ್ನು ಈ ಸಂದರ್ಭದಲ್ಲಿ ನಾನು ಮಾಡಲಿಕ್ಕೆ ಇಚ್ಛಿಪಡುತ್ತಿದ್ದೇನೆ. ಇನ್ನು ಅಧಿಕಾರ ವಿಕೇಂದ್ರಿಕರಣದ ಬಗ್ಗೆ ಹೇಳುವುದಾದರೆ, ಅನೇಕರು ಇವತ್ತು ಅಧಿಕಾರ ವಿಕೇಂದ್ರಿಕರಣ ಮಾಡತಕ್ಕ ಬಿರುದು ಜನತಾ ದಳ ಸರ್ಕಾರಕ್ಕೆ ಸಿಗುತ್ತದೆ ಅನ್ನತಕ್ಕ ಮಾತನ್ನು ಕೂಡ ಅನೇಕ ಸಂದರ್ಭದಲ್ಲಿ ಅನೇಕ ಸದಸ್ಯರು ಮಾತನಾಡಿದ್ದಾರೆ. ಜೊತೆಗೆ ರಾಜ್ಯಪಾಲರ ಭಾಷಣದಲ್ಲೂ ಕೂಡ ಪ್ರಸ್ತಾಪ ಮಾಡಿದ್ದಾರೆ. ಆದರೆ ಈ ವಿಚಾರದಲ್ಲಿ ಈ ಒಂದು ಶ್ರೇಯಸ್ಸು ಕಾಂಗ್ರೆಸ್ ಪಕ್ಷಕ್ಕೆ ಸೇರಿದ್ದು ಎನ್ನತಕ್ಕ ಮಾತನ್ನು ನಾವು ಹೇಳಬೇಕಾಗಿದೆ. ಕಳೆದ ವರ್ಷ ಶ್ರೀಮಾನ್ ವೀರಪ್ಪ ಮೊಯಿಲಿಯವರು ಮುಖ್ಯಮಂತ್ರಿಗಳಾಗಿದ್ದಾಗ ನಮ್ಮ ಕಾಂಗ್ರೆಸ್ ಪಕ್ಷದವರು ಗ್ರಾಮ ಪಂಚಾಯಿತಿ ಚುನಾವಣೆಗಳನ್ನು ಮೀಸಲಾತಿ ಆಧಾರದ ಮೇಲೆ ಪ್ರಪ್ರಥಮವಾಗಿ ಚುನಾವಣೆಗಳನ್ನು ಮಾಡಿ ಪಂಚಾಯಿತಿಗಳನ್ನು ರಚನೆ ಮಾಡಿದ್ದಾರೆ. ಅಷ್ಟೇ ಅಲ್ಲದೇ, ಇವತ್ತು ಕೇಂದ್ರಸರ್ಕಾರದಲ್ಲೂ ಕೂಡ ಸಂವಿಧಾನಕ್ಕೆ ತಿದ್ದುಪಡಿಯನ್ನು ಮಾಡಿ ಇವತ್ತು ಹಿಂದುಳಿದವರಿಗೆ ಮತ್ತು ಎಲ್ಲ ಜನಾಂಗಕ್ಕೂ ಒಂದು ಮೀಸಲಾತಿಯ ಅವಕಾಶ ಸಿಗುವಂತೆ ಮಾಡಿ ಈವತ್ತು ಈ ಒಂದು ಅಧಿಕಾರ ವಿಕೇಂದ್ರಿಕರಣದ ಕಾನೂನನ್ನು ಕಾಂಗ್ರೆಸ್ ಪಕ್ಷದವರು ತಂದಿದ್ದಾರೆ ಎನ್ನತಕ್ಕ ಮಾತನ್ನು ನಾನು ಈ ಸಂದರ್ಭದಲ್ಲಿ ಹೇಳಲಿಕ್ಕೆ ಇಚ್ಛಿಪಡುತ್ತೇನೆ. ಇನ್ನು ಇವತ್ತಿನ ದಿವಸ ನಮ್ಮ ರಾಜ್ಯಪಾಲರ ಭಾಷಣವನ್ನು ನಾವು ನಿರೀಕ್ಷಿಸಿದಾಗ ಗ್ರಾಮಾಂತರ ಪ್ರದೇಶದ ಪರವಾಗಿ ನಾವಿದ್ದೇವೆ ಎನ್ನತಕ್ಕ ಮಾತಿಗೆ ಒತ್ತುಕೊಟ್ಟು ಹೇಳುತ್ತಿದ್ದೇನೆ.

6.10 ಪಿ.ಎಂ

ಆದರೆ ಇವತ್ತು ನಾವು ಇಲ್ಲಿ ಗ್ರಾಮಾಂತರ ಪ್ರದೇಶಗಳಿಂದ ಬರತಕ್ಕಂತಹವರು 100ಕ್ಕೆ 90 ರಷ್ಟು ಇದ್ದೇವೆ ನಾವು ಗ್ರಾಮಾಂತರ ಪ್ರದೇಶಗಳಿಗೆ ಏನು ವಿಶೇಷವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತೇವೆಂದು ಹೇಳುವಂತಹ ಚಿಂತನೆ ಬಹಳ ಮುಖ್ಯವಾದುದು ಎನ್ನುವ ಮಾತನ್ನು ಹೇಳಬೇಕಾಗಿದೆ. ಗ್ರಾಮಗಳಿಗೆ ಹೋದಾಗ ಅಲ್ಲಿಯ ಜನತೆ, ನಮ್ಮ ಮಾತದಾರರು, ನಮ್ಮಿಂದ ಏನು ನಿರೀಕ್ಷಣೆ ಮಾಡತಕ್ಕಂತಹದ್ದು ಅಂದರೆ, ನಮ್ಮಗಳಿಗೆ ರಸ್ತೆಗಳು ಬೇಕು. ಗಡಾರ ಸರಿಪಡಿಸಿಕೊಡಬೇಕು, ಬಸ್ಸಿನ ವ್ಯವಸ್ಥೆ ಮಾಡಿಕೊಡಬೇಕು, ಬೆಳಕನ್ನು ಕೊಡಬೇಕು.ಶಿಕ್ಷಕರ ಕೊರತೆ ಹಾಗೆ ಹಲವಾರು ಪ್ರಾಮುಖ್ಯವಾದ ಸಮಸ್ಯೆಗಳ ಬಗ್ಗೆ ಕೇಳುತ್ತಾರೆ. ಅವರು ದೊಡ್ಡ ದೊಡ್ಡ ಯೋಜನೆಗಳ ಬಗ್ಗೆ ಕೇಳುವುದಿಲ್ಲ. ಅದ್ದರಿಂದ ನಾನು ವಿನಂತಿಮಾಡಿಕೊಳ್ಳುವುದೇನೆಂದರೆ, ಸರ್ಕಾರದವರು ಇದರ ಬಗ್ಗೆ ಸಮಗ್ರವಾಗಿ ಚಿಂತಿಸಿ ಕಾರ್ಯಕ್ರಮ ಹಾಕಿಕೊಳ್ಳಬೇಕು. ಇವತ್ತು ಜ...

ಪಂಚಾಯ್ತಿ ಆಡಳಿತ ಜಿಲ್ಲಾ ಮಟ್ಟದಲ್ಲಿ ವಿಕೇಂದ್ರಿಕರಣವಾಗಿದೆ. ಈ ಒಂದು ಪರಿಸ್ಥಿತಿಯಲ್ಲಿ ಜಿಲ್ಲಾ ಪಂಚಾಯ್ತಿಯಲ್ಲಿ ಚೀಫ್ ಪ್ಲಾನಿಂಗ್ ಆಫೀಸರ್ ಎಂಬ ಅಧಿಕಾರ ಇರುವುದರಿಂದ ಇವತ್ತು ಪ್ರತಿಯೊಂದು ಗ್ರಾಮದಲ್ಲಿ ಹಾಗೇ ಇಡೀ ರಾಜ್ಯದಾದ್ಯಂತ ಆಯಾ ಗ್ರಾಮಗಳಲ್ಲಿ, ಮೂಲಭೂತವಾಗಿ ನಾಗರೀಕರ ಸೌಲಭ್ಯಗಳನ್ನು ಒದಗಿಸಿಕೊಡುವುದರ ಸಲುವಾಗಿ ಅಲ್ಲಿ ಒಂದು ಮಾಸ್ಟರ್ ಪ್ಲಾನನ್ನು ತಯಾರು ಮಾಡಿ, ಮತ್ತು ಆ ಜನರಿಗೆ ಬೇಕಾದ ಯೋಜನೆಗಳಿಗೆ ಹಣವನ್ನು ಒದಗಿಸಿಕೊಟ್ಟು ನಾವು ಪ್ರಾಮಾಣಿಕವಾಗಿ ಕೆಲಸವನ್ನು ಮಾಡಿದ್ದೇಆದರೆ, ನಾವು ಹಾಗೂ ಸರ್ಕಾರದವರು ತಮ್ಮ ಕರ್ತವ್ಯವನ್ನು ನಿಭಾಯಿಸಿದ ಹಾಗೆ ಆಗುತ್ತದೆ. ಎನ್ನತಕ್ಕಂತಹ ಮಾತನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ.ಇನ್ನು ಬಹಳ ದುಃಖದಿಂದ ಈ ಸಂದರ್ಭದಲ್ಲಿ ಹೇಳಬೇಕಾಗಿದೆ. ಏನೆಂದರೆ, ಗ್ರಾಮಾಂತರ ಪ್ರದೇಶಗಳಲ್ಲಿರತಕ್ಕಂತಹ ಬಹಳಷ್ಟು ಜನ ನಮ್ಮಕಡೆಯಂತೂ ಉತ್ತರ ಕರ್ನಾಟಕದಲ್ಲಿ ನನ್ನ ಮತ ಕ್ಷೇತ್ರದಲ್ಲಿ, ನನ್ನ ಜಿಲ್ಲೆಯಲ್ಲಿ, ಬಹಳಷ್ಟು ದುಡಿಯುವ ಕೈಗಳಿಗೆ ಕೆಲಸ ಇಲ್ಲದೆ ಬೇರೆ ರಾಜ್ಯಗಳಿಗೆ ಹೋಗುತ್ತಿದ್ದಾರೆ. ಅನೇಕರು 100ಕ್ಕೆ 50ರಷ್ಟು ಜನ ವಲಸೆ ಹೋಗತಕ್ಕಂತಹದಲ್ಲಿ ಗೋವಾಗಕ್ಕೆ ಹೋಗುತ್ತಾರೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಾಫಿ ಪ್ಲಾಂಟರ್ಸ್ ಹತ್ತಿರ ಹೋಗುತ್ತಾರೆ. ಈ ರೀತಿ ಇನ್ನೂ ಅನೇಕ ಅನೇಕ ಪ್ರದೇಶಗಳಿಗೆ ಹೇಗುತ್ತಾರೆ. ಈ ಒಂದು ವಿಚಾರದಲ್ಲಿ ಇವತ್ತು ಆ ಜನರಿಗೆ ಕೆಲಸಗಳನ್ನು ಕೊಡಿಸತಕ್ಕ ಪ್ರಾಮಾಣಿಕ ಕೆಲಸವನ್ನು ಕೊಡುವಂತಹ ಪ್ರಯತ್ನ ಮಾಡಬೇಕು. ಸರ್ಕಾರಕ್ಕೆ ನಿಜವಾಗಿಯೂ ಗ್ರಾಮಾಂತರ ಪ್ರದೇಶದ ಜನರ ಬಗ್ಗೆ ಕಾಳಜಿ ಇದ್ದರೆ ಅವರಿಗೆ ಕೆಲಸವನ್ನು ಕೊಡತಕ್ಕಂತಹ ಕೆಲಸವನ್ನು ನಾವು ಮಾಡಿದ್ದೇ ಆದರೆ ನಮ್ಮ ಕರ್ತವ್ಯವನ್ನು ಮಾಡಿದ ಹಾಗೆ ಆಗುತ್ತದೆ ಎನ್ನುವಂತಹ ಮಾತನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ. ಈ ಒಂದು ದಿಸೆಯಲ್ಲಿ ಅದರ ಬಗ್ಗೆಯೂ ಸರ್ವೆ ಮಾಡಿಸಿ ಇವತ್ತು ಯಾವ ಊರಿನಿಂದ ಎಷ್ಟು ಜನರು ವಲಸೆ ಹೋಗಿದ್ದಾರೆ ಎನ್ನತಕ್ಕ ಅಂಕಿ ಸಂಖ್ಯೆಗಳನ್ನು ತರಿಸಬೇಕು. ಅವರಿಗೆ ಈಗಾಗಲೇ ಕೆಲವು ಯೋಜನೆಗಳು ಇವೆ. ಉದ್ಯೋಗ ಭರವಸೆಯಂತಹ ಯೋಜನೆಗಳಿವೆ. ಒಂದು ಮತ ಕ್ಷೇತ್ರಕ್ಕೆ ಸ್ವಲ್ಪ ಸ್ವಲ್ಪ ಹಣವನ್ನು ಕೊಟ್ಟಿರುತ್ತಾರೆ. ಅದರಲ್ಲಿ ಎಲ್ಲರಿಗೂ ಕೆಲಸಗಳನ್ನು ಕೊಡುವುದಕ್ಕಾಗುವುದಿಲ್ಲ. ಜನರಿಗೆ ತಿಳಿಸಿ ಹೇಳತಕ್ಕ ಕೆಲಸವನ್ನು ಮಾಡಿ, ಅವರಿಗೆ ಕೆಲಸವನ್ನು ನಾವು ಮಾಡಿಕೊಡುತ್ತೇವೆ ಎನ್ನುವ ಪ್ರಯತ್ನವನ್ನು ಮಾಡುವುದಾದರೆ, ಗ್ರಾಮಾಂತರ ಪ್ರದೇಶದ ಜನರ ಬಗ್ಗೆ ಚಿಂತನೆ ಮಾಡಿದ ಹಾಗೆ ಆಗುತ್ತದೆ.

ಇನ್ನು ನಿರುದ್ಯೋಗದ ಬಗ್ಗೆ ಹೇಳುವುದಾದರೆ, ಗ್ರಾಮಾಂತರ ಪ್ರದೇಶದಲ್ಲಿರತಕ್ಕ ಅನೇಕ ಯುವಕರು, ಯುವಕ ಮಂಡಲದವರು, ವಾಚನ ಸಂಘದವರು, ಯುವಕರಿಗೆ ಉದ್ಯೋಗವನ್ನು ಕೊಡುವಂತಹ ವಿಚಾರದಲ್ಲಿ ಸರ್ಕಾರ ಬದಲಾವಣೆಯಾದಾಗ ಬಹಳಷ್ಟು ತೃಪ್ತಿ ಯಾಗಿರುತ್ತದೆ.ಏಕೆಂದರೆ ನಮ್ಮ ಎಲ್ಲ ಯುವಕರಿಗೆ ವಿದ್ಯಾವಂತರಿಗೆ ಪದವೀಧರರಿಗೆ, ಕೆಲಸಗಳು, ನೌಕರಿಗಳು ಸಿಕ್ಕಾವು ಎನ್ನುವಂತಹ ವಿಚಾರವನ್ನು ಅವರು ಮಾಡುತ್ತಿದ್ದಾರೆ. ಇದರ ಬಗ್ಗೆ ಹೇಳಿದ ಹಾಗೆ, ನಿವೃತ್ತಿ ವಯಸ್ಸನ್ನು,58ರಿಂದ 55ಕ್ಕೆ ಇಳಿಸಿ, ಹೊಸದಾಗಿ ಬರತಕ್ಕ ಯುವಕರಿಗೆ ಉದ್ಯೋಗದ ಒಂದು ಅವಕಾಶವನ್ನು ಕಲ್ಪಿಸಿಕೊಡಬೇಕೆಂದು ಹೇಳುತ್ತೇನೆ.

ಇನ್ನು ಕೈಗಾರಿಕೆ ಇಲಾಖೆಯ ಬಗ್ಗೆ ಹೇಳುವುದಾದರೆ, "ವಿಶ್ವ" ಅಂತ ಯೋಜನೆಯಲ್ಲಿ ಸ್ವಯಂ ಉದ್ಯೋಗವನ್ನು ತೆಗೆಯತಕ್ಕಂಥ ಕೆಲಸಗಳನ್ನೂ ಕೂಡ ನಮ್ಮ ಯುವಕರಿಗೆ ಕೊಟ್ಟಿದ್ದೇ ಆದರೆ ನಿರುದ್ಯೋಗ ಸಮಸ್ಯೆಯ ಬಗ್ಗೆ ಹೆಚ್ಚು ಚಿಂತನೆ ಮಾಡಿದ ಹಾಗೆ ಆಗುತ್ತದೆ. ಅವರಿಗೆ ಒಂದು ಪರಿಹಾರವನ್ನು ಮಾಡಿದ ಹಾಗೆ ಆಗುತ್ತದೆ ಎನ್ನುವಂತಹ ಮಾತನ್ನು ಹೇಳುವುದಕ್ಕೆ ಇಷ್ಟಪಡುತ್ತೇನೆ.

ಇನ್ನು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ನಮ್ಮ ಹುಬ್ಬಳ್ಳಿ-ಧಾರವಾಡದಲ್ಲಿ ಹೈಕೋರ್ಟ್ ಪೀಠದ ಬಗ್ಗೆ ಒಂದು ವರದಿ ಬಂದಿದೆ. ಇವತ್ತು ಅದರಲ್ಲಿ ಏನು ಹೇಳಿದ್ದಾರೆಂದರೆ, ಸದ್ಯಕ್ಕೆ ಹೈಕೋರ್ಟ್ ಪೀಠವನ್ನು ಸ್ಥಾಪನೆ ಮಾಡುವುದಕ್ಕೆ ವಿರಾಮ ಹಾಕಿದ್ದೇವೆ ಅಂತ ಬಂದಿದೆ. ರಾಜಕೀಯ ಬಲ ಇಲ್ಲ ಜೊತೆಗೆ ಹೈಕೋರ್ಟಿನವರು ಸ್ಪಷ್ಟವಾದ ಅನುಮೋದನೆಯನ್ನು ಕೊಡುತ್ತಿಲ್ಲ ಎನ್ನುವ ಮಾತನ್ನು ಅದರಲ್ಲಿ ಬರೆದಿದ್ದಾರೆ. ಈ ಬಗ್ಗೆ ಮೊನ್ನೆ ಮೇಲ್ಮನೆಯಲ್ಲಿ ಚರ್ಚೆಯಾಗಿರುವುದು ಪತ್ರಿಕೆಗಳಲ್ಲಿ ಬಂದಿದೆ.ಕಾನೂನು ಮಂತ್ರಿಗಳು ಹೇಳಿದ ಪ್ರಕಾರ, ಹೈಕೋರ್ಟ್ ಪೀಠವನ್ನು ಸದ್ಯಕ್ಕೆ ಪ್ರಾರಂಭಮಾಡುತ್ತೇನೆ ಎನ್ನತಕ್ಕ ವಿಚಾರದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಇದರಿಂದ ಅನೇಕ ಜನ ನಮ್ಮ ಭಾಗದ ಜನರು, ಸಾರ್ವಜನಿಕರು, ನ್ಯಾಯವಾದಿಗಳು, ಕಕ್ಷಿದಾರರು ನನಗೆ ನಿನ್ನೆ 2-3 ಸಾರಿ ಇದರ ಬಗ್ಗೆ ಹೇಳಿದ್ದಾರೆ. ಈ ಒಂದು ವಿಚಾರದಲ್ಲಿ ಸರ್ಕಾರದವರು ನಮಗೆ ಇವತ್ತು ಉತ್ತರ ಕರ್ನಾಟಕದಲ್ಲಿ ಹೈಕೋರ್ಟ್ ಪೀಠ ಆಗುತ್ತದೆಂದರೆ,ನಮ್ಮ ಮುಖ್ಯ ಮಂತ್ರಿಗಳು, ಆ ಬಗ್ಗೆ ಯಾವುದೇ ಮಲತಾಯಿ ಧೋರಣೆಯನ್ನು ಮಾಡದೆ, ನಿರ್ದಿಷ್ಟವಾದ ನಿಲುವನ್ನು ಸರ್ಕಾರದ ಮೂಲಕ ತಿಳಿಸಬೇಕು. ಹೈಕೋರ್ಟಿನವರು, ಈ ವಿಚಾರದಲ್ಲಿ ಜಸ್‌ವಂತ್‌ಸಿಂಗ್ ಆಯೋಗವನ್ನು ಮಾಡಿದಾಗ, ಹುಬ್ಬಳ್ಳಿ-ಧಾರವಾಡದಲ್ಲಿ ಹೈಕೋರ್ಟ್ ಪೀಠವನ್ನು ಮಾಡುವುದಕ್ಕೆ ಅಡ್ಡಿ ಇಲ್ಲ ಎನ್ನತಕ್ಕ ಅಭಿಪ್ರಾಯವನ್ನು ಮಂಡನೆ ಮಾಡಿದ್ದಾರೆ. ಮತ್ತು ಮಹಾರಾಷ್ಟ್ರ ರಾಜ್ಯದಲ್ಲಿ ಅಲ್ಲಿ ಔರಂಗಬಾದ್‌ನಲ್ಲಿ ಇದೇ ರೀತಿಯಾಗಿ ಮಾಡಲು ಹೈಕೋರ್ಟ್ ಒಪ್ಪದೆ ಇದ್ದಾಗ, ಶ್ರೀಮಾನ್ ಎ.ಆರ್.ಅಂಟುಲೆಯವರು, ಮುಖ್ಯಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಅವರ ಪ್ರಯಂತ್ನದಿಂದಾಗಿ ಔರಂಗಬಾದ್‌ನಲ್ಲಿ ಹೈಕೋರ್ಟ್ ಪೀಠವನ್ನು ಅಲ್ಲಿ ಮಾಡಿದ್ದಾರೆ. ಆ ಆಧಾರದ ಮೇಲೆ ಕೂಡ, ಈಗಾಗಲೇ ನಮ್ಮ ಮಾನ್ಯ ಬಂಗಾರಪ್ಪನವರು ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ಇದೇ ಸದನದಲ್ಲಿ ನಾವು ಠರಾವನ್ನು ಪಾಸು ಮಾಡಿ ಕಳುಹಿಸಿದ್ದೇವೆ. ಅದರ ಪ್ರಕಾರ ಉತ್ತರ ಕರ್ನಾಟಕ ಜನರ ಅಪೇಕ್ಷೆಯಂತೆ, ಹುಬ್ಬಳ್ಳಿ-ಧಾರವಾಡದಲ್ಲಿ ಹೈಕೋರ್ಟ್ ಪೀಠವನ್ನು ಮಾಡಬೇಕೆಂದು ತಮ್ಮ ಮೂಲಕ ಸರ್ಕಾರದವರಲ್ಲಿ ಒತ್ತಾಯ ಮಾಡುತ್ತಿದ್ದೇನೆ.

ಇನ್ನು ನ್ಯಾಯಾಂಗ ಇಲಾಖೆಯ ಬಗ್ಗೆ ಹೇಳುವುದಾದರೆ, ಧಾರವಾಡ ಜಿಲ್ಲೆಯಲ್ಲಿ 10 ತಾಲ್ಲೂಕುಗಳಿವೆ. ಅಕ್ಸಿಡೆಂಟ್ ಕೇಸುಗಳು, ರಾಷ್ಟ್ರೀಯ ಹೆದ್ದಾರಿಯಲ್ಲಿರತಕ್ಕ ಧಾರವಾಡ ಜಿಲ್ಲೆಯಲ್ಲಿ ಸಾಕಷ್ಟು ಕೇಸುಗಳು ಪೆಂಡಿಂಗ್ ಇವೆ. ಇದಕ್ಕೆ ಕಾರಣ ಜ್ಯೂರಿಸ್‌ಡಿಕ್ಷನ್‌ನ ತೊಂದರೆ ಇರುವುದರಿಂದ, ಅಪಘಾತವಾದಂತಹ ಸಂದರ್ಭದಲ್ಲಿ ಎಲ್ಲರೂ ಡಿಸ್ಟ್ರಿಕ್ಟ್ ಕೋರ್ಟಿಗೆ ಹೋಗುತ್ತಿದ್ದಾರೆ. ಇದನ್ನು ಬದಲಾವಣೆ ಮಾಡಿ, ಆಯಾ ಪ್ರದೇಶದಲ್ಲಿರತಕ್ಕ ಸಿವಿಲ್ ಜಡ್ಜ್ ಕೋರ್ಟಿಗೆ ಮೋಟಾರ್ ವೆಹಿಕಲ್ ಆಕ್ಸಿಡೆಂಟ್ ಕೇಸುಗಳನ್ನು ತೀರ್ಮಾನ ಮಾಡುವುದಕ್ಕೆ ಜ್ಯೂರಿರಸ್‌ಡಿಕ್ಷನ್ ವ್ಯಾಪ್ತಿಯನ್ನು ಒಳಪಡಿಸಬೇಕು ಎನ್ನತಕ್ಕಂತಹ ವಿನಂತಿಯನ್ನು ಕೂಡ ನಾನು ಮಾಡಿಕೊಳ್ಳಲಿಕ್ಕೆ ಇಷ್ಟಪಡುತ್ತೇನೆ.

ಇನ್ನು ಕಂದಾಯ ಇಲಾಖೆಯ ಬಗ್ಗೆ ಹೇಳುವುದಾದರೆ, ಗ್ರಾಮ ಲೆಕ್ಕಿಗರ ಸಂಖ್ಯೆ ಬಹಳಷ್ಟು ಕಡಿಮೆ ಇದೆ. ಸರ್ವೇಯರ್ಸ್ ಸಂಖ್ಯೆ ಬಹಳಷ್ಟು ಕಡಿಮೆ ಇದೆ. ಅವರುಗಳ ನೇಮಕಾತಿಯನ್ನು ಮಾಡಿಕೊಂಡು ಜನತೆಗೆ ಅನುಕೂಲವಾಗುವ ದಿಸೆಯಲ್ಲಿ ಕಂದಾಯ ಇಲಾಖೆಯವರ ಇದರ ಬಗ್ಗೆ ಗಮನ ಹರಿಸಬೇಕು. ಮತ್ತು ಜಿಲ್ಲೆಯಲ್ಲಿ ಭೌಗೋಳಿಕವಾಗಿ ಎಲ್ಲ ಸವಲತ್ತುಗಳನ್ನು ಪಡೆದಂಥ ಒಂದು ಕೇಂದ್ರ ಸ್ಥಳವಾಗಿದೆ. ಈಗ ಹುಂಡೇಕಾರ್ ಸಮಿತಿಯವರೂ ಕೂಡ ಶಿಫಾರಸ್ಸು ಮಾಡಿದ್ದಾರೆ. ಜಿಲ್ಲಾ ಪುನರ್ ವಿಂಗಡಣೆ ಮಾಡತಕ್ಕ ಸಂದರ್ಭದಲ್ಲಿ ಹಾವೇರಿಯನ್ನು ಜಿಲ್ಲೆಯನ್ನಾಗಿ ಪರಿವರ್ತಿಸಬೇಕೆಂಬ ವಿನಂತಿಯನ್ನು ಇವತ್ತು ನಾನು ಮಾಡಿಕೊಳ್ಳುತ್ತಿದ್ದೇನೆ. ಜೊ[illegible]

ಇವತ್ತು ಕುಡಿಯುವ ನೀರಿನ ಸಮಸ್ಯೆ ಬಗ್ಗೆ ಮಾನ್ಯ ಕಂದಾಯ ಮಂತ್ರಿಗಳು ಈ ಕಡೆ ಗಮನ ಹರಿಸಬೇಕು.

ಅಧ್ಯಕ್ಷರು : ಅವರು ಕೇಳಿಸಿಕೊಳ್ಳುತ್ತಾರೆ. ಮಂತ್ರಿಗಳಲ್ಲೆಲ್ಲಾ ಇದೊಂದು ಹವ್ಯಾಸ.

ಶ್ರೀ ಮಂಜುನಾಥ್ ಸಿ. ಕನ್ನಾರ್ : ಕಂದಾಯ ಮಂತ್ರಿಗಳು ಈ ಕಡೆ ಗಮನ ಹರಿಸಬೇಕು. ಹಾವೇರಿ ಜಿಲ್ಲಾ ಕೇಂದ್ರವನ್ನಾಗಿ ಮಾಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಜಿಲ್ಲಾ ಪುನರ್ ವಿಂಗಡಣೆ ಮಾಡತಕ್ಕ ಸಂದರ್ಭದಲ್ಲಿ ಮಾಡಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಮತ್ತು ಗ್ರಾಮ ಲೆಕ್ಕಿಗರ ಹುದ್ದೆ ತಮ್ಮ ಇಲಾಖೆಯಲ್ಲಿ ಬಹಳಷ್ಟು ಕಡಿಮೆ ಇದ್ದು ಕೆಲಸ ಸ್ಥಗಿತವಾಗಿದೆ, ಅದನ್ನು ಕೂಡಲೇ ಭರ್ತಿ ಮಾಡತಕ್ಕ ಕೆಲಸ ಮಾಡಬೇಕು.

ಶ್ರೀ ಆರ್.ಎಲ್. ಜಾಲಪ್ಪ (ಕಂದಾಯ ಸಚಿವರು) : 137 ಸರ್ವೇಯರ್ಸ್ ಕಡಿಮೆ ಇದ್ದಾರೆ. ಅವರನ್ನು ರಿಕ್ರೂಟ್‌ಮೆಂಟ್ ಮಾಡಬೇಕೆಂದಿದ್ದೇವೆ. ಈ ಒಂದು 50 ಪರ್ಸೆಂಟ್ ಮೀಸಲಾತಿ ಏನು ಇದೆ, ಅದು ತಯಾರಾಗಿರಲಿಲ್ಲ. ಈಗ ಅದು ಆಗಿದೆ. ಆ ಕೆಲಸವನ್ನೂ ಮಾಡುತ್ತಿದ್ದೇವೆ ಮತ್ತೆ ಹಾವೇರಿಯನ್ನು ಜಿಲ್ಲೆಯನ್ನಾಗಿ ಮಾಡಿ ಎಂಬುದಾಗಿ ಮಾನ್ಯ ಸದಸ್ಯರು ಕೇಳಿದ್ದಾರೆ. ಜಿಲ್ಲೆಯಾಗಬೇಕೆಂಬ ಒತ್ತಾಯ ಇದೆ. ರೀತಿ ರಾಜ್ಯದಲ್ಲಿ ಬೇರೆ ಬೇರೆ ಕಡೆಯೂ ಇದೆ. ಆದರೆ ಈ ವರ್ಷ ನಾವು ಮಾಡಲಾರೆವು. ಮುಂದಿನ ವರ್ಷದಲ್ಲಿ ಅವುಗಳನ್ನು ಮಾಡುವುದಕ್ಕೆ ಪ್ರಯತ್ನ ಮಾಡುತ್ತೇವೆ.

ಶ್ರೀ ಮಂಜುನಾಥ್ ಸಿ. ಕನ್ನೂರು : ಇನ್ನು 77ಪಟ್ಟಣಗಳಿಗೆ ಕುಡಿಯುವ ನೀರು ಒದಗಿಸುವ ಜವಾಬ್ದಾರಿಯನ್ನು ಹೊತ್ತಿದ್ದಾರೆ. ವಸ್ತುಸ್ಥಿತಿ ಇವರು 77ಪಟ್ಟಣಗಳಿಗೆ ಕುಡಿಯುವ ನೀರನ್ನು ಒದಗಿಸುವ ಪರಿಸ್ಥಿತಿಯಲ್ಲಿದ್ದಾರೆಯೇ ಎನ್ನುವುದನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ. ಶಿಗ್ಗಾವಿ ಸವಣೂರು ಮತ್ತು ಸಂಕಾಪುರ ಸಂಯುಕ್ತ ಕುಡಿಯುವ ನೀರಿನ ಯೋಜನೆ ಮಾಡಿ ವರದಾ ನದಿಯಿಂದ ನೀರನ್ನು ತರುವ ಕೆಲಸ ಈಗಾಗಲೇ ಪ್ರಾರಂಭವಾಗಿದೆ. ಅಲ್ಲಿ ನಾಗನೂರು ಕೆರೆಯನ್ನು ಆಳ ಮಾಡುವಲ್ಲಿ ಸುಮಾರು 5ಕೋಟಿ ರೂಪಾಯಿ ಖರ್ಚುಮಾಡಿ ಈಗಾಗಲೇ ನೀರು ಸಂಗ್ರಹದ ಕೆಲಸ ಮಾಡಿದ್ದಾರೆ. ಅಲ್ಲಿ ರೈತರು ಜಮೀನು ಕಳೆದುಕೊಂಡು ಒಂದು ವರ್ಷವಾಯಿತು. ಅವರಿಗೆ ಪರಿಹಾರದ ಹಣವನ್ನು ಇನ್ನು ಕೊಟ್ಟಿಲ್ಲ ರೈತರಿಗೆ ಪರಿಹಾರದ ಹಣವನ್ನು ವ್ಯವಸ್ಥೆಯನ್ನು ಕೂಡಲೇ ಮಾಡಬೇಕೆಂದು ಈ ಸಂದರ್ಭದಲ್ಲಿ ನಾನು ಕೇಳುವುದಕ್ಕೆ ಇಚ್ಛಿಪಡುತ್ತೇನೆ.

ಇನ್ನು ವಿದ್ಯುಚ್ಛಕ್ತಿಯ ಬಗ್ಗೆ ನಾನು ಈಗಾಗಲೇ ಹೇಳಿದ್ದೇನೆ. ಶಿಗ್ಗಾಂವ್‌ನ ಸವಣೂರು ಕ್ಷೇತ್ರ ರಾಜ್ಯದಲ್ಲಿಯೇ ಅತಿ ಕಡಿಮೆ ವೋಲ್ಟೇಜ್ ಇರತಕ್ಕ ಕ್ಷೇತ್ರ ಎನ್ನತಕ್ಕದ್ದನ್ನು ನಾವು ತಿಳಿದುಕೊಂಡಿದ್ದೇವೆ. ಅಧಿಕಾರಿಗಳು ಕೂಡ ಇದನ್ನು ತಮ್ಮ ವರದಿಯಲ್ಲಿ ತಿಳಿಸಿದ್ದಾರೆ. ಅಲ್ಲಿ 33ಕೆವಿ ವಿದ್ಯುತ್ ಬೇಕಾಗುತ್ತದೆ. ಅಲ್ಲಿ 150ಕೆವಿ ಸ್ಟೇಷನ್‌ಮಾಡಬೇಕಾಗಿದೆ. ಅಲ್ಲಿನ ಪರಿಸ್ಥಿತಿ ಹೇಗಿದೆ ಅಂದರೆ ಕುಡಿಯುವ ನೀರು ಒದಗಿಸಲಿಕ್ಕೆ ಮೋಟಾರು ಓಡಲಿಕ್ಕೆ ಬೇಕಾದ ವೋಲ್ಟೇಜ್ ಇಲ್ಲ. ವಿದ್ಯಾರ್ಥಿಗಳಿಗೂ ಓದಲಿಕ್ಕೆ ವಿದ್ಯುತ್‌ಇಲ್ಲ. ಜನರಿಗೆ ಸಾಯಂಕಾಲ ಹಿಟ್ಟಿನ ಗಿರಣಿಗೆ ಹೋಗಿ ಹಿಟ್ಟು ಮಾಡಿಸಿಕೊಂಡು ಬರಲಿಕ್ಕೆ ವಿದ್ಯುತ್ ವೋಲ್ಟೇಜಿನ ತೊಂದರೆಯಾಗಿದೆ. ವಿದ್ಯುತ್ ವೋಲ್ಟೇಜ್ ಇಂಪ್ರೂವ್ ಮಾಡುವ ಕೆಲಸವನ್ನು ಮಾಡಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತಿದ್ದೇನೆ.

ಇನ್ನು ಸಾರಿಗೆ ಇಲಾಖೆಯಲ್ಲಿ ನಮಗೆ ಬಹಳಷ್ಟು ತೊಂದರೆಯಾಗಿದೆ. ಬಹಳಷ್ಟು ಜನ ಬಸ್‌ಗಳ ಟಾಪ್‌ಗಳ ಮೇಲೆ ಆಡ್ಡಾಡುತ್ತಾರೆ.ಅದರ ಜೊತೆಗೆ ಷೆಡ್ಯೂಲ್

ಬಸ್‌ಗಳು ಇದ್ದರೂ ಕೂಡ ನಮ್ಮ ಜಿಲ್ಲೆಯಲ್ಲಿ ಬಹಳಷ್ಟು ಕಡಿಮೆ ಪ್ರಮಾಣದಲ್ಲಿ ಬಸ್‌ಗಳು ಓಡಾಡುವುದರಿಂದ ತೊಂದರೆ ಯಾಗಿದೆ. ಆ ಕಾರಣಕ್ಕೆ ಇವತ್ತು ಯಾವ ಗ್ರಾಮಗಳಿಗೂ ಬಸ್‌ಗಳು ಇಲ್ಲ. ಆದ್ದರಿಂದ ಹೆಚ್ಚು ಬಸ್‌ಗಳನ್ನು ಓಡಿಸುವ ಪ್ರಯತ್ನ ಮಾಡಬೇಕು. ಷೆಡ್ಯೂಲ್ ಬಸ್‌ಗಳನ್ನು ನಗರಪ್ರದೇಶಗಳಲ್ಲಿ ಕಡಿಮೆ ಮಾಡಿ ಗ್ರಾಮಾಂತರ ಪ್ರದೇಶಗಳಿಗೆ ಹೆಚ್ಚು ಮಾಡಿ. ಹೊಸ ಬಸ್‌ಗಳನ್ನು ಖರೀದಿ ಮಾಡಿ ಸಾರಿಗೆ ವ್ಯವಸ್ಥೆಯನ್ನು ಉತ್ತಮ ಮಾಡಬೇಕೆಂದು ಹೇಳುವುದಕ್ಕೆ ಇಚ್ಛೆಪಡುತ್ತೇನೆ.

ಇನ್ನು ಕೃಷಿ ಇಲಾಖೆಯ ಬಗ್ಗೆ ಹೇಳುವುದಾದರೆ, ಈವೊಂದು ಇಲಾಖೆಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದ್ದಾರೆ. ಇವತ್ತು ಉದಾಹರಣೆ ನಮ್ಮ ಜಿಲ್ಲೆಯಲ್ಲಿ ಹತ್ತಿ ಮತ್ತು ಕಬ್ಬನ್ನು ಹೆಚ್ಚು ಬೆಳೆಯುತಕ್ಕ ರೈತರು ಇದ್ದಾರೆ. ಆ ಕಾರಣಕ್ಕೆ ಕಬ್ಬು ಬೆಳೆಗಾರರಿಗೆ ಸರಿಯಾದ ರೀತಿಯಲ್ಲಿ ಹಣ ಸಿಗುತ್ತಿಲ್ಲ. ಮಾನ್ಯ ನಾಗೇಗೌಡರು ಕರ್ನಾಟಕ ರಾಜ್ಯದಲ್ಲಿ ಕೇವಲ 18 ಸಕ್ಕರೆ ಕಾರ್ಖಾನೆಗಳಿವೆ. ಅಂತ ಹೇಳುತ್ತಿದ್ದರು. ಮಾಹಾರಾಷ್ಟ್ರದಲ್ಲಿ ಸುಮಾರು 109 ಸಕ್ಕರೆ ಕಾರ್ಖಾನೆಗಳಿವೆ ಎನ್ನತಕ್ಕ ಮಾತನ್ನು ಹೇಳಿದ್ದಾರೆ. ಮೊನ್ನೆ ನಾನೇ ಒಂದು ಪ್ರಶ್ನೆಯನ್ನು ಹಾಕಿದಾಗ ಮಹಾರಾಷ್ಟ್ರ ಮತ್ತು ಕೊಲ್ಲಾಪುರಗಳಿಗೆ ಕಬ್ಬನ್ನು ಕಳುಹಿಸಲಿಕ್ಕೆ ಕಡಿಯಲಿಕ್ಕೆ ಪರವಾಗಿ ಕೊಟ್ಟಿದ್ದೇವೆಂದು ಉತ್ತರ ಕೊಟ್ಟಿದ್ದಾರೆ. ಈ ರಾಜ್ಯದಲ್ಲಿ ಬೆಳೆದಂತಹ ಕಬ್ಬು ಬೆಳೆಗಾರರಿಗೆ ಯೋಗ್ಯವಾದ ಧಾರಣೆಯನ್ನು ಸಿಗುವಂತೆ ಮಾಡಬೇಕು. ಹೆಚ್ಚಿನ ಸಕ್ಕರೆ ಕಾರ್ಖಾನೆಗಳು ನಮ್ಮಲ್ಲಿ ಹಾಕಲಿಕ್ಕೆ ಅನುಮತಿಯನ್ನು ಕೊಡಬೇಕು. ಇವತ್ತು ನಮ್ಮ ರೈತರು ಬೆಳೆದಂತಹ ಬೆಳೆಗಳಿಗೆ ಯೋಗ್ಯವಾದ ಬೆಲೆ ಸಿಗುವಂತಾಗಬೇಕೆನ್ನುವುದು ಒಂದು ವಾದ. ಪ್ರತಿ ಗ್ರಾಮಗಳಲ್ಲಿ ರೈತರು ಸಾಲ ಮನ್ನಾ ಮಾಡಿ ಬಡ್ಡಿ ಮನ್ನಾ ಮಾಡಿ ಎಂದು ಅವರು ನಿರೀಕ್ಷೆ ಮಾಡುವುದಿಲ್ಲ ಇವತ್ತು ನಮಗೆ ಸರಿಯಾದ ಬೆಲೆಯನ್ನು ಕೊಡಿ ನಾವೇ ಸರ್ಕಾರಕ್ಕೆ ಕೊಡುತ್ತೇವೆಂದು ಅನೇಕ ಸಂದರ್ಭಗಳಲ್ಲಿ ಹೇಳಿದ್ದಾರೆ. ಈ ಬಗ್ಗೆ ಸಮಗ್ರವಾದ ಚಿಂತನೆ ಮತ್ತು ರೂಪುರೇಷೆಗಳನ್ನು ಮಾಡಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತಿದ್ದೇನೆ.

ಇನ್ನು ಶಿಕ್ಷಣದ ಬಗ್ಗೆ ಕೂಡ ಇವತ್ತು ಗುಣಮಟ್ಟ ಅತಿ ಕಡಿಮೆಯಿದೆ. ಆ ಕಾರಣ ಇವತ್ತು ಗ್ರಾಮಾಂತರ ಪ್ರದೇಶಗಳಿಗೆ ಶಿಕ್ಷಕರನ್ನು ಕೆಲಸವನ್ನು ಮಾಡುತ್ತಿಲ್ಲ. ಇವತ್ತು ಹೆಚ್ಚು ಶಿಕ್ಷಕರನ್ನು ಒದಗಿಸಬೇಕು. ಶಾಲಾ ಕಟ್ಟಡಗಳನ್ನು ಕಟ್ಟಿಸಬೇಕು, ಗುರುಭವನಗಳನ್ನು ಕಟ್ಟಿಸಬೇಕು. ಎಲ್ಲಿ ಶಾಲೆಗಳು ಇವೆ, ಅಲ್ಲಿ ಪ್ರತಿಯೊಂದು ಶಾಲೆಗೆ ಕನಿಷ್ಟಪಕ್ಷ ಒಂದಾದರೂ ಕೂಡ ಕುಡಿಯುವ ನೀರಿನ ಯೋಜನೆಯನ್ನು ಮಾಡಬೇಕು. ಇದನ್ನು ಮಾಡದೆ ಇವತ್ತು ಬಹಳ ತಪ್ಪನ್ನು ಎಸಗುತ್ತಿದ್ದೇನೆ ಎನ್ನುವ ಮಾತನ್ನು ಹೇಳುತ್ತಿದ್ದೇನೆ. ಇವತ್ತಿನ ಶಿಕ್ಷಣ ಮಟ್ಟವನ್ನು ಸುಧಾರಿಸತಕ್ಕದ್ದು ಸಾಕಷ್ಟು ಇದೆ.

ಇನ್ನು ನೀರಾವರಿಯ ಬಗ್ಗೆ ಪ್ರಸ್ತಾಪ ಮಾಡಲಾಗಿದೆ. ಈ ವಿಷಯದ ಬಗ್ಗೆ ಮಾತನಾಡಲು ಮಾನ್ಯ ಸಭಾಧ್ಯಕ್ಷರು ಅನುಮತಿಯನ್ನು ಕೊಟ್ಟಿರತಕ್ಕದ್ದು ಬಹಳ ಸಂತೋಷ. ಆ ಕಾರಣ ಈ ಇಲಾಖೆಯ ಬಗ್ಗೆ ಹೆಚ್ಚು ಮಾತನಾಡದೆ ನಮ್ಮ ಧಾರವಾಡ ಜಿಲ್ಲೆಯ ದಕ್ಷಿಣ ಭಾಗಕ್ಕೆ ತುಂಗಾ ಮೇದೆ ಯೋಜನೆಯನ್ನು ಜಾರಿಗೆ ತರಬೇಕು ಎನ್ನುವ ಒತ್ತಾಯ ಬಹಳ ದಿವಸಗಳಿಂದ ಇದೆ.

ಈ ಯೋಜನೆಗೆ ಮಂಜೂರಾತಿಯನ್ನು ಒದಗಿಸಿ ಇದಕ್ಕೆ ಸಾಕಷ್ಟು ಹಣವನ್ನು ಸರ್ಕಾರದಿಂದ ಒದಗಿಸಿ ಈ ಕೆಲಸವನ್ನು ತೆಗೆದುಕೊಳ್ಳಬೇಕೆಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ನನಗೆ ಮಾತನಾಡಲಿಕ್ಕೆ ಅವಕಾಶ ಕಲ್ಪಿಸಿಕೊಟ್ಟಿದ್ದಕ್ಕಾಗಿ ಮಾನ್ಯಅಧ್ಯಕ್ಷರಿಗೆ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

+ ಶ್ರೀ ಜಗದೀಶ್‌ಶೆಟ್ಟರ್ (ಹುಬ್ಬಳ್ಳಿ ಗ್ರಾಮಾಂತರ) : ಮಾನ್ಯ ಅಧ್ಯಕ್ಷರೆ, ಮಾನ್ಯ ರಾಜ್ಯಪಾಲರ ಭಾಷಣದಲ್ಲಿ ಹುಬ್ಬಳ್ಳಿ ಈದ್ಗಾ ಮೈದಾನದಲ್ಲಿ ರಾಷ್ಟ್ರಧ್ವಜರೋಹಣ ಸಮಸ್ಯೆಯನ್ನು ಬಿಡಿಸಿದ ಬಗ್ಗೆ ಹೇಳಿ ಅವೊಂದು ತತ್ವದ ಮೇಲೆ ರಾಜ್ಯದಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಒಳ್ಳೆಯ ರೀತಿಯಲ್ಲಿ ನಡೆಸುತ್ತಿದ್ದೇವೆಂದು ಹೇಳಿದ್ದಾರೆ. ಇವತ್ತು ಈದ್ಗಾಮೈದಾನದಲ್ಲಿ ರಾಷ್ಟ್ರಧ್ವಜರೋಹಣ ಗೌರವಯುತವಾಗಿ ಆಗಬೇಕೆಂದು ಭಾರತೀಯ ಜನತಾ ಪಕ್ಷದವರು ಮೂರ ವರ್ಷಗಳಿಂದ ಹೋರಾಟ ಮಾಡಿಕೊಂಡು ಬಂದಿದ್ದೇವೆ. ಜನವರಿ 26ನೇ ತಾರೀಖು ಗೌರವಯುತವಾಗಿ ಅಲ್ಲಿ ರಾಷ್ಟ್ರಧ್ವಜಾರೋಪಣ ಆಗದಿದ್ದರೆ ಮಂಬರುವ ದಿವಸಗಳಲ್ಲಿ ಸಮಸ್ಯೆ ಸರ್ಕಾರಕ್ಕೆ ತಲೆನೋವಾಗುತ್ತಿತ್ತು. ಆದ್ದರಿಂದ ಈ ಸಮಸ್ಯೆಯನ್ನು ಬಿಡಿಸಲಾಯಿತು. ಜನತೆಯ ಒತ್ತಡ ಸಹ ಇತ್ತು. ಅಲ್ಲಿಂದ ಇಬ್ಬರು ಭಾರತೀಯ ಜನತಾ ಪಕ್ಷದ ಸದಸ್ಯರು ಆರಿಸಿ ಬಂದಿದ್ದೇವೆ. ರಾಷ್ಟ್ರಧ್ವಜವನ್ನು ಹಾರಿಸುವಂತಹ ಸಂದರ್ಭದಲ್ಲಿ ರಾಷ್ಟ್ರಧ್ವಜವನ್ನು ಗೌರವಯುತವಾಗಿ ಅಲ್ಲಿ ಹಾರಿಸಬೇಕೆಂದು ತೀರ್ಮಾನ ಕೊಟ್ಟಿದ್ದರು. ಆ ಒತ್ತಡದಲ್ಲಿ ಸರ್ಕಾರ ಸಮಸ್ಯೆಯನ್ನು ಬಿಡಿಸಬೇಕಾಯಿತು. ರಾಷ್ಟ್ರರಧ್ವಜವನ್ನು ಹಾರಿಸಿದ್ದೇವೆಂದು ದೊಡ್ಡಜಂಬ ಕೊಚ್ಚಿಕೊಳ್ಳುವ ಪ್ರಸಂಗವೇನಿಲ್ಲ. ಭಾರತೀಯ ಜನತಾ ಪಕ್ಷದ ಶಾಸಕರು ಸಹಕಾರ ಕೊಡದಿದ್ದರೆ, ಭಾರತೀಯ ಜನತಾ ಪಕ್ಷದ ನಾಯಕರು ಸಹಕಾರ ಕೊಡದಿದ್ದರೆ ಏನಾಗುತ್ತಿತ್ತು. ಎನ್ನವುದನ್ನು ತಿಳಿದುಕೊಳ್ಳಬೇಕಾಗುತ್ತದೆ. ರಾಷ್ಟ್ರಧ್ವಜರೋಹಣ ಮಾಡುವಂತಹ ಸಂದರ್ಭದಲ್ಲಿ ನಮ್ಮನ್ನು ಸೌಜನ್ಯಕ್ಕಾದರೂ ಕರೆಸಬೇಕಾಗಿತ್ತು. ಜನತೆ ನಮ್ಮನ್ನು ಅಲ್ಲಿ ಕೇಳಿದರು,ನೀವು ಏಕೆ ಹೋಗಲಿಲ್ಲವೆಂದು? ಆಗ ನಾವು ಹೇಳಿದ್ದೇವೆ, ಸಮಸ್ಯೆಯನ್ನು ಬಗೆಹರಿಸಬೇಕಾಗಿದೆ ಅದು ಶಾಂತಿಯುತವಾಗಿ ಬಗೆಹರಿಸಬೇಕಾಗಿದೆ ನಮ್ಮ ಉದ್ದೇಶವೇನು ರಾಷ್ಟ್ರಧ್ವಜಾರೋಹಣ ಗೌರವಯುತವಾಗಿ ಆಗಬೇಕು ಅದಕ್ಕೆ ತಾಳ್ಮೆವಹಿಸಕೊಂಡು, ಅದಕ್ಕೆ ಸಹಕಾರ ಕೊಟ್ಟಿದ್ದೇವೆ. ಗೌರವಯುತವಾಗಿ ರಾಷ್ಟ್ರಧ್ವಜಾರೋಹಣದ ಸಮಸ್ಯೆ ಬಗೆಹರಿಸುವುದಕ್ಕೆ ಎಲ್ಲರ ಒಂದು ಸಹಕಾರ ಇದೆಯೆಂದು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

ರಾಜ್ಯದಲ್ಲಿ ಕಾನೂನು ಸುವ್ಯವಸ್ಥೆ ಬಗ್ಗೆ ಮಾತನಾಡುತ್ತಾ ಒಂದೆರೆಡು ಘಟನೆಗಳ ಬಗ್ಗೆ ಹೇಳಬಯಸುತ್ತಿದ್ದೇನೆ. ದರೋಡೆ ಪ್ರಕರಣ ಧಾರವಾಡದ ಹತ್ತಿರ ಗೋವ-ಬೆಂಗಳೂರು ಹೆದ್ದಾರಿಯಲ್ಲಿ ಧಾರವಾಡದ 13ಕಿಲೋಮೀಟರ್ ದೂರದ ಹೊನ್ನಾಪುರದ ಬಳಿ ಡಕಾಯಿತರ ಗುಂಪು ಮೂರು ಬಸ್ಸುಗಳನ್ನು ಟ್ಯಾಂಕರ್ ಮತ್ತು ಲಾರಿಯನ್ನು ತಡೆದು ಚಾಲಕರು ಮತ್ತು ಪ್ರಯಾಣಿಕರ ಮೇಲೆ ದಾಳಿ ಮಾಡಿ 2ಲಕ್ಷ ಮೌಲ್ಯದ ಚಿನ್ನ ಮತ್ತು ಹಣದೊಂದಿಗೆ ಪರಾರಿಯಾದರು. 36ಜನ ಗಾಯಗೊಂಡರು. ನಮ್ಮ ಕ್ಷೇತ್ರದ ವ್ಯಕ್ತಿಯಾದ ಮಹಾರುದ್ರಪ್ಪ ಶಿವಪ್ಪ ಅಂಗಡಿ ಅವರು ಮೃತಪಟ್ಟರು. ಆತ ಅಂಗಡಿ ವ್ಯಾಪಾರಸ್ಥ ಆತ ದರೋಡೆಯಲ್ಲಿ ಮೃತಪಟ್ಟ. ಇಬ್ಬರು ಸಣ್ಣ ಮಕ್ಕಳು ಕಿರಿಯ ವಯಸ್ಸಿನ ಹೆಂಡತಿ ವಿಧವೆ ಅವರಿಗೆ ಏನು ಪರಿಹಾರ? ಇವತ್ತಿನವರೆಗೆ ಸರ್ಕಾರ ಏನೂ ಪರಿಹಾರವನ್ನು ಅವರ ಮನೆತನದವರಿಗೆ ಕೊಟ್ಟಿಲ್ಲ. ಬೀದರ್‌ನ ಹುಮ್ನಬಾದ್‌ನ ಹತ್ತಿರ ಒಂದು ಗ್ರಾಮದಲ್ಲಿ ರಾಷ್ಟ್ರೀಯ ಹೆದ್ದಾರಿಯಲ್ಲಿ 15ಮಂದಿ ಡಕಾಯಿತರ ತಂಡ 10ವಾಹನಗಳ ಮೇಲೆ ಒಂದಾದರ ಮೇಲೆ ಒಂದರಂತೆ ದಾಳಿ ಮಾಡಿ 4 ಜನರನ್ನು ಗಾಯಗೊಳಿಸಿ ಸುಮಾರು 15ಲಕ್ಷ ರೂಪಾಯಿಗಳನ್ನು ದರೋಡೆ ಮಾಡಿದರು. ಈ ರೀತಿ ದರೋಡೆಗಳು ನಡೆಯುತ್ತಿವೆ.

ಇದು ಕೇವಲ ಫೆಬ್ರವರಿ ತಿಂಗಳಿನಲ್ಲಿ ಆಗಿದ್ದು. ಮುಖ್ಯವಾಗಿ ಧಾರವಾಡದ ಹತ್ತಿರ ಆದಂಥ ದರೋಡೆ ಅದು ನಿನ್ನೆ ಮೊನ್ನೆಯಲ್ಲ. ಫೆಬ್ರವರಿಯಲ್ಲಿ ಆಗಿದ್ದು, ಹಿಂದೆ 1992ರ ನವೆಂಬರ್ ತಿಂಗಳಿನಲ್ಲಿ ಆಗಿತ್ತು. 1994ನೇ ಇಸವಿ ಜೂನ್‌ನಲ್ಲಿ ಇದೇ ಹೆದ್ದಾರಿಯಲ್ಲಿ ಇದೇ ಸ್ಥಳದಲ್ಲಿ ದರೋಡೆಯಾಗಿತ್ತು. ಆದರೂ ಏಕೆ ಮುಂಜಾಗ್ರತೆ ಕ್ರಮವನ್ನು ಕೈಗೊಳ್ಳಲಿಲ್ಲ? ಗೃಹ ಇಲಾಖೆಯವರ ಹತ್ತಿರ ಮಾಹಿತಿ ಇರಲಿಲ್ಲವೆ?

ಪೆಟ್ರೋಲಿಂಗ್ ಮಾಡುತ್ತೇವೆಂದು ಹೇಳಿದರು. ಪೋಲೀಸರಿಂದ ಗಸ್ತು ಮಾಡಿಸುತ್ತೇವೆಂದು ಹೇಳಿದರು. ಏಕೆ ಆ ಸಂದರ್ಭದಲ್ಲಿ ಅಲ್ಲಿ ಇರಲಿಲ್ಲ?ಇದಕ್ಕೆ ಗೃಹಮಂತ್ರಿಗಳು ಉತ್ತರ ಕೊಡಬೇಕಾಗುತ್ತದೆ. ಇಂತಹ ಇನ್ನೂ ಹಲವಾರು ಪ್ರಕರಣಗಳು ಇವೆ. ಡಾ॥ ಜೀವರಾಜ ಆಳ್ವರವರು ಹಲವಾರು ಘಟನೆಗಳ ಬಗ್ಗೆ ಹೇಳಿದ್ದಾರೆ.ನಾನು ಅದನ್ನೇ ರಿಪೀಟ್ ಮಾಡುವುದಕ್ಕೆ ಹೋಗುವುದಿಲ್ಲ.

ಆದರೆ ಹುಬ್ಬಳ್ಳಿಯಲ್ಲಿ ಮೊನ್ನೆ ಮಾರ್ಚ್ 21ನೇ ತಾರೀಕು ಏನು ಆಯಿತು? ಹತ್ತು ದಿವಸಗಳ ಹಿಂದೆ ಗಲಾಟೆಯಾಗಿತ್ತು. ಮೊನ್ನೆ ಆಕಸ್ಮಾತ್ ಗಲಾಟೆ ಪ್ರಾರಂಭವಾಯಿತು. ಕಮರಿಪೇಟೆ ಒಂದು ಸೆನ್ಸಿಟಿವ್ ಏರಿಯಾ ಎಂದು ಎಲ್ಲರಿಗೂ ಗೊತ್ತಿದೆ. ಪೋಲೀಸ್ ಡಿಪಾರ್ಟ್‌ಮೆಂಟ್‌ನವರಿಗೆ, ಗೃಹಇಲಾಖೆಯವರಿಗೆ, ಸಾರ್ವಜನಿಕರಿಗೆ ಎಲ್ಲರಿಗೂ ಗೊತ್ತಿದೆ. ಎಲ್ಲರಿಗೂ ಗೊತ್ತಿರತಕ್ಕಂಥ ಕಮರಿಪೇಟೆ ಅಥವಾ ಮುಲ್ಲಾ ಓಣಿಯಲ್ಲಿ ಹೋದವರ್ಷ ಹೋಳಿಹುಣ್ಣಿಮೆ ಸಂದರ್ಭದಲ್ಲಿ ನನ್ನ ಜೊತೆಯಲ್ಲಿ ಮಿತ್ರರಾದ ಅಶೋಕ ಕಾಟ್ವೆಯವರು ಇದ್ದರು. ಸಾವಿರಾರು ಜನ ಪೋಲೀಸರನ್ನು ಬಂದೋಬಸ್ತಿಗಾಗಿ ನೇಮಿಸಲಾಗಿತ್ತು. ಈ ಸಲ ಕೇವಲ ಹತ್ತು ಮಂದಿ ಕಾನ್‌ಸ್ಟೇಬಲ್‌ಗಳು ಇದ್ದರು. ಒಂದು ಜೀಪ್ ಮಾತ್ರ ಇತ್ತು. ಒಬ್ಬ ಇನ್‌ಸ್ಪೆಕ್ಟರ್ ಮಾತ್ರ ಇದ್ದರು. ಇಂತಹ ಒಂದು ಸೆನ್ಸಿಟೀವ್ ಏರಿಯಾದಲ್ಲಿ ಪೋಲೀಸಿನವರಿಗೆ ಸರಿಯಾಗಿ ಬಂದೋಬಸ್ತ್ ಮಾಡುವುದಕ್ಕೆ ಆಗಲಿಲ್ಲ. ಇದು ಎಲ್ಲರಿಗೂ ಗೊತ್ತಿದೆ. ಇದು ಒಂದು ಸೆನ್ಸಿಟೀವ್ ಏರಿಯಾ ಇದ್ದು, ಇಲ್ಲಿ ಗಲಾಟೆಯಾಗುವ ವಾಸನೆ ಮೊದಲೇ ಗೊತ್ತಿತ್ತು. ನಾನು ಒಂದು ಉದಾಹರಣೆಯನ್ನು ಕೊಡುತ್ತೇನೆ. ಇದು ಸರ್ಕಾರಕ್ಕೆ ಪೋಲೀಸ್ ಡಿಪಾರ್ಟ್‌ಮೆಂಟ್‌ನವರಿಗೆ ಗೊತ್ತಿದ್ದರೂ ಕೂಡ, ಈ ಒಂದು ವಿಷಯದಲ್ಲಿ ಪೋಲೀಸ್‌ಕಮೀಷನರ್ ಅವರು ದಿನಾಂಕ 16-3-95ರಂದು ಒಂದು ನೋಟೀಸನ್ನು ಕೊಟ್ಟರು. ಹುಬ್ಬಳ್ಳಿ ನಗರದಲ್ಲಿ ಮದ್ಯದ ಅಂಗಡಿಗಳನ್ನು ಐದು ದಿವಸಗಳ ಕಾಲ ಮುಚ್ಚಬೇಕು ಎಂದು ಹೇಳಿ ಒಂದು ನೋಟೀಸ್‌ನಲ್ಲಿ ಪೋಲೀಸ್ ಕಮೀಷನರ್ ಅವರು ಸ್ಪಷ್ಟವಾಗಿ ಬರೆದಿದ್ದಾರೆ.

ಹುಬ್ಬಳ್ಳಿ-ಧಾರವಾಡ ನಗರಗಳು ಮೊದಲಿನಿಂದಲೂ ಮತೀಯ ಮತ್ತು ರಾಜಕೀಯ ದೃಷ್ಟಿಯಿಂದ ಅತಿ ಸೂಕ್ಷ್ಮವಾದ ಪ್ರದೇಶವಾಗಿದ್ದು, ಇಲ್ಲಿ ವಿವಾದಾತ್ಮಕವಾಗಿರುವ ಈದ್ಗಾ ಮೈದಾನದಲ್ಲಿ ರಾಷ್ಟ್ರಧ್ವಜವನ್ನು ಹಾರಿಸಿದ್ದರಿಂದ ಮತೀಯ ಭಾವನೆ ಉದ್ಭವಿಸಬಹುದಾಗಿದೆ. ಈ ಹಬ್ಬದ ಆಚರಣೆಯ ಸಮಯದಲ್ಲಿ ಹಿಂದೆ ನಡೆದ ವಿದ್ಯಾಮಾನಗಳನ್ನು ಅವಲೋಕಿಸಿ ಮುಂಜಾಗರೂಕತೆಯ ಸಲುವಾಗಿ ಈ ನಗರಗಳಲ್ಲಿ ಕಾನೂನು ವ್ಯವಸ್ಥೆಯನ್ನು ಕಾಪಾಡುವ ಸಲುವಾಗಿ ಮದ್ಯದ ಮಾರಾಟ ಮತ್ತು ಸೇವನೆಯನ್ನು ನಿಷೇಧಿಸಿ ಆಜ್ಞೆಯನ್ನು ಹರಡಿಸುವುದು ಅತಿಅವಶ್ಯಕವಾಗಿದೆ...

ಇದನ್ನು ನಾನು ಮಾನ್ಯ ಗೃಹಮಂತ್ರಿಗಳಿಗೆ ಕಳಿಸಿಕೊಡುತ್ತೇನೆ. ಅವರು ಈ ಪ್ರಕಾರವಾಗಿ ನೋಟೀಸ್ ಕಳಿಸಿ ಮದ್ಯದ ಅಂಗಡಿಗಳನ್ನು ಬಂದ್ ಮಾಡಿದರು. ಇಲ್ಲಿ ಮತೀಯ ಗಲಭೆ ಆಗುವ ಸಂಭವವಿದೆ ಎಂದು ಅವರು ಹೇಳಿದ್ದಾರೆ. ಆದರೂ ಕೂಡ ಸರಿಯಾದ ಬಂದೋಬಸ್ತನ್ನು· ಮಾಡಿಲಿಲ್ಲ. ಪೋಲೀಸ್ ಕಮೀಷನರ್‌ಅವರು ಘಟನೆ ನಡೆದ ಒಂದೆರಡು ದಿವಸಗಳ ನಂತರ ಬಂದರು. ತಮಗೆ ಗೊತ್ತಿದೆ, ಪೋಲೀಸ್ ಡಿಪಾರ್ಟ್‌ಮೆಂಟ್‌ನ ನಿರ್ಲಕ್ಷ್ಯದಿಂದ ಇದು ಆಗಿದೆ. ಇವತ್ತಿನವರೆಗೂ ಯಾರು ಪೋಲೀಸ್ ಅಧಿಕಾರಿಗಳ ನಿರ್ಲಕ್ಷ್ಯದಿಂದ ಇದು ಆಗಿದೆ, ಆ ಅಧಿಕಾರಿಯ ಮೇಲೆ ಕ್ರಮ ತೆಗೆದುಕೊಳ್ಳುವ ಗಟ್ಸ್ ಸರ್ಕಾರಕ್ಕೆ ಇಲ್ಲ. ಇದರ ಹಿನ್ನಲೆ ಏನು? ನಾವು ಧರಣಿ ಕೂತಿದ್ದೆವು. ನಾಲ್ಕು ದಿವಸಗಳವರೆಗೆ ಅವ್ಯಾಹತವಾಗಿ ಇದು ನಡೆಯಿತು. ಚೂರಿ ಇರಿತ, ಬೊಂಬಿ, ಎಲ್ಲ ನಡೆದಿದೆ. ನೇಮಿಚಂದ್ರ ಎನ್ನತಕ್ಕಂಥ ಎಲೆಕ್ಟ್ರಿಕ್ ವ್ಯಾಪಾರಸ್ಥನ ಅಂಗಡಿ ಸಂಪೂರ್ಣವಾಗಿ ಭಸ್ಮವಾಯಿತು. ಮಾನ್ಯ ಗೃಹಮಂತ್ರಿಗಳು

21ನೇತಾರಿಕು ರಾತ್ರಿ ಇಲ್ಲಿಂದ ಹೋದರು. ಮೂರನೇ ದಿವಸ ನಾವು ಹೋದೆವು. ಅವತ್ತು ಸಾಯಂಕಾಲ ನಾವು ಗೃಹಮಂತ್ರಿಗಳನ್ನು ಭೇಟಿಯಾಗಿದ್ದೆವು. ಅಂದು ಸಾಯಂಕಾಲದವೆರೆಗೂ ಕರ್ಫ್ಯೂ ವಿಧಿಸಲಿಲ್ಲ. ಯಾವುದಾದರೂ ಸಣ್ಣ ಘಟನೆಯಾದರೆ ತಕ್ಷಣ ಹುಬ್ಬಳ್ಳಿ ನಗರದಲ್ಲಿ ಕರ್ಫ್ಯೂ ಹಾಕುತ್ತಾರೆ. ಆದರೆ ಮಾರನೆಯ ದಿವಸ ಆರುಗಂಟೆಯಾದರೂ ಕರ್ಫ್ಯೂ ವಿಧಿಸಲಿಲ್ಲ. ಚೂರಿ ಇರಿತವಾಗಿದೆ, ದೊಂಬಿ ನಡೆದಿದೆ. ಆದರೂ ಕೂಡ ಕರ್ಫ್ಯೂವನ್ನು ಏಕೆ ವಿಧಿಸಲಿಲ್ಲವೆಂದು ಕೇಳಿದಾಗ ಆರು ಗಂಟೆಗೆ ಕರ್ಫ್ಯೂವನ್ನು ವಿಧಿಸಿದರು. ಅಲ್ಲಿ ಗೃಹಮಂತ್ರಿಗಳು ಇದ್ದರು, ಡಿ.ಜಿ.ಪಿ.ಯವರು ಇದ್ದರು, ಆದರೂ ಕೂಡ ಗಲಭೆ ನಡೆಯುತ್ತಿತ್ತು. ಇದು ಸತತವಾಗಿ ಮೂರು ದಿವಸ ನಡೆಯಿತು. ಇದಕ್ಕೆ ಮುಖ್ಯ ಕಾರಣವೇನೆಂದರೆ ಪೋಲೀಸ್ ವ್ಯವಸ್ಥೆ ಸಂಪೂರ್ಣವಾಗಿ ಹಾಳಾಗಿದ್ದುದು ಆಗಿದೆ.

ಅಧ್ಯಕ್ಷರು : ಅಲ್ಲಿ ಅಕ್ರಮವಾರಗಿರುವ ಮಧ್ಯ ಕೂಡ ಸಿಕ್ಕಿದೆ ಎಂದು ನಾನು ಕೇಳಿದೆ. ಇಲ್ಲಿಸಿಟ್ ಲಿಕ್ಕರ್ ಕೂಡ ಸಿಕ್ಕದೆಯೆಂದು ಕಾಣುತ್ತದೆ. ಪೋಲೀಸರು ಬಹಳಷ್ಟು ಹಿಡಿದರು ಎಂದು ನಾನು ಪತ್ರಿಕೆಯಲ್ಲಿ ಓದಿದೆ.

ಶ್ರೀ ಜಗದೀಶ ಶೆಟ್ಟರ್ : ಈಗ ಈ ಒಂದು ಘಟನೆಯನ್ನು ಮಧ್ಯ ವ್ಯಾಪಾರಸ್ತರ ಮೇಲೆ ಚೇಂಜ್ ಮಾಡುತ್ತಿದ್ದಾರೆ. ನಿಜವಾದ ಸತ್ಯಸಂಗತಿ ಏನಿದೆ ಅದನ್ನು ಮರೆಮಾಚಿ ಇದಕ್ಕೆ ಬೇರೆ ರೂಪವನ್ನು ಈಗ ಕೊಡುತ್ತಿದ್ದಾರೆ. ಏಕೆಂದರೆ....

ಶ್ರೀ ಪಿ.ಜಿ.ಆರ್. ಸಿಂಧ್ಯ (ಗೃಹ ಸಚಿವರು) : ಸನ್ಮಾನ್ಯ ಅಧ್ಯಕ್ಷರೇ, ಮಾನ್ಯ ಶೆಟ್ಟರ್ ಅವರು ಏನು ಹೇಳಿದ್ದಾರೆ ಅದು ಸರಿಯಲ್ಲ. ನಾನು ಹೆಲಿಕಾಪ್ಟರ್‌ನಲ್ಲಿ ಘಟನೆ ನಡೆದ ದಿವಸ ನಾಲ್ಕು ಗಂಟೆಯೊಳಗೆ ಡಿ.ಜಿ.ಪಿ. ಅವರ ಜೊತೆಯಲ್ಲಿ ಹೋಗಿದ್ದೇನೆ. ಬಹುಶಃ ಈ ರೀತಿ ಕೋಮು ಗಲಭೆ ನಡೆದ ನಾಲ್ಕು ಗಂಟೆ ಒಳಗಡೆ ಶಾಂತಿಯನ್ನು ಅಲ್ಲಿ ತರುವುದಕ್ಕೆ ಮತ್ತು ಅಲ್ಲಿನ ಪರಿಸ್ಥಿತಿಯನ್ನು ನಿಯಂತ್ರಣ ಮಾಡುವುದಕ್ಕೆ, ಪೋಲೀಸರು ಬಂದೋಬಸ್ತು ಮಾಡುವುದಕ್ಕೆ ಗೃಹಮತ್ರಿಗಳು ಅಥವಾ ಇಲಾಖೆಯ ಮುಖ್ಯಸ್ಥರು ನಾಲ್ಕು ಗಂಟೆಯೊಳಗಡೆ ಹೋಗಿರತಕ್ಕಂಥಾದ್ದು ಇದೇ ಮೊದಲನೇ ಸಾರಿ ಇದು ಒಂದು. ಎರಡನೆಯದಾಗಿ ಇವರು ಏನು ಹೇಳುತ್ತಿದ್ದಾರೆಂದರೆ ಇವರು ಬಂದು ಹೇಳಿದ ಮೇಲೆ ಕರ್ಫ್ಯೂವನ್ನು ಅಲ್ಲಿ ವಿಧಿಸಲಾಯಿತು ಎಂದು. ಅದು ಹಾಗಲ್ಲ. ಕರ್ಫ್ಯೂವನ್ನು ಯಾವಾಗ ಹಾಕಬೇಕು, ಯಾವ ಏರಿಯಾದಲ್ಲಿ ಹಾಕಬೇಕು, ಎಲ್ಲಿ ಹಾಕಬೇಕು ಎಂದು ಹೇಳತಕ್ಕಂಥಾದ್ದು ಪೋಲೀಸ್ ಅಧಿಕಾರಿಗಳು ನಿರ್ಧಾರ ಮಾಡತಕ್ಕಂಥ ವಿಚಾರ. ಇದು ಎರಡನೇಯದು. ಮೂರನೆಯದಾಗಿ, ನಾನು ತಮಗೆ, ಸದನಕ್ಕೆ ಮತ್ತು ರಾಜ್ಯದ ಜನತೆಗೆ ಹೇಳಬೇಕಾಗುತ್ತದೆ. ಈ ಮಧ್ಯಸಾರ ವ್ಯವಹಾರ ಏನು ನಡೆಯುತ್ತಿತ್ತು, ಇವರನ್ನು ಹಿಡಿದ ತಕ್ಷಣ, ಅನೇಕರಿಂದ ಮಾರಕಾಸ್ತ್ರಗಳನ್ನು ಹಿಡಿದ ತಕ್ಷಣ, ಕೆಲವು ಗೂಂಡಾ ವ್ಯಕ್ತಿಗಳನ್ನು ಹಿಡಿದ ತಕ್ಷಣ ಪರಿಸ್ಥಿತಿ ಹತೋಟಿಗೆ ಬರಬೇಕಾದರೆ ಇದಕ್ಕೆ ಕಾರಣ ಏನು? ಈಗ ನಡೆದಿದ್ದುದು ನಡೆದುಹೋಗಿದೆ. ಇಂತಹ ಪರಿಸ್ಥಿತಿ ಇನ್ನು ಬೇರೆ ಕಡೆ ಆಗಬಾರದು. ಹುಬ್ಬಳ್ಳಿಯಲ್ಲೂ ಆಗಬಾರದು. ಇದರ ಬಗ್ಗೆ ಮಾನ್ಯ ಸದಸ್ಯರು ನನಗೆ, ನಮ್ಮ ಸರ್ಕಾರಕ್ಕೆ ಸಲಹೆಗಳನ್ನು ಕೊಟ್ಟರೆ ಬಹಳ ಉತ್ತಮವಾಗುತ್ತದೆ ಎಂದು ನಾನು ತಿಳಿದುಕೊಳ್ಳುತ್ತೇನೆ. ಇವತ್ತು ನಾವು ಕಾನೂನನ್ನು ಕಾಪಾಡುವ ದೃಷ್ಟಿಯಿಂದಲೇ ನಾವು ಎಲ್ಲವನ್ನೂ ಬಹಿರಂಗ ಗೊಳಿಸುವುದಕ್ಕೆ ಹೋಗಿಲ್ಲ. ಇವತ್ತು ಅಲ್ಲಿ ಕೋಟ್ಯಾಂತರ ರೂಪಾಯಿ ಬೆಲೆಬಾಳುವ ಕಳ್ಳಮಧ್ಯ ಮಾರಾಟವಾಗುತ್ತಿದ್ದುದನ್ನು ಹಿಡಿದಮೇಲೆ ಇದು ನಿಯಂತ್ರಣಕ್ಕೆ ಬಂತು ಎಂದರೆ ಇದರ ಅರ್ಥ ಏನು? ಈ ತರಹ ಸಲಹೆಗಳನ್ನು ದಯವಿಟ್ಟು ಕೊಡಿ. ಅದನ್ನು ಸರ್ಕಾರ ಸ್ವೀಕಾರ ಮಾಡುತ್ತದೆ. ಅದನ್ನು ಅಳವಡಿಸಿಕೊಳ್ಳುವುದಕ್ಕೆ ನಾವು ಪ್ರಯತ್ನ ಮಾಡುತ್ತೇವೆ.

ಶ್ರೀ ಕೆ.ಎಸ್. ಈಶ್ವರಪ್ಪ : ಅವರು ಮಾತನಾಡಿದ್ದನ್ನು ಮಾನ್ಯ ಗೃಹಮಂತ್ರಿಗಳು ಪ್ರಾರಂಭದಲ್ಲಿ ಕೇಳಿಸಿಕೊಳ್ಳಲಿಲ್ಲ. ಅದಕ್ಕೋಸ್ಕರ ಮಧ್ಯೆ ನಾನು ನಿಂತುಕೊಂಡಿದ್ದೇನೆ. ಕಳೆದವರ್ಷವೂ ಈರೀತಿ ಗಲಭೆಯಾಗಿತ್ತು. ಕಳೆದವರ್ಷವೂ ಈ ರೀತಿ ಗಲಭೆ ಆಗಬಹುದೆಂಬ ಅಂಶವನ್ನು ಸರ್ಕಾರ ಪೋಲೀಸ್ ಇಲಾಖೆ ಗಮನಿಸಿ ಒಂದು ಸಾವಿರಕ್ಕೂ ಹೆಚ್ಚು ಪೋಲೀಸ್‌ಸಿಬ್ಬಂದಿಯನ್ನು ಇದೇ ಓಣಿಯಲ್ಲಿ ನೇಮಕಮಾಡಿದ್ದರು. ಆಗ ಜಗದೀಶ ಶೆಟ್ಟರ್ ಅಶೋಕ್ ಕಾಟ್ವೆಯವರು ಇದ್ದಂಥ ಸಂದರ್ಭದಲ್ಲಿ ಸಂಪೂರ್ಣವಾಗಿ ಪರಿಸ್ಥಿತಿ ಹತೋಟಿ ಬಂತು ಎಂಬುದು ಸರ್ಕಾರದ ಗಮನಕ್ಕೆ ಬಂದಿದೆ. ಆದರೆ ಈ ಸಲ ಆ ರೀತಿ ಆಗಬಹುದು ಎಂದು ಪೋಲೀಸ್ ಇಲಾಖೆಯವರು ಪಾಂಪ್ಲೆಟ್ಸ್‌ನ್ನು ಹೊರಡಿಸಿದ್ದಾರೆ. ಆದರೂ ಅಲ್ಲಿದ್ದವರು ಬರೇ ಹತ್ತು ಜನ ಪೋಲೀಸರು. ಇದರಿಂದ ಈ ಘಟನೆಬಗ್ಗೆ ಸರ್ಕಾರ ಎಷ್ಟೊಂದು ನಿರ್ಲಕ್ಷ್ಯತನ ತೋರಿಸಿದೆ ಎಂಬುದು ತಿಳಿಯುತ್ತದೆ.

ಶ್ರೀ ಪಿ.ಜಿ.ಆರ್.ಸಿಂಧ್ಯ : ತಮಗೆ ಬಂದಿರತಕ್ಕಂಥಾದ್ದು ತಪ್ಪುಮಾಹಿತಿ.. ಆ ಜಾಗದಲ್ಲಿ ಇದ್ದವರು ಹತ್ತು ಮಂದಿ ಪೋಲೀಸಿನವರು. ಆದರೆ ಹುಬ್ಬಳ್ಳಿಯಲ್ಲಿ ಆವತ್ತು ಒಂದು ಸಾವಿರ ಪೋಲೀಸ್ ಸಿಬ್ಬಂದಿ ಇತ್ತು. ಬಂದೋಬಸ್ತು ಮಾಡುವುದಕ್ಕೆ ಇದರಲ್ಲಿ ಏನಾದರೂ ತಪ್ಪಾಗಿದೆಯೇ ಎಂದು ತಿಳಿದುಕೊಳ್ಳುವುದಕ್ಕೆ ಇವತ್ತು ಹೈಕೋರ್ಟ್ ನ್ಯಾಯಾಧೀಶರ ಮುಖಂಡತ್ವದಲ್ಲಿ ನ್ಯಾಯಾಂಗ ತನಿಖೆಗೆ ಆದೇಶ ಮಾಡಿದ್ದೇವೆ. 21ನೇ ತಾರೀಕಿಗೆ ಈ ಘಟನೆ ನಡೆದಿದೆ. 15ದಿವಸದೊಳಗಡೆ ಹೈಕೋರ್ಟ್‌ಗೆ ಬರೆದು ನ್ಯಾಯಾಧೀಶರ ಪಟ್ಟಿಯನ್ನು ತರಿಸಿಕೊಂಡು ನ್ಯಾಯಾಧೀಶರ ನೇಮಕಾತಿ ಮಾಡಬೇಕೆಂದು ಈ ಹಂತವನ್ನು ನಾವು ತಲುಪ್ಪಿದ್ದೇವೆ. ತಮಗೆ ಗೊತ್ತಿದೆ, ಆಗಸ್ಟ್‌ನಲ್ಲಿ ನಡೆದದ್ದು ಹಿಂದೆ ನಡೆದಂಥ ಗಲಭೆ ಬಗ್ಗೆ ನಮ್ಮ ಸರ್ಕಾರ ಬರುವವರೆಗೆ ನ್ಯಾಯಾಧೀಶರಿಂದ ತನಿಖೆ ನಡೆದಿರಲಿಲ್ಲ. ನಾನು ಹೇಳುವುದು, ತಾವು ಸರ್ಕಾರಕ್ಕೆ ಸಲಹೆಗಳನ್ನು ಕೊಡಿ. ಟೀಕೆಯನ್ನೂ ಮಾಡಿ. ಅದು ನಿಮ್ಮ ಹಕ್ಕು ಆದದರೆ ಸರ್ಕಾರ ಇಲಾಖೆ ಮಾಡಿರತಕ್ಕಂಥ ಪೋಲೀಸ್ ಆಡಳಿತ ಯಂತ್ರ ಮಾಡತಕ್ಕಂಥ ಒಳ್ಳೆಯ ಕೆಲಸವನ್ನೂ ಕೂಡ ನೀವು ಹೇಳಿಮೆಚ್ಚಬೇಕಾಗುತ್ತದೆ. ಅದನ್ನು ನಾನು ಅಪೇಕ್ಷೆ ಮಾಡುವುದು.

ಶ್ರೀ ಕೆ.ಎಸ್. ಈಶ್ವರಪ್ಪ : ಸನ್ಮಾನ್ಯ ಗೃಹಮಂತ್ರಿಗಳು ಹೇಳಿರುವುದನ್ನು ನಾನು ಸಂಪೂರ್ಣವಾಗಿ ಸ್ವಾಗತ ಮಾಡಿ, ಅವರು ತೆಗೆದುಕೊಂಡಿರುವ ತೀರ್ಮಾನದ ಬಗ್ಗೆ ಅವರಿಗೆ ಅಭಿನಂದನೆಯನ್ನು ಸಲ್ಲಿಸುತ್ತೇನೆ. ನಾನು ಹೇಳುವುದೇನೆಂದರೆ ಇಲ್ಲಿ ಮೇಲ್ನೋಟಕ್ಕೆ ಯಾರೋ ಒಬ್ಬ ಸಂಬಂಧಪಟ್ಟ ಪೋಲೀಸ್ ಅಧಿಕಾರಿ ಏನು ಅನ್ಯಾಯ ಮಾಡಿದ್ದಾರೆ, ಅವರ ಬಗ್ಗೆ ತನಿಖೆ ಮಾಡಿ ತಕ್ಷಣ ಅವರನ್ನು ಸಸ್ಪೆನ್‌ಶನ್‌ನಲ್ಲಿ ಇಡಿ.ಆತ ಮಾಡಿದ್ದು ತಪ್ಪು ಇದೆ. ಇದನ್ನು ಇಡೀ ಹುಬ್ಬಳ್ಳಿ-ಧಾರವಾಡದ ಜನರು ಹೇಳುತ್ತಿದ್ದಾರೆ.

6.40 ಪಿ.ಎಂ

ಶ್ರೀ ಪಿ.ಜಿ.ಆರ್. ಸಿಂಧ್ಯ : ಅಧಿಕಾರಿಗಳು ತಪ್ಪು ಮಾಡಿದ್ದಾರೆ ಎನ್ನುವುದು ಮೇಲ್ನೋಟಕ್ಕೆ ಗೊತ್ತಾಗಿ ಸಂಬಂಧಪಟ್ಟ ಅಧಿಕಾರಿಗಳಿಂದ ವರದಿ ಬಂದಮೇಲೆ ಕ್ರಮ ತೆಗೆದುಕೊಳ್ಳವುದು ಒಂದು ವಿಷಯ. ಆದರೆ, ತತಕ್ಷಣದಲ್ಲಿ, ಅಲ್ಲಿ ಆಗತಕ್ಕ ಅನಾಹುತಗಳ ಬಗ್ಗೆ ಯೋಜನೆ ಮಾಡಬೇಕಾಗುತ್ತದೆ. ಏಕೆಂದರೆ ಇವತ್ತು ಅಧಿಕಾರಿಗಳು ಸದನದಲ್ಲಿ ಬಂದು ಮಾತನಾಡುವುದಕ್ಕಾಗುವುದಿಲ್ಲ. ಮುಖ್ಯವಾಗಿ ಸರ್ಕಾರದಿಂದ ಹೊರಡುವ ಎಲ್ಲಾ ಆಜ್ಞೆಗಳೂ ಸಹಿತ ವಿಧಾನ ಸೌಧದ ಮುಂದುಗಡೆ ಇರತಕ್ಕ ಕೆಂಪು ಕಟ್ಟಡದಲ್ಲಿ ಪಾಸ್ ಆಗಬೇಕು. ಇದು ಅತ್ಯಂತ ಸೂಕ್ಷ್ಮವಾಗಿರತಕ್ಕ ವಿಚಾರ. ಇದರ ಹಿನ್ನಲೆಯಲ್ಲಿ ಸರ್ಕಾರಕ್ಕೆ ಈಗಾಗಲೇ ಯಾರು ತಪ್ಪು ಮಾಡಿದ್ದಾರೆಂಬ ಬಗ್ಗೆ,

ಕೆಲವು ವಿಚಾರಗಳು ಬಂದಿವೆ. ಇದು ನ್ಯಾಯಾಂಗ ತನಿಖೆಗೆ ಒಳಪಡುವುದಿಲ್ಲ. ಇದರ ಬಗ್ಗೆ ನಾವು ಕ್ರಮ ತೆಗೆದುಕೊಳ್ಳುತ್ತೇವೆ.

ಶ್ರೀ ಆರ್.ಎಲ್. ಜಾಲಪ್ಪ : ಇಡೀ ರಾಜ್ಯದಲ್ಲಿ, ಎಲ್ಲಾ ಜಿಲ್ಲೆಗಳಲ್ಲೂ ವರ್ಷಕ್ಕೆ 10 ಪರ್ಸೆಂಟ್‌ನಿಂದ 15 ಪರ್ಸೆಂಟ್ ವರೆಗೆ ಎಕ್ಸೈಸ್ ಜಾಸ್ತಿಯಾಗುತ್ತದೆ. ಆದರೆ, ಹುಬ್ಬಳ್ಳಿಯಲ್ಲಿ ಮಾತ್ರ ಆಗುವುದಿಲ್ಲ, ಇದೇ ಕಾರಣ. ಬೇಕಾದರೆ ಅಂಕಿ ಅಂಶ ತರಿಸಿ ನೋಡಬಹುದು.

ಶ್ರೀ ವಾಟಾಳ್ ನಾಗರಾಜ್ : ಮನೆಗಳ ಮೇಲೆ ಧಾಳಿ ಮಾಡಿದ ಮೇಲೆ ಲಕ್ಷಾಂತರ ರೂಪಾಯಿಗಳ ಮದ್ಯ ಸಿಕ್ಕಿದೆಯೆಂದು ಮಾನ್ಯ ಗೃಹಮಂತ್ರಿಗಳು ಹೇಳಿದ್ದಾರೆ. ಆ ಅವರು ಯಾರ್ಯಾರು, ಈ ಮದ್ಯಕ್ಕೂ ಮತ್ತು ಗಲಭೆಗೂ ಏನು ಸಂಬಂಧ. ಇದೊಂದು ಮದ್ಯದ ಮನೆಗಳು ಯಾವುವು ಎಂಬುದನ್ನೂ ಸ್ಪಷ್ಟಪಡಿಸಬೇಕು. ಈ ತೀರ್ಮಾನವಾಗಿ ಬಿಡಲಿ. ಮಾನ್ಯ ಗೃಹಸಚಿವರು ದಯಮಾಡಿ ಹೇಳಲಿ. ಸಂದರ್ಭದಲ್ಲಿ ಎಷ್ಟು ಮನೆಗಳ ಮೇಲೆ ಧಾಳಿ ಮಾಡಿದ್ದಾರೆ, ಅವರು ಯಾರು ಯಾರು ಎಂಬ ವಿವರಗಳನ್ನು ಹೇಳಲಿ.

ಶ್ರೀ ಅಶೋಕ್ ಎಸ್. ಕಾಟ್ವೆ : 1984 ರಿಂದ 1992ರ ವರೆಗೆ ಹುಬ್ಬಳ್ಳಿ ಮತ್ತು ಕಮರಿಪೇಟೆಯಲ್ಲಿ ಯಾವುದೇ ಘಟನೆ ಆಗಿಲ್ಲ. ಸುಮಾರು 10 ವರ್ಷಗಳಿಂದ ಕಮರಿಪೇಟೆಯಲ್ಲೂ ಕೂಡ ಒಂದು ಘಟನೆ ಆಗಿಲ್ಲ. ಮದ್ಯ ಮಾರಾಟಗಾರರಿಗೂ ಮತ್ತು ಇದಕ್ಕೂ ಏನು ಸಂಬಂಧ ಅವರು ತಿರುಚಿ ಹೇಳುತ್ತಿದ್ದಾರೆ. ಕಮರಿಪೇಟೆಯಲ್ಲಿ ನಾನು 40 ವರ್ಷಗಳಿಂದ ಇದ್ದೇನೆ. ಅದು ಸೂಕ್ಷ್ಮವಾದ ಪ್ರದೇಶ. ಇಲ್ಲಿ ಡಿ.ಸಿ. ಹಾಗೂ ಎಸ್.ಪಿ. ಗ್ರೇಡ್‌ನವರಿದ್ದಾಗ ಕೂಡ, ಕಾಮನ ಗಲಾಟೆಯಾಗುತ್ತಿರಲಿಲ್ಲ. ಆದರೆ, ಈಗ ಮೆರವಣಿಗೆ ಹೋಗುವಾಗ ಒಬ್ಬ ಪಿ.ಎಸ್.ಐ ಮತ್ತು 10 ಜನ ಪೋಲೀಸರು ಕೂಡ ಇರಲಿಲ್ಲ. ಇಲ್ಲಿ ಗಲಾಟೆ ನಡೆಯುತ್ತಿದ್ದ ಸಂದರ್ಭದಲ್ಲಿ ಧಾರವಾಡದಲ್ಲಿ ಪೋಲೀಸ್ ಕಮೀಷನರ್ ಅವರು ನವೀನ್ ಹೋಟೆಲಿನಲ್ಲಿ ಎರಡೆರಡು ರೂಮ್ ತೆಗೆದುಕೊಂಡು ಮಜಾ ಮಾಡಿಕೊಂಡು ಕುಳಿತಿದ್ದರು. ಕಮರಿಪೇಟೆ ಒಂದೇ ಅಲ್ಲ, ಮುಲ್ಲಾ ಓಣಿಯೂ ಸೇರಿದಂತೆ, ಹುಬ್ಬಳ್ಳಿಯಲ್ಲಿ ಸುಮಾರು 40-45 ಜನ ಇರಿತಕ್ಕೆ ಒಳಗಾಗಿದ್ದಾರೆ. ಒಂದೂವರೆಯಿಂದ ಎರಡೂವರೆ ತಾಸಿನಲ್ಲಿ, ಕರ್ನಾಟಕ ಮೆಡಿಕಲ್ ಕಾಲೇಜಿನಲ್ಲಿ ಒಂದೇ ಕೋಮಿಗೆ ಸೇರಿದ ಜನರು ಬಂದು ಬೀಳುತ್ತಿದ್ದರು. ಮುಲ್ಲಾ ಓಣಿ ಒಂದು ಭಾಗ. ಮತ್ತೆ ಹೊಸ ಹುಬ್ಬಳ್ಳಿ ಮತ್ತು ಹಳೆಯ ಹುಬ್ಬಳ್ಳಿಗೆ ಹೋಗತಕ್ಕ ಒಂದು ಮಾರ್ಗ ಇದೆ. ಆ ಮಾರ್ಗದ ಮಧ್ಯದಲ್ಲಿ ಹೋಗುವಂಥ ಜನರ ಮೇಲೆ, ಮುಲ್ಲಾಓಣಿಯಲ್ಲಿ ಬಿಹಾರದಿಂದ 8-10 ಜನ ಬಂದು ಉಳಿದಿದ್ದರು.

(ಗೊಂದಲ)

ಶ್ರೀ ಪಿ.ಜಿ.ಆರ್. ಸಿಂಧ್ಯ : ಅವರು ಪರದೇಶಿ ಎಂದು ಹೇಳುತ್ತಿದ್ದಾರೆ. ಅದನ್ನು ತಾವು ಕಡತದಿಂದ ತೆಗೆದುಹಾಕಬೇಕು. ಇದಕ್ಕೆ ನನ್ನಸ್ಟ್ರಾಂಗ್ ಅಬ್ಜೆಕ್ಷನ್ ಇದೆ. ಅವರು ಈ ರೀತಿ ಹೇಳಲು ಹೇಗೆ ಬರುತ್ತದೆ?

ಶ್ರೀ ಕೆ.ಎಸ್. ಈಶ್ವರಪ್ಪ : ಅವರ ಭಾವನೆಯನ್ನು, ಅವರು ತಿಳಿಸುತ್ತಿದ್ದಾರೆ. ಇದಕ್ಕೆ ಬಣ್ಣ ಕಟ್ಟುವುದು ಬೇಡ. ಮದ್ಯಕ್ಕೂ, ಗಲಭೆಗೂ ಯಾವುದೇ ಸಂಬಂಧ ಇಲ್ಲ. ನಿರಪರಾಧಿಗಳಿಗೆ ಅನ್ಯಾಯಯಾಗಿದೆ. ಎಂದು ಹೇಳುತ್ತಿದ್ದಾರೆ.

ಅಧ್ಯಕ್ಷರು : ನಾನು ರಿಪೋರ್ಟ್ ತರಿಸಿ ನೋಡುತ್ತೇನೆ.

ಶ್ರೀ ಅಶೋಕ್ ಎಸ್. ಕಾಟ್ವೆ : ಬಿಹಾರದಿಂದ 8-10 ಜನ ಬಂದಿದ್ದರು, ಮತ್ತು ಬಾಂಗ್ಲಾ ದೇಶದಿಂದಲೂ ಬಂದಿದ್ದರು.

ಅಧ್ಯಕ್ಷರು : ಇದು ಯಾವುದೂ ರೆಕಾರ್ಡ್‌ಗೆ ಹೋಗುವುದಿಲ್ಲ.

ಶ್ರೀ ಪಿ.ಜಿ.ಆರ್. ಸಿಂಧ್ಯ : ಸನ್ಮಾನ್ಯ ಅಧ್ಯಕ್ಷರೇ, ಶಾಂತಿಯನ್ನು ಕಾಪಾಡುವುದು ಸರ್ಕಾರದ ಕರ್ತವ್ಯ ಅಷ್ಟೇ ಅಲ್ಲ, ಈ ಸದನದ ಪ್ರತಿಯೊಬ್ಬ ಸದಸ್ಯರ ಕರ್ತವ್ಯವೂ ಆಗುತ್ತದೆ. ನಾನು ಈ ಸದನದಲ್ಲಿ 15 ವರ್ಷಗಳಿಂದ ಇದ್ದೇನೆ. ತಾವು ನನಗಿಂತ ಹಿರಿಯರು. ಯಾವತ್ತೂ ಸಹಿತ ಈ ರೀತಿಯಾದ ವಿಚಾರಗಳಿಗೆ ಅವಕಾಶವಾಗಿಲ್ಲ. ನಾನು ಏಕೆ ಹೇಳುತ್ತಿದ್ದೇನೆಂದರೆ, ಅವರಿಗೂ ಕೆಲವು ಭಾವನೆಗಳು ಇವೆ, ನನಗೂ ಕೆಲವು ಭಾವನೆಗಳು ಇವೆ. ಆದರೆ, ಅದರಿಂದ ಏನೂ ಉಪಯೋಗವಾಗುವುದಿಲ್ಲ. ಮೊದಲು ಶಾಂತಿಯನ್ನು ಕಾಪಾಡಬೇಕು. ಅವರು ಮಾಹಿತಿಯನ್ನು ಬೇಕಾದರೆ ಕೊಡಲಿ. ಆದ.ೆ, ಎಲ್ಲ ಬಂದರು, ಹೇಗೆ ಬಂದರು, ಅದಕ್ಕೂ, ಇದಕ್ಕೂ ಏನು ಸಂಬಂಧ ಇದನ್ನೆಲ್ಲಾ ಹೇಳಿದಾಗ, ಮತ್ತೆ ಪರಿಸ್ಥಿತಿ ಉಲ್ಬಣವಾಗಬೇಕೆಂಬ ಉದ್ದೇಶವಿದೆಯೇ? ಅವರು ಎಂದು ಹೇಳಿದರೆ ಏನರ್ಥ? ಅವರೂ ಈ ದೇಶದ ಪ್ರಜೆಗಳಲ್ಲವೇ? ಇಲ್ಲಿಗೆ ಬರುವುದಕ್ಕೆ ಹಕ್ಕಿಲ್ಲವೇ? ತಮ್ಮಲ್ಲಿ ದಯಮಾಡಿ ವಿನಂತಿ ಮಾಡಿಕೊಳ್ಳುತ್ತೇನೆ. "ಪರದೇಶಿ" ಎನ್ನುವ ಪದವನ್ನು ಕಡತದಿಂದ ತೆಗೆದುಹಾಕಬೇಕು.

(ಗೊಂದಲ)

ಅಧ್ಯಕ್ಷರು : ಒಂದು ನಿಮಿಷ, ದಯಮಾಡಿ ಕುಳಿತುಕೊಳ್ಳಿ.

ಶ್ರೀ ಪಿ.ಜಿ.ಆರ್. ಸಿಂಧ್ಯ : ಇಡೀ ರಾಜ್ಯದಲ್ಲಿ, ಹಿಂದೂ ಮುಸ್ಲಿಂ ಗಲಭೆಗಳಾಗಿ, ಲಕ್ಷಾಂತರ ರೂಪಾಯಿಗಳ ನಷ್ಟವಾಗಿದೆ. ಏನೂ ಆಗಿಲ್ಲ, ಏನೂ ಆಗಿಲ್ಲ ಎಂದು ಹೇಳಿದರೆ....

ಅಧ್ಯಕ್ಷರು : ಮಾನ್ಯ ಸದಸ್ಯರಾದ ಶ್ರೀರಾಮರೆಡ್ಡಿಯವರು - ಮಾತನಾಡುವಾಗ, ಶ್ರೀಮತಿ ಪ್ರಮೀಳಾರವರು ಮಧ್ಯೆ ಮಾತನಾಡಿದಾಗ ನಾನನು ಹೇಳಿದ್ದೇನೆ. ನಿಮ್ಮ ಸಿದ್ಧಾಂತಗಳ ಪ್ರತಿಪಾದನೆಗೆ ಹೊರ ಜಗತ್ತು ವಿಶಾಲವಾಗಿದೆ. ಜನರ ವಿಚಾರ ಮಂಡನೆಗೆ, ಜನಹಿತಕ್ಕೆ ಸಂಬಂಧಿಸಿದಂತೆ ಮಾತನಾಡುವುದಕ್ಕೆ ಮಾತ್ರ ಇಲ್ಲಿ ಸೀಮಿತವಾಗಿರಬೇಕು. ಈ ಲಕ್ಷ್ಮಣ ರೇಖೆಯನ್ನು ಯೂರೂ ದಾಟುವುದಕ್ಕೆ ಬಿಡುವುದಿಲ್ಲ. ನಾವು ಹೊಸ ಸಂಪ್ರದಾಯ ಹಾಕುವುದು ಬೇಡ. ನಾವು ಜನಪ್ರತಿನಿಧಿಗಳು ಎನ್ನುವುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಪಕ್ಷದ ಕೆಲಸವನ್ನು ಸದನದಿಂದ ಹೊರಗೆ ಮಾಡಬೇಕು, ಸಾರ್ವಜನಿಕರ ಕೆಲಸವನ್ನು ಮಾತ್ರ ಇಲ್ಲಿ ಮಾಡಬೇಕು. ಈ ಲಕ್ಷ್ಮಣರೇಖೆಯನ್ನು ದಾಟುವುದಕ್ಕೆ ಯಾರಿಗೂ ಅವಕಾಶವಿಲ್ಲ.

ಶ್ರೀ ಜಗದೀಶ್ ಶೆಟ್ಟರ್ : ಶಾಂತಿ ಸುವ್ಯವಸ್ಥೆಯನ್ನು ಕಾಪಾಡಬೇಕೆಂದು ಸನ್ಮಾನ್ಯ ಗೃಹಮಂತ್ರಿಗಳು ಹೇಳಿದರು. ಆದರೆ 4 ದಿವಸಗಳ ಕಾಲ ಏನಾಯಿತು, ಜನರು ಯಾವ ರೀತಿ ಪರಿಸ್ಥಿತಿಯನ್ನು ಎದುರಿಸಿದ್ದಾರೆ, ಅದನ್ನು ಸದನದ ಮುಂದೆ ತರುವುದು ಅವಶ್ಯಕ ಏಕೆಂದರೆ 4 ದಿವಸ ಅಲ್ಲಿ ಪೋಲೀಸ್ ವ್ಯವಸ್ಥೆ ಸಂಪೂರ್ಣ ನಾಶವಾಗಿತ್ತು. ಜನತೆಗೆ ಒಂದು ಭಾವನೆ ಬಂದಿತ್ತು, ನಮ್ಮ ಸರ್ಕಾರದಿಂದಲೇ ಆಗತ್ತಿದೆಯೋ ಏನೋ ಎಂಬ ಆತಂಕ ಮೂಡಿತ್ತು. ನಾವು ಎರಡನೇ ದಿವಸವೂ ಹೋದೆವು, ಮೂರನೇ ದಿವಸವೂ ಹೋದೆವು. ಎಲ್ಲೆಲ್ಲಿ ಗಲಭೆಗಳು ಆಗಿದ್ದವೋ ಎಲ್ಲಿ ಜನರಿಗೆ ತೊಂದರೆ ಆಗಿತ್ತೋ ಅಲ್ಲೆಲ್ಲಾ ಭೇಟಿ ಮಾಡಿದೆವು. ಇಲ್ಲದೇ ಹೋದರೆ, ಎಲ್ಲಿ ಜನರಿಗೆ ತೊಂದರೆ ಆಗಿತ್ತೋ ಅಲ್ಲೆಲ್ಲಾ ಭೇಟಿ ಮಾಡಿದೆವು. ಇಲ್ಲನೇ ಹೋದರೆ, ಜನಗಳು ನಮ್ಮನ್ನು ಕೇಳುತ್ತಿದ್ದರು. ನೀವು ಜನಪ್ರತಿನಿಧಿಗಳು ಇದ್ದೀರಿ, ಇವತ್ತು ನಮಗೆ ಸಂರಕ್ಷಣೆ ಇಲ್ಲ, ನಮ್ಮ ಜೀವಕ್ಕೆ ರಕ್ಷಣೆ ಇಲ್ಲ ಎಂದು ಕೇಳಿ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುತ್ತಿದ್ದರು. ನಾಲ್ಕನೇ ದಿವಸ ಹುಬ್ಬಳ್ಳಿ ಮಹಾನಗರದಲ್ಲಿ ಶಾಂತಿಯನ್ನು ಮರಳಿ ತರುವಂತ ದೃಷ್ಟಿಯಿಂದ ಧರಣಿ ಕುಳಿತೆವು. ನಮಗೆ ಬೇರೆ ಯಾವುದೇ ಉದ್ದೇಶ ಇರಲ

ಪೋಲೀಸ್ ದೌರ್ಜನ್ಯ ಎಷ್ಟತ್ತು ಎಂದರೆ, ಇಷ್ಟನ್ನೂ ಮುರಿದು, ನಿರಪರಾಧಿಗಳನ್ನು, ಕಟ್ಟೆಯ ಮೇಲೆ ಕುಳಿತ ವ್ಯಕ್ತಿಗಳನ್ನು ಎತ್ತಿಕೊಂಡು ಹೋಗಿ, ಜೈಲಿನಲ್ಲಿ ಹಾಕಿದರು. ರಸ್ತೆಯಲ್ಲಿ ಅದ್ದಾಡತಕ್ಕ ಜನರನ್ನು, 307ನೇ ಸೆಕ್ಷನ್ ಹಾಕಿ, ಮರ್ಡರ್ ಕೇಸ್, ಅಟೆಂಪ್ಟ್ ಟುಮರ್ಡರ್ ಎಂದು ಹೇಳಿ ಕೇಸುಗಳನ್ನು ಹಾಕಿದರು. ಈ ರೀತಿಯಾಗಿ ಇಂತಹ ಕೇಸ್‌ನಲ್ಲಿ ಅವರನ್ನು ಸಿಕ್ಕಿಸಿದ್ದಾರೆ.

ಇವತ್ತು ನಾನು ಒಂದು ಉದಾಹರಣೆಯನ್ನು ಕೊಡುತ್ತೇನೆ. 20ನೇ ತಾರೀಖು ಘಟನೆ ನಡೆದಂತಹ ಸ್ಥಳವೇ ಬೇರೆ. ಇದು ಪತ್ರಿಕೆಯಲ್ಲಿ ಬಂದಿದೆ. ಅಲ್ಲಿ ಕೇವಲ 50-100 ಜನರು ಮಾತ್ರ ಇದ್ದರು. ಪೋಲೀಸಿನವರು ಆ ಜನಗಳಿಗೆ ಯಾವುದೇ ಮುನ್ನೇಚ್ಚರಿಕೆಯನ್ನು ಕೊಡದೇ ಗೋಲೀಬಾರ್ ಮಾಡಿದರು. ಆ ಗೋಲಿಬಾರ್‌ನಿಂದ ಸತೀಶ್‌ಕುಮಾರ್ ಎನ್ನತಕ್ಕಂಥ ಒಬ್ಬ ವ್ಯಕ್ತಿಯ ಎದೆಗೆ ಗುಂಡು ಹೊಡೆದಿದ್ದಾರೆ. ಕಾಲಿಗೆ ಗುಂಡು ತಾಗಿಲ್ಲ, ಎದೆಗೆ ಗುಂಡು ಹೊಡೆದಿದ್ದಾರೆ. ಅಲ್ಲಿ ಇವತ್ತು ಪೋಲೀಸರ ವ್ಯವಸ್ಥೆ ಯಾವ ರೀತಿ ಇತ್ತು ಅಂತ ನಾನು ಹೇಳುತ್ತಿದ್ದೇನೆ. ಆ ಸತ್ತ ವ್ಯಕ್ತಿಯ ಮೇಲೆ ಸೆಕ್ಷನ್ 202 ಮೇಲೆ ಕೇಸ್ ಹಾಕಿದ್ದರು. ಇವತ್ತು ಗಲಭೆಯಲ್ಲಿ ಯಾರಿಗೆ ತೊಂದರೆ ಆಗಿದೆ ಅವರ ಮೇಲೆಯೇ ಕೇಸ್ ಹಾಕಿದ್ದಾರೆ. ನಾನು ಆ ಸಂಬಂಧವಾದ ಎಫ್.ಐ.ಆರ್. ಕಾಪಿಯನ್ನು ಸಹ ತಂದಿದ್ದೇನೆ.ಇವತ್ತು ಸತ್ತ ವ್ಯಕ್ತಿಯ ಮೇಲೆ ಅಟೆಂಪ್ಟ್‌ಟು ಮರ್ಡರ್ ಕೇಸ್ ಹಾಕಿದ್ದಾರೆ.ಇದನ್ನು ನಾನು ಮಾನ್ಯ ಅಧ್ಯಕ್ಷರೆ ಮುಖಾಂತರ ಮಾನ್ಯ ಗೃಹ ಮಂತ್ರಿಗಳಿಗೆ ಕಳುಹಿಸಿಕೊಡುತ್ತಿದ್ದೇನೆ. ಮತ್ತು ಗಲಭೆಯಲ್ಲಿ ಚೂರಿ ಇರಿತದಿಂದ ತೊಂದರೆಗೆ ಈಡಾಗಿದ್ದಾರೆ. ಮತ್ತು ಯಾರು ಕೈಯಲ್ಲಿ ತಲವಾರುಗಳನ್ನು ಹಿಡಿದುಕೊಂಡು ಅದ್ಡಾಡುತ್ತಿದ್ದಂತಹ ವ್ಯಕ್ತಿಗಳ ಮೇಲೆ ಯಾರೂ ಕ್ರಮ ತೆಗೆದುಕೊಂಡಿಲ್ಲ. ಅದೇ ಯಾವ ವ್ಯಕ್ತಿಗಳಿಗೆ ಈ ಗಲಭೆಯಿಂದ ತೊಂದರೆಯಾಗಿದೆ, ಅಂತಹ ವ್ಯಕ್ತಿಗಳ ಮೇಲೆ ಸೆಕ್ಷನ್ 307 ರ ಪ್ರಕಾರ ಅಟೆಂಪ್ಟ್‌ಟು ಮರ್ಡರ್ ಅಂತ ಕೇಸ್ ದಾಖಲುಮಾಡಿದ್ದಾರೆ. ಕೆ ಎಂ ಸಿ ಆಸ್ಪತ್ರೆಯಲ್ಲಿ ಗಾಯಗೊಂಡು ಬಿದ್ದಂತಹ ವ್ಯಕ್ತಿಗಳ ಮೇಲೆ 11 ಕೇಸ್‌ಗಳನ್ನು ಹಾಕಿದ್ದಾರೆ. ಈ ರೀತಿಯಾಗಿ ಪೋಲೀಸರ ದೌರ್ಜನ್ಯ ಅಲ್ಲಿ ನಡೆದಿದೆ. ಈ ರೀತಿಯಾಗಿ ಯಾವ ವ್ಯಕ್ತಿಗಳ ನಮಗೆ ಸಂರಕ್ಷಣೆ ಬೇಕು ಅಂತ ಕೇಳಿದರೋ ಆ ವ್ಯಕ್ತಿಗಳ ಮೇಲೆಯೇ ಪೋಲೀಸಿನವರು ದೌರ್ಜನ್ಯ ನಡೆಸಿದ್ದಾರೆ. ಆ 4 ದಿವಸಗಳು ಕಾನೂನು ಮತ್ತು ಸುವ್ಯವಸ್ಥೆ ಯಾವ ರೀತಿ ಇತ್ತು ಅಂತ ಇಂಡಿಯನ್ ಎಕ್ಸ್‌ಪ್ರೆಸ್ ಎನ್ನುವ ನ್ಯಾಷನಲ್ ಪತ್ರಿಕೆಯಲ್ಲಿ ವರದಿ ಮಾಡಿದ್ದಾರೆ. ಅದರಲ್ಲಿ ಬಂದಿರುವ ನಾಲ್ಕು ಲೈನ್‌ಗಳನ್ನು ನಾನು ತಮ್ಮ ಗಮನಕ್ಕೆ ತರಬಯಸುತ್ತೇನೆ.

"Police seemed almost invisible throughout 4 days of riots. They were not present in sensitive areas, worst still, they were not available to common man whose one Hotline is Control room from which either threr was no response or false information given".

ಈ ರೀತಿಯಾಗಿ ಆ ನಾಲ್ಕು ದಿವಸಗಳ ಕಾಲ ಅಲ್ಲಿ ಇದ್ದಂತಹ ವಸ್ತು ಸ್ಥಿತಿಯನ್ನು ನಾನು ತಮ್ಮ ಮುಂದೆ ಇಟ್ಟಿದ್ದೇನೆ. ಮತ್ತೊಂದು ಸಂಗತಿ ಏನೆಂದರೆ ಈ ಗಲಭೆ ನಡೆದ 4 ದಿವಸಗಳು ನಾವು ಅಲ್ಲಿ ಇದ್ದೆವು. ನನ್ನ ಮಿತ್ರರಾದ ಅಶೋಕ ಕಾಟ್ವೆಯವರು ಸಹ ಇದ್ದರು. ಆ 4 ದಿವಸಗಳ ಕಾಲ ಈ ರಾಜ್ಯದಲ್ಲಿ ಸರ್ಕಾರ ಇದೆಯೋ ಅಥವಾ ಇಲ್ಲವೋ ಭೀತಿ ನಮಗೆ ಇತ್ತು. ಈ ಸರ್ಕಾರಕ್ಕೆ ಕಿವಿ ಇಲ್ಲ, ಮೂಗು ಇಲ್ಲ, ಕಣ್ಣು ಇಲ್ಲ, ಬಾಯಿ ಇಲ್ಲ, ಅಂತಹ ಒಂದು ಪರಿಸ್ಥಿತಿ ಆ 4 ದಿವಸಗಳು ಅಲ್ಲಿ ಇದ್ದೆವು. ಅಂತಹ ಒಂದು ಪರಿಸ್ಥಿತಿಯನ್ನು ನಾವು ಅನುಭವಿಸಿದ್ದೇವೆ ಅದಕ್ಕೆ ನಾನು ಈ ರೀತಿ ಹೇಳುತ್ತಿರುವುದು. ಏಕೆ ಅಂತ ನಾನು

ತಮಗೆ ಹೇಳುತ್ತೇನೆ. ಆ ಸಂದರ್ಭದಲ್ಲಿ ದುಷ್ಕರ್ಮಿಗಳು ರಾಜಾರೋಷವಾಗಿ ಕೈಯಲ್ಲಿ ಚೂರಿಗಳನ್ನು ತಲವಾರುಗಳನ್ನು ಹಿಡಿದುಕೊಂಡು ರಸ್ತೆಯಲ್ಲಿ ಅಡ್ಡಾಡುತ್ತಿದ್ದರು. ಅವರನ್ನು ನೋಡುವಂತಹ ದೃಷ್ಟಿ ಸರ್ಕಾರಕ್ಕೆ ಇರಲಿಲ್ಲ. ಅದಕ್ಕೆ ನಾನು ಈ ಸರ್ಕಾರಕ್ಕೆ ಕಣ್ಣು ಇಲ್ಲ ಅಂತ ಹೇಳಿದ್ದು. ಈ ಸರ್ಕಾಕ್ಕೆ ಕಿವಿ ಇಲ್ಲ ಅಂತ ಏತಕ್ಕೆ ಹೇಳಿದೆ ಅಂದರೆ ನಾವು ಕಾಲ ಕಾಲಕ್ಕೆ ಎಲ್ಲಾ ಮಾಹಿತಿಗಳನ್ನು ಕೊಟ್ಟು ಸಾರ್ವಜನಿಕರ ಆಸ್ತಿಪಾಸ್ತಿಗಳನ್ನು ಉಳಿಸಿ ಕಕ್ಷಣೆ ಕೊಡಿ ಅಂತ ಹೇಳಿಕೊಡೆವು ಆದರೆ ಯೂರೂ ನಮ್ಮ ಮಾತಿಗೆ ಕಿವಿ ಕೊಡಲಿಲ್ಲ. ಅಲ್ಲಿ ಮೆರವಣಿಗೆ ಬರುವಾಗ ಏನಾದರೂ ಗಲಭೆಗಳು ಆಗಬಹುದು ಅದಕ್ಕೆ ನೀವು 3 ದಿವಸಗಳ ಮುಂಚೆ ಆರ್‌ಎ ಎಫ್ ಪಡೆಗಳನ್ನು ಕರೆಸಿ ಅಂತ ಹೇಳಿದರೂ ಕೂಡ ಸರ್ಕಾರ ನಮ್ಮ ಮಾತು ಕೇಳಲಿಲ್ಲ. ಮತ್ತು ಈ ಸರ್ಕಾರಕ್ಕೆ ಬಾಯಿ ಇಲ್ಲ ಅಂತ ಏತಕ್ಕೆ ಹೇಳಿದೆ ಅಂದರೆ ನಾವು ಇಲ್ಲಿ ಬಂದು ಸದನದಲ್ಲಿ ಏನಾದರೂ ಕೇಳಿದರೆ ಇಲ್ಲಾ ಇಲ್ಲಾ ನಾವು ಈ ಬಗ್ಗೆ ನ್ಯಾಯಾಂಗ ತನಿಖೆಗೆ ಆದೇಶ ನೀಡಿದ್ದೇವೆ, ಅದ್ದರಿಂದ ನಾವು ಈ ಬಗ್ಗೆ ಏನನ್ನು ಹೇಳುವುದಿಲ್ಲ ಅಂತ ಹೇಳಿ ಬಾಯಿ ಮುಚ್ಚಿಕೊಂಡು ಕುಳಿತುಕೊಳ್ಳುತ್ತಾರೆ. ಅದಕ್ಕೆ ಈ ಸರ್ಕಾರಕ್ಕೆ ಬಾಯಿ ಇಲ್ಲ ಅಂತ ಹೇಳಿದೆ. ಮತ್ತು ಮೂಗು ಇಲ್ಲ ಅಂತ ನಾನು ಏತಕ್ಕೆ ಹೇಳಿದೆ ಅಂದರೆ ಪೋಲೀಸ್ ಕಮೀಷನರ್‌ಗೆ ನಾವು ನೋಟೀಸ್ ಕೊಟ್ಟೆವು. ಆಗ ಅವರಿಗೆ ವಾಸನೆ ಗೊತ್ತಿತ್ತು. ಇಲ್ಲಿ ಗಲಭೆ ಆಗುತ್ತದೆ ಅಂತ. ಆದರೂ ಯಾವ ಮುಂಜಾಗ್ರತೆ ಕ್ರಮವನ್ನು ಕೂಡ ಕೈಗಳ್ಳಲಿಲ್ಲ. ಅದಕ್ಕೆ ಈ ಸರ್ಕಾರಕ್ಕೆ ಮೂಗು ಇಲ್ಲ ಅಂತ ನಾನು ಹೇಳಿದೆ. ಇಂತಹ ಒಂದು ವಾತಾವರಣ ಅಲ್ಲಿ ನಿರ್ಮಾಣ ಆಯಿತು ಇದನ್ನು ನಾನು ಸದನದ ಮುಂದೆ ತರುತ್ತಿದ್ದೇನೆ. ಈಗ ಸರ್ಕಾರದವರು ನ್ಯಾಯಾಂಗ ತನಿಖೆಗೆ ಆಜ್ಞೆ ಮಾಡಿದ್ದೀರಿ. ಆದರೆ ಈ ಹಿಂದೆ ಹುಬ್ಬಳ್ಳಿಯಲ್ಲಿ ಆಗಸ್ಟ್ 15ನೇ ತಾರೀಖು ಆದಂತಹ ಘಟನೆ ಬಗ್ಗೆ ನ್ಯಾಯಾಂಗ ತನಿಖೆ ಆಜ್ಞೆ ಮಾಡಿದರು. ಆದರೆ ಅದು ಇದುವರೆಗೂ ಏನೂ ಕೆಲಸ ಆಗಲಿಲ್ಲ. ಅಲ್ಲಿ ವರ್ಕಿಂಗ್ ಆಗಲಿಲ್ಲ ಅದೇ ರೀತಿ ಇದೂ ಆಗಬಾರದು. ಆ ಘಟನೆ ಏನು ನಡೆದದೆ ಆ ಬಗ್ಗೆ ನ್ಯಾಯ ಮೂರ್ತಿ ರಾಜಶೇಖರ ಮೂರ್ತಿಯವರನ್ನು ನೇಮಕ ಮಾಡಿದರು. ಆದರೆ ಅವರು ಏನೂ ಕೆಲಸ ಆರಂಭಿಸಲಿಲ್ಲ.

ಈಗ ಏನು ಘಟನೆ ನಡೆದಿದೆ ಇದರ ವಸ್ತು ಸ್ಥಿತಿ ಏನು ಎಂಬುದು ಹೊರ ಜಗತ್ತಿಗೆ ತಿಳಿಬೇಕು. ಹುಬ್ಬಳ್ಳಿಯಲ್ಲಿ ಮತ್ತೆ ಶಾಂತಿ ಮತ್ತು ಸುವ್ಯವಸ್ಥೆ ನೆಲೆಸಿ ಜನ ಜೀವನ ಒಳ್ಳೆಯ ರೀತಿಯಲ್ಲಿ ನಡೆಸುವಂತೆ ಆಗಬೇಕು. ತಾವು ಏನು ನ್ಯಾಯಾಂಗ ತನಿಖೆಗೆ ಆಜ್ಞೆ ಮಾಡಿದ್ದೀರಿ ಇದನ್ನು ಆದಷ್ಟು ಬೇಗ ಒಂದು ಟೈಮ್ ಲಿಮಿಟ್ ಹಾಕಿ ತನಿಖೆ ಮಾಡಬೇಕು. ಮಾನ್ಯ ಮಂತ್ರಿಗಳು ಈಗ ನಾವು ಹೈಕೋರ್ಟ್‌ನವರನ್ನು ಕೇಳಿದ್ದೇವೆ ಅಂತ ಹೇಳಿದರು ಹೈಕೋರ್ಟ್ ಜಡ್ಜಸಿಕ್ಕಿದರೆ ಪರವಾಗಿಲ್ಲ ಇಲ್ಲದಿದ್ದರೆ ರೀಟೈರ್ ಸೀನಿಯರ್ ಹೈಕೋರ್ಟ್ ಜಡ್ಜ್ ಯಾರಾದರೂ ಇದ್ದರೆ ಅವರನ್ನು ತೆಗೆದುಕೊಂಡು ಆದಷ್ಟು ಬೇಗ ತನಿಖೆ ಮಾಡಿ ನಿಜವಾದ ಪರಿಸ್ಥಿತಿ ಹೊರಗೆ ಬರಬೇಕಾಗಿದೆ. ಸತ್ಯ ಏನು ಎಂಬುದು ಜನರಿಗೆ ಗೊತ್ತಾಗಬೇಕಾಗಿದೆ. ಈ ಬಗ್ಗೆ ಸರ್ಕಾರ ಶೀಘ್ರವಾಗಿ ಕ್ರಮ ತೆಗೆದುಕೊಳ್ಳಬೇಕೆಂದು ನಾನು ವಿನಂತಿ ಮಾಡಿಕೊಳ್ಳುತ್ತೇನೆ. ಮತ್ತು ಹುಬ್ಬಳ್ಳಿಯಲ್ಲಿ ಆದಷ್ಟು ಬೇಗ ಪೋಲೀಸ್ ದೌರ್ಜನ್ಯ ನಿಲ್ಲಿಸಬೇಕಂದು ಕೇಳಿ ಕೊಳ್ಳುತ್ತೇನೆ ಮತ್ತು....

ಅಧ್ಯಕ್ಷರು : ಮಾನ್ಯ ಜಗದೀಶಶೆಟ್ಟರೇ ಮುಗಿಸಿ. ತಮಗೆ ಸಾಕಷ್ಟು ಸಮಯ ಕೊಟ್ಟಿದ್ದೇನೆ. ತಾವು ನನಗೆ ವಂದಿಸಿ ತಮ್ಮ ಭಾಷಣ ಮುಗಿಸಬೇಕು.

ಶ್ರೀ ಜಗದೀಶ್ ಶೆಟ್ಟರ್ : ಮಾನ್ಯ ಅಧ್ಯಕ್ಷರೇ, 5 ನಿಮಿಷದಲ್ಲಿ ಮುಗಿಸುತ್ತೇನೆ. ದಯವಿಟ್ಟು ಅವಕಾಶ ಕೊಡಿ. ಇವತ್ತು ಹುಬ್ಬಳ್ಳಿ ಮಹಾನಗರದಲ್ಲಿ ನೀರಿನ ಅಹಾಕಾರ

ಇದೆ. ಇವತ್ತು ಮಲಪ್ರಭಾ ನದಿಯಿಂದ ಇಲ್ಲವೆ ನಿರ ಸಾಗರದಿಂದ ನೀರನ್ನು ತರಬೇಕಾಗುತ್ತದೆ. ಆದರೆ ಅಲ್ಲಿ ವಿದ್ಯುತ್ಶಕ್ತಿ ಕೊರತೆ .ಮತ್ತುಜಲ ಮಂಡಳಿಯ ಹಾಗೂ ನಗರಸಭೆಯ ಅಧಿಕಾರಿಗಳು ನಡುವೆ ಸರಿಯಾಗಿ ಹೊಂದಾಣಿಕೆ ಇಲ್ಲದೆ ಇರುವಂಥ ಪ್ರಸಂಗದಲ್ಲಿ ಹುಬ್ಬಳ್ಳಿ ಮಹಾನಗರಕ್ಕೆ ನೀರು ಪೂರೈಕೆ ಆಗುತ್ತಿಲ್ಲ. ನೀರು ಕೊಡುವಂತಹ ಶಕ್ತಿ ಅಧಿಕಾರಿಗಳಲ್ಲಿ ಇಲ್ಲ. ಇದರ ಬಗ್ಗೆ ಸರ್ಕಾರ ತೀವ್ರವಾದ ಗಮನ ಹರಿಸಬೇಕು. ಏಕೆಂದರೆ ಮುಂದೆ ಭೀಕರವಾದ ಬೇಸಿಗೆ ಕಾಲ ಬರುತ್ತಿದೆ. ನಗರಸಭೆಯವರು ಇನ್ನು ಹೆಚ್ಚು ಕಷ್ಟವನ್ನು ಅನುಭವಿಸುವಂಥ ಪ್ರಸಂಗ ಬರುತ್ತದೆ. ಈ ಕುಡಿಯುವ ನೀರಿನ ಸಮಸ್ಯೆಯನ್ನು ಬಗೆಹರಿಸುವ ಸಲುವಾಗಿ ಸರ್ಕಾರ ವಿಶೇಷ ಗಮನ ಹರಿಸಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇನ್ನು ಹುಬ್ಬಳ್ಳಿಯಲ್ಲಿರುವ ರಸ್ತೆಗಳ ಬಗ್ಗೆ ನಾನು ಪ್ರಸ್ತಾಪ ಮಾಡುವುದಾದರೆ ಕರ್ನಾಟಕ ರಾಜ್ಯದಲ್ಲಿ ಹುಬ್ಬಳ್ಳಿ ಮಹಾನಗರಪಾಲಿಕೆ ಎರಡನೆಯದು. ಈ ಹುಬ್ಬಳ್ಳಿ ಮತ್ತು ಧಾರವಾಡ ಮಹಾನಗರಪಾಲಿಕೆಯ ರಸ್ತೆಗಳ ಸ್ಥಿತಿ ಬಹಳ ಚಿಂತಾಜನಕವಾಗಿವೆ. ಮೈಸೂರು ಮಹಾನಗರಪಾಲಿಕೆಗೆ ಯಾವ ರೀತಿ ಒಂದು ಇತಿಹಾಸ ಇದೆಯೋ ಹಾಗೆಯೇ ಹುಬ್ಬಳ್ಳಿ ಧಾರವಾಡ ಮಹಾನಗರಪಾಲಿಕೆಗೂ ಒಂದು ಇತಿಹಾಸ ಇದೆ.

ಸರ್ಕಾರದವರು ಮೈಸೂರು ಮಹಾನಗರಪಾಲಿಕೆಗೆ ಹೆಚ್ಚು ಹೆಚ್ಚು ಧನಸಹಾಯವನ್ನು ಕೆಟ್ಟು ಅಭಿವೃದ್ಧಿ ಮಾಡುತ್ತಿದೆ ಆದರೆ ಹುಬ್ಬಳ್ಳಿ ಧಾರವಾಡ ಮಹಾನಗರಪಾಲಿಕೆಗೆ ಸರ್ಕಾದಿಂದನಿರ್ಲಕ್ಷ್ಯ ಆಗಿದೆ. ಕಳೆದ ಸಾಲಿನಲ್ಲಿ ಹುಬ್ಬಳ್ಳಿ ಧಾರವಾಡ ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಹೆಚ್ಚು ಹೆಚ್ಚು ಮಳೆ ಬಂದು ರಸ್ತೆಗಳು ಹಾಳಾಗಿವೆ. ಅಲ್ಲಿ ತಮಗೆ ಗೊತ್ತಿದ್ದ ಹಾಗೆ ಅತಿವೃಷ್ಟಿಯಿಂದ ರಸ್ತೆಗಳು ಹಾಳಾಗಿವೆ. ಈ ಬಗ್ಗೆ ಹುಬ್ಬಳ್ಳಿ ಮಹಾನಗರಪಾಲಿಕೆಯವರು ಸರ್ಕಾರಕ್ಕೆ ವಿನಂತಿ ಮಾಡಿಕೊಂಡಿದ್ದಾರೆ. ನಮಗೆ ಈ ರಸ್ತೆಗಳ ದುರಸ್ಥಿಗೆ ವಿಶೇಷ ಅನುಮಾನ ಅಂತ 2 ಕೋಟಿ ರೂಪಾಯಿಗಳು ಕೊಡಬೇಕೆಂದು ಕೇಳಿಕೊಂಡಿದ್ದಾರೆ. ಆದರೆ ಸರ್ಕಾರ ಇದುವರೆಗೂ ಕೊಟ್ಟಿಲ್ಲ. ಅದೇ ಬೆಂಗಳೂರು ಮತ್ತು ಮೈಸೂರು ಮಹಾನಗರಪಾಲಿಕೆಗಳಿಗೆ ಸರ್ಕಾರ ಹೆಚ್ಚಿನ ರೀತಿಯಲ್ಲಿ ಸೌಲಭ್ಯಗಳನ್ನು ಒದಗಿಸಿಕೊಡುತ್ತಿದೆ. ಅದೇ ಹುಬ್ಬಳ್ಳಿ ಮಹಾನಗರಪಾಲಿಕೆಗೆ ಕೊಡುತ್ತಿಲ್ಲ. ಕಳೆದ ಸಲ ಸರ್ಕಾರ 2 ಕೋಟಿ ರೂಪಾಯಿಗಳು ವಿಶೇಷ ಅನುದಾನ ಕೊಡುತ್ತೇವೆಂದು ಆಶ್ವಾಸನೆಯನ್ನು ಕೊಟ್ಟಿದ್ದರು ಆದರೆ ಆ ಹಣ ಇದುವರೆಗೂ ಕೊಡಲಿಲ್ಲ. ಆದ್ದರಿಂದ ಸರ್ಕಾರ ಈ ಸಲ ಆದರೂ ಹುಬ್ಬಳ್ಳಿ ಧಾರವಾಡ ಮಹಾನಗರಪಾಲಿಕೆಗೆ 2 ಕೋಟಿ ರೂಪಾಯಿಗಳ ವಿಶೇಷ ಅನುಧಾನ ಕೊಡುವುದಕ್ಕೆ ಪ್ರಯತ್ನ ಮಾಡಬೇಕು. ಆಮೇಲೆ ಹುಬ್ಬಳ್ಳಿ ಧಾರವಾಡದಲ್ಲಿ ಹೈಕೋರ್ಟ್ ಬೆಂಚ್ ಆಗಬೇಕೆಂದು ಅನೇಕ ವರ್ಷಗಳಿಂದ ನಮ್ಮ ಒತ್ತಾಯ ಇದೆ. ಹಿಂದೆ ಮಹಾರಾಷ್ಟ್ರದಲ್ಲಿ ಹೈಕೋರ್ಟ್ ಬೆಂಚ್ ಅನ್ನು ನಾಗಪುರದಲ್ಲಿ ಮಾಡಿದರು.

ಅವರಿಗೆ ಆಗ ಒಂದು ವಿಲ್ ಪವರ್ ಇತ್ತು ಅದಕ್ಕೆ ಆ ಒಂದು ತೀರ್ಮಾನ ತೆಗೆದುಕೊಂಡರು. ಮಡಲೇಬೇಕು ಅಂತ ಸರ್ಕಾರ ಒಂದು ಪಾಲಿಸಿ ಮಾಡಿದರೆ ಸರ್ಕಾರದ ನಿಲುವು ಸ್ಪಷ್ಟವಾದರೆ ಸರ್ಕಾರ ಸ್ಪಷ್ಟವಾದ ಒಂದು ನಿರ್ಣಯವನ್ನು ತೆಗೆದುಕೊಂಡರೆ ಮಾಡಬಹುದು. ಇಲ್ಲಿದಿದ್ದರೆ ಇಲ್ಲ. ಅದಕ್ಕೆಕ ಸರ್ಕಾರ ಒಂದು ಸ್ಪಷ್ಟವಾದ ಉತ್ತರವನ್ನು ಹೇಳಬೇಕು. ಮಾಡುತ್ತೇವೆ ಅಥವಾ ಇಲ್ಲ ಅಂತ. ಈ ಬಗ್ಗೆ ಈ ಹಿಂದೆ ಕೂಡ ಅನೇಕ ಹೋರಾಟಗಳು ನಡೆದಿವೆ.ತಾವು ಹುಬ್ಬಳ್ಳಿ ಧಾರವಾಡಕ್ಕೆ ಹೈಕೋರ್ಟ್ ಬೆಂಜ ಮಾಡದಿದ್ದರೆ ಪುನಃ ನಾವು ಹೋರಾಟ ಮಾಡಬೇಕಾಗುತ್ತದೆ. ತಾವು ಜನರ ಮನಸ್ಸನ್ನು ಅರ್ಥ ಮಾಡಿಕೊಳ್ಳಿ. ಸರ್ಕಾರ ತಮ್ಮ ತೀರ್ಮಾನವನ್ನು ಹೇಳಿಲಿ ನಾವು , ಹೈಕೋರ್ಟ್‌ಬೆಂಚ್ ಮಾಡುತ್ತೇವೆ ಅಂತ ಇಲ್ಲದಿದ್ದರೆ ಇಲ್ಲ ಅಂತ ಹೇಳಲಿ. ಅದು ಬಿಟ್ಟು •ಹೈಕೋರ್ಟ್ ಒಪ್ಪಿಗೆ ಕೊಟ್ಟ

ಮಾಡುತ್ತೇವೆ ಸೆಂಟ್ರಲ್ ಗಾರ್ನಮೆಂಟ್ ಒಪ್ಪಿಗೆ ಕೊಟ್ಟರೆ ಮಾಡುತ್ತೇವೆ ಎಂದು ಸಬೂಲು ಹೇಳುವುದು ಬೇಡ. ಈ ಬಗ್ಗೆ ಸ್ಪಷ್ಟವಾದ ಉತ್ತರವನ್ನು ಮಾನ್ಯ ಮಂತ್ರಿಗಳು ಕೊಡಬೇಕು. ಹೈಕೋರ್ಟ್ ಬೆಂಚ್ ಹುಬ್ಬಳ್ಳಿ ಧಾರವಾಡದಲ್ಲಿ ಮಾಡಬೇಕೆನ್ನುವ ವಿಲ್ ಫವರ್ ಇದ್ದರೆ ಮಾಡಲೇಬೇಕು ಎನ್ನುವ ಅಚಲ ಮನಸ್ಸು ಇದ್ದರೆ ಮಾಡಬಹುದು ಇಲ್ಲದಿದ್ದರೆ ಇಲ್ಲ. ಇವತ್ತು ಜನತಾದಳದಲ್ಲಿ ಸಾಕಷ್ಟು ಜನ ಶಾಸಕರು ವಕೀಲರಾಗಿದ್ದಾರೆ. ಅವರೆಲ್ಲರ ಬೆಂಬಲ ಸಹ ಇದಕ್ಕೆ ಇದೆ. ಯಾರದೂ ವಿರೋಧ ಇಲ್ಲ.

ಇದಕ್ಕೆ ಬಾರ್ ಕೌನ್ಸಿಲ್ ಆಫ್ ಇಂಡಿಯಾದವರು ಒಪ್ಪಿಗೆಯನ್ನು ಸಹ ಕೊಟ್ಟಿದ್ದಾರೆ. ಈ ಬಗ್ಗೆ ಸರ್ಕಾರ ಒಂದು ಸ್ಪಷ್ಟವಾದ ನಿರ್ಧಾರ ತೆಗೆದುಕೊಳ್ಳಬೇಕೆಂದು ಹೇಳಿ ಇನ್ನು ಹುಬ್ಬಳ್ಳಿ ಧಾರವಾಡ ಏರ್‌ಪೋರ್ಟ್ ಬಗ್ಗೆ ಮಾತನಾಡುವುದಾದರೆ ಬೆಂಗಳೂರಿನಲ್ಲಿ ಇಂಟರನ್ಯಾಷನಲ್ ಏರ್‌ಪೋರ್ಟ್ ಮಾಡುತ್ತಿದ್ದಾರೆ. ನಮ್ಮ ಹುಬ್ಬಳ್ಳಿ ಧಾರವಾಡ ಏರ್‌ಪೋರ್ಟ್‌ಗೆ 10 ಕೋಟಿ ರೂಪಾಯಿಗಳನ್ನು ಮಂಜೂರು ಮಾಡಬೇಕೆಂದು ಕೇಳಿಕೊಂಡು ನನಗೆ ಇಷ್ಟು ಸಮಯ ಮಾತನಾಡಲು ಅವಕಾಶ ಕೊಟ್ಟ ತಮಗೆ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.

+ ಶ್ರೀ ಸುಭಾಷ್ ರುಕ್ಮಯ್ಯ ಗುತ್ತೇದಾರ್ (ಆದ್) : ಸನ್ಮಾನ್ಯ ಅಧ್ಯಕ್ಷರೆ, ಮಾನ್ಯ ರಾಜ್ಯಪಾಲರ ಭಾಷಣದ ವಂದನಾ ನಿರ್ಣಯದ ಮೇಲೆ ಒಂದೆರಡು ಮಾತುಗಳನ್ನು ಹೇಳುವುದಕ್ಕೆ ಬಯಸುತ್ತೇನೆ. ರಾಜ್ಯಪಾಲರ ಭಾಷಣದಲ್ಲಿ ಹೈದರಾಬಾದ್ ಕರ್ನಾಟಕದ ಬಗ್ಗೆ ಏನೂ ಹೇಳಿಲ್ಲ. ನಾನು ಹೈದರಾಬಾದ್ ಕರ್ನಾಟಕದವನು ಅದು ಮಹಾರಾಷ್ಟ್ರದ ಬಾರ್ಡರ್ ನಲ್ಲಿ ಇರುವುದರಿಂದ ನನ್ನ ಭಾಷೆ ಸ್ವಲ್ಪ ವ್ಯತ್ಯಾಸವಿರುವುದರಿಂದ ತಾವು ಅದನ್ನು ಅರ್ಥ ಮಾಡಿ ಕೊಳ್ಳಬೇಕೆಂದು ಕೇಳಿಕೊಳ್ಳುತ್ತೇನೆ. ಈ ವರ್ಷ ನಮ್ಮ ಕಡೆ ಮಳೆ ಬಹಳ ಕಡಿಮೆಯಾಗಿರುವುದರಿಂದ ಮಳೆ ಆಧಾರಿತ ಬೆಳೆಯಾಗದೆ ರೈತನಿಗೆ ಯಾವ ಬೆಳೆಗಳೂ ಬೆಳೆದಿಲ್ಲ. ಮುಂಗಾರಿನಲ್ಲಿ ತರಕಾರಿ ಮತ್ತು ಜೋಳದ ಬೆಳೆಗೆ ವಿಪರೀತ ಹಾನಿಯಾಗಿದೆ. ಆದರಿಂದ, ರೈತರಿಗೆ ಏನಾದರೂ ಪರಿಹಾರ ಕೊಡಬೇಕೆಂದು ನಾನು ಸರ್ಕಾರದಲ್ಲಿ ಕೇಳಿಕೊಳ್ಳುತ್ತೇನೆ. ಮಳೆ ಕಡಿಮೆಯಾದ್ದರಿಂದ ದನಗಳಿಗೆ ಕೂಡಾ ಮೇವಿನ ತೊಂದರೆ ಇರುವುದರಿಂದ ಮೇವಿನ ವ್ಯವಸ್ಥೆಯನ್ನೂ ಮಾಡಬೇಕು. ನಮ್ಮ ಆಳಂದ ತಾಲ್ಲೂಕನ್ನು ಬರಗಾಲ ಪೀಡಿತ ಪ್ರದೇಷವೆಂದು ಘೋಷಣೆ ಮಾಡಬೇಕೆಂದು ನಾನು ಸರ್ಕಾರವನ್ನು ಕೇಳಿಕೊಳ್ಳುತ್ತೇನೆ. ಅದೇ ರೀತಿ ನಮ್ಮ ತಾಲ್ಲೂಕಿನಲ್ಲಿ ಕುಡಿಯುವ ನೀರಿನ ಅಭಾವ ಕೂಡಾ ಇದೆ. ಯಾವುದೇ ಹಳ್ಳಿಗಳಿಗೆ ಹೋದರೂ ಕುಡಿಯುವ ನೀರು ಇಲ್ಲವೆಂದು ಜನರು ಹೇಳುತ್ತಿದ್ದಾರೆ. ಕುಡಿಯುವ ನೀರಿನ ಸಮಸ್ಯೆ ಪರಿಹಾರ ಮಾಡಲು ಎಲ್ಲಾ ಕಡೆ ಕೊಳವೆ ಬಾವಿಗಳನ್ನು ಹಾಕಿ ಎಂದು ಕೇಳಿಕೊಂಡರೆ, ಪೈಪ್‌ಗಳು, ಮೆಟೀರಿಯಲ್ ಇಲ್ಲವೆಂದು ಹೇಳುತ್ತಿದ್ದಾರೆ. ಅವರು ಪೈಪ್‌ಗಳನ್ನು ಒದಗಿಸಿ ಕೊಳ್ಳುವುದರಲ್ಲಿ ಬೇಸಿಗೆ ಕಾಲ ಮುಗಿದುಹೋಗಿರುತ್ತದೆ.

ಆದ್ದರಿಂದ, ತಕ್ಷಣ ಕುಡಿಯುವ ನೀರನ್ನು ಒದಗಿಸುವ ಬಗ್ಗೆ ಸರ್ಕಾರ ಗಮನ ಕೊಡಬೇಕೆಂದು ಕೇಳಿಕೊಳ್ಳುತ್ತಾ, ಇನ್ನು ಮಂದೆ ಕುಡಿಯುವ ನೀರಿಗೆ ತೊಂದರೆ ಬರದ ರೀತಿಯಲ್ಲಿ ಪರ್ಮನೆಂಟ್ ಪರಿಹಾರ ಕಂಡುಹಿಡಿಯಬೇಕು. ನಮ್ಮ ಕಡೆ ಹೆಚ್ಚಾಗಿ ಮಳೆ ಆಧಾರಿತ ವ್ಯವಸಾಯ ಮಾಡುವುದರಿಂದ ಕೆರೆಗಳಲ್ಲಿ ಮತ್ತು ನಾಲೆಗಳಲ್ಲಿ ನೀರು ನಿಲ್ಲುವ ಹಾಗೆ ನಾಲಾ ಬಂದ್‌ಗಳನ್ನು ಹಾಕಬೇಕು. ಧಾರವಾಡ ಹುಬ್ಬಳ್ಳಿ ನಗರದಲ್ಲಿ ಯಾವ ರೀತಿ ಚೀಫ್ ಇಂಜನಿಯರ್ ಆಫೀಸರನ್ನು ಪ್ರತ್ಯೇಕವಾಗಿ ತೆರೆಯಲಾಗಿದೆಯೋ ಅದೇ ರೀತಿ ನಮ್ಮ ಕಡೆಯೂ ಚೀಫ್ ಇಂಜನೀಯರ್ ಆಫೀಸರನ್ನು ಪ್ರತ್ಯೇಕವಾಗಿ ಮಾಡಬೇಕು. ಇನ್ನು ಮಹಾರಾಷ್ಟ್ರ ರಾಜ್ಯದ ಬಾಂಬೆಯಲ್ಲಿ ಅಧಿವೇಶನ ನಡೆದರೂ ನಾಗಪುರದಲ್ಲೂ ಅಧಿವೇಶನವನ್ನು ಯಾವರೀತಿ ನಡೆಸುತ್ತಿದ್ದಾರೋ

ಅದೇ ರೀತಿ ಗುಲ್ಬರ್ಗಾ ಜಿಲ್ಲೆಯಲ್ಲೂ ನಮ್ಮ ಸರ್ಕಾರದ ಅಧಿವೇಶನವನ್ನು ನಡೆಸುವುದಕ್ಕೆ ಏರ್ಪಾಡು ಮಾಡಬೇಕು. ಆಮೇಲೆ ಸನ್ಮಾನ್ಯ ಸದಸ್ಯರಾದ ನೇಗೇಗೌಡರು ಸರ್ಕಾರಿ ಅಧಿಕಾರಿಗಳ ಬಗ್ಗೆ ಸವಿಸ್ತಾರವಾಗಿ ಹೇಳಿದ್ದಾರೆ. ನಾನು ಶಾಸಕನಾದ ಮೇಲೆ ಜನವರಿ 26ನೇ ತಾರೀಕು ಗಣರಾಜ್ಯೋತ್ಸವದ ದಿವಸ ಧ್ವಜಾರೋಹಣ ಮಾಡಲು ಹೋದಾಗ ಕಛೇರಿ ಹಾಜರಿ ಪುಸ್ತಕವನ್ನು ಸರ್ಕಾರಿ ಅಧಿಕಾರಿಗಳ ಬಗ್ಗೆ ಸವಿಸ್ತಾರವಾಗಿ ಹೇಳಿದ್ದಾರೆ. ನಾನು ಶಾಸಕನಾದ ಮೇಲೆ ಜನವರಿ 26ನೇ ತಾರೀಕು ಗಣರಾಜ್ಯೋತ್ಸವದ ದಿವಸ ಧ್ವಜಾರೋಹಣ ಮಾಡಲು ಹೋದಾಗ ಕಛೇರಿ ಹಾಜರಿ ಪುಸ್ತಕವನ್ನು ತರಿಸಿ ನೋಡಿದಾಗ ಬಹಳಷ್ಟು ಆಫೀಸರ್‌ಗಳು ಬಾರದೇ ಇರುವುದು ತಿಳಿಯಿತು. ಯಾರು ಆ ದಿವಸ ಬಂದಿರಲಿಲ್ಲವೋ ಅವರಿಗೆ ಗೈರು ಹಾಜರಿ ಹಾಕಿಸಿ ಕ್ರಮ ತೆಗೆದುಕೊಳ್ಳಬೇಕೆಂದು ತಿಳಿಸಿದ್ದರೂ ಇನ್ನೂವರೆಗೂ ಅವರ ಮೇಲೆ ಕ್ರಮ ಕೈಗೊಂಡಿಲ್ಲ. ಆ ಆಫೀಸರ್‌ಗಳನ್ನು ಯಾರು ಕೇಳುವವರಿಲ್ಲ. ಅವರು ಮನಸ್ಸಿಗೆ ಬಂದಾಗ ಆಫೀಸ್‌ಗೆ ಬರುತ್ತಾರೆ, ಫೋನ್ ಮಾಡಿ ಅಧಿಕಾರಿಗಳನ್ನು ಕೇಳಿದರೆ ಅವರು ಟೂರ್ ಹೋಗಿದ್ದಾರೆಂದು ಅಲ್ಲಿರತಕ್ಕಂಥ ಚಪ್ರಾಸಿಗಳು ಉತ್ತರ ಕೊಡುತ್ತಾರೆ

ಶ್ರೀ ವಾಟಾಳ್ ನಾಗರಾಜ್ : ಅಧ್ಯಕ್ಷರೆ, ಇದರ ಬಗ್ಗೆ ತಮ್ಮ ಗಮನಕ್ಕೆ ತರುವುದೇನೆಂದರೆ, ಗಣರಾಜ್ಯೋತ್ಸವ ಮತ್ತು ಸ್ವಾತಂತ್ರ್ಯೋತ್ಸವದ ದಿನಗಳಲ್ಲಿ ತಹಶೀಲ್ದಾರ್‌ಗಳು ಧ್ವಜಾರೋಹಣವನ್ನು ಮಾಡುತ್ತಾರೆ ತಾಲ್ಲೂಕಿನ ಜನ ಪ್ರತಿನಿಧಿಗಳಾದ ಶಾಸಕರು ಸುಮ್ಮನೆ ಅತಿಥಿಗಳಾಗಿ ಕುಳಿತರುತ್ತಾರೆ. ಇದು ಪ್ರಜಾಪ್ರಭುತ್ವಕ್ಕೆ ತೀವ್ರ ಅಗೌರವ ಮತ್ತು ಅತ್ಯಂತ ಕೆಟ್ಟ ಸಂಪ್ರದಾಯ. ಇದು ಆಗಬಾರದು. ಸುಮಾರು ನಾಲ್ಕೈದು ವರ್ಷಗಳ ಹಿಂದೆ ನನ್ನ ತಾಲ್ಲೂಕಿನಲ್ಲಿ ಧ್ವಜಾರೋಹಣ ಸಂದರ್ಭದಲ್ಲಿ ನಾನು ಮುಖ್ಯ ಅತಿಥಿಯಾಗಿ ಹೋಗಿದ್ದಾಗ ತಹಶೀಲ್ದಾರ್‌ರವರೇ ಧ್ವಜಾರೋಹಣ ಮಾಡಿದರು. ನಾನು ನೇರವಾಗಿ ಜಗಳ ಮಾಡುವುದು ಸರಿಯಲ್ಲವೆಂದು ಸುಮ್ಮನೆ ಬಂದು ನಂತರದ ನಾಲ್ಕೈದು ಸಮಾರಂಭಗಳಿಗೆ ನಾನು ಹೋಗದೆ ತಪ್ಪಿಸಿಕೊಂಡೆ. ಧ್ವಜಾರೋಹಣ ಆಹ್ವಾನ ಪತ್ರಿಕೆಯಲ್ಲಿ ತಹಶೀಲ್ದಾರರಿಂದ ಧ್ವಜಾಹೋರಣ ಮುಖ್ಯ ಅತಿಥಿ ಹಾಗೂ ಅಧ್ಯಕ್ಷರು ಶಾಸಕರಾಗಿರುತ್ತಾರೆಂದು ಮುದ್ರಿಸುರುತ್ತಾರೆ. ಇದು ಸರಿಯಲ್ಲ. ಖಂಡಿತವಾಗಿ ಈ ಸಾರಿಯಿಂದಲೇ ಈ ಪದ್ಧತಿ ಹೋಗಬೇಕು. ಮುಂದಿನ ಗಣರಾಜ್ಯೋತ್ಸವದಲ್ಲಾಗಲೀ ಅಥವಾ ಸ್ವಾತಂತ್ರ್ಯೋತವದಲ್ಲಾಗಲೀ ಅಥವಾ ರಾಷ್ಟ್ರದ ಮತ್ತು ರಾಜ್ಯದ ಕಾರ್ಯಕ್ರಮಗಳು ಬಂದಾಗ ತಹಶೀಲ್ದಾರ್ ಅಥವಾ ಬೇರೆ ಅಧಿಕಾರಿಗಳು ಧ್ವಜಾರೋಹಣ ಮಾಡತಕ್ಕಂಥ ಸಂಪ್ರದಾಯ ಸಂಪೂರ್ಣವಾಗಿ ಹೋಗಬೇಕು. ನಾನಂತೂ ಇನ್ನು ಮುಂದೆ ತಹಶೀಲ್ದಾರ್‌ರವರು ಧ್ವಜಾರೋಹಣ ಮಾಡತಕ್ಕಂಥ ಸಂದರ್ಭದಲ್ಲಿ ನಾನು ಆ ಕಾರ್ಯಕ್ರಮದಲ್ಲಿ ಭಾಗವಹಿಸುವುದಿಲ್ಲ. ತಹಶೀಲ್ದಾರ್‌ಗಳ ಮೇಲೆ ನನಗೆ ವೈಯಕ್ತಿಕ ದ್ವೇಷ ಏನಿಲ್ಲ. ಆದರೆ, ತಹಶೀಲ್ದಾರುರುಗಳು ಧ್ವಜಾಹೋರಣ ಮಾಡುವಂಥ ನೀತಿಯನ್ನು ಸರ್ಕಾರವು ಮೊದಲು ಬದಲಾವಣೆ ಮಾಡಬೇಕು. ಕೂಡಲೇ ಒಂದು ಕ್ರಾಂತಿಕಾಂಕವಗಿ ಬದಲಾವಣೆ ಮಾಡಬೇಕಾದುದು ಸರ್ಕಾರದ ಕರ್ತವ್ಯ. ಸ್ವಾತಂತ್ರೋತ್ಸವ ಮತ್ತು ಗಣರಾಜ್ಯೋತ್ಸವ ಕಾರ್ಯಕ್ರಮಗಳಿಗೆ ಹೋಗುತ್ತೇನೆ ಆದರೆ ಅಧಿಕಾರಿಶಾಹಿಗಳು ಧ್ವಜಾರೋಹಣ ಮಾಡತಕ್ಕಂಥ ಆ ಕಾರ್ಯಕ್ರಮಗಳಲ್ಲಿ ನಾನು ಭಾಗವಹಿಸುವುದಿಲ್ಲ, ಅಧಿಕಾರಿ ಶಾಹಿಗಳಿಂದ ಧ್ವಜಾರೋಹಣ ಮಾಡುವುದು ನಿಜಕ್ಕೂ ಅಪಮಾನ. ಈ ಅಪಮಾನವನ್ನು ಸಹಿಸುವುದಕ್ಕಾಗುವುದಿಲ್ಲವೆಂದು ಮಾನ್ಯ ಅಧ್ಯಕ್ಷರ ಗಮನಕ್ಕೆ ತರುತ್ತಿದ್ದೇನೆ. ತಮ್ಮ ವಿಚಾರಧಾರೆಗಳೂ ಬೇರೆ ದಿಕ್ಕಿನಲ್ಲಿ ಇರುವುದರಿಂದ ಇಂಥ ಕೆಟ್ಟ ಸಂಪ್ರದಾಯವನ್ನು ತೆಗೆದು ಹಾಕಿ ಒಳ್ಳೆ ಸಂಪ್ರದಾಯವನ್ನು ತರಲು ಒಪ್ಪುತ್ತೀರೆಂದು ಭಾವಿಸುತ್ತೇನೆ.

ಅಧ್ಯಕ್ಷರು : ಈ ವಿಷಯದಲ್ಲಿ ತಮ್ಮೊಡನೆ ನಾವು ಸಹ ಸ್ಪಂದಿಸಿದ್ದೇವೆ.

ಶ್ರೀ ಕೆ.ಎನ್ ನಾಗೇಗೌಡ : ಆಫೀಸರ್ಸ್‌ನ್ನು ಕಂಟ್ರೋಲ್ ಮಾಡುವಲ್ಲಿ ಮಾನ್ಯ ಜಾಲಪ್ಪನವರು ಮತ್ತು ಸಿಂಧ್ಯಾರವರು ಪ್ರಮುಖರು.

7.10 ಪಿ.ಎಂ

ಸ್ವಾತಂತ್ರ್ಯೋತ್ಸವದ ಧ್ವಜಾರೋಹಣ ಸಂದರ್ಭದಲ್ಲಿ ಮಂತ್ರಿಗಳು ಉಪಸ್ಥಿತರಿದ್ದು ಧ್ವಜಾರೋಹಣ ಮಾಡುವ ಅವಕಾಶ ಇದೆ. ಆದರೆ ಅದೇ ಶಾಸಕರುಗಳಿಗೆ ಆ ಅವಕಾಶವನ್ನು ಕಲ್ಪಿಸಿಕೊಟ್ಟಿಲ್ಲ. ಧ್ವಜಾರೋಹಣವನ್ನು ಅಧಿಕಾರಿಗಳು ಮಾಡುವುದು ಶಾಸಕರು ಅದನ್ನು ನೋಡುತ್ತಾ ಕುಳಿತುಕೊಳ್ಳುವುದು ನಡೆದುಕೊಂಡು ಬಂದಿದೆ. ನಾನು ತಮ್ಮಲ್ಲಿ ಕೇಳಿಕೊಳ್ಳುವುದೇನೆಂದರೆ ಧ್ವಜಾರೋಹಣವನ್ನು ಮಾಡುವುದಕ್ಕೆ ಶಾಸಕರಿಗೂ ಆ ದಿನದಂದು ಅವಕಾಶವನ್ನು ಕಲ್ಪಿಸಿಕೊಡಬೇಕು. ಶಾಸಕರು ಧ್ವಜಾರೋಹಣ ಮಾಡುವುದನ್ನು ಜನರು ಕೂಡ ಇಚ್ಛೆಪಡುತ್ತಾರೆ. ಈಗ ನಮ್ಮನ್ನು ಅಲ್ಲಿ ಕುಳ್ಳಿರಿಸಿಕೊಂಡು ತಹಶೀಲ್ದಾರ್ ಅಗಲೀ, ಬೇರೆ ಯಾವುದೇ ಅಧಿಕಾರಿಗಳಾಗಿರಲಿ, ಧ್ವಜಾರೋಹಣ ಮಾಡಲು ತುಂಬಾ ಮುಜುಗರ ಪಟ್ಟುಕೋಳ್ಳುತ್ತಾರೆ. ಅದ್ದರಿಂದ ಈ ಬಗ್ಗೆ ಮಾನ್ಯ ಕಂದಾಯ ಸಚಿವರು ಈ ಕುರಿತಾಗಿ ಸಚಿವ ಸಂಪುಟದಲ್ಲಿ ಒಂದು ನಿರ್ಣಯವನ್ನು ಮಂಡಿಸಿ ಅದನ್ನು ಸರಿಪಡಿಸ ಬೇಕು. ಅ ಕುರಿತಾಗಿ ಕಂದಾಯ ಸಚಿವರು ಒಂದು ಆಶ್ವಾಸನೆಯನ್ನು ನಮಗೆ ಕೊಡಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರು ತಮ್ಮ ತೀರ್ಪನ್ನು ಈ ಕುರಿತಾಗಿ ಕೊಡಬೇಕು. ತಾವುಗಳು ತೀರ್ಪುಕೊಡದೇ ಕುಳಿತಿದ್ದೀರಿ. ತಾವು ಅನೇಕ ವಿಚಾರಗಳಲ್ಲಿ ಬಹಳ ಉತ್ತಮರೀತಿಯಲ್ಲಿ ತಮ್ಮ ತೀರ್ಪನ್ನು ಸಂಬಂಧಪಟ್ಟ ಹಾಗೆ ಕೂಡಲೇ ಕೊಡುತ್ತೀರಿ. ತಾವು ತಮ್ಮ ಅನಿಸಿಕೆತಗಳನ್ನು ಹೇಳ ಬೇಕೆಂದು ಪ್ರಾರ್ಥಿಸಿ, ಮಾನ್ಯ ಕಂದಾಯ ಸಚಿವರು ಈ ಬಗ್ಗೆ ಸ್ಪಷ್ಟೀಕರಣ ನೀಡ ಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಶ್ರೀ ಆರ್.ಎಲ್. ಜಾಲಪ್ಪ (ಕಂದಾಯ ಸಚಿವರು) : ಮಾನ್ಯ ಅಧ್ಯಕ್ಷರೇ, ಈ ಪ್ರಶ್ನೆಯು ಇವೊತ್ತಿನದಲ್ಲ. ಹಲವಾರು ಬಾರಿ ಚರ್ಚೆಗೆ ಬಂದಿದೆ. ಸಾಮಾನ್ಯವಾಗಿ ಈ ಬಗ್ಗೆ ಇರುವ ನಿಯವಗಳ ಅನುಸಾರವಾಗಿ ಧ್ವಜಾರೋಹಣವನ್ನು ಮಾಡುತ್ತಿದ್ದಾರೆ. ಈ ಕುರಿತಾಗಿ ದೇಶದಾದ್ಯಂತ ಒಂದೇ ನಿಯಮಗಳ ಪಾಲನೆಯಾಗುತ್ತಿದ್ದು ಅದನ್ನೇ ನಾವೂ ಅನುಸರಿಸುತ್ತಿದ್ದೇವೆ. ಕೇಂದ್ರ ಸರಕಾರದ ಗೈಡ್‌ಲೈನ್ಸ್ ಪ್ರಕಾರವೇ ಎಲ್ಲಾ ಕಥೆಗಳಲ್ಲಿ ಈ ಪವಿತ್ರ ಕಾರ್ಯವನ್ನು ಮಾಡುತ್ತಿದ್ದಾರೆ. ತಾವು ಹೇಳಿದ ಹಾಗೆ ನಮಗೂ ಮುಜುಗರ, ಅಧಿಕಾರಿಗಳಿಗೂ ಮುಜುಗರದ ಪರಿಸ್ಥಿತಿಯಾಗುತ್ತದೆ. ಈ ಬಗ್ಗೆ ನಾನು ಗೃಹ ಖಾತೆಯವರನ್ನು ಸಂಪರ್ಕಿಸಿ, ಅದೇ ರೀತಿಯಲ್ಲಿ ಕೇಂದ್ರ ಸರಕಾರದವರಲ್ಲಿ ಕೂಡ ಈ ಬ್ಬಗ್ಗೆ ಇರುವ ನಿಯಮಗಳನ್ನು ಅವಲೋಕಿಸಿ ಮಾನ್ಯ ಸದಸ್ಯರುಗಳ ಕಳಕಳಿಯನ್ನು ಕೂಡ ಅವರಿಗೆ ತಿಳಿಸುತ್ತೇವೆ. ತಾವು ಹೇಳಿದ ಹಾಗೆ ಜನನಾಯಕರಾಗಿ ಸಮಾರಂಭದಲ್ಲಿ ಕುಳತು ಅಧಿಕಾರಿಗಳು ಮಾಡುವ ಧ್ವಜಾರೋಹಣವನ್ನು ಮಿಕಿಮಿಕಿ ಕಣ್ಣುಬಿಟ್ಟು ಕೊಂಡು ಕುಳಿತು ನೋಡುವುದನ್ನು ಯಾರೂ ಒಪ್ಪುವುದಿಲ್ಲ. ಇದೇ ಕಾರಣಕ್ಕಾಗಿ ನಾನು ಕೂಡ 5 ವರ್ಷಗಳಿಂದ ಸಮಾರಂಭಕ್ಕೆ ಹೋಗಿಲ್ಲ. ಈ ವಿಚಾರದಲ್ಲಿ ಇರುವ ಪ್ರೋಟೋಕಾಲ್ ವಿಚಾರವನ್ನು ತಿಳಿದುಕೊಂಡು ನಮ್ಮ ಕೈಯಲ್ಲಿ ಏನು ಮಾಡುವುದಕ್ಕೆ ಸಾಧ್ಯವಿದೆ ಎಂಬುದನ್ನು ತಿಳಿದುಕೊಂಡು ಅದನ್ನೆಲ್ಲಾ ಮಾಡಲು ಯತ್ನಿಸುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರು ಕಡೆಗೂ ತಮ್ಮ ಒಂದು ಅನಿಸಿಕೆಯನ್ನು ಈ ಕುರಿತಾಗಿ ಹೇಳಲಿಲ್ಲ. ತಾವು ದಯಮಾಡಿ ಈ ವಿಚಾರದ ಬೆಳಕು ಚೆಲ್ಲ ಬೇಕು.

ಅಧ್ಯಕ್ಷರು : ಈ ಬಗ್ಗೆ ಕೇಂದ್ರ ಸರಕಾರದ ಮಾರ್ಗಸೂಚಿ ನಿಯಮಗಳು ಎನಿವೆ ಅದರ ಪ್ರಕಾರವೇ ಈಗ ನಮ್ಮ ರಾಷ್ಟ್ರಧ್ವಜಾರೋಹಣ ನಡೆಯುತ್ತಾ ಇದೆ. ಮಾನ್ಯ ಕಂದಾಯ ಸಚಿವರು ಆ ಬಗ್ಗೆ ಹೆಚ್ಚಿನ ವಿವರಗಳನ್ನು ಪಡೆದು ತಿಳಿಸುತ್ತೇನೆ ಎಂದು ಹೇಳಿದ್ದಾರೆ. ಆದ್ದರಿಂದ ಇನ್ನು 8-10 ದಿನಗಳಲ್ಲಿ ಈ ಬಗ್ಗೆ ಒಂದು ಕ್ಲಾರಿಫಿಕೇಶನ್ ಮಾಡಿಸೋಣ.

ಶ್ರೀ ಸುಭಾಶ್ ರುಕ್ಮಯ್ಯ ಗುತ್ತೇದಾರ್ : ಮಾನ್ಯ ಅಧ್ಯಕ್ಷರೇ, ನಮ್ಮ ಜಿಲ್ಲಾ ಪರಿಷತ್‌ನಲ್ಲಿ ಅಧಿಕಾರಿಗಳು ಸರಿಯಾಗಿ ಕೆಲಸ ನಿರ್ವಹಣೆ ಮಾಡುತ್ತಾ ಇಲ್ಲ. ಸ್ಟೋರ್‌ನ ಲೆಕ್ಕವನ್ನಾಗಲಿ, ಮತ್ತಿತರ ಯಾವುದೇ ಲೆಕ್ಕಗಳನ್ನಾಗಲಿ, ಸರಿಯಾಗಿ ಯಾರೂ ಇಟ್ಟಿಲ್ಲ. ತಾಲ್ಲೂಕು ಮಟ್ಟದ ಅಧಿಕಾರಿಗಳು ಮತ್ತೊಂದು ತಾಲ್ಲೂಕಿಗೆ ವರ್ಗವಾಗಿ ಹೋದರೂ ಕೂಡ ತಮ್ಮ ಹಿಂದಿನ ಕಚೇರಿಯಲ್ಲಿನ ಲೆಕ್ಕಪತ್ರಗಳನ್ನು ಸೂಕ್ತ ರೀತಿಯಲ್ಲಿ ಕೊಟ್ಟು ಹೋಗುತ್ತಿಲ್ಲ. ಸರಕಾರದವರು ಅಧಿಕಾರಿಗಳಿಗೆ ಸೂಕ್ತ ಎಚ್ಚರಿಕೆ ನೀಡ ಬೇಕು. ಸರಕಾರದ ಹಣವು ಸರಿಯಾಗಿ ಜನರಿಗಾಗಿ ಉಪಯೋಗವಾಗಬೇಕು. ಕಾಂಟ್ರಾಕ್ಟರಗಳ ಜೊತೆಗೆ ಅಧಿಕಾರಿಗಳು ಶಾಮೀಲಾಗಿ ಕಾಮಗಾರಿಗಳಲ್ಲಿ ಅವ್ಯವಹಾರವನ್ನು ಮಾಡುತ್ತಿದ್ದಾರೆ. ಜಿಲ್ಲಾಪರಿಷತ್‌ನವರು ಹಳೆಯ ಗೋಕಟ್ಟೆಗಳಿಗೆ ಹೊಸ ಗೋಕಟ್ಟೆ ಎಂದು ತೋರಿಸಿ ಬಿಲ್‌ನ್ನು ತೆಗೆದುಕೊಂಡ ಪ್ರಕರಣಗಳೂ ಇವೆ. ನಮ್ಮ ಭಾಗದ ರಸ್ತೆಗಳ ವಿಚಾರವಾಗಿ ತುಂಬಾ ಬೇಸರದಿಂದ ಹೇಳ ಬೇಕಾಗಿದೆ. ನಮ್ಮ ಭಾಗವು ಮಹಾರಾಷ್ಟ್ರದ ಗಡಿಪ್ರದೇಶದ ಭಾಗವಾಗಿದೆ. ಮಹಾರಾಷ್ಟ್ರದಿಂದ ಸಾಕಷ್ಟು ಟ್ರಕ್‌ಗಳು ದಿನನಿತ್ಯವೂ ನಮ್ಮ ಭಾಗದ ಮೂಲಕ ಕರ್ನಾಟಕಕ್ಕೆ ಬರುತ್ತವೆ. ಮಹಾರಾಷ್ಟ್ರದಲ್ಲಿನ ರಸ್ತೆಗಳು ತುಂಬಾ ಚೆನ್ನಾಗಿವೆ. ಅದೇ ಡ್ರೈವರ್‌ಗಳು ಕರ್ನಾಟಕ ಪ್ರವೇಶಿಸುತ್ತಿದ್ದಂತೆಯೇ ಕರ್ನಾಟಕ ಸರಕಾರವನ್ನು ರಸ್ತೆಯ ವಿಚಾರದಲ್ಲಿ ಬೈಯ್ದಾಡುವಂಥ ಪರಿಸ್ಥಿತಿ ಇದೆ.

ಕರ್ನಾಟಕದ ರೋಡ್‌ಗಳ ಬಗ್ಗೆ ಅವರಿಗೆ ತುಂಬಾ ತಿರಸ್ಕಾರದ ಮಾತುಗಳು ಇವೆ. ಇದನ್ನು ಹೋಗಲಾಡಿಸಬೇಕು. ನಮ್ಮ ಭಾಗದಲ್ಲಿನ ರಸ್ತೆಗಳನ್ನು ಚೆನ್ನಾಗಿ ಮಾಡಬೇಕು. ಹೈದ್ರಾಬಾದ್ ಕರ್ನಾಟಕ ಪ್ರದೇಶದ ರಸ್ತೆಗಳನ್ನು ಉತ್ತಮ ಪಡಿಸುವುದರ ಜೊತೆಗೆ ನಮ್ಮ ಭಾಗದಲ್ಲಿರುವ ಕುಡಿಯುವ ನೀರುನ ಸಮಸ್ಯೆಯನ್ನು ಪರಿಹರಿಸಿ ಕೊಡಬೇಕೆಂದು ಒತ್ತಾಯಪಡಿಸುತ್ತೇನೆ. ಇನ್ನೊಂದು ಗಂಭೀರವಾದ ಸಮಸ್ಯೆ ಅಂದರೆ ಗಡಿಪ್ರದೇಶವಾದ ನಮ್ಮ ಊರುಗಳಿಗೆ ಮಹಾರಾಷ್ಟ್ರದ ಗೂಂಡಾಗಳು ಪ್ರವೇಶಿಸಿ ದಾಂಧಲೆ ಮಾಡುತ್ತಾರೆ. ಅಲ್ಲಿಂದ ಗಡಿಪಾರು ಮಾಡಿದವರು, ತಲೆಮರೆಸಿಕೊಂಡವರು ನಮ್ಮಲ್ಲಿಗೆ ಬಂದು ಕುಕೃತ್ಯಗಳಲ್ಲಿ ತೊಡಗುತ್ತಾರೆ. ಅದಕ್ಕಾಗಿ ಮಾನ್ಯ ಗೃಹಸಚಿವರಲ್ಲಿ ನನ್ನ ವಿನಂತಿ ಎನೆಂದರೆ ನಮ್ಮ ಭಾಗದಲ್ಲಿ ಬಿಗಿ ಬಂದೋಬಸ್ತ್‌ನ ವ್ಯವಸ್ಥೆಯನ್ನು ಮಾಡಬೇಕು, ಒಳ್ಳೆಯ ಪೋಲೀಸ್ ಅಧಿಕಾರಿಗಳನ್ನು ಹಾಕಿ ನಮ್ಮ ಭಾಗದಲ್ಲಿ ಶಾಂತಿ ಸುವ್ಯವಸ್ಥೆಯನ್ನು ಕಾಪಾಡಿಕೊಂಡು ಬರುವಂತೆ ವ್ಯವಸ್ಥೆ ಮಾಡಬೇಕಾಗಿ ಕೇಳಿಕೊಳ್ಳುತ್ತೇನೆ. ಈ ಗೂಂಡಾಗಳಿಂದಾಗಿ ನಮ್ಮ ಭಾಗದ ಜನರು ಕಷ್ಟವನ್ನು ಅನುಭವಿಸುವಂತಾಗಿದೆಯಾದ ಕಾರಣ ಸರಕಾರದವರು ಎಚ್ಚರಿಕೆ ವಹಿಸಿ ಸೂಕ್ತ ಕ್ರಮವನ್ನು ತೆಗೆದುಕೊಳ್ಳಬೇಕು. ಇನ್ನು ಹೈದ್ರಾಬಾದ್ ಕರ್ನಾಟಕ ಪ್ರದೇಶದಲ್ಲಿ ನಿರುದ್ಯೋಗ ಸಮಸ್ಯಯು ಇದೆ.

ಆಳಂದ್ ತಾಲ್ಲೂಕ್‌ನಲ್ಲಿ ಒಂದು ಶುಗರ್‌ಫ್ಯಾಕ್ಟರಿ ಇದೆ. ನಮ್ಮ ತಾಲ್ಲೂಕ್‌ನಲ್ಲಿ ನೇಕಾರರು ಹೆಚ್ಚು ಸಂಖ್ಯೆಯಲ್ಲಿದ್ದಾರೆ. ನಮ್ಮಲ್ಲಿ ಖಾದಿ ಮಂಡಳಿಯ ಒಂದು ಘಟಕ ಇದೆ. ಅದರಲ್ಲಿ ಸುಮಾರು 1500 ಜನ ಮಹಿಳೆಯರು ಕೆಲಸ ಮಾಡುತ್ತಿದ್ದಾರೆ. ಆದರೆ ಅವರಿಗೆ ನೂಲಿನನ ಪೂರೈಕೆಯನ್ನು ಸರಿಯಾಗಿ ಮಾಡುತ್ತಾ ಇಲ್ಲವಾದ ಕಾರಣ ನೇಕಾರರು ಕಷ್ಟದಲ್ಲಿರುವಂತಾಗಿದೆ. ಅದನ್ನು ಸರಿಪಡಿಸಿ ನಮ್ಮ ಭಾಗದಲ್ಲಿ ಹೆಚ್ಚಿನ ಕೈಗಾರಿಕೆಗಳನ್ನು ಸ್ಥಾಪಿಸಲು ಪ್ರೋತ್ಸಾಹಿಸಿ ಅಲ್ಲಿನ ನಿರುದ್ಯೋಗಿಗಳಿಗೆ ಉದ್ಯೋಗ ದೊರೆಯುವಂತೆ ಮಾಡ ಬೇಕಾಗಿ ಕೇಳಿಕೊಳ್ಳುತ್ತೇನೆ.ನಾನು ಹೇಳಿದ ವಿಚಾರಗಳನ್ನು

ಸರಕಾರದವರು ಗಮನದಲ್ಲಿಟ್ಟುಕೊಂಡು ಸೂಕ್ತ ಕ್ರಮವನ್ನು ಕೈಗೊಳ್ಳಬೇಕೆಂದು ಕೇಳಿಕೊಂಡು ನನಗೆ ಅವಕಾಶ ಮಾನ್ಯ ಅಧ್ಯಕ್ಷರನ್ನು ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

+ ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೆ ಮಾನ್ಯ ರಾಜ್ಯಪಾಲರು ದಯಪಾಲಿಸಿದ ಭಾಷಣಕ್ಕಾಗಿ ವಂದನಾರ್ಪಣೆಯನ್ನು ಸಲ್ಲಿಸುವ ಗೌರವಪೂರ್ಣವಾದ ಕೆಲಸವು ಈಗ ನಡೆಯುತ್ತಾ ಇದೆ. ಮಾನ್ಯ ರಾಜ್ಯಪಾಲರ ಭಾಷಣಕ್ಕೆ ವಂದನಾರ್ಪಣೆಯನ್ನು ಸಲ್ಲಿಸುವ ಮೊದಲ ಭಾಷಣಕಾರರಾಗಿ ಮಾನ್ಯ ನಾಗೇಗೌಡರು ತಮ್ಮ ಅರ್ಥಪೂರ್ಣವಾದ ಭಾಷಣವನ್ನು ಮಾಡಿದ್ದಾರೆ. ಆದರೆ ಆಡಳಿತ ಪಕ್ಷದವರಿಂದಲೇ ಈ ಭಾಷಣಕ್ಕೆ ಗೌರವ ಸಿಗುತ್ತಾ ಇಲ್ಲ ಎಂದು ಬೇಸರದಿಂದ ಹೇಳಬೇಕಾಗಿದೆ. 37ಜನ ಮಂತ್ರಿಗಳಲ್ಲಿ ಎರಡೂವರೆ ಜನ ಮಂತ್ರಿಗಳು ಮಾತ್ರ ಇಲ್ಲಿ ಹಾಜರಿದ್ದಾರೆ. ಅದೇ ರೀತಿಯಲ್ಲಿ ಅಧಿಕಾರಿಗಳ ಸ್ಥಾನದಲ್ಲಿಯೂ ಯಾವ ಅಧಿಕಾರಿಗಳೂ ಕಾಣುತ್ತಾ ಇಲ್ಲ. ಇದೊಂದು ಕಾಟಾಚಾರ ಎಂಬ ನಿರ್ಲಕ್ಷ್ಯಭಾವನೆಯು ಅವರಲ್ಲಿ ಬಂದಿರ ಬಹುದು. ತಾವು ಅಧ್ಯಕ್ಷಪೀಠದಲ್ಲಿ ಆಸೀನರಾಗಿ ಎಲ್ಲಾ ಸದಸ್ಯರಿಗೂ ಸಮಾನವಾದ ಅವಕಾಶವನ್ನು ಕೊಟ್ಟುಕೊಂಡು ಪ್ರೋತ್ಸಾಹಿಸುತ್ತಾ ಇದ್ದೀರಿ. ಅನೇಕ ಮಾನ್ಯ ಸದಸ್ಯರುಗಳು ಸರಕಾರಕ್ಕೆ ಅನೇಕ ಅಮೂಲ್ಯವಾದ ಸಲಹೆಗಳನ್ನು ಕೊಟ್ಟಿದ್ದಾರೆ.

ಗುತ್ತೇದಾರ್‌ರವರು ಚೆನ್ನಾಗಿ ಮಾತನಾಡಿದ್ದಾರೆ. ಅದೆಲ್ಲಾ ಇಲ್ಲಿ ಕಡತಕ್ಕೆ ಹೋಗುತ್ತದೆ ಸರಿ, ಸಚಿವರು ನಾನು ಕಿವಿಗೆ ಹಾಕಿ ಕೊಂಡಿದ್ದೇನೆ, ಕೇಳುತ್ತಿದ್ದೇನೆ ಎಂದು ಹೇಳುತ್ತಾರೆ. ಕೇಳುತ್ತಾರೆ ಸರಿ, ಆದರೆ ಅವರೇನು ಕಂಪ್ಯೂಟರ್ ಅಲ್ಲ, ಸರ್ರನೆ ಎಲ್ಲ ತುಂಬಿಕೊಡುಬಿಡುವುದಕ್ಕೆ ನಮ್ಮಲ್ಲಿ ಇತ್ತೀಚಿನ ದಿನಗಳಲ್ಲಿ ಏನಾಗಿದೆ? ನನ್ನ ಹೆಸರಿನ ಮುಂದಿರುವ ಎಲ್ಲ ಕಾಗದಪತ್ರಗಳನ್ನೂ ಸಭೆಯ ಮುಂದಿರುತ್ತೇನೆ ಎನ್ನುತ್ತಾರೆ ಅದೇನು ಒಂದು ರೀತಿ ನಾಟಕೀಯವಾಗಿದೆ, ಯಾವುದು ಆ ಕಾಗದಪತ್ರಗಳು, ಆಮೇಲೆ ಯಾರಾದರೂ ಗೈರುಹಾಜರಾದರೆ ಅವರ ಕಾಗದಪತ್ರಗಳನ್ನೂ ನಾನೇ ಮಂಡಿಸುತ್ತೇನೆ ಅನ್ನುತ್ತಾರೆ.ನೀವು ಒಳ್ಳೆಯ ದೃಷ್ಟಿಯಿಂದ ಚಿಂತನೆ ಮಾಡುವವರು, ನಿಮ್ಮ ವ್ಯಕ್ತಿತ್ವ ಬಹಳ ಬೆಳೆಯುತ್ತಿದೆ. ಈ ಸಂದರ್ಭದಲ್ಲಿ ನಾನು ಅತ್ಯಂತ ನೋವಿನಿಂದ ಹೇಳುತ್ತಿದ್ದೇನೆ, ಒಬ್ಬ ಅಧಿಕಾರಿಯಾದರೂ ಅಲ್ಲಿದ್ದಾರೆಯೇ? ಇದು ಅಗೌರವ, ಈ ಒಂದು ಭಾಷಣಕ್ಕೆ ತೋರಿದ ಅಗೌರವ ಇದರಲ್ಲಿ ಬೇರೆ ಮಾತಿಲ್ಲ. ಮುಖ್ಯಮಂತ್ರಿ ಉಪಮುಖ್ಯಮಂತ್ರಿಗಳಿಂದ ಹಿಡಿದು 37 ಜನ ಮಂತ್ರಿಗಳಿದ್ದಾರೆ. 10 ಜನ ಮಂತ್ರಿಗಳಾದರೂ ಬೇಡವೇ? ಈಗ ಎರಡೂ ಸದನಗಳು ನಡೆಯುತ್ತಿದೆ ಸ್ವಾಮಿ, ನೀವು ನೇರವಾಗಿ ಆ ಸದನದಲ್ಲಿ ಎಷ್ಟು ಜನ ಇದ್ದಾರೆಂದು ನೋಡಿಸಿ. ಇರಲಿ, ಆ ಸದನಕ್ಕೆ ಹೋಗಬಾರದು ಅಂತ ಅಲ್ಲ. ತಾವು ದಯಮಾಡಿ ಮೂರನೇ ಮಹಡಿಗೆ ನಿಮ್ಮ ವ್ಯವಸ್ಥೆ ಕಳಿಸಿ ಅಲ್ಲಿ ಎಷ್ಟು ಜನ ಮಂತ್ರಿಗಳು ಅವರದೇ ಆದ ವ್ಯವಸ್ಥೆಯಲ್ಲಿ ಅವರ ಕಾರ್ಯಮಾಡಿ ಕೊಂಡು ಕೂತಿದ್ದಾರೆ ಎಂದು ತಿಳಿದುಕೊಳ್ಳಿ. ಈ ತರಹ ಆದರೆ, ನಾವು ಕೂತೇ ಇರುತ್ತೇವೆ. ಇನ್ನು ಬೆಳಗಿನ ಹೊತ್ತು 9.30ಕ್ಕೆ ಸಭೆ ಇದ್ದರೆ 9 ಗಂಟೆಗೆ ಎದ್ದುಬಿದ್ದು ಬಂದು ತಮ್ಮ ಚೇಂಬರ್‌ನಲ್ಲಿ ತಮ್ಮನ್ನು ಕಂಡು ಇಂಥ ವಿಷಯವನ್ನು ಕುರಿತು ಮಾತಾಡಬೇಕೆಂದಿದ್ದೇನೆ ಎಂದು ತಮ್ಮ ಗಮನಕ್ಕೆ ತರುತ್ತೇನೆ.

ಆದರೆ ಅಧಿಕಾರಿಗಳ ಸಚಿವರ ಗೈರುಹಾಜರಿಯಿಂದ ನಮಗೆ ನೋವಾಗತ್ತದೆ, ಅದರಲ್ಲೂ ಗವರ್ನರ್‌ರ ಭಾಷಣದ ಮೇಲಿನ ಚರ್ಚೆ ಸಂದರ್ಭದಲ್ಲಿ ಮಾತನಾಡುವಾಗ, ಈ ವಂದನಾ ನಿರ್ಣಯದ ಮೇಲೆ ವಾಟಾಳ್‌ನಾಗರಾಜ್‌ರವರು ಮಾತನಾಡುವಾಗ ಪುಸ್ತಕವನ್ನು ಹರಿದುಹಾಕಿದರರು ಎಂದು ನನ್ನ ಮೇಲೆ ನಿರ್ಣಯ ತಂದು ದಿನಗಟ್ಟಲೆ ಚರ್ಚೆ ನಡೆಸಿದರು. ಆದರೆ ಯಾವ ಸರ್ಕಾರ ಈ ವಂದನಾ ನಿರ್ಣಯ ತಂದಿದೆ ಅದನ್ನು ಎಷ್ಟು ಅಗೌರವದಿಂದ ಕಾಣುತ್ತಿದ್ದಾರೆಂದರೆ ಹೇಳಲು ನೋವಾಗುತ್ತದೆ. ಆ ಅಧಿಕಾರಿವರ್ಗದವರೇನು ಈ ಸದನಕ್ಕಿಂತ ದೊಡ್ಡವರೇನಲ್ಲ, ತಮ್ಮ ಪೀಠ ತಮ್ಮ

ಮಾತು ಬಹಳ ಪವಿತ್ರವಾದುದು. ಮೂರನೇ ಮಹಡಿಯಲ್ಲಿ ತಮ್ಮ ಚೇಂಬರ್‌ಗಳಲ್ಲಿ ಜನರನ್ನು ಕೂಡಿಸಿಕೊಂಡು ಆ ಪಟೇಲ ಬಂದನೆ, ಆ ಶ್ಯಾನುಭೋಗ ಬಂದಾನೆ ಎಂದು ಚರ್ಚೆ ನಡೆಸುತ್ತಿರುತ್ತಾರೆ. ಮತ್ತೆ ಸದನ ನಡೆಯುವಾಗ ಪ್ರವಾಸ ಹೋಗಲೋಬಾರದು. ನಾನು ಅತ್ಯಂತ ದುಃಖದಿಂದ ಆ ಪದ ನಾನು ಬಳಸಬಾರದು, ಅದನ್ನು ಬಳಸಿದರೆ ಅಗೌರವವಾಗುತ್ತದೆ, ಇದರ ಬಗ್ಗೆ ತಾವು ಗಮನಿಸಬೇಕೆಂದು ಕಳಕಳಿಯಿಂದ ತಮ್ಮಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಒಬ್ಬ ಮಾನ್ಯ ಸದಸ್ಯರು : ಅಧ್ಯಕ್ಷರೇ, ಇಲ್ಲಿನ ಅಧಿಕಾರಿಗಳ ಸಚಿವರ ಗೈರುಹಾಜರಿ ನೋಡಿದರೆ ಹೊಸದಾಗಿ ಬಂದಿರುವ ನಮ್ಮಂಥ ಸದಸ್ಯರಿಗೆ ಆಶ್ಚರ್ಯವಾಗುತ್ತದೆ, ಇದು ಏನು ಇಷ್ಟೊಂದು ನಿರ್ಲಕ್ಷ್ಯ ತೋರುತ್ತಿದ್ದಾರಲ್ಲ, ಮುಂದೆ ನಾವೂ ಹೀಗೆ ಮಾಡಬಹುದೇನೋ ಎಂದು ಅನ್ನಿಸುತ್ತಿದೆ, ವಾಸ್ತವಿಕವಾಗಿ ಈ ಸದನದಲ್ಲಿ ನಮ್ಮ ಕ್ಷೇತ್ರಗಳ ಕುಂದುಕೊರತೆಗಳನ್ನು ನಾವು ಪ್ರಸ್ತಾಪಿಸಿದಾಗ ಅದನ್ನು ಪರಿಹರಿಸಲು ಸಂಬಂಧಿಸಿದ ಸಚಿವರು ಇರಬೇಕಾಗುತ್ತದೆ. ನಮಗೆ ಇದರಿಂದ ನೋವು ಅವಮಾನವಾಗಿದೆ.

SRI QAMARUL ISLAM : Mr.Speaker, Sir, this is not the feelilng of only Shri. Vatal Nagaraj. This is the feeling of all the Members of this House who are present. This has become the practice for the officers. They are taking the House very lightly.

MR.SPEAKER :Yes, we have taken cognisance of it.

SRI QUMARUL ISLAM : The matter is reitered many times. You are the custodian of the House I hope you will definitely take corrective steps.

ಅಧ್ಯಕ್ಷರು : ಮುಖ್ಯಮಂತ್ರಿಗಳು ಮತ್ತು ರಮೇಶ್ ಜಿಗಜಿಣಗಿಯವರು ಬಾಬು ಜಗಜೀವನರಾಂ ಅವರ ಹುಟ್ಟುಹಬ್ಬದ ಕಾರ್ಯಕ್ರಮಕ್ಕೆ ಹೋಗುತ್ತಿರುವಾದಾಗಿ ತಿಳಿಸಿದ್ದಾರೆ. ಉಳಿದವರದ್ದು ನನಗೇನೂ ಗೊತ್ತಿಲ್ಲ. ಅವರು ಬದಲಾವಣೆಯಾಗಬೇಕು.

## ಮಂತ್ರಿಗಳ ಹೇಳಿಕೆ.

### ಶ್ರೀ ವೈ.ಕೆ. ರಾಮಯ್ಯನವರ ಮೇಲೆ ಹಾಕಿರುವ ಕೇಸ್‌ಗಳನ್ನು ವಾಪಸ್ ತೆಗೆದುಕೊಂಡಿರುವ ಬಗ್ಗೆ

ಶ್ರೀ ಪಿ.ಜಿ.ಆರ್. ಸಿಂಧ್ಯ (ಗೃಹ ಸಚಿವರು) : ಅಧ್ಯಕ್ಷರೇ, ವೈ.ಕೆ. ರಾಮಯ್ಯನವರು ಸೆರೆಮನೆಯಲ್ಲಿ ಇರುವ ಬಗ್ಗೆ ಮಾನ್ಯ ಸದಸ್ಯರಾದ ಶ್ರೀ ವಾಟಾಳ್‌ನಾಗರಾಜ್, ಬಂಗಾರಪ್ಪ ಶ್ರೀ ಎಸ್. ಶಿವನಂಜಪ್ಪ ಇವರೆಲ್ಲರೂ ತಮ್ಮ ಭಾವನೆಗಳನ್ನು ವ್ಯಕ್ತಮಾಡಿದ್ದಾರೆ. ಅದರ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ಇಂದು ದೆಹಲಿಯಿಂದ ಪ್ರವಾಸ ಮುಗಿಸಿ ಬಂದ ಮೇಲೆ ಈ ಸದನದ ಗೌರವಾನ್ವಿತ ಸದಸ್ಯರ ಅಭಿಪ್ರಾಯ ಮತ್ತು ಅಧ್ಯಕ್ಷರ ಅಭಿಪ್ರಾಯಗಳನ್ನು ಅವರ ಗಮನಕ್ಕೆ ತಂದಿದ್ದೇನೆ. ಶ್ರೀ ವೈ.ಕೆ. ರಾಮಯ್ಯನವರ ಮೇಲೆ ಪೋಲೀಸರು ಏನು ಅಸಭ್ಯ ನಡವಳಿಕೆ ಸಂಬಂಧಿಸಿದ ಕೇಸನ್ನು ಹಾಕಿದ್ದರೋ, ಅದನ್ನು ವಾಪಸ್ ತೆಗೆದುಕೊಳ್ಳಲು ಸರ್ಕಾರ ತೀರ್ಮಾನ ಮಾಡಿದೆ. ಮುಖ್ಯಮಂತ್ರಿಗಳು ಸಂಬಂಧಪಟ್ಟ ಆಜ್ಞೆಕೂಡ ಮಾಡಿದ್ದಾರೆ. ಇನ್ನು ಮುಂದೆ ವೈ.ಕೆ. ರಾಮಯ್ಯನವರು ಕೋಪದಿಂದ ಅಸಭ್ಯದಿಂದ ವರ್ತಿಸುವ ತಮ್ಮ ಬುದ್ಧಿಯನ್ನು ಹತೋಟಿಯಲ್ಲಿಟ್ಟುಕೊಂಡು ಸೂಕ್ತವಾಗಿ ವರ್ತಿಸುತ್ತಾರೆಂದು ನಾನು ಅವರಲ್ಲಿ ಮನವಿ ಮಾಡಿಕೊಳ್ಳುತ್ತೇನೆ.

ಹಾಗೆಯೇ ಶಿವನಂಜಪ್ಪನವರು ನಾಳೆ ದಿವಸ ತುಮಕೂರು ಜಿಲ್ಲೆಯಲ್ಲಿ ಕೆಲವು ಭಾಗಗಳಲ್ಲಿ ಹೇಮಾವತಿ ನೀರು ಬಿಡಬೇಕೆಂದು ಒತ್ತಾಯಿಂದ ಜಿಲ್ಲೆಯ ಜನ

ಚಳುವಳಿ ಮಾಡಲಿರುವರೆಂದು ಹೇಳಿರುವುದನ್ನೂ ಮುಖ್ಯಮಂತ್ರಿಗಳ ಗಮನಕ್ಕೆ ತರುತ್ತಿದ್ದೇನೆ. ಯಾವುದೇ ಕೆಲಸವಾಗಲಿ ಅದರಿಂದ ಜನರಿಗೆ ಒಳ್ಳೆಯದಾಗುವುದಾದರೆ ಅದನ್ನು ಅತ್ಯಂತ ತ್ವರಿತವಾಗಿ ನಮ್ಮ ಸರ್ಕಾರ ಆರಂಭಿಸಲು ಪ್ರಯತ್ನ ಮಾಡುತ್ತದೆ. ನಮ್ಮ ಸರ್ಕಾರ ಬಂದು ಇನ್ನೂ ನೂರು ದಿನವಾಗಿಲ್ಲ, ಮೊನ್ನೆ ತಾನೇ ಬಜೆಟ್ ಪಾಸಾಗಿದೆ, ಈಲಸ ಪ್ರಾರಂಭ ಮಾಡುತ್ತೇವೆ, ನಮಗೆ ಸ್ವಲ್ಪ ಕಾಲಾವಕಾಶ ಕೊಡಬೇಕಾಗುತ್ತದೆ. ಶಿವನಂಜಪ್ಪನವರಾಗಲಿ ಇತರೇ ತುಮಕೂರು ಭಾಗದ ಸದಸ್ಯರಾಗಲಿ, ಅವರಲ್ಲಿ ನಾನು ಸರ್ಕಾರದ ಪರವಾಗಿ ಮನವಿ ಮಾಡಿಕೊಳ್ಳುತ್ತೇನೆ, ಅವರ ಮುಷ್ಕರವನ್ನು ಹಿಂತೆಗೆದುಕೊಂಡು ಸಹಕರಿಸಿದರೆ ಸರ್ಕಾರ ಅವರ ಬೇಡಿಕೆ ಬಗ್ಗೆ ಅದನ್ನು ಆದಷ್ಟು ಬೇಗ ಈಡೇರಿಸಿಕೊಡುತ್ತೆದೆಂಬ ಭರವಸೆಯನ್ನು ಈ ಸಂದರ್ಭದಲ್ಲಿ ಕೊಡುತ್ತೇನೆ.

ಶ್ರೀ ವಾಟಾಳ್ ನಾಗರಾಜ್ : ಮಾನ್ಯ ಅಧ್ಯಕ್ಷರೇ, ಮಾನ್ಯ ವೈ.ಕೆ. ರಾಮಯ್ಯನವರ ಮೇಲೆ ಹಾಕಿರುವ ಮೊಕದ್ದಮೆಗಳನ್ನು ಸರ್ಕಾರದವರು ವಾಪಸ್ ತೆಗೆದುಕೊಂಡಿದ್ದಾರೆ. ಬಹಳ ಸಂತೋಷ. ಅದಕ್ಕಾಗಿ ನಾನು ಸರ್ಕಾರಕ್ಕೆ ಅಭಿನಂದನೆಯನ್ನಸಲ್ಲಿಸುತ್ತೇನೆ. ಆದರೆ ಅವರ ಬೇಡಿಕೆ ಒಂದು ಇದೆಯಲ್ಲ, ಅದು ಪ್ರಮುಖವಾಗಿರುವಂಥದ್ದು. ಮತ್ತೆ ಅವರು ಗಲಾಟೆ ಮಾಡಿ ಅವರು ಒಳಗಡೆ ಹೋಗಬಾರದು. ಅವರ ಬೇಡಿಕೆಯನ್ನು ಈಡೇರಿಸುವ ಕೆಲಸವನ್ನು ಕೂಡ ಸರ್ಕರದವರು ಮಾಡಬೇಕಾಗುತ್ತದೆ. ಅವರ ಬೇಡಿಕೆ ಈಡೇರಲಿ. ಇದನ್ನೇ ದೊಡ್ಡ ಜಿಜ್ಞಾಸೆ ಮಾಡಿಕೊಂಡು, ಅಸ್ತ್ರ ಮಾಡಿಕೊಂಡು ಹೋಗುವ ವ್ಯಕ್ತಿಯೂ ಅವರಲ್ಲ. ಇಲ್ಲಿ ಪ್ರಮುಖವಾಗಿ ಆಗಬೇಕಾದ್ದು ಅವರ ಬೇಡಿಕೆಯನ್ನು ಈಡೇರಿಸುವುದು. ಈ ಬಗ್ಗೆ ಮಾನ್ಯ ರಾಮಯ್ಯನವರನ್ನೇಕರೆದು ಮಾತನಾಡಿದರೆ ಬಹಳ ಒಳ್ಳೆಯದೆಂದು ಹೇಳುತ್ತೇನೆ. ಅವರನ್ನು ಕರೆದು ಮಾತನಾಡಿದರೆ ಅಕಾಶವೇನು ಕಳಚಿ ಬಿದ್ದು ಹೋಗುವುದಿಲ್ಲ. ಆದ್ದರಿಂದ ಅವರನ್ನು ಕರೆದು ಮಾತನಾಡುವ ಒಂದು ವ್ಯವಸ್ಥೆಯನ್ನು ಸಹ ಮಾಡುತ್ತೀರಿ ಎಂದು ನಾನೆಂದುಕೊಂಡಿದ್ದೇನೆ. ಇದರ ಬಗ್ಗೆ ತಾವು ಏನು ಹೇಳುತ್ತೀರೋ ಹೇಳಿ.

ಅಧ್ಯಕ್ಷರು : ಮಾಡಿಸುತ್ತೇನೆ. ಈಗ ಸಭೆಯನ್ನು ಮಂದೂಡಿ ನಾಳೆ ಸಭೆಯು ಬೆಳ್ಳಿಗೆ 9-30 ಗಂಟೆಗೆ ಮತ್ತೆ ಸೇರುವುದು.

(ಸದನವು ರಾತ್ರಿ 7 ಘಂಟೆ 31 ನಿಮಿಷಗಳಿಗೆ ಮುಕ್ತಾಯವಾಗಿ ಪುನಃ 6 ನೇ ಏಪ್ರಿಲ್ ಮಾಹೆ 1995ರ ಗುರುವಾರ ದಂದು ಬೆಳ್ಳಿಗ್ಗೆ 9 ಘಂಟೆ 30 ನಿಮಿಷಕ್ಕೆ ಸೇರಲು ನಿಶ್ಚಯಿಸಿತು.)

# ಕರ್ನಾಟಕ ವಿಧಾನಸಭೆ

ಹತ್ತನೆಯ ವಿಧಾನಸಭೆ

(ಎರಡನೆಯ ಅಧಿವೇಶನ)

## ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ವಿಧೇಯಕ, 1995

(1995ರ ವಿಧಾನಸಭಾ ವಿಧೇಯಕ ಸಂಖ್ಯೆ-10)

ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) ಅಧಿನಿಯಮ, 1974ನ್ನು ಮತ್ತಷ್ಟು ತಿದ್ದುಪಡಿ ಮಾಡುವ ವಿಧೇಯಕ.

ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ ಅಧಿನಿಯಮ, 1974ನ್ನು (1974ರ ಕರ್ನಾಟಕ ಅಧಿನಿಯಮ 32) ಇದರಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಭಾರತ ಗಣರಾಜ್ಯದ ನಲವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ :

1. **ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ** : (1) ಈ ಅಧಿನಿಯಮವನ್ನು ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) (ತಿದ್ದುಪಡಿ) ಅಧಿನಿಯಮ,1995 ಎಂದು ಕರೆಯತಕ್ಕದ್ದು.

(2) ಇದು ಕೂಡಲೇ ಜಾರಿಗೆ ಬರತಕ್ಕದ್ದು.

2. **2ನೇ ಪ್ರಕರಣದ ತಿದ್ದುಪಡಿ** : ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) ಅಧಿನಿಯಮ, 1974ರ (1974ರ ಕರ್ನಾಟಕ ಅಧಿನಿಯಮ 32), 2ನೇ ಪ್ರಕರಣದಲ್ಲಿ (ಇ) ಖಂಡದಲ್ಲಿ, ವಿವರಣೆಯಲ್ಲಿ (ಡಿ) ಬಾಬಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ :

"(ಡಿ) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ (1993ರ ಕರ್ನಾಟಕ ಅಧಿನಿಯಮ 14) ಅಡಿಯಲ್ಲಿ ಸ್ಥಾಪನೆಗೊಂಡ ಜಿಲ್ಲಾ ಪಂಚಾಯತಿ ಅಥವಾ ತಾಲೂಕು ಪಂಚಾಯತಿ ಅಥವಾ ಗ್ರಾಮ ಪಂಚಾಯತಿ".

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

1974ರ ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) ಅಧಿನಿಯಮದ 2ನೇ ಪ್ರಕರಣಕ್ಕೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ರೊಂದಿಗೆ ಸಂಗತವಾಗಿರುವಂತೆ ಮಾಡುವ ಸಲುವಾಗಿ ತಿದ್ದುಪಡಿಯನ್ನು ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ತಿದ್ದುಪಡಿಯಿಂದಾಗಿ ಯಾವುದೇ ಹಣಕಾಸು ವೆಚ್ಚ ಉಂಟಾಗುವುದಿಲ್ಲ.

**ಆರ್.ಎಲ್. ಜಾಲಪ್ಪ**
ಕಂದಾಯ ಸಚಿವರು

**ನಿಂ.ಹು. ಮುತ್ತಲಗೇರಿ**
ಕಾರ್ಯದರ್ಶಿ

ಅನುಬಂಧ

ಕರ್ನಾಟಕ ಸಾರ್ವಜನಿಕ ಆವರಣಗಳ (ಅನಧಿಕೃತ ಅಧಿಭೋಗದಾರರನ್ನು ಒಕ್ಕಲೆಬ್ಬಿಸುವ) ಅಧಿನಿಯಮ, 1974ರ (1974ರ ಕರ್ನಾಟಕ ಅಧಿನಿಯಮ 32) ಉದ್ಧೃತ ಭಾಗಗಳು

**** **** ****

2. **ಪರಿಭಾಷೆಗಳು** : ಈ ಅಧಿನಿಯಮದಲ್ಲಿ, ಸಂದರ್ಭಕ್ಕೆ ಬೇರೆ ಅರ್ಥದ ಅಗತ್ಯವಿರದಿದ್ದರೆ

** ** **

(ಇ) "ಸಾರ್ವಜನಿಕ ಆವರಣಗಳು" ಎಂದರೆ, ರಾಜ್ಯ ಸರ್ಕಾರಕ್ಕೆ ಸೇರಿದ ಅಥವಾ ಹಂಚಿಕೆ ಮಾಡಲಾಗಿರುವ ಅಥವಾ ರಾಜ್ಯ ಸರ್ಕಾರ ಅಥವಾ ಅದರ ಪರವಾಗಿ ಗುತ್ತಿಗೆ ಮೇಲೆ ಪಡೆಯಲಾದ ಯಾವುದೇ ಕಟ್ಟಡಗಳನ್ನು ಒಳಗೊಳ್ಳುತ್ತದೆ;

(i) ಸ್ಥಳೀಯ ಪ್ರಾಧಿಕಾರ ;

** ** **

**ವಿವರಣೆ** : ಈ ಖಂಡದ ಉದ್ದೇಶಗಳಿಗಾಗಿ "ಸ್ಥಳೀಯ ಪ್ರಾಧಿಕಾರ" ಎಂದರೆ,

** ** **

(ಬಿ) ಕರ್ನಾಟಕ ಜಿಲ್ಲಾ ಪರಿಷತ್‌ಗಳು, ತಾಲ್ಲೂಕು ಪಂಚಾಯತಿ ಸಮಿತಿಗಳು, ಮಂಡಲ ಪಂಚಾಯತಿಗಳು ಮತ್ತು ನ್ಯಾಯ ಪಂಚಾಯತಿಗೆ ಅಧಿನಿಯಮ, 1983ರ (1983ರ ಕರ್ನಾಟಕ ಅಧಿನಿಯಮ 20) ಅಡಿಯಲ್ಲಿ ಸ್ಥಾಪನೆಗೊಂಡ ಜಿಲ್ಲಾ ಪರಿಷತ್ ಅಥವಾ ಮಂಡಲ ಪಂಚಾಯತಿ ;

** ** **

# ಕರ್ನಾಟಕ ವಿಧಾನಸಭೆ

## ಹತ್ತನೇ ವಿಧಾನಸಭೆ

## (ಎರಡನೆಯ ಅಧಿವೇಶನ)

## ಸಿವಿಲ್ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 1995

(1995ರ ವಿಧಾನಸಭಾ ವಿಧೇಯಕ ಸಂಖ್ಯೆ - 11)

ಸಿವಿಲ್ ಪ್ರಕ್ರಿಯಾ ಸಂಹಿತೆ, 190-8 ನ್ನು ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವುದಕ್ಕೆ ಸಂಬಂಧಿಸಿದಂತೆ ಮತ್ತಷ್ಟು ತಿದ್ದುಪಡಿ ಮಾಡಲು ವಿಧೇಯಕ

ಈ ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಸಿವಿಲ್ ಪ್ರಕ್ರಿಯಾ ಸಂಹಿತೆ, 1908ನ್ನು ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಅದು ಭಾರತ ಗಣರಾಜ್ಯದ ನಲವತ್ತಾರನೆಯ ವರ್ಷದಲ್ಲಿ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ :

**1. ಚಿಕ್ಕ ಹೆಸರು ಮತ್ತು ಪ್ರಾರಂಭ** : (1) ಈ ಅಧಿನಿಯಮವನ್ನು ಸಿವಿಲ್ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ಅಧಿನಿಯಮ, 1995 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. 54ನೇ ಪ್ರಕರಣ ತಿದ್ದುಪಡಿ.** 1908ರ ಸಿವಿಲ್ ಪ್ರಕ್ರಿಯಾ ಸಂಹಿತೆಯ (1908ರ ಕೇಂದ್ರಾಧಿನಿಯಮ 5) 54ನೇ ಪ್ರಕರಣಕ್ಕೆ ಈ ಮುಂದಿನ ಪ್ರಕರಣವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:

"**54. ಸಂಪದದ ವಿಭಜನೆ ಮತ್ತು ಪಾಲನ್ನು ಪ್ರತ್ಯೇಕಿಸುವುದು.** ಸರ್ಕಾರಕ್ಕೆ ಕಂದಾಯವನ್ನು ಸಂದಾಯ ಮಾಡುವುದಕ್ಕಾಗಿ ಕಂದಾಯ ನಿರ್ಧಾರಣೆ ಮಾಡುಲಾಗಿರುವ ಒಂದು ಅವಿಭಕ್ತ ಸಂಪದವನ್ನು ವಿಭಜಿಸುವುದಕ್ಕಾಗಿ ಅಥವಾ ಅಂಥ ಸಂಪದದ ಪಾಲನ್ನು ಪ್ರತ್ಯೇಕವಾಗಿ ಸ್ವಾಧೀನಕ್ಕೆ ತೆಗೆದುಕೊಳ್ಳುವುದಕ್ಕಾಗಿ ಡಿಕ್ರಿಯು ಇರುವಲ್ಲಿ, ಸಂಪದದ ವಿಭಜನೆ ಅಥವಾ ಸಂಪದದ ಪಾಲನ್ನು ಪ್ರತ್ಯೇಕಿಸುವುದಕ್ಕೆ ಸಂಬಂಧಿಸಿದಂತೆ ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿನ (ಯಾವುದಾದರೂ ಇದ್ದಲ್ಲಿ) ಮೇರೆಗೆ ಮತ್ತು ಅವಶ್ಯವಿದ್ದಲ್ಲಿ ತಹಶೀಲ್ದಾರನ ದರ್ಜೆಗಿಂತ ಕಡಿಮೆಯಿಲ್ಲದ ಕಂದಾಯ ಅಧಿಕಾರಿಯ ಅಥವಾ ಈ ಪರವಾಗಿ ನ್ಯಾಯಾಲಯವಲು ಕಮಿಷನರನೆಂಬುದಾಗಿ ನೇಮಿಸಬಹುದಾದಂಥ ಇತರ ವ್ಯಕ್ತಿಯ ವರದಿಯ ಮೇರೆಗೆ, ನ್ಯಾಯಾಲಯವು ಸಂಪದದ ವಿಭಜನೆ ಮಾಡತಕ್ಕದ್ದು ಅಥವಾ ಅಂಥ ಸಂಪದದ ಪಾಲನ್ನು ಪ್ರತ್ಯೇಕಿಸತಕ್ಕದ್ದು".

ಮೂಲ ಅಧಿನಿಯಮದ 54ನೇ ಪ್ರಕರಣದಡಿ ವಿಭಜನೆಯನ್ನು ಮಾಡಲು ಕಲೆಕ್ಟರರಿಗೆ ಕಾಗದಪತ್ರಗಳನ್ನು ಕಳುಹಿಸಿರುವಲ್ಲಿ ಮತ್ತು ಕಲೆಕ್ಟರರು ಅಥವಾ ಈ ಬಗ್ಗೆ ಕಲೆಕ್ಟರರು ಪ್ರತಿಯೋಜಿಸಿದ ಆತನ ಯಾವೊಬ್ಬ ಅಧೀನ ಗಜೆಟೆಡ್ ಅಧಿಕಾರಿಯು ಅಂಥ ಪ್ರಾರಂಭಕ್ಕೆ ಪೂರ್ವದಲ್ಲಿ ವಿಭಜನೆಯನ್ನು ಮಾಡುವ ಬಗ್ಗೆ ಅಂತಿಮ ಆದೇಶವನ್ನು ಹೊರಡಿಸದಿರುವಲ್ಲಿ, ಅಂಥ ಕಾಗದಪತ್ರಗಳನ್ನು ಸಂಬಂಧಪಟ್ಟ ಸಿವಿಲ್ ನ್ಯಾಯಾಲಯಗಳಿಗೆ ಪುನಃ ಕಳುಹಿಸತಕ್ಕದ್ದು ಮತ್ತು ಸಿವಿಲ್ ನ್ಯಾಯಾಲಯವು, ಈ ಅಧಿನಿಯಮಕ್ಕೆ ತಿದ್ದುಪಡಿಯಾದಂತೆ ಮೂಲ ಅಧಿನಿಯಮದ 54ನೇ ಪ್ರಕರಣದನುಸಾರವಾಗಿ

ಸಂಪದದ ವಿಭಜನೆಯನ್ನು ಮಾಡತಕ್ಕದ್ದು ಅಥವಾ ಅಂಥ ಸಂಪದದ ಪಾಲು ಎಂಬಂತೆ ಪ್ರತ್ಯೇಕಿಸತಕ್ಕದ್ದು.

4. **ನಿರಸನ.** (1) ಈ ಅಧಿನಿಯಮದಲ್ಲಿರುವುದು ಯಾವುದೂ, ಈ ಅಧಿನಿಯಮದ ಪ್ರಾರಂಭದ ಪೂರ್ವದಲ್ಲಿ ಮಾಡಿದ, ಕೈಗೊಳ್ಳಲಾದ, ಪ್ರಪ್ತವಾದ ಅಥವಾ ವಹಿಸಲಾದ ಯಾವುದೇ ಆದೇಶ, ಕೃತ್ಯ, ಹಕ್ಕು ಅಥವಾ ಹೊಣೆಗಾರಿಕೆಗೆ ಬಾಧಕವುಂಟು ಮಾಡತಕ್ಕದ್ದಲ್ಲ.

(2) ಈ ಅಧಿನಿಯಮದ ಪ್ರಾರಂಭದ ಪೂರ್ವದಲ್ಲಿ, ಕಲೆಕ್ಟರರು ಅಥವಾ ಈ ಬಗ್ಗೆ ಕಲೆಕ್ಟರರು ಪ್ರತಿನಿಯೋಜಿಸದ ಆತನ ಯಾವೊಬ್ಬ ಅಧೀನ ಗೆಜೆಟೆಡ್‌ಅಧಿಕಾರಿಯು ಮೂಲ ಅಧಿನಿಯಮದ 54ನೇ ಪ್ರಕರಣದಡಿ ವಿಭಜನೆಯ ಬಗ್ಗೆ ಯಾವುದೇ ಅಂತಿಮ ಆದೇಶವನ್ನು ಹೊರಡಿಸಿರುವಲ್ಲಿ ಮತ್ತು ಯಾವುದೇ ಪ್ರಾಧಿಕಾರ ಅಥವಾ ನ್ಯಾಯಾಲಯ ಅಥವಾ ನ್ಯಾಯಾಧಿಕರಣಕ್ಕೆ,

(i) ಅಂಥ ಪ್ರಾರಂಭದ ತರುವಾಯ ಅಂಥ ಅಂತಿಮ ಆದೇಶದ ವಿರುದ್ಧರಾಗಿ ಯಾವುದೇ ಅಪೀಲನ್ನು ಸಲ್ಲಿಸಿದ್ದಲ್ಲಿ ಅಥವಾ ವ್ಯವಹಾರಣೆಯನ್ನು ಪ್ರಾರಂಭಿಸಿದ್ದಲ್ಲಿ, ಅಥವಾ

(ii) ಅಂಥ ಅಂತಿಮ ಆದೇಶದ ವಿರುದ್ಧವಾಗಿ ಸಲ್ಲಿಸಲಾದ ಯಾವುದೇ ಅಪೀಲು ಅಥವಾ ಪ್ರಾರಂಭಿಸಲಾದ ವ್ಯವಹರಣೆಯು ಅಂಥ ಪ್ರಾರಂಭದಂದು ನ್ಯಾಯ ನಿರ್ಣಯವಾಗಬೇಕಾಗಿರುವಲ್ಲಿ;

ಅಂಥ ಅಪೀಲು ಅಥವಾ ವ್ಯವಹಾರಣೆಯನ್ನು, ಸದರಿ ಉಪಬಂಧಗಳು ಜಾರಿಯಲ್ಲಿರುವುದು ಮುಂದುವರಿದಿದ್ದರೆ ಹೇಗೋ ಹಾಗೆ ಮತ್ತು ಈ ಅಧಿನಿಯಮವು ಅಧಿನಿಯಮಿತವಾಗಿರದಿದ್ದರೆ ಹೇಗೋ ಹಾಗೆ, ಮೂಲ ಅಧಿನಿಯಮದ 54ನೇ ಪ್ರಕರಣದ ಉಪಬಂಧಗಳಿಗನುಸಾರವಾಗಿ ಮುಂದುವರಿಸತಕ್ಕದ್ದು ಅಥವಾ ವಿಲೆ ಮಾಡತಕ್ಕದ್ದು.

## ಉದ್ದೇಶ ಮತ್ತು ಕಾರಣಗಳ ಹೇಳಿಕೆ

ಸಿವಿಲ್ ಪ್ರಕ್ರಿಯಾ ಸಂಹಿತೆಯ 54ನೇ ಪ್ರಕರಣವು ಭೂ ಕಂದಾಯದ ನಿರ್ಧಾರಣೆಗಾಗಿ ಕೃಷಿ ಭೂಮಿಯ ವಿಭಜನೆಗಾಗಿ ಒಂದು ಡಿಕ್ರಿಯನ್ನು ಹೊರಡಿಸಿರುವಲ್ಲಿ, ಅಂಥ ಭೂಮಿಯ ವಿಭಯನೆಯನ್ನು ಕಲೆಕ್ಟರ್ ಅಥವಾ ಯೂರೇ ಗೆಜೆಟೆಡ್ ಅಧೀನ ಅಧಿಕಾರಿಯು ಮಾಡತಕ್ಕದ್ದೆಂದು ಅಗತ್ಯಪಡಿಸುತ್ತದೆ. ಭೂಮಿಯ ವಿಭಜನೆಗೆ ಸಂಬಂಧಿಸಿದಂತೆ ವಿವಿಧ ನ್ಯಾಯಾಲಯಗಳಲ್ಲಿ ಅನೇಕ ಮೊಕದ್ದಮೆಗಳು ಇತ್ಯರ್ಥವಾಗದೇ ಉಳಿದಿವೆ. ಭೂಮಿಗಳ ವಿಭಜನೆಗೆ ಅನುವಾಗುವಂತೆ ಕಮೀಷನರರನ್ನು ನೇಮಕ ಮಾಡಲು ಸಿವಿಲ್ ನ್ಯಾಯಾಲಯಗಳಿಗೆ ಸಾಧ್ಯವಾಗುವಂತೆ ಮಾಡುವ ಸಲುವಾಗಿ 54ನೇ ಪ್ರಕರಣವನ್ನು ತಿದ್ದುಪಡಿ ಮಾಡಲು ಪ್ರಸ್ತಾವಿಸಲಾಗಿದೆ.

ಆದ್ದರಿಂದ ಈ ವಿಧೇಯಕ:

**ಎಂ.ಸಿ. ನಾಣಯ್ಯ**

ಕಾನೂನು ಮತ್ತು ಸಂಸದೀಯ ವ್ಯವಹಾರಗಳು
ಹಾಗೂ ವಾರ್ತಾ ಮತ್ತು ಪ್ರಚಾರ ಸಚಿವರು

**ನಿಂ.ಹು. ಮುತ್ತಲಗೇರಿ**

ಕಾರ್ಯದರ್ಶಿ

**ಅನುಬಂಧ**

ಸಿವಿಲ್ ಪ್ರಕ್ರಿಯ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 1988ರ (1908ರ ಕೇಂದ್ರ ಅಧಿನಿಯಮ 5 ) ಉದ್ಧೃತ ಭಾಗ.

*** *** ***

54. ಸಂಪದದ ವಿಭಜನೆ ಅಥವಾ ಹಿಸ್ಸೆಯ ಪ್ರತ್ಯೇಕೀಕರಣ. ಸರ್ಕಾರಕ್ಕೆ ಕಂದಾಯವನ್ನು ಸಂದಾಯ ಮಾಡುವುದಕ್ಕಾಗಿ ಕಂದಾಯ ನಿರ್ಧಾರಣೆ ಮಾಡಲಾಗಿರುವ ಒಂದು ಅವಿಭಕ್ತ ಸಂಪದವನ್ನು ವಿಭಜಿಸುವುದಕ್ಕಾಗಿ, ಅಥವಾ ಅಂಥ ಸಂಪದದ ಹಿಸ್ಸೆಯನ್ನು ಪ್ರತ್ಯೇಕವಾಗಿ ಸ್ವಾಧೀನಕ್ಕೆ ತೆಗೆದುಕೊಳ್ಳುವುದಕ್ಕಾಗಿ ಡಿಕ್ರಿಯು ಇರುವಲ್ಲಿ, ಅಂಥ ಸಂಪದಗಳ ವಿಭಜನೆಗೆ ಅಥವಾ ಹಿಸ್ಸೆಗಳ ಪ್ರತ್ಯೇಕೀಕರಣಕ್ಕೆ ಸಂಬಂಧಿಸಿದಂತೆ ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನಿಗೆ( ಯಾವುದಾದರೂ ಇದ್ದರೆ) ಅನುಸಾರವಾಗಿ ಕಲೆಕ್ಟರನು ಅಥವಾ ಅವನ ಪರವಾಗಿ ಈ ಬಗ್ಗೆ ಅವನಿಂದ ಪ್ರತಿಯೋಜಿತನಾದ ಯಾವನೇ ರಾಜ ಪತ್ರಿಕೆ ಅಧೀನಾಕಾರಿಯು ಆ ಸಂಪದದ ವಿಭಜನೆಯನ್ನು ಅಥವಾ ಹಿಸ್ಸೆಯ ಪ್ರತ್ಯೇಕೀಕರಣವನ್ನು ಮಾಡತಕ್ಕದು.

*** *** ***

**ಅನುಬಂಧ III**

## ಕರ್ನಾಟಕ ವಿಧಾನಸಭೆ

ಹತ್ತನೆಯ ವಿಧಾನಸಭೆ

(ಎರಡನೆಯ ಅಧಿವೇಶನ)

**ಕರ್ನಾಟಕ ಕಾನೂನು ನೆರವು ಮಂಡಲಿ (ತಿದ್ದುಪಡಿ) ವಿಧೇಯಕ, 1995.**

(1995ರ ವಿಧಾನಸಭಾ ವಿಧೇಯಕ ಸಂಖ್ಯೆ 12)

ಕರ್ನಾಟಕ ಕಾನೂನು ನೆರವು ಮಂಡಲಿ ಅಧಿನಿಯಮ, 1981ನ್ನು ಮತ್ತಷ್ಟು ತಿದ್ದಪಡಿ ಮಾಡುವ ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಕರ್ನಾಟಕ ಕಾನೂನು ನೆರವು ಮಂಡಲಿ ಅಧಿನಿಯಮ, 1981ನ್ನು (1981ರ ಕರ್ನಾಟಕ ಅಧಿನಿಯಮ ಸಂಖ್ಯೆ 32) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ನಲವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ:

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ :** (1) ಈ ಅಧಿನಿಯಮವನ್ನು ಕರ್ನಾಟಕ ಕಾನೂನು ನೆರವು ಮಂಡಲಿ (ತಿದ್ದುಪಡಿ) ಅಧಿನಿಯಮ, 1995 ಎಂದು ಕರೆಯತಕ್ಕದ್ದು.

(2) ಅದು ಕೂಡಲೇ ಜಾರಿಯಲ್ಲಿ ಬರತಕ್ಕದ್ದು.

**2. 31ನೇ ಪ್ರಕರಣದ ತಿದ್ದುಪಡಿ :** ಕರ್ನಾಟಕ ಕಾನೂನು ನೆರವು ಮಂಡಲಿ ಅಧಿನಿಯಮ,1981ರ (1981ರ ಕರ್ನಾಟಕ ಅಧಿನಿಯಮ 32) ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂಬುದಾಗಿ ಉಲ್ಲೇಖಿಸಲಾಗಿದೆ) 31ನೇ ಪ್ರಕರಣದ (2) ನೇ

ಉಪಪ್ರಕರಣದ ತುರವಾಯ, ಈ ಮುಂದಿನ ಉಪ-ಪ್ರಕರಣವನ್ನು ಸೇರಿಸತಕ್ಕಕದ್ದು, ಎಂದರೆ :

"(3) ಈ ಅಧಿನಿಯಮದ ಅಡಿಯಲ್ಲಿ ಪೂರ್ವಾನ್ವಯವಾಗಿ ಪರಿಣಾಮಕಾರಿಯಾಗಬಹುದಾದ ಯಾವುದೇ ವಿನಿಯಮವನ್ನು ಮಾಡಬಹುದು ಮತ್ತು ಯಾವುದೇ ಅಂಥ ವಿನಿಯಮವನ್ನು ಮಾಡಿದಾಗ, ಅಂಥದೊಂದು ವಿನಿಯಮವನ್ನು ಮಾಡಲು ಇದ್ದ ಕಾರಣಗಳನ್ನು ನಿರ್ದಿಷ್ಟಪಡಿಸುವ ಹೇಳಿಕೆಯನ್ನು ವಿನಿಯಮದ ಜೊತೆಯಲ್ಲಿ ರಾಜ್ಯ ವಿಧಾನ ಮಂಡಲದ ಉಭಯ ಸದನಗಳಮುಂದೆ ಮಂಡಿಸತಕ್ಕದ್ದು".

3. **32ನೇ ಪ್ರಕರಣ ತಿದ್ದುಪಡಿ.** ಮೂಲ ಅಧಿನಿಯಮದ 32ನೇ ಪ್ರಕರಣದಲ್ಲಿ,

(i) ಶೀರ್ಷಿಕೆಯಲ್ಲಿ "ನಿಯಮಗಳು ಮತ್ತು ಯೋಜನೆಗಳು" ಎಂಬ ಪದಗಳಿಗೆ "ನಿಯಮಗಳು, ಯೋಜನೆಗಳು ಮತ್ತು ವಿನಿಯಮಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) "ಮತ್ತು 16ನೇ ಪ್ರಕರಣದ ಅಡಿಯಲ್ಲಿ ರೂಪಿಸಲಾದ ಪ್ರತಿಯೊಂದು ಯೋಜನೆ"ಎಂಬ ಪದಗಳು ಮತ್ತು ಅಂಕಿಗಳಿಗೆ 16ನೇ ಪ್ರಕರಣದ ಅಡಿಯಲ್ಲಿ ರೂಪಿಸಲಾದ ಪ್ರತಿಯೊಂದು ಯೋಜನೆ ಮತ್ತು 32ನೇ ಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ವಿನಿಯಮ" ಎಂಬ ಪದಗಳು ಮತ್ತು ಅಂಕಿಗಳನ್ನು ಪ್ರತಿಯೋಜಿಸತಕ್ಕದ್ದು;

(iii) "ನಿಯಮ ಅಥವಾ ಯೋಜನೆ" ಎಂಬ ಪದಗಳು ಬರುವ ಸ್ಥಳಗಳಲ್ಲೆಲ್ಲ "ನಿಯಮ, ಯೋಜನೆ ಅಥವಾ ವಿನಿಯಮ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಅನಿರೀಕ್ಷಿತ ಸನ್ನಿವೇಶಗಳನ್ನು ಎದುರಿಸುವ ಸಲುವಾಗಿ ವಿನಿಯಮಗಳು ಪೂರ್ವಾನ್ವಯವಾಗಿ ಪರಿಣಾಮಕಾರಿಯಾಗುವಂತೆ ಮಾಡಲು ಕರ್ನಾಟಕ ಕಾನೂನು ನೆರವು ಮಂಡಲಿಗೆ ಅಧಿಕಾರ ನೀಡಲು ಕರ್ನಾಟಕ ಕಾನೂನು ನೆರವು ಮಂಡಲಿ ಅಧಿನಿಯಮ, 1981ರ 31ನೇ ಪ್ರಕರಣವನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ

**ಎಂ.ಸಿ. ನಾಣಯ್ಯ**

ಕಾನೂನು ಮತ್ತು ಸಂಸದೀಯ ವ್ಯವಹಾರಗಳು,
ವಾರ್ತೆ ಮತ್ತು ಪ್ರಚಾರ ಸಚಿವರು.

**ನಿಂ.ಹು. ಮುತ್ತಲಗೇರಿ,**

ಕಾರ್ಯದರ್ಶಿ

## ಅನುಬಂಧ

ಕರ್ನಾಟಕ ಕಾನೂನು ನೆರವು ಮಂಡಲಿ ಅಧಿನಿಯಮ,1981ರ ಉದ್ಧೃತ ಭಾಗಗಳು (1981ರ ಕರ್ನಾಟಕ ಅಧಿನಿಯಮ 32)

** ** **

**32. ರಾಜ್ಯ ವಿಧಾನ ಮಂಡಲದ ಮುಂದೆ ನಿಯಮಗಳನ್ನು ಮಂಡಿಸುವುದು.**

30ನೇ ಪ್ರಕರಣದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ನಿಯಮವನ್ನು ಮತ್ತು 16ನೇ ಪ್ರಕರಣದ ಅಡಿಯಲ್ಲಿ ರೂಪಿಸಲಾದ ಪ್ರತಿಯೊಂದು ಯೋಜನೆಯನ್ನು, ಅದನ್ನು ರಚಿಸಿದ ತರುವಾಯ ಆದಷ್ಟು ಬೇಗನೆ, ರಾಜ್ಯ ವಿಧಾನ ಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಅಧಿವೇಶನದಲ್ಲಿರುವಾಗ, ಒಂದು ಅಧಿವೇಶನದಲ್ಲಿ ಅಥವಾ ಎರಡು ಅಥವಾ ಹೆಚ್ಚಿನ ನಿರಂತರ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ, ಮಂಡಿಸತಕ್ಕದ್ದು ಮತ್ತು ಮೇಲೆ ಹೇಳಿದ ಅಧಿವೇಶನಗಳು ಅಥವಾ ನಿರಂತರ ಅಧಿವೇಶನದ ನಿಕಟ ತರುವಾಯದ ಅಧಿವೇಶನದ ಮುಕ್ತಾಯಕ್ಕೆ ಮುಂಚೆ ಆ ನಿಯಮ ಅಥವಾ ಯೋಜನೆಯಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಎರಡು ಸದನಗಳೂ ಒಪ್ಪಿದರೆ ಅಥವಾ ಆ ನಿಯಮವನ್ನು ಅಥವಾ ಯೋಜನೆಯನ್ನು ಮಾಡಕೂಡದೆಂದು ಎರಡು ಸದನಗಳೂ ಒಪ್ಪಿದರೆ, ಆ ನಿಯಮ ಅಥವಾ ಯೋಜನೆಯನ್ನು ಮಾಡಕೂಡದೆಂದು ಎರಡು ಸದನಗಳೂ ಒಪ್ಪಿದರೆ, ಆ ನಿಯಮ ಅಥವಾ ಯೋಜನೆಯನ್ನು ಮಾಡಕೂಡದೆಂದು ಎರಡು ಸದನಗಳೂ ಒಪ್ಪಿದರೆ, ಆ ನಿಯಮ ಅಥವಾ ಯೋಜನೆಯು ಆ ಮಾರ್ಪಾಟನ್ನು ಅಥವಾ ರದ್ದಿಯಾತಿಯನ್ನು ಅಧಿಸೂಚಿಸಿದ ದಿನಾಂಕದಿಂದ ಸಂದರ್ಭಾನುಸಾರ ಅಂಥ ಮಾರ್ಪಾಟಾದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಯಾವುದೇ ಪರಿಣಾಮ ಹೊಂದಿರತಕ್ಕದ್ದಲ್ಲ; ಆದಾಗ್ಯೂ ಅಂಥ ಯಾವುದೇ ಮಾರ್ಪಾಟು ಅಥವಾ ರದ್ದಿಯಾತಿಯು ಆ ನಿಯಮ ಅಥವಾ ಯೋಜನೆಯ ಅಡಿಯಲ್ಲಿ ಈ ಹಿಂದೆ ಮಾಡಿದ ಯಾವುದೇ ಕೃತ್ಯದ ಮಾನ್ಯತೆಗೆ ಭಾದಕವಾಗತಕ್ಕದಲ್ಲ.

ಅನುಬಂಧ - IV

# ಕರ್ನಾಟಕ ವಿಧಾನಸಭೆ

ಹತ್ತನೆಯ ವಿಧಾನಸಭೆ

(ಎರಡನೆಯ ಅಧಿವೇಶನ)

**ಕರ್ನಾಟಕ ರಾಜ್ಯ ಮಹಿಳಾ ಆಯೋಗ ವಿಧೇಯಕ, 1995**

(1995ರ ವಿಧಾನಸಭಾ ವಿಧೇಯಕ ಸಂಖ್ಯೆ 1)

ಮಹಿಳೆಯರಿಗಾಗಿ ಒಂದು ರಾಜ್ಯ ಆಯೋಗವನ್ನು ರಚಿಸಲು ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಆನುಷಂಗಿಕವಾದ ವಿಷಯಗಳಿಗೆ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಮಹಿಳೆಯರಿಗಾಗಿ ಒಂದು ರಾಜ್ಯ ಆಯೋಗವನ್ನು ರಚಿಸುವುದು ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಆನಷಂಗಿರವಾದ ವಿಷಯಗಳಿಗೆ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ ;

ಇದು ಭಾರತ ಗಣರಾಜ್ಯದ ನಲವತ್ತಾರನೆ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ :

ಇದು ಭಾರತ ಗಣರಾಜ್ಯದ ನಲವತ್ತಾರನೆ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಿಲಿ :

## ಅಧ್ಯಾಯ - 1

## ಪ್ರಾರಂಭಿಕ

1. **ಸಂಕ್ಷಿಪ್ತ ಹೆಸರು, ವ್ಯಾಪ್ತಿ ಮತ್ತು ಪ್ರಾರಂಭ,** (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995 ಎಂದು ಕರೆಯತಕ್ಕದ್ದು.

(2) ಇದು ಇಡೀ ಕರ್ನಾಟಕ ರಾಜ್ಯಕ್ಕೆ ಅನ್ವಯವಾಗತಕ್ಕದ್ದು.

(3)ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದಂಥ ದಿನಾಂಕದಿಂದ ಜಾರಿಯಲ್ಲಿ ಬರತಕ್ಕದ್ದು.

2. **ಪರಿಭಾಷೆಗಳು.** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,

(ಎ) "ಆಯೋಗ" ಎಂದರೆ 3ನೇ ಪ್ರಕರಣದ ಅಡಿ ರಚಿಸಲಾದ ಕರ್ನಾಟಕ ರಾಜ್ಯ ಮಹಿಳಾ ಆಯೋಗ;

(ಬಿ) "ಸರ್ಕಾರ" ಎಂದರೆ ಕರ್ನಾಟಕ ಸರ್ಕಾರ;

(ಸಿ) "ಸದಸ್ಯ" ಎಂದರೆ ಆಯೋಗದ ಒಬ್ಬ ಸದಸ್ಯ;

## ಅಧ್ಯಾಯ - II

## ರಾಜ್ಯ ಮಹಿಳಾ ಆಯೋಗ

3. **ಆಯೋಗದ ರಚನೆ.** (1) ಈ ಅಧಿನಿಯಮದ ಪ್ರಾರಂಭದ ತರುವಾಯ ಆದಷ್ಟು ಬೇಗನೆ, ಸರ್ಕಾರವು, ಈ ಅಧಿನಿಯಮದ ಮೂಲಕ ಅಥವಾ ಅದರ ಅಡಿಯಲ್ಲಿ ತನಗೆ ಪ್ರದತ್ತವಾದ ಅಧಿಕಾರಿಗಳನ್ನು ಚಲಾಯಿಸಲು ಮತ್ತು ವಹಿಸಲಾದ ಪ್ರಕಾರ್ಯಗಳನ್ನು ನೆರವೇರಿಸಲು, ಬೆಂಗಳೂರಿನಲ್ಲಿ ಕೇಂದ್ರಸ್ಥಾನವನ್ನು ಹೊಂದಿರುವ ಕರ್ನಾಟಕ ರಾಜ್ಯ ಮಹಿಳಾ ಆಯೋಗ ಎಂದು ಕರೆಯಲಾಗುವ ಒಂದು ನಿಕಾಯವನ್ನು ರಚಿಸತಕ್ಕದ್ದು.

(2) ಆಯೋಗವು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು ಎಂದರೆ,

(ಎ) ಮಹಿಳಾ ಹಿತರಕ್ಷಣೆಗಾಗಿ ತಮ್ಮನ್ನು ಮುಡುಪಿಟ್ಟುಕೊಂಡಿರುವ ಸರ್ಕಾರದಿಂದ ನಾಮ ನಿರ್ದೇಶಿತರಾಗತಕ್ಕ ಒಬ್ಬ ಮಹಿಳಾ ಅಧ್ಯಕ್ಷರು.

(ಬಿ) ಕಾನೂನು ಅಥವಾ ಶಾಸನರಚನೆ, ಕಾರ್ಮಿಕ ಸಂಘವಾದ, ಮಹಿಳೆಯರ ಉದ್ಯೋಗ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕೆ ಇರುವಂಥ ಕೈಗಾರಿಕೆ ಅಥವಾ ಸಂಸ್ಥೆಯ ನಿರ್ವಹಣೆ, ಮಹಿಳಾ ಸ್ವಯಂ ಸೇವಾ ಸಂಸ್ಥೆಗಳ (ಮಹಿಳಾ ಚಟುವಟಿಕೆಗಳೂ ಸೇರಿದಂತೆ) ಆಡಳಿತ, ಆರ್ಥಿಕ ಅಭಿವೃದ್ಧಿ, ಆರೋಗ್ಯ, ಶಿಕ್ಷಣ ಅಥವಾ ಸಮಾಜ ಕಲ್ಯಾಣದಲ್ಲಿ ಅನುಭವವುಳ್ಳ ಸಮರ್ಥ, ಪ್ರಾಮಾಣಿಕ ಮತ್ತು ಗಣ್ಯ ವ್ಯಕ್ತಿಗಳ ಪೈ... ಸರ್ಕಾರವು ನಾಮನಿರ್ದೇಶಿಸತಕ್ಕ ಆರು ಜನ ಸದಸ್ಯರು: ಪರಂತು, ಕನಿ...

ಕ್ರಮವಾಗಿ ಅನುಸೂಚಿತ ಜಾತಿಗಳಿಗೆ ಸೇರಿದ ಒಬ್ಬ ಸದಸ್ಯ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ಒಬ್ಬ ಸದಸ್ಯನಿರತಕ್ಕದ್ದು.

ಮತ್ತು ಪರಂತು, ಈ ಖಂಡದಡಿ ನಾಮನಿರ್ದೇಶಿತರಾಗತಕ್ಕ ಬಹುತೇಕ ಸದಸ್ಯರು ಮಹಿಳೆಯರಾಗಿರತಕ್ಕದ್ದು.

(ಸಿ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ, ಪದನಿಮಿತ್ತ ಸದಸ್ಯ

(ಡಿ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು, ಪದನಿಮಿತ್ತ ಸದಸ್ಯ.

(ಇ) ಡೈರೆಕ್ಟರ್ ಜನರಲ್ ಆಫ್ ಪೊಲೀಸ್ ಅಥವಾ ಅವರು ನಾಮನಿರ್ದೇಶಿಸಿದ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ದರ್ಜೆಗೆ ಕಡಿಮೆಯಿಲ್ಲದ ಹುದ್ದೆಯ ಅಧಿಕಾರಿ, ಮಹಿಳೆಗೆ ಇದರಲ್ಲಿ ಆದ್ಯತೆ . ನೀಡುವುದು ; ಪದನಿಮಿತ್ತ ಸದಸ್ಯ.

(ಎಫ್) ಆಯೋಗದ ಕಾರ್ಯದರ್ಶಿಯು ಸದಸ್ಯ-ಕಾರ್ಯದರ್ಶಿಯಾಗಿರತಕ್ಕದ್ದು.

**4. ಅಧ್ಯಕ್ಷೆ ಮತ್ತು ಸದಸ್ಯರ ಪದಾವಧಿ ಮತ್ತು ಸೇವಾ ಷರತ್ತುಗಳು.** (1) ಅಧ್ಯಕ್ಷೆ ಮತ್ತು ಪ್ರತಿಯೊಬ್ಬ ಸದಸ್ಯನು ಸರ್ಕಾರದ ಇಚ್ಛೆಗೊಳಪಟ್ಟು ಮೂರು ವರ್ಷಗಳಿಗೆ ಮೀರದಂತೆ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಅವಧಿಯವರೆಗೆ ಹುದ್ದೆಯನ್ನು ಹೊಂದಿರತಕ್ಕದ್ದು.

(2) ಅಧ್ಯಕ್ಷೆ ಅಥವಾ ಒಬ್ಬ ಸದಸ್ಯನು, ಪದನಿಮಿತ್ತ ಸದಸ್ಯನನ್ನು ಹೊರತುಪಡಿಸಿ ಅಧ್ಯಕ್ಷೆಯ ಹುದ್ದೆಗೆ ಸಂದರ್ಭಾನುಸಾರವಾಗಿ ಸದಸ್ಯನ ಹುದ್ದೆಗೆ ಸರ್ಕಾರಕ್ಕೆ ಲಿಖಿತದಲ್ಲಿ ತಿಳಿಸುವ ಮೂಲಕ ರಾಜೀನಾಮೆ ನೀಡಬಹುದು.

(3) ಸರ್ಕಾರವು, (1)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಲಾದ ಅಧ್ಯಕ್ಷೆ ಅಥವಾ ಸದಸ್ಯನನ್ನು ಆ ವ್ಯಕ್ತಿಯ,

(ಎ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಬಿ) ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧಿ ಎಂದು ನಿರ್ಣೀತನಾಗಿದ್ದು ಕಾರಾವಾಸದ ಶಿಕ್ಷೆಗೆ ಒಳಗಾಗಿದ್ದರೆ, ಅಥವಾ ;

(ಸಿ) ಅಸ್ವಸ್ಥಚಿತ್ತದವನಾಗಿದ್ದು, ಹಾಗೆಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಡಿ) ಅವನು ಕಾರ್ಯ ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯನಿರ್ವಹಿಸಲು ಅಸಮರ್ಥನಾದರೆ; ಅಥವಾ

(ಇ) ಅವನು ಆಯೋಗದಿಂದ ಗೈರು ಹಾಜರಾಗುವುದಕ್ಕೆ ಅನುಮತಿ ಪಡೆಯದೆ ಆಯೋಗದ ನಿರಂತರ ಮೂರು ಸಭೆಗಳಿಗೆ ಗೈರುಹಾಜರಾದರೆ; ಅಥವಾ

(ಎಫ್) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ಅಧ್ಯಕ್ಷೆ ಅಥವಾ ಸದಸ್ಯನು ತನ್ನ ಸ್ಥಾನವನ್ನು ದುರಪಯೋಗಪಡಿಸಿಕೊಂಡಿದ್ದು ಆವ್ಯಕ್ತಿಯನ್ನು ಆ ಪದದಲ್ಲಿ ಮುಂದುವರೆಸಿದರೆ, ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವುದೆಂದು ಕಂಡುಬಂದರೆ,

ಆ ವ್ಯಕ್ತಿಯನ್ನು ಅಧ್ಯಕ್ಷೆ ಅಥವಾ ಸದಸ್ಯನ ಪದದಿಂದ ತೆಗೆದುಹಾಕತಕ್ಕದ್ದು

ಪರಂತು, ಈ ವಿಷಯಕ್ಕೆ ಸಂಬಂಧಪಟ್ಟಂತೆ ಅಹವಾಲನ್ನು ಹೇಳಿಕೊಳ್ಳಲು ಒಂದು ಸೂಕ್ತ ಅವಕಾಶವನ್ನು ಕೊಟ್ಟಹೊರತು, ಈ ಖಂಡದ ಅಡಿ ಯಾವನೇ ವ್ಯಕ್ತಿಯನ್ನು ತೆಗೆದುಹಾಕತಕ್ಕದ್ದಲ್ಲ.

(4) ಸರ್ಕಾರವು, ರಾಜೀನಾಮೆಯಿಂದ ಅಥವಾ ತೆಗೆದುಹಾಕಿದ್ದರಿಂದ ಉಂಟಾದ ಖಾಲಿ ಸ್ಥಾನವನ್ನು ಹಾಗೆ ರಾಜೀನಾವೆ ನೀಡಿದ ಅಥವಾ ತೆಗೆದುಹಾಕಿದ್ದರಿಂದ ಉಂಟಾದ ಖಾಲಿ ಸ್ಥಾನವನ್ನು ಹಾಗೆ ರಾಜೀನಾಮೆ ನೀಡಿದ ಅಥವಾ ತೆಗೆದುಹಾಕಿದ ಮೂರು ತಿಂಗಳೊಳಗೆ ಹೊಸದಾಗಿ ನಾಮನಿರ್ದೇಶಿಸುವ ಮೂಲಕ ಭರ್ತಿಗೊಳಿಸತಕ್ಕದ್ದು.

(5) ಅಧ್ಯಕ್ಷೆಯ ವೇತನ ಮತ್ತು ಭತ್ಯೆಗಳು ಮತ್ತು ಸದಸ್ಯನಿಗೆ ಸಂದಾಯ ಮಾಡುವ ಭತ್ಯೆಗಳು ಯಾವುದಾದರೂ ಇದ್ದರೆ, ಅವು ಗೊತ್ತುಪಡಿಸಬಹುದಾದಂಥ ರೀತಿಯಲ್ಲಿ ಇರತಕ್ಕದ್ದು.

(6) ಅಧ್ಯಕ್ಷೆಗೆ ಸಂದಾಯ ಮಾಡತಕ್ಕ ವೇತನ ಮತ್ತು ಭತ್ಯೆಗಳು ಹಾಗೂ ಸದಸ್ಯನಿಗೆ ಸಂದಾಯ ಮಾಡತಕ್ಕ ಭತ್ಯೆಗಳನ್ನು 12ನೇ ಪ್ರಕರಣದ (2)ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಲಾದ ಅನುದಾನಗಳಿಂದ ಭರಿಸತಕ್ಕದ್ದು.

**5. ಕಾರ್ಯದರ್ಶಿ.** (1) ಆಯೋಗದ ಕಾರ್ಯದರ್ಶಿಯು ಸರ್ಕಾರದಿಂದ ನೇಮಕ ಮಾಡಲಾದ, ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಗೆ ಕಡಿಮೆಯಲ್ಲದ ಒಬ್ಬ ಅಧಿಕಾರಿಯಾಗಿರತಕ್ಕದ್ದು.

(2) ಕಾರ್ಯದರ್ಶಿಯು, ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂಥ ವೇತನ ಮತ್ತು ಇತರ ಭತ್ಯೆಗಳನ್ನು ಸ್ವೀಕರಿಸತಕ್ಕದ್ದು.

(3) ಸರ್ಕಾರವು ಕಾರ್ಯದರ್ಶಿಗೆ ಕಾಲಕಾಲಕ್ಕೆ ಗೈರುಹಾಜರಿಯ ರಜೆಯನ್ನು ಮಂಜೂರು ಮಾಡಬಹುದು.

(4) ಕಾರ್ಯದರ್ಶಿಯು ಆಯೋಗದ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾಗಿರತಕ್ಕದ್ದು ಮತ್ತು

(ಎ) ಆಯೋಗದ ಅನುದಾನವನ್ನು ನಿರ್ವಹಿಸತಕ್ಕದ್ದು;

(ಬಿ) ಆಯೋಗದ ಲೆಕ್ಕಪತ್ರವನ್ನು ನಿರ್ವಹಿಸುವಂತೆ ಮಾಡತಕ್ಕದ್ದು;

(ಸಿ) ಈ ಅಧಿನಿಯಮದ ಅಥವಾ ತಾತ್ಕಾಲದಲ್ಲಿ ಜಾರಿಯಲ್ಲಿರುವ ಇತರ ಯಾವುದೇ ಕಾನೂನಿನ ಮೂಲಕ ಅಥವಾ ಅದರಡಿ ಅವನಿಗೆ ಪ್ರದತ್ತವಾದಂಥ ಇತರ ಪ್ರಕಾರ್ಯವನ್ನು ನಿರ್ವಹಿಸತಕ್ಕದ್ದು.

**6. ಆಯೋಗದ ಸಿಬ್ಬಂದಿ.** (1) ಸರ್ಕಾರವು, ಆಯೋಗದ ಸೂಕ್ತ ಕಾರ್ಯನಿರ್ವಹಣೆಗೆ ಅಗತ್ಯವಾಗಬಹುದಾದಂಥ ಸಿಬ್ಬಂದಿಯನ್ನು ಆಯೋಗಕ್ಕೆ ಒದಗಿಸತಕ್ಕದ್ದು.

(2) ಕಾರ್ಯದರ್ಶಿ ಹಾಗೂ ಆಯೋಗದ ಇತರ ಅಧಿಕಾರಿಗಳು ಮತ್ತು ಸಿಬ್ಬಂದಿಗೆ ಸಂದಾಯವಾಗತಕ್ಕ ವೇತನ, ಭತ್ಯೆಗಳನ್ನು ಮತ್ತು ನಿವೃತ್ತಿ ವೇತನಗಳೂ ಸೇರಿದಂತೆ ಆಯೋಗದ ಆಡಳಿತ ವೆಚ್ಚಗಳನ್ನು 12ನೇ ಪ್ರಕರಣದ (2) ನೇ ಉಪ-ಪ್ರಕರಣದಲ್ಲಿ ಉಲ್ಲೇಖಿಸಲಾದ ಅನುದಾನಗಳಿಂದ ಭರಿಸತಕ್ಕದ್ದು.

**7. ಆಯೋಗದ ಸಭೆಗಳು.** (1) ಆಯೋಗವು ಅವಶ್ಯಕವಾದಾಗಲೆಲ್ಲಾ ಬೆಂಗಳೂರಿನಲ್ಲಿ ಅಥವಾ ಅಧ್ಯಕ್ಷೆಯು ಸೂಕ್ತವೆಂದು ಭಾವಿಸಬಹುದಾದಂಥ ಇತರ ಸ್ಥಳಗಳಲ್ಲಿ ಸೇರತಕ್ಕದ್ದು;

ಪರಂತು ಆಯೋಗವು ಕನಿಷ್ಠಪಕ್ಷ ಮೂರು ತಿಂಗಳಿಗೊಮ್ಮೆ ಸಭೆ ಸೇರತಕ್ಕದ್ದು.

(2) ಆಯೋಗವು ತನ್ನ ಸ್ವಂತ ಕಾರ್ಯವಿಧಾನವನ್ನು ಮತ್ತು 11ನೇ ಪ್ರಕರಣದಡಿ ನೇಮಕ ಮಾಡಲಾದ ಸಮಿತಿಗಳ ಕಾರ್ಯವಿಧಾನವನ್ನು ಕ್ರಮಬದ್ಧಗೊಳಿಸತಕ್ಕದ್ದು.

(3) ಆಯೋಗದ ಎಲ್ಲ ಆದೇಶಗಳು ಮತ್ತು ನಿರ್ಣಯಗಳನ್ನು ಕಾರ್ಯದರ್ಶಿಯು ಅಥವಾ ಆ ಸಂದರ್ಭದಲ್ಲಿ ಕಾರ್ಯದರ್ಶಿಯು ಸೂಕ್ತವಾಗಿ ಪ್ರಾಧಿಕರಿಸಿದ ಆಯೋಗದ ಇತರ ಅಧಿಕಾರಿಯು ಅಧಿಕೃತಗೊಳಿಸತಕ್ಕದ್ದು.

8. **ರಿಕ್ತತೆ ಇತ್ಯಾದಿಗಳು ಆಯೋಗದ ವ್ಯವಹರಣೆಗಳನ್ನು ಅನೂರ್ಜಿತಗೊಳಿಸತಕ್ಕದಲ್ಲ:** ಆಯೋಗದ ಯಾವುದೇ ಕೃತ್ಯ ಅಥವಾ ವ್ಯವಹರಣೆಗಳನ್ನು ಯಾವುದೇ ರಿಕ್ತತೆ ಅಥವಾ ಆಯೋಗದ ರಚನೆಯಲ್ಲಿನ ದೋಷದ ಕಾರಣ ಮಾತ್ರದಿಂದಲೇ ಪ್ರಶ್ನಿಸತಕ್ಕದ್ದಲ್ಲ ಅಥವಾ ಅನೂರ್ಜಿತಗೊಳಿಸತಕ್ಕದಲ್ಲ.

## ಅಧ್ಯಾಯ - III

## ಆಯೋಗದ ಪ್ರಕಾರ್ಯಗಳು ಮತ್ತು ಅಧಿಕಾರಗಳು

9. **ಆಯೋಗದ ಪ್ರಕಾರ್ಯಗಳು.** (1) ಆಯೋಗವು ಈ ಕೆಳಗಿನ ಎಲ್ಲ ಅಥವಾ ಯಾವುದೇ ಪ್ರಕಾರ್ಯವನ್ನು ನೆರವೇರಿಸತಕ್ಕದ್ದು, ಎಂದರರೆ,

(ಎ) ಸಂವಿಧಾನ ಮತ್ತು ಇತರ ಕಾನೂನುಗಳಡಿ ಮಹಿಳೆಯರಿಗಾಗಿ ಕಲ್ಪಿಸಲಾಗಿರುವ ರಕ್ಷಣೋಪಾಯಗಳಿಗೆ ಸಂಬಂಧಪಟ್ಟ ಎಲ್ಲ ವಿಷಯಗಳ ವಿಚಾರಣೆ ನಡೆಸುವುದು ಮತ್ತು ಪರಿಶೀಲಿಸುವುದು;

(ಬಿ) ಅಂಥ ರಕ್ಷಣೋಪಾಯಗಳ ಕಾರ್ಯರೀತಿಯ ಬಗ್ಗೆ ವರದಿಗಳನ್ನು ವಾರ್ಷಿಕವಾಗಿ ಮತ್ತು ಆಯೋಗವು ಸೂಕ್ತವೆಂದು ಪರಿಗಣಿಸಬಹುದಾದಂಥ ಇತರ ಸಮಯದಲ್ಲಿ ಸರ್ಕಾರಕ್ಕೆ ಸಲ್ಲಿಸುವುದು;

(ಸಿ) ಅಂತಹ ವರದಿಗಳಲ್ಲಿ ಮಹಿಳೆಯರ ಸ್ಥಿತಿಗತಿಗಳನ್ನು ಸುಧಾರಿಸಲು ಸರ್ಕಾರವು ಅಂತಹ ರಕ್ಷಣೋಪಾಯಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರುವ ಬಗ್ಗೆ ಶಿಫಾರಸುಗಳನ್ನು ಮಾಡುವುದು ;

(ಡಿ) ಮಹಿಳೆಯಿರಿಗೆ ಸಂಬಂಧಪಡುವ ಸಂವಿಧಾನದ ಈಗಿರುವ ಉಪಬಂಧಗಳು ಮತ್ತು ಇತರ ಕಾನೂನುಗಳನ್ನು ಕಾಲಕಾಲಕ್ಕೆ ಪುನಃ ಪರಿಶೀಲಿಸುವುದು ಮತ್ತು ಅಂಥ ಶಾಸನಗಳಲ್ಲಿರುವ ಯಾವುದೇ ದೋಷ, ಕೊರತೆ ಅಥವಾ ನ್ಯೂನತೆಗಳನ್ನು ನಿವಾರಿಸಲು ಶಾಸನಾತ್ಮಕ ಪರಿಹಾರೋಪಾಯಗಳನ್ನು ಸೂಚಿಸುವಂಥ ತಿದ್ದುಪಡಿಗಳನ್ನು ಮಾಡಲು ಶಿಫಾರಸುಗಳನ್ನು ಮಾಡುವುದು ;

(ಇ) ಮಹಿಳೆಯರಿಗೆ ಸಂಬಂಧಪಡುವ ಸಂವಿಧಾನದ ಮತ್ತು ಇತರ ಕಾನೂನುಗಳ ಉಪಬಂಧಗಳನ್ನು ಉಲ್ಲಂಘಿಸುವ ಪ್ರಕರಣಗಳನ್ನು ಸಮುಚಿತ ಪ್ರಾಧಿಕಾರದ ಮುಂದೆ ತರುವುದು ;

(ಎಫ್)

(i) ಮಹಿಳಾ ಹಕ್ಕುಗಳನ್ನು ಕಸಿದುಕೊಳ್ಳುವುದಕ್ಕೆ;

(ii) ಮಹಿಳೆಯರಿಗೆ ರಕ್ಷಣೆ ನೀಡಲು ಮತ್ತು ಸಮಾನತೆ ಹಾಗೂ ಅಭಿವೃದ್ಧಿಯ ಉದ್ದೇಶವನ್ನು ಸಹ ಸಾಧಿಸಲು ಅಧಿನಿಯಮಿತಸಲಾದ ಕಾನೂನುಗಳನ್ನು ಕಾರ್ಯಗತಗೊಳಿಸದಿರುವುದಕ್ಕೆ ;

(iii) ಮಹಿಳೆಯರ ತೊಂದರೆಗಳನ್ನು ನಿವಾರಿಸಲು ಮತ್ತು ಅವರಿಗೆ ಕಲ್ಯಾಣವನ್ನು ಸುನಿಶ್ಚಿತೊಳಿಸಲು ಮತ್ತು ಪರಿಹಾರವನ್ನು ಒದಗಿಸಲು ಉದ್ದೇಶಿಸಲಾಗಿರುವ ಕಾರ್ಯನೀತಿಯ ನಿರ್ಧಾರಗಳನ್ನು, ಮಾರ್ಗದರ್ಶಕ ಸೂತ್ರಗಳನ್ನು ಅಥವಾ ಸೂಚನೆಗಳನ್ನು ಪಾಲಿಸದಿರುವುದಕ್ಕೆ ;

ಸಂಬಂಧಪಟ್ಟ ದೂರುಗಳನ್ನು ಪರಿಶೀಲಿಸುವುದು ಮತ್ತು ಆ ವಿಷಯಗಳನ್ನು ತಾನೇ ಗಮನಿಸುವುದು ಮತ್ತು ಅಂತಹ ವಿಷಯಗಳಿಂದ ಉದ್ಭವವಾಗುವ ವಿವಾದಾಂಶಗಳನ್ನು ಯುಕ್ತ ಪ್ರಾಧಿಕಾರಿಗಳಿಗೆ ಒಪ್ಪಿಸುವುದು.

(ಜಿ) ಮಹಿಳೆಯರ ಬಗ್ಗೆ ತೋರುವ ತಾರತಮ್ಯದಿಂದ ಅಥವಾ ಅವರ ಮೇಲೆ ನಡೆಸಲಾಗುವ ದೌರ್ಜನ್ಯಗಳಿಂದ ಉದ್ಭವಿಸುವ ನಿರ್ದಿಷ್ಟ ಸಮಸ್ಯೆಗಳು ಅಥವಾ ಪರಿಸ್ಥಿತಿಗಳ ಬಗ್ಗೆ ವಿಶೇಷ ಅಧ್ಯಯನ ನಡೆಸಲು ಅಥವಾ ವಿಚಾರಣೆ ನಡೆಸಲು ಕರೆ ನೀಡುವುದು ಮತ್ತು ನಿರ್ಬಂಧಗಳನ್ನು ಗುರುತಿಸಿ ಅವುಗಳ ನಿವಾರಣೆಗಾಗಿ ಮಾರ್ಗೋಪಾಯಗಳನ್ನು ಶಿಫಾರಸು ಮಾಡುವುದು ;

(ಹೆಚ್) ಎಲ್ಲಾ ಕ್ಷೇತ್ರಗಳಲ್ಲೂ ಮಹಿಳಾ ಪ್ರಾತಿನಿಧ್ಯವು ಸೂಕ್ತವಾಗಿ ಆಗಿದೆಯೇ ಎನ್ನುವುದನ್ನು ಸುನಿಶ್ಚಿತಗೊಳಿಸುವ ಮಾರ್ಗಗಳನ್ನು ಸೂಚಿಸಲು ಸಾಧ್ಯವಾಗುವಂತೆ ಉತ್ತೇಜನಾತ್ಮಕ ಹಾಗೂ ಶೈಕ್ಷಣಿಕ ಸಂಶೋಧನೆಯನ್ನು ಕೈಗೊಳ್ಳುವುದು ಮತ್ತು ವಸತಿ ಮತ್ತು ಮೂಲಭೂತ ಸೇವೆಗಳಿಂದ ವಂಚಿತರಾಗಿರುವುದು, ಅತಿ ದುಡಿಮೆಯಿಂದಾಗುವ ಶ್ರಮವನ್ನು ಹಾಗೂ ವೃತ್ತಿಪರ ಉತ್ಪಾದಕತೆಯನ್ನು ಹೆಚ್ಚಿಸಲು ಬೆಂಬಲ ಸೇವೆಗಳು ಹಾಗೂ ತಾಂತ್ರಿಕಜ್ಞಾನ ಸಾಕಷ್ಟಿಲ್ಲದಿರುವುದು ಮುಂತಾದ ಅವರ ಅಭಿವೃದ್ಧಿಗೆ ಅಡ್ಡಿಯನ್ನುಂಟು ಮಾಡುವುದಕ್ಕೆ ಕಾರಣವಾದ ಅಂಶಗಳನ್ನು ಗುರುತಿಸುವುದು ;

(ಐ) ಮಹಿಳೆಯರನ್ನು ಖೈದಿಗಳಾಗಿ ಅಥವಾ ಇತರ ರೀತಿಯಲ್ಲಿ ಇಡಲಾದ ಬಂದೀಖಾನೆ, ರಕ್ಷಣಾಗೃಹ, ಮಹಿಳಾ ಸಂಸ್ಥೆಗಳು ಅಥವಾ ಅಭಿರಕ್ಷೆಯ ಇತರ ಸ್ಥಳಗಳನ್ನು ಪರೀಕ್ಷಿಸುವುದು ಅಥವಾ ಪರೀಕ್ಷಿಸುವಂತೆ ಮಾಡುವುದು ಮತ್ತು ಅವಶ್ಯಕವೆಂದು ಕಂಡು ಬಂದಲ್ಲಿ ಪರಿಹಾರ ಕ್ರಮವನ್ನು , ಸಂಬಂಧಪಟ್ಟ ಪ್ರಾಧಿಕಾರಗೊಳೊಂದಿಗೆ ಕೈಗೊಳ್ಳುವುದು ;

(ಜೆ) ಅತ್ಯಧಿಕ ಸಂಖ್ಯೆಯ ಮಹಿಳೆಯರ ಮೇಲೆ ಪರಿಣಾಮವನ್ನುಂಟುಮಾಡುವ ವಿವಾದಾಂಶಗಳನ್ನು ಒಳಗೊಂಡಿರುವ ವಾಜ್ಯಗಳಿಗೆ ಹಣಕಾಸು ನೆರವನ್ನು ಒದಗಿಸುವುದು;

(ಕೆ) ಮಹಿಳೆಯರ ಸಾಮಜಿಕ ಹಾಗೂ ಆರ್ಥಿಕ ಅಭಿವೃದ್ಧಿಯ ಯೋಜನಾ ಪ್ರಕ್ರಿಯೆಗಳಲ್ಲಿ ಭಾಗವಹಿಸುವುದು ಮತ್ತು ಆ ಬಗ್ಗೆ ಸಲಹೆ ನೀಡುವುದು ;

(ಎಲ್) ರಾಜ್ಯದಲ್ಲಿನ ಮಹಿಳೆಯರ ಅಭಿವೃದ್ಧಿಯ ಪ್ರಗತಿಯನ್ನು ಮೌಲ್ಯ ಮಾಪನ ಮಾಡುವುದು ;

(ಎಂ) ಮಹಿಳೆಯರಿಗೆ ಸಂಬಂಧಪಟ್ಟ ಯಾವುದೇ ವಿಷಯ ಮತ್ತು ನಿರ್ದಿಷ್ಟವಾಗಿ ಮಹಿಳೆಯರು ಅನುಭವಿಸುವಂಥ ವಿವಿಧ ತೊಂದರೆಗಳ ಬಗ್ಗೆ ಸರ್ಕಾರಕ್ಕೆ ನಿಯತಕಾಲಿಕವಾಗಿ ವರದಿ ಮಾಡುವುದು ;

(ಎನ್) ತನ್ನ ಪ್ರಕಾರ್ಯಗಳ ನಿರ್ವಹಣೆಯಲ್ಲಿ ಸರ್ಕಾರಿ ಇಲಾಖೆಗಳು ಹಾಗೂ ಅದರ ಏಜೆನ್ಸಿಗಳೊಂದಿಗಷ್ಟೇ ಅಲ್ಲದೆ ರಾಜ್ಯದಲ್ಲಿನ ಸ್ವಯಂ ಸಂಸ್ಥೆಗಳು ಅದರಲ್ಲೂ ಮುಖ್ಯವಾಗಿ ಮಹಿಳಾ ಸಂಸ್ಥೆಗಳೊಂದಿಗೆ ಸಹ ತೊಡಗಿಸಿಕೊಳ್ಳುವುದು . ;

(ಒ) ಕೌಟುಂಬಿಕ ನ್ಯಾಯಾಲಯಗಳ ಮುಂದೆ ಇರುವ ಮಹಿಳೆಯರ ವೈವಾಹಿಕ ವಿವಾದಗಳನ್ನು ಕುರಿತಂತೆ ಸಮಾನವಾಗಿ ಹಾಗೂ ನಿಷ್ಪಕ್ಷಪಾತವಾಗಿ ಸುನಿಶ್ಚಿತಗೊಳಿಸಲು ಮಹಿಳೆಯರಿಗೆ ನೆರವು ನೀಡುವುದು ;

(ಪಿ) ಸರ್ಕಾರವು ಅದಕ್ಕೆ ಉಲ್ಲೇಖಿಸಬಹುದಾದ ಅಂಥ ಇತರ ವಿಷಯಗಳು

ಪರಂತು (1)ನೇ ಉಪ-ಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ವಿಷಯವನ್ನು ರಾಷ್ಟ್ರೀಯ ಮಹಿಳಾ ಆಯೋಗ ಅಧಿನಿಯಮ, 1990ರ (1990ರ ಕೇಂದ್ರ ಅಧಿನಿಯಮ 20)3ನೇ ಪ್ರಕರಣದಡಿ ರಚಿತವಾದ ಕಾಷ್ಟ್ರೀಯ ಮಹಿಳಾ ಆಯೋಗವು ತೆಗೆದುಕೊಂಡಿದ್ದಾರೆ, ರಾಜ್ಯ ಮಹಿಳಾ ಆಯೋಗವು ಅಂಥ ವಿಷಯಗಳಲ್ಲಿ ಅಧಿಕಾರವ್ಯಾಪ್ತಿ ಹೊಂದಿರುವುದು ನಿಂತುಹೋಗತಕ್ಕದ್ದು.

(2) (1)ನೇ ಉಪ-ಪ್ರಕರಣದ (ಇ) ಖಂಡದಲ್ಲಿ ಉಲ್ಲೇಖಿಸಲಾದ ಪ್ರಾಧಿಕಾರಗಳು ಆಯೋಗವು ನೀಡಿದ ಸೂಚನೆಗಳು ಅಥವಾ ಶಿಫಾರಸುಗಳ ಬಗ್ಗೆ ಯಾವುದೇ ಕ್ರಮ ತೆಗೆದುಕೊಳ್ಳಲು ತಪ್ಪಿದರೆ, ಅದನ್ನು ಸರ್ಕಾರಕ್ಕೆ ವರದಿ ಮಾಡತಕ್ಕದ್ದು. ಅದು ಆ ಬಗ್ಗೆ ಅವಶ್ಯಕ ಕ್ರಮ ತೆಗೆದುಕೊಳ್ಳತಕ್ಕದ್ದು.ತ

(3) ಸರ್ಕಾರವು ಆಯೋಗದ ಶಿಫಾರಸುಗಳನ್ನು, ಶಿಫಾರಸುಗಳ ಬಗ್ಗೆ ಕೈಗೊಂಡ ಅಥವಾ ಕೈಗೊಳ್ಳಲು ಉದ್ದೇಶಿಸಿದ ಕ್ರಮವನ್ನು ವಿವರಿಸುವ ಹಾಗೂ ಅಂಥ ಯಾವುದೇ ಶಿಫಾರಸುಗಳನ್ನು ಅಂಗೀಕರಿಸದೆ ಇರುವುದಕ್ಕೆ ಕಾರಣಗಳು ಯಾವುವಾದರೂ ಇದ್ದರೆ ಅವುಗಳನ್ನು ವಿವರಿಸುವ ಜ್ಞಾಪನ ಪತ್ರದೊಂದಿಗೆ ರಾಜ್ಯ ವಿಧಾನ ಮಂಡಲದ ಉಭಯ ಸದನಗಳ ಮುಂದೆ ಮಂಡಿಸುವಂತೆ ಮಾಡತಕ್ಕದ್ದು.

**10. ಆಯೋಗದ ಅಧಿಕಾರಗಳು :** (1) ಆಯೋಗವು, ಈ ಅಧಿನಿಯಮದ ಉದ್ದೇಶಗಳಿಗಾಗಿ ಯಾವುದೇ ವಿಷಯವನ್ನು ತನಿಖೆ ಮಾಡುವಾಗ ಮತ್ತು ನಿರ್ದಿಷ್ಟವಾಗಿ ಈ ಮುಂದಿನ ವಿಷಯಗಳ ಸಂಬಂಧದಲ್ಲಿ, ದಾವೆಯ ವಿಚಾರಣೆ ನಡೆಸುವ ಸಿವಿಲ್ ನ್ಯಾಯಾಲಯವು 1908ರ ಸಿವಿಲ್ ಪ್ರಕ್ರಿಯಾ ಸಂಹಿತೆಯಡಿ (1908ರ ಕೇಂದ್ರ ಅಧಿನಿಯಮ 5 ) ಹೊಂದಿರುವ ಎಲ್ಲ ಅಧಿಕಾರಗಳನ್ನೂ ಹೊಂದಿರತಕ್ಕದ್ದು, ಎಂದರೆ:

(ಎ) ಕರ್ನಾಟಕದ ಯಾವುದೇ ಭಾಗದಿಂದ ಯಾವೊಬ್ಬ ವ್ಯಕ್ತಿಯನ್ನು ಸಮನು ಮಾಡುವುದು ಮತ್ತು ಅವನ ಹಾಜರಾತಿಯನ್ನು ಅಗತ್ಯಪಡಿಸುವುದು ಮತ್ತು ಪ್ರಮಾಣ ಮಾಡಿಸುವ ಮೂಲಕ ಅವನನ್ನು ಪರೀಕ್ಷಿಸುವುದು ;

(ಬಿ) ಯಾವುದೇ ದಸ್ತಾವೇಜನ್ನು ಕಂಡುಹಿಡಿಯುವಂತೆ ಮತ್ತು ಹಾಜರುಪಡಿಸುವಂತೆ ಅವಶ್ಯಪಡಿಸುವುದು :

(ಸಿ) ಅಫಿದಾವಿತ್ತಿನ ಮೂಲಕ ಸಾಕ್ಷ್ಯವನ್ನು ಸ್ವೀಕರಿಸುವುದು ;

(ಡಿ) ಯಾವುದೇ ನ್ಯಾಯಾಲಯ ಅಥವಾ ಸರ್ಕಾರಿ ಕಚೇರಿಯಿಂದ ಯಾವುದೇ ಸರ್ಕಾರಿ ದಾಖಲೆಯನ್ನು ಅಥವಾ ಅದರ ಪ್ರತಿಯನ್ನು ಒದಗಿಸುವಂತೆ ಅಗತ್ಯಪಡಿಸುವುದು;

(ಇ) ನಿಯಮಿಸಬಹುದಾದಂಥ ಇತರ ಯಾವುದೇ ವಿಷಯ.

**11. ಆಯೋಗದ ಸಮಿತಿಗಳು.** (1)ಆಯೋಗವು ಕಾಲಕಾಲಕ್ಕೆ ಕೈಗೊಳ್ಳಬಹುದಾದಂಥ ವಿಶೇಷ ವಿಷಯಗಳ ಬಗ್ಗೆ ವ್ಯವಹರಿಸುವುದಕ್ಕೆ ಅಗತ್ಯವಾಗಬಹುದಾದಂಥ ಸಮಿತಿಗಳನ್ನು ನೇಮಕ ಮಾಡಬಹುದು.

(2) ಆಯೋಗವು, ಸರ್ಕಾರೇತರ ಸಂಸ್ಥೆಗಳ ಅದರಲ್ಲೂ ನಿರ್ದಿಷ್ಟವಾಗಿ ಯಾವುದೇ ಮಹಿಳಾ ಸಂಸ್ಥೆಗಳ ಪ್ರತಿನಿಧಿಗಳನ್ನೂ ಒಳಗೊಂಡಂತೆ ಆಯೋಗದ ಸದಸ್ಯರಲ್ಲದ ತಾನು

ಸೂಕ್ತವೆಂದು ಭಾವಿಸಬಹುದಾದಷ್ಟು ಸಂಖ್ಯೆಯ ವ್ಯಕ್ತಿಗಳನ್ನು (1)ನೇ ಉಪಚ-ಪ್ರಕರಣದ ಮೇರೆಗೆ ನೇಮಕ ಮಾಡಲಾದ ಯಾವುದೇ ಸಮಿತಿಯಗಳಿಗೆ ಸದಸ್ಯರನ್ನಾಗಿ ಸಹ -ಆಯ್ಕೆ ಮಾಡಲು ಅಧಿಕಾರ ಹೊಂದಿರತಕ್ಕದ್ದು ಮತ್ತು ಹಾಗೆ ಸಹ -ಆಯ್ಕೆಗೊಂಡ ವ್ಯಕ್ತಿಗಳು ಸಮಿತಿಯ ಸಭೆಗಳಿಗೆ ಹಾಜರಾಗಲು ಮತ್ತು ಸಭೆಗಳ ವ್ಯವಹರಣೆಗಳಲ್ಲಿ ಭಾಗವಹಿಸಲು ಅಧಿಕಾರ ಹೊಂದಿರತ್ತದ್ದು ಆದರೆ ಮತ ನೀಡುವ ಅಧಿಕಾರ ಹೊಂದಿರತಕ್ಕದ್ದಲ್ಲ.

(3) ಸಹ-ಆಯ್ಕೆಗೊಂಡ ವ್ಯಕ್ತಿಗಳು ಸಮಿತಿಯ ಸಭೆಗಳಿಗೆ ಹಾಜರಾಗಲು ನಿಯಮಿಸಬಹುದಾದಂಥ ಭತ್ಯಗಳನ್ನು ಪಡೆಯಲು ಹಕ್ಕುಳ್ಳವರಾಗಿರತಕ್ಕದ್ದು.

## ಅಧ್ಯಾಯ - IV

## ಹಣಕಾಸು, ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ

**12. ಆಯೋಗದ ಆಯವ್ಯಯ ಮತ್ತು ಸರ್ಕಾರದಿಂದ ಅನುದಾನಗಳು:**

(1)ಆಯೋಗವು, ಮುಂದಿನ ಏಪ್ರಿಲ್ ತಿಂಗಳ ಮೊದಲ ದಿನಂದು ಪ್ರಾರಂಭವಾಗುವ ಹಣಕಾಸು ವರ್ಷಕ್ಕಾಗಿ ಅದರ ಆದಾಯ ಮತ್ತು ವೆಚ್ಚಗಳ ಆಯವ್ಯಯ ಅಂದಾಜನ್ನು ನಿಯಮಿಸಬಹುದಾದ ಅಂಥ ದಿನಾಂಕಕ್ಕೆ ಮೊದಲು ಮತ್ತು ಅಂಥ ನಮೂನೆಯಲ್ಲಿ ಪ್ರತಿವರ್ಷ ತಯಾರಿಸತಕ್ಕದ್ದು ಮತ್ತು ಅದನ್ನು ಸರ್ಕಾರಕ್ಕೆ ಕಳುಹಿಸತಕ್ಕದ್ದು.

(2) ಸರ್ಕಾರವು, ಈ ಬಗ್ಗೆ ಕಾನೂನಿಗನುಸಾರವಾಗಿ, ರಾಜ್ಯ ವಿಧಾನಮಂಡಲವು ಸೂಕ್ತ ಧನವಿನಿಯೋಗ ಮಾಡಿದ ನಂತರ, ಈ ಅಧಿನಿಯಮದ ಉದ್ದೇಶಗಳಿಗಾಗಿ ಬಳಸುವುದಕ್ಕೆ, ಸರ್ಕಾರವು ತಾನು ಸೂಕ್ತವೆಂದು ಭಾವಿಸಬಹುದಾದಂಥ ಹಣದ ಮೊತ್ತಗಳನ್ನು ಅನುದಾನಗಳ ರೂಪದಲ್ಲಿ ಆಯೋಗಕ್ಕೆ ಸಂದಾಯ ಮಾಡತಕ್ಕದ್ದು.

(3) ಆಯೋಗವು ಈ ಅಧಿನಿಯಮದ ಅಡಿಯಲ್ಲಿ ಕರ್ತವ್ಯಗಳ ನಿರ್ವಹಣೆಗಾಗಿ ಅನುದಾನದಿಂದ ಅದು ಸೂಕ್ತವೆಂದು ಭಾವಿಸಬಹುದಾದ ಅಂಥ ಮೊತ್ತವನ್ನು ಬಳಸಬಹುದು ಮತ್ತು ಅಂಥ ಮೊತ್ತವನ್ನು (2)ನೇ ಉಪ ಪ್ರಕರಣದಲ್ಲಿ ಉಲ್ಲೇಖಿಸಿದ ಅನುದಾನಗಳಿಂದ ಸಂದಾಯ ಮಾಡಬಹುದಾದ ವೆಚ್ಚವೆಂಬುದಾಗಿ ಪರಿಗಣಿಸತಕ್ಕದ್ದು.

**13. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ** : (1) ಗೊತ್ತುಪಡಿಸಬಹುದಾದಂಥ ನಮೂನೆಯಲ್ಲಿ ಆಯೋಗದ ಆಯವ್ಯಯಗಳ ಲೆಕ್ಕಪತ್ರವನ್ನು ನಿರ್ವಹಿಸತಕ್ಕದ್ದು.

(2)ಆಯೋಗವು, ಗೊತ್ತುಪಡಿಸಬಹುದಾದಂಥ ನಮೂನೆಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣೆಯನ್ನು ತಯಾರಿಸತಕ್ಕದ್ದು.

(3) ರಾಜ್ಯ ಸರ್ಕಾರವು ನೇಮಿಸಬಹುದಾದಂಥ ಲೆಕ್ಕಪರಿಶೋಧಕನು ಪ್ರತಿವರ್ಷವೂ ಆಯೋಗದ ಲೆಕ್ಕಪತ್ರಗಳ ಲೆಕ್ಕ ಪರಿಶೋಧನೆ ನಡೆಸತಕ್ಕದ್ದು.

(4) ಲೆಕ್ಕಪರಿಶೋಧಕನಿಗೆ, ಲೆಕ್ಕಪರಿಶೋಧನೆಯ ಉದ್ದೇಶಕ್ಕಾಗಿ, ಆಯೋಗದ ಎಲ್ಲ ಲೆಕ್ಕಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ನೋಡಲು ಅವಕಾಶವಿರತಕ್ಕದ್ದು.

(4) ಲೆಕ್ಕಪರಿಶೋಧಕನಿಗೆ, ಲೆಕ್ಕಪರಿಶೋಧನೆಯ ಉದ್ದೇಶಕ್ಕಾಗಿ, ಆಯೋಗದ ಎಲ್ಲ ಲೆಕ್ಕಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ನೋಡಲು ಅವಕಾಶವಿರತಕ್ಕದ್ದು.

(5) ಆಯೋಗವು ಲೆಕ್ಕಪರಿಶೋಧನೆಗಾಗಿ ಗೊತ್ತುಪಡಿಸಬಹುದಾದಂಥ ವೆಚ್ಚವನ್ನು ಅನುದಾನಗಳಿಂದ ಸಂದಾಯ ಮಾಡತಕ್ಕದ್ದು.

(6) ಲೆಕ್ಕಪರಿಶೋಧಕನ ವರದಿಯನ್ನು ಸ್ವೀಕರಿಸಿದ ನಂತರ ಆಯೋಗವು ಆದಷ್ಟು ಬೇಗನೆ, ಸರ್ಕಾರಕ್ಕೆ ಲೆಕ್ಕಪರಿಶೋಧಕನ ವರದಿಯ ಪ್ರತಿಯೊಂದಿಗೆ ವಾರ್ಷಿಕ ಲೆಕ್ಕಪತ್ರಗಳ ವಿವರಣೆಯ ಪ್ರತಿಯನ್ನು ಕಳುಹಿಸತಕ್ಕದ್ದು ಮತ್ತು ಲೆಕ್ಕಪತ್ರಗಳ ವಾರ್ಷಿಕ ವಿವರಣೆಯನ್ನು ಗೊತ್ತುಪಡಿಸಬಹುದಾದ ಅಂಥ ರೀತಿಯಲ್ಲಿ ಪ್ರಕಟಿಸತಕ್ಕದ್ದು.

(7) ಸರ್ಕಾರವು, ಲೆಕ್ಕ ಪರಿಶೋಧಕನ ವರದಿಯನ್ನು ಪರಿಶೀಲಿಸಿದ ನಂತರ ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಆಯೋಗಕ್ಕೆ ನೀಡಬಹುದು ಮತ್ತು ಆಯೋಗವು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

14. **ವಾರ್ಷಿಕವರದಿ.** ಆಯೋಗವು, ಪ್ರತಿಯೊಂದು ಹಣಕಾಸು ವರ್ಷಕ್ಕಾಗಿ ಗೊತ್ತು ಪಡಿಸಬಹುದುದಾಂಥ ನಮೂನೆಯಲ್ಲಿ ಮತ್ತು ಅಂಥ ಸಮಯದಲ್ಲಿ, ಹಿಂದಿನ ಹಣಕಾಸು ವರ್ಷದ ತನ್ನ ಕಾರ್ಯಕಲಾಪಗಳ ಪೂರ್ಣ ವಿವರಗಳನ್ನೊಳಗೊಂಡ ವಾರ್ಷಿಕ ವರದಿಯನ್ನು ತಯಾರಿಸತಕ್ಕದ್ದು ಮತ್ತು ಅದರ ಒಂದು ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು. ಆಯೋಗವು ಸಾರ್ವಜನಿಕ ಮಹತ್ವವುಳ್ಳ ಯಾವುದೇ ವಿಷಯದ ಬಗ್ಗೆ ಕಾಲಕಾಲಕ್ಕೆ ಸರ್ಕಾರಕ್ಕೆ ವಿಶೇಷ ವರದಿಗಳನ್ನು ಕಳುಹಿಸಬಹುದು.

15. **ವಾರ್ಷಿಕ ವರದಿ ಇತ್ಯಾದಿಗಳನ್ನು ವಿಧಾನಮಂಡಲದ ಮುಂದೆ ಮಂಡಿಸುವುದು,**

ಸರ್ಕಾರವು ವಾರ್ಷಿಕ ವರದಿಗಳನ್ನು ಸ್ವೀಕರಿಸಿದ ನಂತರ ಆದಷ್ಟು ಬೇಗನೆ, 9ನೇ ಪ್ರಕರಣದ ಅಡಿಯಲ್ಲಿ ಮಂಡಿಸಲಾದ ವರದಿಯಲ್ಲಿರುವ ಶಿಫಾರಸುಗಳ ಬಗ್ಗೆ ಅವು ರಾಜ್ಯ ಸರ್ಕಾರಕ್ಕೆ ಸಂಬಂಧಪಡುವಷ್ಟರ ಮಟ್ಟಿಗೆ ಕೈಗೊಂಡ ಕ್ರಮದ ಜ್ಞಾಪನದೊಂದಿಗೆ ಮತ್ತು ಯಾವುದಾದರೂ ಶಿಫಾರಸುಗಳನ್ನು ಅಂಗೀಕರಿಸದಿರುವಲ್ಲಿ, ಅದಕ್ಕೆ ಕಾರಣಗಳೇನಾದರೂ ಇದ್ದರೆ ಅದರೊಂದಿಗೆ ವಾರ್ಷಿಕ ವರದಿಯನ್ನು ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

## ಅಧ್ಯಾಯ - V

### ಸಂಕೀರ್ಣ

16. **ಸದ್ಭಾವನೆಯಿಂದ ಮಾಡಲಾದ ಕೃತ್ಯಗಳಿಗೆ ರಕ್ಷಣೆ.** ಆಯೋಗದ ಅಧ್ಯಕ್ಷೆಯ ಅಥವಾ ಅದರ ಯಾವೊಬ್ಬ ಸದಸ್ಯನ ಅಥವಾ ಆಯೋಗದ ನಿರ್ದೇಶನದ ಮೇರೆಗೆ ಕೆಲಸ ಮಾಡುವ ಯಾರೇ ವ್ಯಕ್ತಿಗಳ ವಿರುದ್ಧ ಈ ಅಧಿನಿಯಮದ ಅಥವಾ ಅದರಡಿಯಲ್ಲಿ ಮಾಡಲಾದ ನಿಯಮಗಳ ಅಡಿಯಲ್ಲಿ ಸದ್ಭಾವನೆಯಿಂದ ಮಾಡಲಾದ ಅಥವಾ ಮಾಡಲು ಉದ್ದೇಶಿಸಲಾದ ಯಾವುದರ ಬಗ್ಗೆಯೂ ಯಾವುದೇ ಲೆಕ್ಕ ಪರಿಶೋಧನೆ, ಪ್ರಾಸಿಕ್ಯೂಷನ್ ಅಥವಾ ಇತರ ಕಾನೂನು ವ್ಯವಹಾರಣೆಗಳಿಗೆ ಅವಕಾಶವಿರತಕ್ಕದಲ್ಲ.

17. **ಆಯೋಗದೊಂದಿಗೆ ಸರ್ಕಾರದ ಸಮಾಲೋಚನೆ.** ಸರ್ಕಾರವು ಮಹಿಳೆಯರಿಗೆ ಸಂಬಂಧಿಸಿದಂಥ ಎಲ್ಲಾ ಪ್ರಮುಖ ಕಾರ್ಯನೀತಿ ವಿಷಯಗಳ ಬಗ್ಗೆ ಆಯೋಗದೊಂದಿಗೆ ಸಮಾಲೋಚಿಸತಕ್ಕದ್ದು.

18. **ಅಧ್ಯಕ್ಷೆ ಸದಸ್ಯರು ಮತ್ತು ಆಯೋಗದ ಸಿಬ್ಬಂದಿಯು ಲೋಕ ನೌಕರರಾಗಿರುವುದು.** ಆಯೋಗದ ಅಧ್ಯಕ್ಷೆ ಮತ್ತು ಪ್ರತಿಯೊಬ್ಬ ಸದಸ್ಯ ಮತ್ತು ಈ ಅಧಿನಿಯಮದ ಅಡಿಯಲ್ಲಿ ಕಾರ್ಯನಿರ್ವಹಣೆ ಮಾಡಲು ಆಯೋಗದಿಂದ ನೇಮಕ ಮಾಡಲಾದ ಅಥವಾ ಪ್ರಾಧಿಕೃತಗೊಳಿಸಲಾದ ಪ್ರತಿಯೊಬ್ಬ ಅಧಿಕಾರಿಯು

ಭಾರತ ದಂಡ ಸಂಹಿತೆಯ (1860ರ ಕೇಂದ್ರ ಅಧಿನಿಯಮ 45) 21ನೇ ಪ್ರಕರಣದ ಅರ್ಥವ್ಯಾಪ್ತಿಯೊಳಗೆ ಲೋಕ ನೌರಕರೆಂಬುದಾಗಿ ಭಾವಿಸತಕ್ಕದ್ದು.

19.**ನಿಯಮಗಳ ರಚನಾಧಿಕಾರ.** ಸರ್ಕಾರವು ಸರ್ಕಾರಿ ರಾಜ್ಯಪತ್ರದಲ್ಲಿ ಅಧಿಸೂಚನೆ ಹೊರಡಿಸುವ ಮೂಲಕ, ಈ ಅಧಿನಿಯಮದ ಉದ್ದೇಶಗಳನ್ನು ಕಾರ್ಯಗತಗೊಳಿಸಲು ನಿಯಮಗಳನ್ನು ರಚಿಸಬಹುದು.

(2) ಈ ಅಧಿನಿಯಮದ ಅಡಿಯಲ್ಲಿ ರಚಿಸಲಾದ ಪ್ರತಿಯೊಂದು ನಿಯಮವನ್ನು ಅದನ್ನು ರಚಿಸಲಾದ ತುರವಾಯ ಕೂಡಲೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಒಂದು ಅಧಿವೇಶನ ಅಥವಾ ಎರಡು ಅಥವಾ ಹೆಚ್ಚಿನ ಅಧಿವೇಶನಗಳಲ್ಲಿ ಅಡಕವಾಗಬಹುದಾದ ಮೂವತ್ತು ದಿನಗಳ ಒಟ್ಟು ಅವಧಿಯಲ್ಲಿ ಅದು ಅಧಿವೇಶನದಲ್ಲಿರುವಾಗ ಮಂಡಿಸತಕ್ಕದ್ದು ಮತ್ತು ಅದನ್ನು ಹಾಗೆ ಮಂಡಿಸಿದ ಅಧಿವೇಶನ ಅಥವಾ ನಿಕಟೋತ್ತರ ಅಧಿವೇಶನಗಳು ಮುಕ್ತಾಯವಾಗುವ ಮೊದಲು ವಿಧಾನಮಂಡಲದ ಉಭಯಸದನಗಳೂ ನಿಯಮದಲ್ಲಿ ಯಾವುದೇ ಮಾರ್ಪಾಟನ್ನು ಮಾಡಬೇಕೆಂದು ಒಪ್ಪಿದರೆ ಅಥವಾ ಯಾವುದೇ ನಿಯಮವನ್ನು ಮಾಡಬಾರದೆಂದು ತೀರ್ಮಾನಿಸಿದರೆ ಆ ತರುವಾಯ ಅಂಥ ನಿಯಮವು, ಸಂದರ್ಭಾನುಸಾರ,ಅಂಥ ಮಾರ್ಪಾಟಾದ ರೀತಿಯಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಪರಿಣಾಮಕಾರಿಯಾಗತಕ್ಕದ್ದಲ್ಲ. ಆದಾಗ್ಯೂ, ಅಂಥ ಮಾರ್ಪಾಟು ಅಥವಾ ರದ್ದಿಯಾತಿಯು ಈ ನಿಯಮದ ಅಡಿಯಲ್ಲಿ ಈ ಹಿಂದೆ ಮಾಡಲಾದ ಯಾವುದಾರ ಮಾನ್ಯತೆಗೂ ಪ್ರತಿಕೂಲವಾಗಿರತಕ್ಕದ್ದಲ್ಲ.

20.**ತೊಂದರೆಗಳ ನಿವಾರಣೆಗೆ ಅಧಿಕಾರ.** ಈ ಅಧಿನಿಯಮದ ಉಪಬಂಧಗಳನ್ನು ಪರಿಣಾಮಕಾರಿಯಾಗಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದರೆ, ಸರ್ಕಾರವು,ಸರ್ಕಾರಿ ರಾಜ್ಯಪತ್ರದಲ್ಲಿ ಆದೇಶವನ್ನು ಪ್ರಕಟಿಸುವ ಮೂಲಕ ಅಂಥ ತೊಂದರೆಯನ್ನು ನಿವಾರಿಸುವ ಉದ್ದೇಶಕ್ಕಾಗಿ ಅಗತ್ಯವೆಂದು ಕಂಡುಬರುವ, ಈ ಅಧಿನಿಯಮದ ಉಪಬಂಧಗಳಿಗೆ ಅಸಂಗತವಾಗದ ಯಾವುದೇ ಉಪಬಂಧಗಳನ್ನು ರಚಿಸಬಹುದು :

ಪರಂತು ಈ ಅಧಿನಿಯಮವು ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ನಂತರ ಯಾವುದೇ ಆದೇಶವನ್ನು ಹೊರಡಿಸತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು ಅದನ್ನು ಮಾಡಿದ ತುರವಾಯ ಸಾಧ್ಯವಾದಷ್ಟು ಶೀಘ್ರವಾಗಿ ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ ಮಂಡಿಸಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ವಿವರಣೆ

ಮಹಿಳೆಯರ ಅಭಿವೃದ್ಧಿ ಸಂಬಂಧಿಸಿದ ವಿಷಯಗಳಿಗೆ ಉಪಬಂಧ ಕಲ್ಪಿಸುವುದಕ್ಕಾಗಿ ರಾಷ್ಟ್ರೀಯ ಮಹಿಳಾ ಆಯೋಗ ಒಂದನ್ನು ಭಾರತ ಸರ್ಕಾರವು ರಚಿಸಿದೆ. ಅದು ರಾಷ್ಟ್ರೀಯ ಮಹಿಳಾ ಆಯೋಗ ಅಧಿನಿಯಮ, 1990ನ್ನು (1990ರ ಕೇಂದ್ರಾಧಿನಿಯಮ 20) ಅಧಿನಿಯಮಿತಗೊಳಿಸಿದೆ.

ರಾಷ್ಟ್ರೀಯ ಮಹಿಳಾ ಆಯೋಗದಲ್ಲಿ ಒಳಗೊಂಡಿಲ್ಲದ, ಮಹಿಳೆಯರ ಸರ್ವತೋಮುಖ ಅಭಿವೃದ್ಧಿ ಉದ್ದೇಶಗಳಿಗಾಗಿ, ರಾಜ್ಯದಲ್ಲಿ ಮಹಿಳೆಯರಿಗಾಗಿ ಒಂದು ಆಯೋಗವನ್ನು ರಚಿಸುವುದು ಆವಶ್ಯಕವೆಂದು ಪರಿಗಣಿಸಲಾಯಿತು

ಆದ್ದರಿಂದ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ರಾಜ್ಯದಲ್ಲಿ ಮಹಿಳಾ ಆಯೋಗವನ್ನು ರಚಿಸುವುದು ಈ ವಿಧೇಯಕದ ಉದ್ದೇಶ, ಸದರಿ ಕ್ರಮದಿಂದಾಗಿ ತಗಲುವ ಅಂದಾಜು ಆವರ್ತಕ ಮತ್ತು ಅನಾವರ್ತನ ವೆಚ್ಚವು ಸುಮಾರು 42.00 ಲಕ್ಷರೂ. ಗಳಾಗುತ್ತವೆ.

**ಪ್ರತ್ಯಾಯೋಜಿತ ಶಾಸನರಚನಾಧಿಕಾರದ ಬಗ್ಗೆ ಜ್ಞಾಪನ**

**ಖಂಡ** 4. 4ನೇ ಖಂಡದ (5) ನೇ ಉಪ-ಖಂಡವು, ಆಯೋಗದ ಅಧ್ಯಕ್ಷೆಯ ವೇತನ ಮತ್ತು ಭತ್ಯೆಗಳು ಮತ್ತು ಸದಸ್ಯರಿಗೆ ಸಂದಾಯ ಮಾಡತಕ್ಕ ಭತ್ಯಗಳನ್ನು ನಿಯಮಗಳ ಮೂಲಕ ನಿಯಮಿಸಲು ಸರ್ಕರಕ್ಕೆ ಅಧಿಕಾರ ನೀಡುತ್ತದೆ.

**ಖಂಡ** 5. 5 ನೇ ಖಂಡದ(2)ನೇ ಉಪ-ಖಂಡವು, ಆಯೋಗದ ಕಾರ್ಯದರ್ಶಿಗೆ ಸಂದಾಯ ಮಾಡಬೇಕಾದ ವೇತನ ಮತ್ತು ಭತ್ಯಗಳನ್ನು ನಿರ್ಧರಿಸಲು ಸರ್ಕಾರಕ್ಕೆ ನೀಡುತ್ತದೆ.

**ಖಂಡ** 10. 10ನೇ ಖಂಡದ (ಎಫ್) ಉಪ-ಖಂಡವು, ಆಯೋಗವು ತನಿಖೆ ಮಾಡಬೇಕಾದಂಥ ವಿಷಯಗಳನ್ನು ಅದಕ್ಕೆ ಕಳುಹಿಸಲು ನಿಯಮಗಳನ್ನು ರಚಿಸುವುದಕ್ಕೆ ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ** 11. 11ನೇ ಖಂಡದ (3)ನೇ ಉಪ-ಖಂಡವು, ಆಯೋಗದ ಸಮಿತಿಗಳ ಸಹಆಯ್ಕೆಗೊಂಡ ಸದಸ್ಯರಿಗೆ ಸಂದಾಯ ಮಾಡತಕ್ಕ ಭತ್ಯಗಳ ಬಗ್ಗೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ** 13. 13ನೇ ಖಂಡವು, ಆಯವ್ಯಯಗಳ ಲೆಕ್ಕಪತ್ರಗಳನ್ನು ನಿರ್ವಹಿಸಬೇಕಾದ ನಮೂನೆ, ವಾರ್ಷಿಕ ಲೆಕ್ಕಪತ್ರಗಳ ವಿವರಣೆಯನ್ನು ಸಿದ್ಧಪಡಿಸತಕ್ಕ ನಮೂನೆ, ಲೆಕ್ಕಪತ್ರಗಳ ಲೆಕ್ಕಪರಿಶೋಧನೆಗೆ ಲೆಕ್ಕಪರಿಶೋಧಕನ ನೇಮಕಾತಿ, ಅವನಿಗೆ ಸಂದಾಯ ಮಾಡಬೇಕಾದ ವೆಚ್ಚಗಳು ಮತ್ತು ವಾರ್ಷಿಕ ಲೆಕ್ಕಪತ್ರಗಳ ನಿವಾರಣೆಯನ್ನು ಪ್ರಕಟಿಸತಕ್ಕ ವಿಧಾನದ ಬಗ್ಗೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ** 14. 14ನೇ ಖಂಡವು, ಸರ್ಕಾರಕ್ಕೆ ಕಳುಹಿಸಬೇಕಾದ ವಾರ್ಷಿಕ ವರದಿಯನ್ನು ಸಿದ್ಧಪಡಿಸತಕ್ಕ ನಮೂನೆ ಮತ್ತು ಸಮಯದ ಬಗ್ಗೆ ನಿಯಮಗಳನ್ನು ರಚಿಸಲು ಸರ್ಕಾರಕ್ಕೆ ಅಧಿಕಾರ ನೀಡುತ್ತದೆ.

**ಖಂಡ** 19. 19ನೇ ಖಂಡವು, ಅಧಿನಿಯಮದ ಉಪಬಂಧಗಳನ್ನು ಕಾರ್ಯಗರತಗೊಳಿಸುವ ಉದ್ದೇಶಗಳಿಗಾಗಿ ಸಿಯಮಗಳನ್ನು ರಚಿಸಲು ಅಧಿಕಾರ ನೀಡುತ್ತದೆ.

**ಬಿ.ಟಿ. ಲಲಿತಾ ನಾಯಕ್**

ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ
ಕನ್ನಡ ಮತ್ತು ಸಂಸ್ಕೃತಿ ರಾಜ್ಯ ಸಚಿವೆ.

**ನಿಂ.ಹು. ಮುತ್ತಲಗೇರಿ**

ಕಾರ್ಯದರ್ಶಿ

# ಕರ್ನಾಟಕ ವಿಧಾನಸಭೆ

# KARNATAKA LEGISLATIVE ASSEMBLY

ಗುರುವಾರ ೬ನೇ ಏಪ್ರಿಲ್ ೧೯೯೫, ಸಾಯನ ಸೌರ ಚೈತ್ರ ಶಕ ೧೯೧೭

ಸದನವು ವಿಧಾನ ಸೌಧದಲ್ಲಿರುವ ವಿಧಾನ ಸಭೆಯ ಸಭಾಂಗಣದಲ್ಲಿ

ಬೆಳಿಗ್ಗೆ ೧೧.೦೦ ಗಂಟೆಗೆ ಸಮಾವೇಶಗೊಂಡಿತು.

ಉಪಾಧ್ಯಕ್ಷರು (ಶ್ರೀ ಎಂ.ಎಸ್. ಪಾಟೀಲ್)ರವರು ಪೀಠವನ್ನು ಅಲಂಕರಿಸಿದ್ದರು.

## ಸಂತಾಪ ಸೂಚನೆ

ಉಪಾಧ್ಯಕ್ಷರು : ವಿಧಾನ ಸಭೆಯ ಸದಸ್ಯರಾಗಿದ್ದ ಶ್ರೀ ಎಂ.ಹೆಚ್. ಜಯಪ್ರಕಾಶ್ ನಾರಾಯಣ್ ಅವರು ದಿನಾಂಕ 6-4-1995ರಂದು ನಿಧನರಾದುದನ್ನು ಈ ಸದನಕ್ಕೆ ವಿಷಾಧದಿಂದ ತಿಳಿಸುತ್ತಿದ್ದೇನೆ.

ಶ್ರೀಯುತರು ನಾಲ್ಕು ಹಾಗೂ ಐದನೇ ವಿಧಾನ ಸಭೆಗೆ ಆಯ್ಕೆಯಾಗಿ, ಹತ್ತನೇ ವಿಧಾನ ಸಭೆಗೆ ಯಲಹಂಕ ವಿಧಾನ ಸಭಾಕ್ಷೇತ್ರದಿಂದ ಚುನಾಯಿತರಾಗಿದ್ದರು. ದಲಿತ ಹಾಗೂ ಕಾರ್ಮಿಕರ ಏಳಿಗೆಗಾಗಿ ಶ್ರಮಿಸಿದ್ದವರು. ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯ ಪಾತ್ರವಹಿಸಿದ್ದ ಶ್ರೀಯುತರು ಅನೇಕ ವಿದ್ಯಾಸಂಸ್ಥೆಗಳನ್ನು ಪ್ರಾರಂಭಿಸಿ ಸಮಾಜದ ಕೆಳವರ್ಗದ ಜನರ ಅಭ್ಯುದಯಕ್ಕೆ ಶ್ರಮಿಸಿದ್ದರು.

ಸಮಾಜವಾದದ ಬಗ್ಗೆ ಅಪಾರ ನಂಬಿಕೆ ಹೊಂದಿದ್ದ ಶ್ರೀಯುತರು 'ನಾ ಕಂಡ ಭಾರತೀಯ ಹರಿಜನ ಹಾಗೂ ಅಸ್ಪೃಶ್ಯತೆ ಮತ್ತು ಜಾತಿಯತೆ' ಎಂಬ ಎರಡು ಪುಸ್ತಕಗಳನ್ನು ಬರೆದು ಪ್ರಕಟಿಸಿದ್ದರು.

+ ಶ್ರೀ ಹೆಚ್.ಡಿ. ದೇವೇಗೌಡ (ಮುಖ್ಯಮಂತ್ರಿಗಳ) : ಸನ್ಮಾನ್ಯ ಉಪಾಧ್ಯಕ್ಷರೇ, ಈ ದಿನ ಬೆಳಿಗ್ಗೆ ಸುಮಾರು 7.00 ಗಂಟೆ ಸಮಯದಲ್ಲಿ ಈ ಸದನದ ಗೌರವಾನ್ವಿತ ಸದಸ್ಯರಾದಂಥ ಶ್ರೀ ಎಂ.ಹೆಚ್. ಜಯಪ್ರಕಾಶ್ ನಾರಾಯಣರವರು ನಿಧನ ಹೊಂದಿರತಕ್ಕ ಸುದ್ದಿ ತಿಳಿದು ನನಗೆ ಸಾಕಷ್ಟು ದುಃಖವಾಗಿದೆ ಎನ್ನುವ ಮಾತನ್ನು ಈ ಸಂದರ್ಭದಲ್ಲಿ ಹೇಳಲಿಕ್ಕೆ ಇಚ್ಛೆಪಡುತ್ತೇನೆ. ಸುಮಾರು 10 ವರ್ಷಗಳ ಕಾಲ ನಾವು ಆ ಕಡೆ ಕುಳಿತು ಕೆಲಸ ಮಾಡುತ್ತಿದ್ದೆವು. ಶ್ರೀ ವಾಟಾಳ್ ನಾಗರಾಜ್‌ರವರು ಈ ಸಭೆಯಲ್ಲಿದ್ದಾರೆ, ಸಂಜೀಗೌಡರು ಬಂದಿಲ್ಲ, ನಾವೆಲ್ಲಾ ವಿರೋಧ ಪಕ್ಷದಲ್ಲಿ ಕುಳಿತು ಕೆಲಸ ಮಾಡತಕ್ಕಂಥ ಕಾಲದಲ್ಲಿ ಜಯಪ್ರಕಾಶ್ ನಾರಾಯಣ್‌ರವರು ಉತ್ತರ ಕನ್ನಡ ಜಿಲ್ಲೆಯಿಂದ ಗೆದ್ದು ಬರುತ್ತಿದ್ದರು. ಆ ಮೂಲೆಯಲ್ಲಿ ಕುಳಿತುಕೊಳ್ಳುತ್ತಿದ್ದೆವು. ನನ್ನ ಅನುಭವದಲ್ಲಿ, ಅವರು ಭಾಷಣಕ್ಕೆ ಎದ್ದು ನಿಂತರೆ ಸಮಾಜದಲ್ಲಿ ತುಳಿತಕ್ಕೆ ಸಿಕ್ಕಿರತಕ್ಕಂಥ ದುರ್ಬಲ ವರ್ಗದವರ ಬಗ್ಗೆ ಯಾವಯಾವ ಯೋಜನೆಗಳಿವೆ, ಅವಕ್ಕೆ ಸರ್ಕಾರದ ನಿಯಮಗಳೇನು? ಕೇಂದ್ರ ಸರ್ಕಾರದ ನಿಯಮಗಳೇನು? ರಾಜ್ಯ ಸರ್ಕಾರದ ನಿಯಮಗಳೇನು ಎನ್ನುವ ಎಲ್ಲಾ ನಿಯಮಗಳ ಪ್ರತಿಗಳನ್ನು ಕೈಯಲ್ಲಿ ಹಿಡಿದುಕೊಂಡು ವಾದ ಮಾಡುತ್ತಿದ್ದರು. ಅಷ್ಟೊಂದು ಕಳಕಳಿಯಿತ್ತು ಅವರಿಗೆ. ನಾನು ಅನೇಕ ಸಾರಿ ಅವರನ್ನು ತಮಾಷೆ ಮಾಡುತ್ತಿದ್ದೆ, ನಿಮಗೆ ಈ 18 ಪರ್ಸೆಂಟ್ ಬಿಟ್ಟರೆ ಬೇರೆ ಮಾತನಾಡುವುದಕ್ಕೆ ಬರುವುದಿಲ್ಲವೇ ಎಂದು ನಾನು ಮತ್ತು ವಾಟಾಳ್ ನಾಗರಾಜ್ ಅವರನ್ನು ಗೇಲಿ ಮಾಡುತ್ತಿದ್ದಂಥ ಸನ್ನಿವೇಶ ನೆನಪಿದೆ. ಅವರು ಅಷ್ಟೊಂದು ಕಳಕಳಿಯುಳ್ಳವರು.

ಕೇಂದ್ರ ಸರ್ಕಾರದಿಂದ ಬರತಕ್ಕಂಥ ಹಣ, ರಾಜ್ಯ ಸರ್ಕಾರದವರು ಕೊಡತಕ್ಕಂಥ, ಹಣ ಮತ್ತು ಅದನ್ನು ಹೇಗೆ ಬಳಕೆ ಮಾಡಬೇಕು ಎನ್ನುವಂಥ ನಿಯಮಗಳು ಏನಿವೆ ಅವುಗಳನ್ನೆಲ್ಲಾ ಕ್ರೋಢೀಕರಿಸಿ ಎಳೆಎಳೆಯಾಗಿ ಬಿಡಿಸಿ ಸದನದಲ್ಲಿ ಚರ್ಚೆ ಮಾಡತಕ್ಕಂಥ, ಅತ್ಯಂತ ಪ್ರಾಮಾಣಿಕ ಕಳಕಳ ಹೊಂದಿದ್ದಂಥ ಒಬ್ಬ ವ್ಯಕ್ತಿ ಇವತ್ತು ನಮ್ಮನ್ನು ಅಗಲಿ ಹೋಗಿದ್ದಾರೆ. ನಾನು ಪ್ರಾಮಾಣಿಕವಾಗಿ ಈ ಮಾತನ್ನು ಹೇಳುತ್ತಿದ್ದೇನೆ. ಅವರು ಇತ್ತೀಚೆಗೆ ಅಂದರೆ 3-4 ತಿಂಗಳುಗಳಿಂದ ಈ ಸದನದ ಕಾರ್ಯಕಲಾಪಗಳಲ್ಲಿ ಹೆಚ್ಚು ಭಾಗವಹಿಸಲಿಕ್ಕೆ ಆಗಿಲ್ಲ. ಹತ್ತು ವರ್ಷಗಳ ಹಿಂದೆ ಇದ್ದಂಥ ಸದಸ್ಯರುಗಳು ಈಗಲೂ ಯಾರಾದರೂ ಇದ್ದರೆ ಇದನ್ನು ನೆನಪಿಸಿಕೊಳ್ಳಬಹುದು. ಅವರು ಅಷ್ಟೊಂದು ವಾಗ್ಮಿಗಳು. ಬಡವರ ಬಗ್ಗೆ ಅದರಲ್ಲೂ ಸಮಾಜದಲ್ಲಿ ಅತ್ಯಂತ ದುರ್ಬಲವರ್ಗದವರ ಬಗ್ಗೆ .ತುಳಿತಕ್ಕೆ ಸಿಕ್ಕಿದವರ ಬಗ್ಗೆ ಕಳಕಳಿ ಹೊಂದಿದಂಥ ಪ್ರಾಮಾಣಿಕವಾದ ಸದಸ್ಯರಾಗಿದ್ದಂಥ ವ್ಯಕ್ತಿ ಇವತ್ತುನಮ್ಮನ್ನು ಅಗಲಿ ಹೋಗಿದ್ದಾರೆ. ಅಷ್ಟೇ ಅಲ್ಲ, ಸಾಕಷ್ಟು ವಿದ್ಯಾಸಂಸ್ಥೆಗಳನ್ನು ಕೂಡ ಕಟ್ಟಲಿಕ್ಕೆ ಶಕ್ತಿ ಮೀರಿ ದುಡಿದಿದ್ದಾರೆ. ಬಹುಶಃ ಅವರು ತಮ್ಮ ಆರೋಗ್ಯದ ಕಡೆ ಗಮನ ಕೊಡದೇ, ಸಂಪೂರ್ಣವಾಗಿ ವಿದ್ಯಾ ಸಂಸ್ಥೆಗಳ ಶ್ರೇಯಸ್ಸಿಗೆ ಕೆಲಸ ಮಾಡಿದ್ದೇ ಇವತ್ತು ಇಂಥ ಒಂದು ಅಘಾತಕ್ಕೆ ಕಾರಣವಾಯಿತು ಎಂದು ನಾನು ಭಾವಿಸಿದ್ದೇನೆ. 5 ದಿನಗಳ ಹಿಂದೆ ಅವರು ವಿಧಾನಸೌಧದ ಮುಂಭಾಗದಲ್ಲಿ ಹೋಗುವಾಗ ಹೃದಯವೇದನೆ ಪ್ರಾರಂಭವಾಯಿತು ಎಂದು ಹೇಳಿದರು. ಅವರನ್ನು ಆಸ್ಪತ್ರೆಗೆ ಸೇರಿಸಲಾಗಿತ್ತು. ನಾನು ಆಸ್ಪತ್ರೆಗೆ ಹೋಗಿ ಅಲ್ಲಿನ ವೈದ್ಯರು ಮತ್ತು ಪರಿಣತರನ್ನು ಕರೆಸಿ ಮಾತನಾಡಿದೆ.

ಇಲ್ಲಿ ಟ್ರೀಟ್‌ಮೆಂಟ್ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ ಎಂದರೆ ಅಮೇರಿಕಕ್ಕೆ ಬೇಕಾದರೆ ವಿಶೇಷ ವಿಮಾನದಲ್ಲಿ ಕಳುಹಿಸಿಕೊಡುತ್ತೇನೆ. ಏನಾದರೂ ಪ್ರಯೋಜನ ಆಗುತ್ತದೆಂದರೆ ಬಾಸ್ಟಿನ್‌ಗೆ ಕರೆದುಕೊಂಡು ಹೋಗಿ. ಇದಕ್ಕೆ 10 ಲಕ್ಷ ರೂಪಾಯಿ ಖರ್ಚಾದರೂ ಸರ್ಕಾರ ವ್ಯವಸ್ಥೆ ಮಾಡುತ್ತದೆ ಎಂದು ಹೇಳಿದ್ದೆ. ಆದರೆ ಅವರು ಇರತಕ್ಕಂಥ· ಸನ್ನಿವೇಶದಲ್ಲಿ ಅವರನ್ನು ಎಲ್ಲಿಗೂ ಕರೆದುಕೊಂಡು ಹೋಗುವುದಕ್ಕೆ ಸಾಧ್ಯವಿಲ್ಲ ಎಂದು ವೈದ್ಯರು ಹೇಳಿದರು. ಮದ್ರಾಸಿನ ಅಪೊಲೋ ಆಸ್ಪತ್ರೆಗೆ ಕರೆದುಕೊಂಡು ಹೋಗಿ ಡಾ॥ ಚೆರಿಯನ್‌ರವರಿಂದ ಆಪರೇಷನ್ ಮಾಡಿಸೋಣ ಎನ್ನುವ ಒಂದು ತೀರ್ಮಾನವನ್ನು ನಿನ್ನೆ ರಾತ್ರಿ ತೆಗೆದುಕೊಂಡೆವು. ಆದರೆ ವಿಧಿಯ ಆಟಕ್ಕೆ ನಾವೆಲ್ಲಾ ತಲೆಬಾಗಲೇಬೇಕಾಗುತ್ತದೆ. ಅವರು ಇಂದು ಬೆಳಿಗ್ಗೆ ನಮ್ಮನ್ನು ಅಗಲಿ ಹೋಗಿದ್ದಾರೆ. ಈ ಸಂದರ್ಭದಲ್ಲಿ ಅವರ ಕುಟುಂಬ ವರ್ಗದವರಿಗೆ ಆಗಿರುವಂಥ ದುಃಖವನ್ನು ನಾವು ಔಪಚಾರಿಕವಾದ ಮಾತುಗಳಿಂದ ಶಮನ ಮಾಡುವುದು ಕಷ್ಟ, ಇದು ನಮಗೂ ಗೊತ್ತಿದೆ. ಆದರೂ ಈ ಸಂದರ್ಬದಲ್ಲಿ ಇದನ್ನು ಹೇಳಲಿಕ್ಕೆ ಇಚ್ಛೆಪಡುತ್ತೇನೆ. ದಯಾಮಯನಾದ ಭಗವಂತನು ಅವರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲಿ ಮತ್ತೆ ಅವರ ಕುಟುಂಬದವರಿಗೆ ಈ ಒಂದು ಆಘಾತದಿಂದಾಗಿರತಕ್ಕ ದುಃಖವನ್ನು ಶಮನ ಮಾಡಿಕೊಳ್ಳಲು ಶಕ್ತಿಯನ್ನು ನೀಡಲಿ ಎಂದು ನಾನು ದೇವರಲ್ಲಿ ಪ್ರಾರ್ಥನೆ ಮಾಡಿ ಈ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

+ ಶ್ರೀ ಬಿ.ಎಸ್. ಯಡಿಯೂರಪ್ಪ (ವಿರೋಧ ಪಕ್ಷದ ನಾಯಕರು) : ಸನ್ಮಾನ್ಯ ಉಪಾಧ್ಯಕ್ಷರೆ ನಮ್ಮ ಮಧ್ಯೆ ಇದ್ದಂಥ ಜಯಪ್ರಕಾಶ್ ನಾರಾಯಣ್ ಅವರು ಇವತ್ತು ನಮ್ಮನ್ನು ಅಗಲಿದ್ದಾರೆ ಎನ್ನುವುದನ್ನು ನಂಬುವುದಕ್ಕೆ ಸಾಧ್ಯವಗುತ್ತಿಲ್ಲ. ನಾಲ್ಕಾರು ದಿನಗಳ ಹಿಂದೆ ಅವರು ಮೆಟ್ಟಿಲು ಇಳಿಯಬೇಕಾದರೆ ಜಾರಿ ಬಿದ್ದದ್ದೇ ನೆಪವಾಗಿ ಆಸ್ಪತ್ರೆ ಸೇರಿದಂಥವರನ್ನು ಇವತ್ತು ಈ ರೀತಿ ಅವರನ್ನು ಕಳೆದುಕೊಂಡಿರುವಂಥ ಪರಿಸ್ಥಿತಿ ಬಂದಿದೆ. ಶಿಕ್ಷಣ ಕ್ಷೇತ್ರದಲ್ಲಿ ಅವರ ಸೇವೆ ತುಂಬಾ ಅಮೋಘವಾದುದು. ರಾಜಾಜಿನಗರದ ಇಂಜಿನಿಯರಿಂಗ್ ಕಾಲೇಜನ್ನು ಬೃಹದಾಕಾರವಾಗಿ ಬೆಳೆಸಿ ಸಾವಿರಾರು

ಜನ ದೀನದಲಿತರಿಗೆ ಜ್ಞಾನಜ್ಯೋತಿಯನ್ನು ನೀಡುವಲ್ಲಿ ಅವರು ಯಶಸ್ವಿಯಾಗಿದ್ದರು. ಅಂಬೇಡ್ಕರ್ ಮೆಡಿಕಲ್ ಕಾಲೇಜಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ಅವರ ಜನಪ್ರಿಯತೆ ಎಷ್ಟಿತ್ತೆಂದರೆ ಅವರು ಒಂದು ಬಾರಿ ಸಿರ್ಸಿಯಿಂದ ಶಾಸಕರಾಗಿ ಆಯ್ಕೆಯಾಗಿ ಬಂದಿದ್ದರು. ಮೂರನೇ ಬಾರಿ ಶಾಸಕರಾಗಿ ಸೇವೆ ಸಲ್ಲಿಸುವ ಅವಕಾಶ ಅವರಿಗೆ ಸಿಕ್ಕಿತ್ತು. ಅವನ್ನು ನಾವು ಇಂದು ಕಳೆದುಕೊಂಡಿದ್ದೇವೆ. ಯರನ್ನಾದರೂ ಕೇಳಿ. ಅವರಲ್ಲಿರತಕ್ಕಂಥ ಒಂದು ಉದಾರವಾದ ಗುಣವೆಂದರೆ ಯಾರೇ ತೊಂದರೆಯಲ್ಲಿದ್ದೇವೆ ಎಂದು ಹೇಳಿದರೆ, ಸಹಾಯಬೇಕು ಎಂದು ಕೇಳಿದರೆ ದಾನ ಮಾಡದೆ, ಹಣ ಕೊಡದೆ ವಾಪಸ್ಸು ಕಳುಹಿಸಿದಂಥ ಉದಾಹರಣೆಗಳು ಇಲ್ಲ. ಅವರು ಅಷ್ಟೊಂದು ಉದಾರ ದಾನಿಗಳಾಗಿದ್ದರು. ಸನ್ಮಾನ್ಯ ಸಭಾನಾಯಕರು ಹೇಳಿದಂತೆ ಪರಿಶಿಷ್ಟ ವರ್ಗದ ಜನರ ಅಭಿವೃದ್ಧಿಗೋಸ್ಕರ ಅಹೋರಾತ್ರಿದುಡಿದಂಥ ಒಬ್ಬ ವ್ಯಕ್ತಿಯನ್ನು ನಾವು ಇವತ್ತು ಕಳೆದುಕೊಂಡಿದ್ದೇವೆ. ಒಬ್ಬ ಸದನದ ಸದಸ್ಯರು ಸದನ ನಡೆಯುವಂಥ ಸಂದರ್ಭದಲ್ಲಿ ನಿಧನರಾಗಿದ್ದಾರೆ. ಈ ಸಂದರ್ಭದಲ್ಲಿ, ಬಹುಶಃ ಅಧ್ಯಕ್ಷರು ಈಗಾಗಲೇ ತೀರ್ಮಾನ ತೆಗೆದುಕೊಂಡಿರಬಹುದು. ಎಲ್ಲಾ ಕಾರ್ಯಕಲಾಪಗಳನ್ನು ನಾಳಗೆ ಮುಂದೂಡತಕ್ಕಂಥ ಪದ್ಧತಿ ಹಿಂದಿನಿಂದ ನಡೆದುಕೊಂಡುಬಂದಿದೆ. ಅದನ್ನು ಮಾಡುತ್ತಾರೆ ಎಂದು ಭಾವಿಸಿ. ಅವರ ಆತ್ಮಕ್ಕೆ ಶಾಂತಿಯನ್ನು ಕೋರಿ ಮತ್ತು ಅವರ ಅಗಲಿಕೆಯಿಂದ ಉಂಟಾಗಿರುವ ದುಃಖವನ್ನು ಭರಿಸುಬಂಥ ಶಕ್ತಿಯನ್ನು ಭಗವಂತನು ಅವರ ಕುಟುಂಬದವರಿಗೆ ಕೊಡಲಿ ಎಂದುಹೇಳಿ, ಈ ಸಂತಾಪ ಸೂಚಕ ನಿರ್ಣಯಕ್ಕೆ ನನ್ನ ಸಂಪೂರ್ಣ ಬೆಂಬಲವನ್ನು ಸೂಚಿಸುತ್ತಾ, ನನ್ನ ಮಾತನ್ನು ಮುಗಿಸುತ್ತೇನೆ.

+ ಶ್ರೀ ವಾಟಾಳ್ ನಾಗರಾಜ್ (ಚಾಮರಾಜನಗರ) : ಮಾನ್ಯ ಉಪಾಧ್ಯಕ್ಷರೇ, ಇದು ಅತ್ಯಂತ ನೋವಿನ ಪ್ರಸಂಗ. ನಾನು ಮತ್ತು ಜಯಪ್ರಕಾಶ್ ನಾರಾಯಣರವರು ಅತ್ಯಂತ ಸ್ನೇಹಿತರು. 1987 ರಲ್ಲಿ ನಾವು ಅಲ್ಲಿ ಕುಳಿತುಕೊಳ್ಳುತ್ತಿದ್ದೆವು. ಆಗ ಶ್ರೀಮಾನ್ ದೇವೇಗೌಡರು ವಿರೋಧ ಪಕ್ಷದ ನಾಯಕರಾಗಿದ್ದರು. ಅನೇಕ ಬಾರಿ ಅವರು ಹೇಳಿದ ಮಾತು ಸತ್ಯ. ಹರಿಜನ ಗಿರಿಜನರ ಬಗ್ಗೆ, ದೀನದಲಿತರ ಬಗ್ಗೆ ಸಂಪೂರ್ಣವಾಗಿ ಇಡೀ ಶಾಸನ ಸಭೆಯ ಕಾರ್ಯ ಕಲಾಪದಲ್ಲಿ ಅವರು ತಮ್ಮ ಎಲ್ಲಾ ಸಮಯವನ್ನು ಉಪಯೋಗಿಸುತ್ತಿದ್ದರು. ಸನ್ಮಾನ್ಯ ಸಭಾನಾಯಕರು ಹೇಳಿದ್ದು ನಿಜ. ಅದನ್ನು ನಾನೂ ಜ್ಞಾಪಿಸಿಕೊಳ್ಳುತ್ತೇನೆ. ನಿಮಗೆ ಈ 18 ಪರ್ಸೆಂಟ್ ಬಿಟ್ಟರೆ ಬೇರೆ ಯಾವುದೂ ಇಲ್ಲವೇ ಎಂದು ಅವರನ್ನು ಹಾಸ್ಯ ಮಾಡತಕ್ಕಂಥಾದ್ದು ಒಂದು. ಮತ್ತೊಂದು ಎಂದರೆ, ನಾನು, ನಂಜೇಗೌಡರು, ಪುಟ್ಟದಾಸ್‌ರವರು ಮತ್ತು ಬಂಗಾರಪ್ಪನವರು ಮತ್ತು ಜಯಪ್ರಕಾಶ್ ನಾರಾಯಣರವರು ಎಲ್ಲಾ ಒಟ್ಟಿಗೆ ಕುಳಿತುಕೊಳ್ಳುತ್ತಿದ್ದೆವು. ಮಧ್ಯ ಕಡೂರು ತಮ್ಮಯ್ಯನವರು ಶಾಸಕರಾಗಿದ್ದರು. ಕನ್ನಡದ ಬಗ್ಗೆ, ಕರ್ನಾಟಕದ ಬಗ್ಗೆ ನನ್ನದು ಇದ್ದೇ ಇದೆ. ನಂಜೇಗೌಡರು ನೀರಾವರಿ ಇಲಾಖೆ ಬಗ್ಗೆ. ಹಗಲೂ ರಾತ್ರಿ ಅವರದೇ ಆದಂಥ ವಿಚಾರಗಳನ್ನು ಹೇಳುತ್ತಿದ್ದರು. ಶ್ರೀಮಾನ್ ಪುಟ್ಟದಾಸ್‌ರವರ ಆರೋಗ್ಯ ಇಲಾಖೆ ಬಗ್ಗೆ ಬಹಳ ಸಮರ್ಥವಾಗಿ ಮಾತನಾಡುತ್ತಿದ್ದರು.

ಬಂಗಾರಪ್ಪನವರದು ಸಮಾಜವಾದಿ ಸಿದ್ಧಾಂತ, ಅವರು ಅದರ ಬಗ್ಗೆ ಮಾತನಾಡುತ್ತಿದ್ದರು. ಜಯಪ್ರಕಾಶ್ ನಾರಾಯಣ್‌ರವರು ಹರಿಜನ, ಗಿರಿಜನ, ಹಿಂದುಳಿದವರ ಬಗ್ಗೆ ಬಿಟ್ಟರೆ ಒಂದು ಅಕ್ಷರ ಅತ್ತಇತ್ತ ಹೋಗುತ್ತಿರಲಿಲ್ಲ. ಈ ನಾಲ್ಕೈದು ಜನರ ಮಧ್ಯ ತಮ್ಮಯ್ಯನವರು ಸಿಕ್ಕಿ ಅಧ್ಯಕ್ಷರನ್ನು ಮೊರೆ ಹೋಗಿ, ಸ್ವಾಮಿ ನನಗೆ ಪೀಠ ಬದಲಾವಣೆ ಮಾಡಿಕೊಡಿ, ಇಲ್ಲಿ ಇವರ ಕಷ್ಟ ತಡೆಯುವುದಕ್ಕೆ ಆಗುವುದಿಲ್ಲ ಎಂದು ಹೇಳುತ್ತಿದ್ದರು. ಜಯಪ್ರಕಾಶ್‌ರವರು ಮಾತೆತ್ತಿದರೆ ಹರಿಜನ ಗಿರಿಜನ ಎಂದು ಶುರು ಮಾಡುತ್ತಾರೆ, ವಾಟಾಳ್ ನಾಗರಾಜ್‌ರವರು ಕನ್ನಡ ಎಂದು ಶುರು ಮಾಡುತ್ತಾರೆ, ನಂಜೇಗೌಡರು ನೀರಾವರಿ ಎಂದು ಶುರು ಮಾಡುತ್ತಾರೆ, ಬಂಗಾರಪ್ಪನವರು ಸಮಾಜವಾದ

ಎಂದು ಹೇಳುತ್ತಾರೆ, ಪುಟ್ಟದಾಸ್‌ರವರು ಆರೋಗ್ಯ ಇಲಾಖೆ ಬಗ್ಗೆ ಪ್ರಾರಂಭ ಮಾಡುತ್ತಾರೆ ಎಂದು ಹಾಸ್ಯದ ಹೊನಲನ್ನು ಹರಿಸುತ್ತಿದ್ದರು. ಜಯಪ್ರಕಾಶ್ ನಾರಾಯಣ್‌ರಂಥ ಒಳ್ಳೆಯ ಮೇಧಾವಿಯನ್ನು ನೆನೆಸಿಕೊಳ್ಳುತ್ತೇನೆ. ಜಯಪ್ರಕಾಶ್ ನಾರಾಯಣ್‌ರವರಿ ಬಹಳ ಉತ್ಸಾಹದಲ್ಲಿ ಕೆಲಸ ಮಾಡುತ್ತಿದ್ದರು. ಆದರೆ ಈ ಸಾರಿ ಅವರು ಗೆದ್ದು ಬಂದಾಗ ಅವರನ್ನು ನೋಡಿದೆ, ಆ ಮೊದಲಿನ ಉತ್ಸಾಹ ಇರಲಿಲ್ಲ, ಬಹಳ ಸೊರಗಿಹೋಗಿದ್ದರು.

ಉತ್ಸಾಹ ಎಂದರೆ ಬಹಳ ಅತ್ಯಂತ ಹೆಚ್ಚಿನ ರೀತಿಯಲ್ಲಿ ಇತ್ತು. ಈ ಸುದ್ದಿಯಿಂದ ನಿಜವಾಗಲೂ ನಮಗೆ ಬಹಳ ನೋವಾಗಿದೆ. ಬೆಳಿಗ್ಗೆ ಸುದ್ದಿ ತಿಳಿದ ನಂತರ ನನಗೆ ದಿಗ್ಭ್ರಮೆಯಾಯಿತು. ಸದನವನ್ನು ಮುಂದೂಡುತ್ತಾ ಇದೆ, ಸದಸ್ಯರಾದ ಜಯಪ್ರಕಾಶ್ ನಾರಾಯಣ್‌ನವರು ನಿಧನರಾಗಿದ್ದಾರೆ, ಜೆ.ಪಿ., ಜೆ.ಪಿ. ಅಂತ ಹೇಳಿ ನಾವು ಹಾಸ್ಯವಾಗಿ ಅವರನ್ನು ಕರೆಯುತ್ತಾ ಇದ್ದೆವು. ಅವರದು ಒಳ್ಳೆಯ ವ್ಯಕ್ತಿತ್ವ, ಒಳ್ಳೆಯ ಸ್ನೇಹ. ನಾನು ಈ ಸಂದರ್ಭದಲ್ಲಿ ಅವರ ಆತ್ಮಕ್ಕೆ ಶಾಂತಿ ಕೋರಿ, ಸರ್ಕಾರಕ್ಕೆ ಒಂದು ಸಲಹೆ ನಾನು ಮಾಡುತ್ತೇನೆ. ಅವರು ಅತ್ಯಂತ ಕಷ್ಟದಲ್ಲಿ ಇದ್ದರು. ಆದುದರಿಂದ ಅವರ ಸಂಸಾರಕ್ಕೆ ಕನಿಷ್ಟ ಐದು ಲಕ್ಷ ರೂಪಾಯಿಗಳನ್ನು ಕೊಡಿ ಎಂದು ನಾನು ಹೇಳುತ್ತೇನೆ. ನನ್ನ ವೈಯಕ್ತಿಕವಾಗಿ ನಾನು ಹೇಳುತ್ತೇನೆ, ಕೊಡುವುದು ಬಿಡುವುದು ನಿಮಗೆ ಸೇರಿದ್ದು. ಅವರ ಪರಿಸ್ಥಿತಿ ನನಗೆ ಗೊತ್ತಿದೆ, ಅವರ ಪರಿಸ್ಥಿತಿಯನ್ನು ನೋಡಿದ್ದೇನೆ. ಏನು ಪರಿಸ್ಥಿತಿ ಆಗುತ್ತದೆ ಎನ್ನುವ ಪ್ರಶ್ನೆ ಬೇಡ, ಕೊಡುವುದು ಬಿಡುವುದು ನಿಮಗೆ ಸೇರಿದ್ದು. ನನ್ನ ವೈಯಕ್ತಿಕವಾಗಿ, ಪ್ರಮಾಣಿಕವಾಗಿ ಆ ಮಾತನ್ನು ಹೇಳಬೇಕಾಗಿದೆ. ಅದನ್ನು ನಾನು ಹೇಳುತ್ತಾ ಇದ್ದೇನೆ. ಅದು ನಿಮಗೆ ಸೇರಿದ್ದು. ಏನು ಬೇಕಾದರೂ ಮಾಡಿ. ಏಕೆಂದರೆ ಮುಂದೆ ಅವರ ಹೆಂಡತಿ, ಮಕ್ಕಳ ಜೀವನ ಬೀದಿಗೆ ಹೋಗುವಂತಹ ಪರಿಸ್ಥಿತಿ ಆಗಬಾರದು ಎನ್ನುವುದು ನನ್ನ ಅತ್ಯಂತ ಪ್ರಮಾಣಿಕವಾದಂತಹ ಚಿಂತನೆ. ಇದನ್ನು ಯಾರು ಬೇರೆ ಅರ್ಥಮಾಡಿಕೊಳ್ಳುವಂಥದ್ದು, ಕಲ್ಪನೆ ಮಾಡಿಕೊಳ್ಳುವಂಥದ್ದು ಆಗಬಾರದು. ಆದುದರಿಂದ ನಾನು ಪ್ರಮಾಣಿಕವಾಗಿ ಹೇಳುತ್ತಾ ಇದ್ದೇನೆ. ಇದರ ಜೊತೆಗೆ ಸಕಲ ಸರ್ಕಾರಿ ಗೌರವಗಳೊಡನೆ ಅವರ ಶವ ಸಂಸ್ಕಾರವನ್ನು ನಡೆಸಬೇಕು ಎನ್ನತಕ್ಕಂತಹ ಮಾತನ್ನು ಈ ಸಂದರ್ಭದಲ್ಲಿ ಹೇಳಿ, ಅವರ ಆತ್ಮಕ್ಕೆ ಶಾಂತಿ ದೊರಕಲಿ ಎಂದು ಹೇಳಿ, ತಾವು ತಂದಿರತಕ್ಕಂತಹ ನಿರ್ಣಯವನ್ನು ಬೆಂಬಲಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

+ ಶ್ರೀ ವೈ. ರಾಮಕೃಷ್ಣ (ಅನೇಕಲ್) : ಸನ್ಮಾನ್ಯ ಅಧ್ಯಕ್ಷರೇ, ಇವತ್ತು ಬಹಳ ದುಃಖದ ಸನ್ನಿವೇಶ, ಅದರಲ್ಲೂ ಹರಿಜನ ಸಮಾಜಕ್ಕೆ ಆಗಿರತಕ್ಕಂತಹ ನಷ್ಟ ತುಂಬಲಿಕ್ಕೆ ಆಗುವುದಿಲ್ಲ. ಶ್ರೀ ಜಯಪ್ರಕಾಶ್ ನಾರಾಯಣ್‌ರವರು ಮುಟ್ಟದೆ ಇದ್ದಂತಹ ಸಂಸ್ಥೆ ಯಾವುದೂ ಇಲ್ಲ, ಇಂಜಿನಿಯರಿಂಗ್ ಕಾಲೇಜು ಇರಬಹುದು, ಮೆಡಿಕಲ್ ಕಾಲೇಜ್ ಇರಬಹುದು ಆರಟ್ಸ್ ಕಾಲೇಜು ಇರಬಹುದು. ವಿದ್ಯಾಭ್ಯಾಸಕ್ಕೆ ಅದರಲ್ಲೂ ಹರಿಜನರ ವಿದ್ಯಾಭ್ಯಾಸಕ್ಕೆ ಬಹುಶಃ ತಮ್ಮ ತನು ಮನ ಧನ ಎಲ್ಲವನ್ನೂ ಕೂಡ ಧಾರೆ ಎರೆದಿದ್ದಾರೆ ಎಂದರೆ ತಪ್ಪಾಗುವುದಿಲ್ಲ. ಇದೇ ಕೆಲಸಕ್ಕಾಗಿ ಈ ಸಂಸ್ಥೆಗಳನ್ನು ಕಟ್ಟುವುದು, ಅವುಗಳ ಯೋಗಕ್ಷೇಮ ನೋಡುವುದು ಇದರಲ್ಲೇ ತಮ್ಮ ಆರೋಗ್ಯವನ್ನು ಕಳೆದುಕೊಂಡರು. ನಾನು ಅನೇಕ ಸಲ ಹೇಳುತ್ತಾ ಇದ್ದೆ. ಆರೋಗ್ಯದ ಬಗ್ಗೆ ಗಮನಕೊಡಿ ಎಂದು ಅನೇಕ ಸಾರಿ ಹೇಳುತ್ತಿದ್ದೆ. ಏನು ಆಗುವುದಿಲ್ಲ ಬಿಡಿ ಎಂದು ಹೇಳುತ್ತಿದ್ದರು. ಸ್ವತಃ ಅವರ ಆರೋಗ್ಯವನ್ನು ಹಾಳು ಮಾಡಿಕೊಂಡರು. ಮಾನ್ಯ ಅಧ್ಯಕ್ಷರೇ, ಕಳೆದ ವಾರ ಇದೇ ಸದನಕ್ಕೆ ಅವರು ಎರಡು ಮೂರು ಪ್ರಶ್ನೆಗಳನ್ನು ಕಳುಹಿಸಿ ಕೊಟ್ಟಿದ್ದಾರೆ. ಬಹುಶಃ ಆ ಪ್ರಶ್ನೆಗಳನ್ನು ನೋಡಿದಾಗ ನನಗನ್ನಿಸುತ್ತದೆ, ಇಂತಹ ಅಪರೂಪದ ವ್ಯಕ್ತಿ ಸಿಕ್ಕುವುದು ದುರ್ಲಭ ಎಂದು. ಅವರ ಆರೋಗ್ಯವನ್ನೂ ಲೆಕ್ಕಿಸದೇ ತನ್ನ ಸಮಾಜದ

ಏಳಿಗೆಗಾಗಿ ದುಡಿಯುತ್ತಿದ್ದಂಥವರಲ್ಲಿ ಇವರು ಅಗ್ರಗಣ್ಯರು ಮತ್ತು ಮೊದಲಿಗರು ಎಂದು ಹೇಳಿದರೆ ತಪ್ಪಾಗಲಾರದು. ನಾವು ನಿಜವಾಗಲೂ ಕೂಡ ಇವತ್ತು ಒಬ್ಬ ಯೋಧನನ್ನು ಸಮಾಜ ಕಳೆದುಕೊಂಡಿದ್ದೇವೆ. ಭಗವಂತ ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೊಡಲಿ ಎಂದು ಕೇಳಿಕೊಂಡು ತಮಗೆ ವಂದಿಸಿ ನನ್ನ ಭಾಷಣವನ್ನು ಮುಗಿಸುತ್ತೇನೆ.

+ ಶ್ರೀ ಟಿ.ಬಿ. ಜಯಚಂದ್ರ (ಕಳ್ಳಂಬೆಳ್ಳ) : ಸನ್ಮಾನ್ಯ ಅಧ್ಯಕ್ಷರೇ, ಇವತ್ತು ತಾವು ಮಂಡಿಸಿರತಕ್ಕಂತಹ ನಿರ್ಣಯಕ್ಕೆ ನಾನೂ ಧ್ವನಿಗೂಡಿಸುವುದಕ್ಕೆ ಇಚ್ಛೆಪಡುತ್ತೇನೆ. ಈಗಾಗಲೇ ಸಭಾ ನಾಯಕರು ಅವರು ಮಾಡಿರತಕ್ಕಂತಹ ಸೇವೆಗಳ ಬಗ್ಗೆ ಮುಕ್ತಕಂಠದಿಂದ ಹೊಗಳಿಕೆಯ ಮಾತುಗಳನ್ನು ಆಡಿದ್ದಾರೆ. ಅವರು ನಾಲ್ಕು, ಐದನೇ ವಿಧಾನಸಭೆಯಲ್ಲಿ ಸದಸ್ಯರಾಗಿದ್ದರು. ಆಗ ಅವರು ನನಗೆ ಹೆಚ್ಚು ಪರಿಚಯ ಇರಲಿಲ್ಲ. ಆರನೇ ವಿಧಾನಸಭೆಯಲ್ಲಿ ನಾನು ಇರತಕ್ಕಂತಹ ಸಂದರ್ಭದಲ್ಲಿ ಅವರು ಯಾವಾಗಲೂ ಕೂಡ ಬಹಳ ಹತ್ತಿರದಿಂದ ನನ್ನನ್ನು ಕಾಣುತ್ತಾ ಇದ್ದರು, ನಮ್ಮ ಜೊತೆ ಬರುತ್ತಾ ಇದ್ದರು. ನಾನು ಇಲ್ಲಿ ಕುಳಿತಿರುವಾಗ ಶ್ರೀ ಸಿ.ಎಂ. ಆರ್ಮುಗಂರವರು ಕೂಡ ಆರನೇ ವಿಧಾನಸಭೆಯ ಸದಸ್ಯರಾಗಿದ್ದರು. ಆಗ ನಮ್ಮ ಹತ್ತಿರ ವಿಚಾರಗಳನ್ನು ಮಾಡಿ ಹರಿಜನ ಗಿರಿಜನರಿಗೆ ಶಾಶ್ವತವಾಗಿ ಸಹಾಯ ಆಗುವಂಥ ವಿದ್ಯಾಸಂಸ್ಥೆಗಳನ್ನು ಮಾಡಬೇಕು ಎನ್ನತಕ್ಕಂಥ ಸಂಕಲ್ಪವನ್ನು ಏನು ಇಟ್ಟುಕೊಂಡಿದ್ದರು, ಈಗ ಬಹುಶಃ ಅದರ ವಿವರಣೆಯನ್ನು ಕೊಡುತ್ತಾ ಹೋದರೆ ಗಂಟೆಗಟ್ಟಲೆ ಕೊಡಬೇಕಾಗುತ್ತದೆ. ಅವರು ಬಹಳ ಕಾಳಜಿಯನ್ನು ವಹಿಸುತ್ತಾ ಇದ್ದರು, ಅಂದಿನ ಮುಖ್ಯ ಮಂತ್ರಿಗಳಾಗಿದ್ದಂತಹ ದಿವಂಗತ ಶ್ರೀ ಆರ್. ಗುಂಡುರಾವ್‌ರವರಿಗೆ ಬಹಳ ಹತ್ತಿರವಾಗಿ ಇದ್ದವರು ಎನ್ನುವ ಕಾರಣದಿಂದಾಗಿ ನಮ್ಮ ಹತ್ತಿರ ಬಂದು ನಮ್ಮ ಮನಸ್ಸನ್ನು ಒಲಿಸತಕ್ಕಂತಹ, ಗುಂಡುರಾವ್ ಅವರ ಹತ್ತಿರ ಇದ್ದಂಥ ಎಲ್ಲ ಶಾಸಕರನ್ನೂ ಕೂಡ ಮನಸ್ಸು ಒಲಿಸಿ ಅವರ ಹತ್ತಿರ ಕರೆದುಕೊಂಡು ಇವತ್ತು ಅಂಬೇಡ್ಕರ್‌ರವರ ಹೆಸರಿನಲ್ಲಿ ಒಂದು ಕೆಲಸ ಆಗಬೇಕು ಎನ್ನತಕ್ಕಂತಹ ತೀರ್ಮಾನ ಮಾಡಿಸುವ ಮಟ್ಟಕ್ಕೆ ನಮ್ಮ ಮೇಲೆ ಒತ್ತಾಯ ತರುತ್ತಾ ಇದ್ದರು.

ಆದರೆ ಬಂದು ನಮ್ಮನ್ನು ಕೇಳುತ್ತಾ ಇದ್ದಂತಹ ರೀತಿ ನೀತಿ, ಮತ್ತು ನಮಗೆ ಪ್ರೋತ್ಸಾಹ ಕೊಡತಕ್ಕಂಥ ಮತ್ತು ನಮ್ಮನ್ನು ಅನುಸರಿಸುತ್ತಾ ಇರತಕ್ಕಂಥ ಮಾರ್ಗವನ್ನು ನೋಡಿದಾಗ ನಿಜವಾಗಲೂ ಕೂಡ ಸಂತೋಷವಾಗುತ್ತದೆ. ಅಂದು ಅವರು ಮಾಜಿ ಶಾಸಕರು ಆಗಿದ್ದರು. ಅದರಲ್ಲಿ ಕೂಡ ಅವರು ಸಮಾಜದ ಬಗ್ಗೆ ಹೊಂದಿದ್ದು ಕಳಕಳಿ ಎಷ್ಟು ಎಂದು ಹೇಳುವುದಕ್ಕೆ ಆಗದೇ ಇರತಕ್ಕಂಥ ಮಟ್ಟಕ್ಕೆ ಅವರು ಕೆಲಸವನ್ನು ಮಾಡಿದ್ದರು. ನಾನು ಈ ಸಂದರ್ಭದಲ್ಲಿ ಒಂದು ಸಲಹೆ ಕೊಡತಕ್ಕಂಥದ್ದು ಯಾರೇ ಆಗಲಿ ರಾಜಕೀಯ ಜೀವನದಲ್ಲಿ ಮಾಡಿರತಕ್ಕ ಸೇವೆಗೂ ಇವರು ಮಾಡಿರತಕ್ಕಂತಹ ಸೇವೆಗಳನ್ನೂ ನೋಡಿದಾಗ ಬಹಳಷ್ಟು ಅಂತರವನ್ನು ಕಾಣುವುದಕ್ಕೆ ಸಾಧ್ಯ. ಇವತ್ತು ಸಮಾಜಕ್ಕೆ ಶಾಶ್ವತವಾದಂತಹ ಕೆಲಸಗಳನ್ನು ಮಾಡಿದ್ದಾರೆ.

ಅದಕ್ಕೆ ಅವರು ಅನುಸರಿಸತಕ್ಕ ಮಾರ್ಗ ಏನಿದೆ ಮತ್ತು ಅವರು ನಡೆದುಕೊಂಡ ದಾರಿ ಏನಿದೆ ಅವರ ದಾರಿಯಲ್ಲಿ ನಾವು ಹೋಗಬೇಕು ಎನ್ನುವ ಮಟ್ಟಕ್ಕೆ ಅವರು ನಡೆದುಕೊಂಡಿದ್ದಾರೆ. ಸಾರ್ವಜನಿಕ ಜೀವನದಲ್ಲಿ ಅವರ ಹೆಸರು ಶಾಶ್ವತವಾಗಿ ಈ ರಾಜ್ಯದಲ್ಲಿ ಉಳಿಯಬೇಕು, ಒಂದು ತೀರ್ಮಾನವನ್ನು ಮಾಡತಕ್ಕಂಥದ್ದನ್ನು ಮಾನ್ಯ ಮುಖ್ಯ ಮಂತ್ರಿಗಳಿಗೆ ಬಿಡೋಣ. ಅವರ ಹೆಸರು ಶಾಶ್ವತವಾಗಿ ಉಳಿಯು[illegible] ದೃಷ್ಟಿಯಲ್ಲಿ ಯಾವುದಾದರೂ ಒಂದು ಕಾರ್ಯಕ್ರಮವನ್ನು ಹಾಕಿಕೊಳ್ಳಬೇಕು. ಇ[illegible] ವೈಯಕ್ತಿಕವಾಗಿ ಅವರ ಸಂಸಾರದ ಬಗ್ಗೆ ಕೂಡ ನಾನು ಬಲ್ಲೆ. ಇವತ್ತು ತ[illegible] ಮುಖಾಂತರ ಒಂದು ಸಲಹೆಯನ್ನು ಕೊಡುತ್ತೇನೆ. ಇವತ್ತು ಅವರ ಕುಟು[illegible] ಪರಿಸ್ಥಿತಿ ಏನು ಇದೆ, ಅವರ ಮಕ್ಕಳು ಯಾವ ತರಹದ ಪರಿಸ್ಥಿತಿಯ[illegible]

ಎಂದು ಅವರನ್ನೇ ಕರೆದು ಅವರ ಬಗ್ಗೆ ವಿಚಾರಮಾಡಿ, ಚಿಂತನೆ ಮಾಡಿ, ಯಾವ ರೀತಿಯಾದಂತಹ ಸಹಾಯ ಮಾಡಬಹುದು ಎನ್ನತಕ್ಕಂಥದರ ಬಗ್ಗೆ ಚಿಂತನೆ ಮಾಡಬೇಕು ಎಂದು ಈ ಸಂದರ್ಭದಲ್ಲಿ ಹೇಳಿ ಇವತ್ತು ಅವರ ಆಗಲಿಕೆಯಿಂದ ನಮಗೂ ಕೂಡ ತುಂಬಲಾದಷ್ಟು ನೋವು ಆಗಿದೆ ಎನ್ನತಕ್ಕಂತಹ ಮಾತನ್ನು ಹೇಳಿ ತಾವು ತಂದಿರತಕ್ಕ ನಿರ್ಣಯಕ್ಕೆ ನಾನು ಕೂಡ ಧ್ವನಿಗೂಡಿಸುವುದರ ಜೊತೆಗೆ ಇವತ್ತು ಅವರ ಆಗಲಿಕೆಯಿಂದ ಆಗಿರತಕ್ಕಂತಹ ನೋವು ಏನು ಇದೆ ಆ ದುಃಖವನ್ನು ಭರಿಸತಕ್ಕಂತಹ ಶಕ್ತಿಯನ್ನು ದಯಾಮಯನಾದ ಪರಮಾತ್ಮನು ಅವರ ಕುಟುಂಬಕ್ಕೆ ಕೊಡಲಿ ಎಂದು ಹೇಳಿ ನನ್ನ ಭಾಷಣವನ್ನು ಮುಗಿಸುತ್ತೇನೆ.

+ ಶ್ರೀ ವಿ.ಎಸ್. ಕೌಜಲಗಿ (ಅರಭಾವಿ) : ಸನ್ಮಾನ್ಯ ಅಧ್ಯಕ್ಷರೇ, ಇವತ್ತು ಸದನಕ್ಕೆ ಬಂದ ನಂತರ ಜೆ.ಪಿ. ನಾರಾಯಣ್‌ರವರ ನಿಧನದ ವಾರ್ತೆಯನ್ನು ಕೇಳಿ ನಿಜವಾಗಲೂ ಮನಸ್ಸಿಗೆ ಬಹಳ ನೋವಾಯಿತು. ಅವರಲ್ಲಿದ್ದಂತಹ ಒಂದು ಗುಣವನ್ನು ನಾನು ಕಂಡಿದ್ದೆ. ಅಂದರೆ ಹರಿಜನರ ಉದ್ಧಾರವಾಗಲಿಕ್ಕೆ ಕೇವಲ ನಾವು ಶಾಸನಗಳನ್ನು ರಚನೆ ಮಾಡಿ ಅವುಗಳನ್ನು ಕಾರ್ಯರೂಪದಲ್ಲಿ ತರುವುದರಲ್ಲಿ ವಿಳಂಬವಾಗುವುದರಿಂದ ಅವರ ಏಳಿಗೆ ಆಗುವುದಿಲ್ಲ, ಅವರಿಗೆ ವಿದ್ಯೆಯೇ ಬಾಳಿನ ಬೆಳಕು ಎನ್ನುವ ಮಾರ್ಗವನ್ನು ತೋರಿಸುವ ಸಲುವಾಗಿ ಸಂಘಸಂಸ್ಥೆಗಳನ್ನು ನಿರ್ಮಾಣಮಾಡಿ ಅವರಲ್ಲಿರತಕ್ಕಂತಹ ಅಜ್ಞಾನವನ್ನು ಹೋಗಲಾಡಿಸಿ ಅವರನ್ನು ಮುಂದಕ್ಕೆ ತರಬೇಕು ಅನ್ನುವುದರಲ್ಲಿ ಬಹಳ ಪ್ರಯತ್ನ ಮಾಡಿ ಮತ್ತು ದಿಟ್ಟ ಮಾತನ್ನು ನನಗೆ ಎಷ್ಟೊ ಸಲ ಹೇಳುತ್ತಾ ಇದ್ದರು. ಕೌಜಲಗಿಯವರೇ ನೀವೆಲ್ಲ ನಮಗೆ ಸಹಾಯ ಮಾಡಬೇಕು ಎನ್ನುವ ಒಂದು ನನ್ನ ಮೇಲೆ ಒತ್ತಡ ತರುತ್ತಿದ್ದರು. ಸರ್ಕಾರದಲ್ಲಿ ಕೆಲಸಗಳನ್ನು ಮಾಡಿಕೊಂಡು ಹೋಗುವ ಸಲುವಾಗಿ ಒತ್ತಡ ತಂದು ಕೆಲಸ ಮಾಡಿಸುವಂಥ ಒಬ್ಬ ಅಭಿಮಾನದ ವ್ಯಕ್ತಿ ಇವತ್ತು ನಮ್ಮ ಮಧ್ಯೆಯಿಲ್ಲ. ಸುಮಾರು ವರ್ಷಗಳಿಂದ ಅವರ ಸಂಗಡ ನಾನು ಇದ್ದಾಗ ಏನೋ ಅವರು ಅಂಬೇಡ್ಕರ್ ಮೆಡಿಕಲ್ ಕಾಲೇಜು, ಇಂಜಿನಿಯರಿಂಗ್ ಕಾಲೇಜುಗಳನ್ನು ತೆರೆದು ಉಳಿದವರ ಹಾಗೆ ತಮ್ಮ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಬಹುದಾಗಿತ್ತು. ಆದರೆ ಆ ರೀತಿ ಮಾಡದೇ ಹರಿಜನರ ಉದ್ಧಾರಕ್ಕಾಗಿ ತಮ್ಮ ಆರೋಗ್ಯವನ್ನು ಸಹಿತ ಗಣನೆಗೆ ತೆಗೆದುಕೊಳ್ಳದೇ ಕೆಲಸ ಮಾಡುತ್ತಾ ಇದ್ದರು.

ಈ ಸಲ ಚುನಾವಣೆಯಲ್ಲಿ ಆಯ್ಕೆಯಾಗಿ ಬಂದಾಗ ನಾನು ಕೇಳಿದೆ ಏಕೆ ಜೆ.ಪಿ.ಯವರೇ ತಮ್ಮ ಆರೋಗ್ಯ ಇಷ್ಟು ಕೆಟ್ಟಿದೆ ಎಂದು, ಏಕೆಂದರೆ ಬಹಳ ಸದೃಢವಾದ ವ್ಯಕ್ತಿ ಅವರು. ಇಲ್ಲ ಕೌಜಲಗಿಯವರೆ ನನಗೆ ಸ್ವಲ್ಪ ಆರೋಗ್ಯ ಸರಿಯಾಗಿಲ್ಲ ಎಂದು ಚೇಷ್ಟೆ ಮಾಡಿ ಹೇಳುತ್ತಾ ಇದ್ದರು. ಕಳೆದ ನಾಲ್ಕು ಐದು ದಿವಸಗಳ ಹಿಂದೆ ಅವರಿಗೆ ಆಕಸ್ಮಿಕ ಘಟನೆ ಜರುಗಿದ ನಂತರ ಅವರು ಆರೋಗ್ಯವನ್ನು ಪುನಃ ಚೇತರಿಸಿಕೊಳ್ಳಲಿಲ್ಲ. ನಿಜವಾಗಲೂ ನನಗೆ ವೈಯಕ್ತಿಕ ಮತ್ತು ಪಕ್ಷಕ್ಕೂ ಸಹಿತ ಬಹಳ ನೋವಾಗಿದೆ. ಈ ಸಂದರ್ಭದಲ್ಲಿ ಶ್ರೀ ವಾಟಾಳ್ ನಾಗರಾಜ್‌ರವರು, ಶ್ರೀ ಜಯಚಂದ್ರರವರು ಹೇಳಿದ ಹಾಗೆ ಸರ್ಕಾರದವರು ಅವರ ಕುಟುಂಬಕ್ಕೆ ಸ್ವಲ್ಪ ಆರ್ಥಿಕ ನೆರವನ್ನು ನೀಡಬೇಕು ಎನ್ನುವುದನ್ನು ನಾನೂ ಒಪ್ಪುತ್ತೇನೆ ಮತ್ತು ಇವತ್ತು ಅವರ ನಿಧನದಿಂದ ಏನು ಒಂದು ಆಘಾತ ಆಗಿದೆ ಅವರ ಕುಟುಂಬ ಅದನ್ನು ತಡೆದುಕೊಳ್ಳಬೇಕು. ದೇವರು ಅವರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲಿ ಎಂದು ಹಾರೈಸುತ್ತಾ ಸಭಾ ನಾಯಕರು ತಂದಿರತಕ್ಕಂತಹ ಸೂಚನೆಯನ್ನು ನಾನು ಒಪ್ಪಿಕೊಂಡು ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

+ ಶ್ರೀ ಜಿ.ವಿ. ಶ್ರೀರಾಮರೆಡ್ಡಿ (ಬಾಗೇಪಲ್ಲಿ) : ಸನ್ಮಾನ್ಯ ಅಧ್ಯಕ್ಷರೇ, ಬಹಳ ಹಿರಿಯ ಸದಸ್ಯರಾದ ಜಯಪ್ರಕಾಶ್ ನಾರಾಯಣ್‌ರವರು ನಿಧನ ಹೊಂದಿರುವುದಕ್ಕೆ ಬಹಳ ನೋವಾಗಿದೆ. ರಾಜಕಾರಣದಲ್ಲಿ ಪ್ರಾಮಾಣಿಕ, ನೇರ ಮತ್ತು ಸರಳ ಜನರ

ಪರಂಪರೆ ಕಡಿಮೆಯಾಗುತ್ತಾ ಇರತಕ್ಕಂತಹ ಸಂದರ್ಭದಲ್ಲಿ ರಾಜಕಾರಣದಲ್ಲಿ ಮತ್ತು ತಮ್ಮ ವೈಯಕ್ತಿಕ ಜೀವನದಲ್ಲಿ ನೇರ, ಸರಳ ಮತ್ತು ಪ್ರಮಾಣಿಕತೆಯನ್ನೇ ಮೈಗೂಡಿಸಿಕೊಂಡು ಬಂದಂತಹ ಹಿರಿಯ ಸದಸ್ಯರನ್ನು ನಾವು ಇಂದು ಕಳೆದುಕೊಂಡಿರತಕ್ಕಂಥದ್ದು ಬಹಳ ದುಃಖಕರವಾದಂಥ ಸಂಗತಿ.

10.30 ಎ.ಎಂ

ಅವರು ಹಿಂದುಳಿದಿರತಕ್ಕಂತಹ ಮತ್ತು ಸಮಾಜದಲ್ಲಿ ಅತ್ಯಂತ ತುಳಿತಕ್ಕೆ ಒಳಗಾಗಿರತಕ್ಕಂಥ ಜನತೆಗೋಸ್ಕರ ದುಡಿದಂತಹ ಅವರಿಗೆ ನಾನು ಮತ್ತು ನಮ್ಮ ಪಕ್ಷದ ಪರವಾಗಿ ವೈಯಕ್ತಿಕ ಸಂತಾಪವನ್ನು ಸೂಚಿಸಿ, ಅವರ ಕುಟುಂಬ ವರ್ಗದ ಪರಿಸ್ಥಿತಿ ಹೇಗಿದೆ ಎನ್ನತಕ್ಕಂಥದ್ದನ್ನು ಸರ್ಕಾರ ಗಮನಿಸಿ ಅವರಿಗೆ ಸಹಾಯ ನೀಡಬೇಕೆಂದು ಹೇಳಿ ನನ್ನ ಸಂತಾಪವನ್ನು ಸೂಚಿಸುತ್ತೇನೆ.

+ ಶ್ರೀ ಹೆಚ್.ಕೆ. ಕುಮಾರಸ್ವಾಮಿ (ಬೇಲೂರು) : ಸನ್ಮಾನ್ಯ ಉಪಾಧ್ಯಕ್ಷರೆ, ಶ್ರೀ ಜಯಪ್ರಕಾಶ್ ನಾರಾಯಣರವರ ನಿಧನ ನನಗೆ, ಈ ಸದನಕ್ಕೆ ಮತ್ತು ನಮ್ಮ ಪರಿಶಿಷ್ಟ ಜನತೆಯ ಸಮಾಜಕ್ಕೆ ತುಂಬಾ ದುಃಖವನ್ನು ತಂದಿದೆ. ಮೊನ್ನೆ ತಾನೇ ನಾನು ಆಸ್ಪತ್ರೆಗೆ ಹೋಗಿದ್ದೆ. ಆಗ ನನಗೆ ಆಶ್ಚರ್ಯವಾಯಿತು. ಅವರು ಕಾಲೇಜುಗಳಿಗೆ ಸಂಬಂಧಪಟ್ಟಂತಹ ಫೈಲುಗಳನ್ನೆಲ್ಲ ತರಿಸಿ ಆಸ್ಪತ್ರೆಯಲ್ಲಿಯೇ ಅಟೆಂಡ್ ಮಾಡುತ್ತಾ ಇದ್ದರು. ಅವರಿಗೆ ನಾನು ಹೇಳಿದೆ, ಏತಕ್ಕೆ ಸಾರ್ ಈ ಸಮಯದಲ್ಲಿಯೂ ಇಷ್ಟೊಂದು ತೊಂದರೆ ತೆಗೆದುಕೊಳ್ಳುತ್ತಿದ್ದೀರಿ, ಅರಾಮವಾಗಿ ರೆಸ್ಟ್ ತೆಗೆದುಕೊಳ್ಳಿ ಹಾಗೆಂತ ಎಲ್ಲ ಹೇಳಿದೆ. ಅದಾದನಂತರ ಅಲ್ಲೂ ಕೂಡ ಅವರ ಜೊತೆಯಲ್ಲಿ ಕುಳಿತು ಕೆಲವು ಸಂಗತಿಗಳನ್ನು ಸಮಾಜದ ಅಭಿವೃದ್ಧಿಗೆ ಸಂಬಂಧಪಟ್ಟ ಹಾಗೆ ಮತ್ತು ಇನ್ನೂ ಕೆಲವು ವಿಷಯಗಳನ್ನು ಅಲ್ಲಿ ಸುಮಾರು 10 ನಿಮಿಷ ಚರ್ಚೆ ಮಾಡಿದೆ. ಬಹುಶಃ ಈ ಸದನದಲ್ಲಿ ಅವರಿಗೆ ಇದ್ದಂತಹ ವಿಷಯಗಳು, ಅವರ ಮನಸ್ಸಿನಲ್ಲಿ ಇದ್ದಂತಹ ಭಾವನೆಗಳು ನಮ್ಮ ಪರಿಶಿಷ್ಟ ಸಮಾಜಕ್ಕೆ ಮತ್ತು ಎಲ್ಲಾ ವರ್ಗದ ಬಡವರ ಪರವಾಗಿ ಅವರಿಗೆ ಇದ್ದಂತಹ ಕಳಕಳಿಯನ್ನು ಆಧರಿಸಿ ಈ ಇಳಿ ವಯಸ್ಸಿನಲ್ಲಿಯೂ ಕೂಡ ನಮ್ಮ ನಾಯಕರು ಆದ ಮಾನ್ಯ ಮುಖ್ಯಮಂತ್ರಿಯವರು ನಮ್ಮ ಪಕ್ಷದ ಪರಿಶಿಷ್ಟ ಜಾತಿ ವಿಭಾಗದಕ್ಕೆ ಅಧ್ಯಕ್ಷರನ್ನಾಗಿ ಮಾಡಿದ್ದರು. ಈ ಸಂದರ್ಭದಲ್ಲೂ ಕೂಡ ಸಮಾಜದ ಜನರ ಸಂಘಟನೆಗೆ ಅವರ ಅಭಿವೃದ್ಧಿಗೆ ಪ್ರಯತ್ನ ಮಾಡಿದ್ದರು. ಇವತ್ತು ಅವರನ್ನು ಕಳೆದುಕೊಂಡಿರತಕ್ಕಂಥದ್ದು ನಮಗೆ ತುಂಬ ದುಃಖವಾಗಿದೆ. ಅವರ ಸಂಸಾರಕ್ಕೆ ದುಃಖವನ್ನು ಭರಿಸತಕ್ಕಂಥ ಶಕ್ತಿ ಬರಲೆಂದು ಹೇಳಿ ಅವರ ಸಂಸಾರದ ಆಗುಹೋಗುಗಳನ್ನು ನೋಡಿ ದಯಮಾಡಿ ಅವರಿಗೆ ಎಷ್ಟು ಸಹಾಯ ಮಾಡಬೇಕೋ ಅದನ್ನು ಮಾಡಬೇಕೆಂದು ಹೇಳಿ, ನನ್ನ ಎರಡು ಮಾತನ್ನು ಮುಗಿಸುತ್ತೇನೆ.

ಶ್ರೀ ಯು.ಆರ್. ಸಭಾಪತಿ (ಉಡುಪಿ) : ಸನ್ಮಾನ್ಯ ಉಪಾಧ್ಯಕ್ಷರೆ, ಶ್ರೀಯುತ ಜಯಪ್ರಕಾಶ್ ನಾರಾಯಣ್ ಅವರು ಶೋಷಿತ ವರ್ಗದ ಜನರ ಬಗ್ಗೆ ಹೋರಾಟ ಮಾಡಿದ ಬಗ್ಗೆ ಸಾಕಷ್ಟು ಮಂದಿ ಈಗಾಗಲೇ ಹೇಳಿದ್ದಾರೆ. ಅವರು ತಮ್ಮ ಸಹುದ್ಯೋಗಿಗಳಾಗಿದ್ದರು. ವಿಧಾನ ಸಭೆಯಲ್ಲಿ ನಾನು ಅವರನ್ನು ಕೆಲವೇ ತಿಂಗಳುಗಳ ಹಿಂದಿನಿಂದ ನೋಡುತ್ತಾ ಇದ್ದೆ. ಅವರು ಬಹಳ ಸೂಕ್ಷ್ಮವಾದ ವಿಚಾರಗಳನ್ನು ಈ ಸದನದ ಮುಂದೆ ಇಡುತ್ತಿದ್ದರು. ದೀನದಲಿತರ ಬಗ್ಗೆ, ಹಿಂದುಳಿದವರ ಬಗ್ಗೆ ಸಾಕಷ್ಟು ಕಾಳಜಿ ವಹಿಸತಕ್ಕಂಥ ಹಾಲಿ ಸದಸ್ಯರಾಗಿದ್ದ ಶ್ರೀ ಜಯಪ್ರಕಾಶ್ ನಾರಾಯಣರವರನ್ನು ನಾವೆಲ್ಲ ಕಳೆದುಕೊಂಡು ಅತ್ಯಂತ ದುಃಖಿತರಾಗಿದ್ದೇವೆ. ನಾನು ನಮ್ಮ ಪಕ್ಷದ ಪರವಾಗಿ

ಅವರಿಗೆ, ಶ್ರದ್ಧಾಂಜಲಿಯನ್ನು ಅರ್ಪಿಸಿ ಸದನದ ನಾಯಕರು ಮಂಡಿಸಿದ ನಿರ್ಣಯಕ್ಕೆ ಸಹಾನುಭೂತಿ ವ್ಯಕ್ತಪಡಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಬೆಂಬಲ ವ್ಯಕ್ತಪಡಿಸಿ ಅವರಿಗೆ ಚಿರಶಾಂತಿಯನ್ನು ಭಗವಂತ ಕರುಣಿಸಲಿ ಎಂದು ಹೇಳಿ ನನ್ನ ಮಾತು ಮುಗಿಸುತ್ತೇನೆ.

+ ಶ್ರೀ ಹೆಚ್.ಎನ್. ನಂಜೇಗೌಡ (ಬಸವನ ಗುಡಿ) : ಸನ್ಮಾನ್ಯ ಉಪಾಧ್ಯಕ್ಷರೇ, ಜಯಪ್ರಕಾಶ್ ನಾರಾಯಣ್ ರವರು ತೀರಿ ಹೋದರು ಅಂತ ನನಗೆ ನಂಬುವುದಕ್ಕೆ ಆಗಲಿಲ್ಲ. 1967ರಿಂದ ನಾವು ಅವರು ಜೊತೆಯಲ್ಲಿ ಇದ್ದೆವು. ಅವತ್ತು ಯಾವುದೇ ಪ್ರಶ್ನೆ ಬರಲಿ, ಯಾವುದೇ ಚರ್ಚೆ ಬರಲಿ ಸಭೆಯಲ್ಲಿ ಹರಿಜನ ಗಿರಿಜನರ ಪ್ರಶ್ನೆಯನ್ನು ಸದನದಲ್ಲಿ ತಂದು ಅವರ ಸಮಸ್ಯೆಯನ್ನು ನಮ್ಮ ಸಭೆಯ ಮುಂದೆ ಇಡುತ್ತಿದ್ದರು. ಬಹುಶಃ ಅಂದಿನ ದಿನಗಳಲ್ಲಿ ಹರಿಜನ ಮುಖಂಡರುಗಳು ಸಹ ಹರಿಜನರ ವಿಚಾರಗಳನ್ನು ಮಾತನಾಡುವುದಕ್ಕೆ ಸ್ವಲ್ಪ ಅಂಜಿಕೊಳ್ಳುತ್ತಿದ್ದರು. ಏನೋ ಒಂದು ನಾಚಿಕೆ ಪಡತಕ್ಕಂತಹ ದಿನಗಳು ಆಗ 1962ರಲ್ಲಿ ಏತಕ್ಕೆ ಎಂದು ನನಗೆ ಗೊತ್ತಿಲ್ಲ. ಬಹುಶಃ ಹೊಸ ಮೈಸೂರು ಹಳೇ ಮೈಸೂರು ಗಲಾಟೆಯಾಗಿ ಇನ್ನೂ ಅದರ ಬಿಂಬ ಹಾಗೆಯೇ ಉಳಿದುಕೊಂಡು ಈ ಹರಿಜನ ಗಿರಿಜನರ ಸಮಸ್ಯೆ ಹಿಂದೆ ಆಗಿತ್ತು. ಆದರೆ ಅವರು ಅಂಜಿಕೊಳ್ಳುತ್ತಿರಲಿಲ್ಲ. ಕೆಲವು ಸಾರಿ ಅವರನ್ನು ಸಭೆಯಲ್ಲಿ ತಮಾಷೆ ಮಾಡುತ್ತಿದ್ದೆವು. ಅವರಿಗೆ ಹದಿನೆಂಟು ಪರ್ಸೆಂಟು ಎಂದು ಹೆಸರೇ ಇಟ್ಟು ಬಿಟ್ಟಿದ್ದರು. ಆದರೂ ಕೂಡ ಪ್ರತಿಯೊಂದು ವಿಚಾರದಲ್ಲೂ ಯಾವುದೇ ವಿಷಯ ಬಂದರೂ ಈ ವಿಷಯಕ್ಕೆ ಸಂಬಂದಪಟ್ಟ ಹಾಗೆ ಹರಿಜನ ಗಿರಿಜನರ ಯೋಗಕ್ಷೇಮ ಯಾವ ರೀತಿ ಆಗಬೇಕು ಎನ್ನತಕ್ಕಂತಹ ವಿಚಾರದಲ್ಲಿ ತುಂಬಾ ಆಸ್ಥೆ ವಹಿಸಿ ಮಾಡುತ್ತಿದ್ದರು. ಅವರು ನಿಧನ ಆಗಿರತಕ್ಕಂಥದ್ದು ನಿಜವಾಗಿಯೂ ಆ ವರ್ಗದವರಿಗೆ ತುಂಬಲಾರದಂತಹ ನಷ್ಟ. ಅವರ ಆತ್ಮಕ್ಕೆ ಚಿರಶಾಂತಿಯನ್ನು ಕೋರಿ ಸಭಾ ನಾಯಕರು ತಂದಿರತಕ್ಕ ಈ ಸೂಚನೆಯನ್ನು ಬೆಂಬಲಿಸುತ್ತೇನೆ.

ಶ್ರೀ ಬಿ.ಬಿ. ಬಿಮ್ಮನ ಕಟ್ಟಿ (ಬಾದಾಮಿ) : ಸನ್ಮಾನ್ಯ ಉಪಾಧ್ಯಕ್ಷರೇ, ಈ ಸಂತಾಪ ಸೂಚನೆ ನಿರ್ಣಯದ ಮೇಲೆ ಮುಖ್ಯಮಂತ್ರಿಗಳು ಮತ್ತು ವಿರೋಧ ಪಕ್ಷದ ನಾಯಕರು ಹಾಗೂ ನನ್ನ ಸಹದ್ಯೋಗಿಗಳು ಕೂಡ ನಮ್ಮನ್ನು ಅಗಲಿರತಕ್ಕಂತಹ ಜಯಪ್ರಕಾಶ್ ನಾರಾಯಣ್ ರವರ ಬಗ್ಗೆ ದುಃಖದ ನಾಲ್ಕು ಮಾತುಗಳನ್ನು ಆಡಿದ್ದಾರೆ. ಇವತ್ತು ನಾನಾದರೂ ಕೂಡ ಅವರ ಒಂದು ಸಾಮಾಜಿಕ ಚಟುವಟಿಕೆಗಳನ್ನು ಬಹಳ ಸಮೀಪದಿಂದ ನೋಡಿರತಕ್ಕ ಒಬ್ಬ ವ್ಯಕ್ತಿ. ಅವರು ಶೈಕ್ಷಣಿಕವಾಗಲಿ, ಸಾಮಾಜಿಕವಾಗಲಿ ಅನೇಕ ಕೆಲಸಗಳನ್ನು ಮಾಡಿ ಇವತ್ತು ನಮ್ಮನ್ನು ಅಗಲಿದ್ದಾರೆ. ಅವರ ಕುಟುಂಬಕ್ಕೆ ಆಗಿರತಕ್ಕಂತಹ ಹಾನಿಗಿಂತಲೂ ಅವರು ಯಾರ ಸಲುವಾಗಿ ಧ್ವನಿಯಾಗಿ ಈ ಸದನದಲ್ಲಿ ಅಭಿಪ್ರಾಯ ವ್ಯಕ್ತಪಡಿಸುತ್ತಿದ್ದರು. ಯಾರು ಹರಿಜನ ಗಿರಿಜನರಾಗಲಿ ಬಹುಶಃ ಆ ಜನರಿಗೆ ಏನು ಅವರ ಕೂಗನ್ನು ಸದನದಲ್ಲಿ ಕೂಗಿ ಅವರ ಕಷ್ಟವನ್ನು ಹೇಳತಕ್ಕಂತಹ ಅವಕಾಶವನ್ನು ಮಾಡುತ್ತಿದ್ದರು ಬಹುಶಃ ಆ ಅವಕಾಶದಿಂದ ವಂಚಿತರಾಗಿರತಕ್ಕಂತಹ ಈ ಜನರಿಗೆ ಅಪಾರ ಹಾನಿಯಾಗಿದೆಯೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಇಷ್ಟು ಹೇಳಿ ಅವರ ಕುಟುಂಬಕ್ಕೆ ದುಃಖವನ್ನು ಭರಿಸುವ ಶಕ್ತಿಯನ್ನು ಮತ್ತು ಅವರ ಆತ್ಮಕ್ಕೆ ಶಾಂತಿಯನ್ನು ಕೋರಿ ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

+ ಶ್ರೀ ವಿ. ಮುನಿಯಪ್ಪ (ಶಿಡ್ಲಘಟ್ಟ) : ಸನ್ಮಾನ್ಯ ಉಪಾಧ್ಯಕ್ಷರೇ, ನಾನು ಈ ಸದನಕ್ಕೆ ಬಂದಂತಹ ಸಂದರ್ಭದಲ್ಲಿ ಕಳೆದ ಮೂರೂವರೆ ತಿಂಗಳ ಕಾಲ ಈ ಸದನದಲ್ಲಿ ನಮ್ಮ ಸಹಪಾಠಿಯಾಗಿ ಕೆಲಸ ಮಾಡಿದಂತಹ ಹಿರಿಯ ರಾಜಕಾರಣಿ

ಸನ್ಮಾನ್ಯ ಜಯಪ್ರಕಾಶ್ ನಾರಾಯಣ್ ರವರು ನಮ್ಮನ್ನು ಬಿಟ್ಟು ಹೋದರು ಎನ್ನುವಂತಹ ಸುದ್ದಿಯನ್ನು ಕೇಳಿದಂತಹ ಸಂದರ್ಭದಲ್ಲಿ ಮನಸ್ಸಿಗೆ ಬಹಳ ನೋವಾಗುತ್ತದೆ. ಸಮಾಜದಲ್ಲಿ ಅದರಲ್ಲೂ ರಾಜಕೀಯದಲ್ಲಿ ಪ್ರಾಮಾಣಿಕ ಮತ್ತು ನಿಷ್ಠೆಯಿಂದ ಕೆಲಸ ಮಾಡುವಂತಹ ಜನರ ಅಭಾವದ ಈ ದಿನಗಳಲ್ಲಿ ಪ್ರಾಮಾಣಿಕವಾಗಿದ್ದು ಸಾವಿರಾರು ವರ್ಷಗಳಿಂದ ಅಜ್ಞಾನ ಅಂಧಕಾರದಲ್ಲಿ ಇದ್ದಂತಹ ಜನರನ್ನು ಬೆಳಕಿಗೆ ತಂದು ಹಸಿದ ಹೊಟ್ಟೆಯಲ್ಲಿ ನರಳುವಂತ ಜನರ ಬಾಳನ್ನು ಬದಲಾವಣೆ ಮಾಡುವ ದಿಶೆಯಲ್ಲಿ ಕೆಲಸ ಮಾಡಿದಂತಹ ಸನ್ಮಾನ್ಯ ಜಯಪ್ರಕಾಶ್ ನಾರಾಯಣ್ ರವರು ಕಣ್ಮರೆಯಾಗಿದ್ದಾರೆ. ಅವರನ್ನು ಕಳೆದುಕೊಂಡಂತಹ ಅವರ ಕುಟುಂಬ ಮತ್ತು ಅವರನ್ನು ಕಳೆದುಕೊಂಡಂತಹ ಅವರ ಪಕ್ಷಕ್ಕೆ ಆ ಧೈರ್ಯವನ್ನು ಪ್ರಕೃತಿ ನೀಡಲೆಂದು ನಾನು ಸಂತಾಪವನ್ನು ಸೂಚಿಸಿ ಅವರ ಕುಟುಂಬದ ಪರಿಸ್ಥಿತಿಯನ್ನು ಅರಿತು ಸರ್ಕಾರ ಅವರ ಕುಟುಂಬ ಅವರ ಕಣ್ಮರೆ ಆದ ಮೇಲೆ ಬೇರೆಯವರ ಮೇಲೆ ಅವಲಂಬಿಸುವ ರೀತಿ ಇರದೆ ತನ್ನ ಕುಟುಂಬದ ಗಂಡನನ್ನು, ತಂದೆಯನ್ನು ಕಳಕೊಂಡಂತವರು ಬೀದಿ ಪಾಲಾಗದೆ ಸ್ವಾವಲಂಬಿಯಾಗಿ ಇರುವಂತೆ ಆಗಲು ಅವಶ್ಯಕತೆ ಇದ್ದರೆ ಶಾಸಕರುಗಳು ಕೂಡ ನಮ್ಮ ಸಂಬಳದಲ್ಲಿ ಕೆಲವು ಭಾಗಗಳನ್ನು ಬೇಕಾದರೆ ಕೊಡುವಂತಹ ಕೆಲಸ ನಾವು ಮಾಡಬೇಕು. ಕಾರಣ ಒಬ್ಬ ಪ್ರಾಮಾಣಿಕ ಸದಸ್ಯರಿಗೆ ನಾವು ಸಲ್ಲಿಸುವ ಗೌರವ ಎಂದು ತಿಳಿದುಕೊಂಡು, ಅವರನ್ನು ಕಳೆದುಕೊಂಡಂತಹ ಕುಟುಂಬಕ್ಕೆ ಪ್ರಕೃತಿ ಧೈರ್ಯವನ್ನು ಶಕ್ತಿಯನ್ನು ಕೊಡಲೆಂದು ಈ ಮನೆಯಲ್ಲಿ ತಂದಂತಹ ನಿರ್ಣಯಕ್ಕೆ ಬೆಂಬಲ ಸಂತಾಪವನ್ನು ಸೂಚಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಶ್ರೀ ಬಸವರಾಜ ಪಾಟೀಲ್ ಅಟ್ಟೂರ್ (ಬಸವಕಲ್ಯಾಣ) : ಸನ್ಮಾನ್ಯ ಉಪಾಧ್ಯಕ್ಷರೇ, ಮಾನ್ಯ ಸಭಾನಾಯಕರು ತಂದಿರುವಂತಹ ಸಂತಾಪ ಸೂಚನೆಯ ನಡವಳಿಕೆಗೆ ನನ್ನ ಬೆಂಬಲ ವ್ಯಕ್ತ ಪಡಿಸಿ, ಇವತ್ತು ನಮ್ಮನ್ನು ಅಗಲಿದಂತಹ ನಮ್ಮ ಸಹಪಾಠಿಗಳು ನಮ್ಮ ಶಾಸಕರೂ ಆದ ಸನ್ಮಾನ್ಯ ಜಯಪ್ರಕಾಶ್ ನಾರಾಯಣರವರು ನಿಧನರಾದದ್ದು ಇವತ್ತು ಬೆಳಿಗ್ಗೆ ಬಂದಾಗ ನನಗೆ ಗೊತ್ತಿರಲಿಲ್ಲ. ಆಮೇಲೆ ಕಂದಾಯ ಮಂತ್ರಿಗಳಾದ ಶ್ರೀಮಾನ್ ಜಾಲಪ್ಪನವರು ಹೇಳಿದರು. ಈ ರೀತಿ ಜಯಪ್ರಕಾಶ್ ನಾರಾಯಣವರು ನಿಧನ ಹೊಂದಿದ್ದು ನಮ್ಮ ಮನಸ್ಸಿಗೆ ಬಹಳ ನೋವು ಆಯಿತು. ಏಕೆಂದರೆ ಅವರು ನಮ್ಮ ಪಕ್ಷದ ನಿಷ್ಠಾವಂತ ಕಾರ್ಯಕರ್ತರಾಗಿ ಪ್ರಮುಖ ರಾಜಕಾರಣಿಯಾಗಿ ನಮ್ಮ ಪಕ್ಷಕ್ಕೆ ಅಪಾರವಾದ ಸೇವೆ ಮಾಡಿದ್ದಾರೆ. ಅವರ ಸೇವೆಯನ್ನು ಪರಿಗಣನೆಗೆ ತೆಗೆದುಕೊಳ್ಳಬೇಕಾದರೆ ಅವರು ಯಾವಾಗಲೂ ಪಕ್ಷದ ಕಛೇರಿಯಲ್ಲಿ ಸಿಗತಕ್ಕ ವ್ಯಕ್ತಿಯಾಗಿದ್ದರು. ಪಕ್ಷದ ಕಛೇರಿಗೆ ಹೋದಾಗ ಅವರನ್ನು ಯಾವಾಗಲೂ ನಾವು ನೋಡುತ್ತಿದ್ದೆವು.

ಅವರು ಯಾವಾಗಲೂ ದಲಿತರ ಬಗ್ಗೆ, ದೀನದಲಿತರ ಬಗ್ಗೆ ಮತ್ತು ಬಡವರ ಬಗ್ಗೆ ಅಪಾರವಾದ ಗೌರವವನ್ನು ಇಟ್ಟುಕೊಂಡಿದ್ದಂಥ ವ್ಯಕ್ತಿಗಳಾಗಿದ್ದರು. ಮತ್ತು ಮೇಲಾಗಿ ನಿಷ್ಠಾವಂತರು, ಪ್ರಾಮಾಣಿಕತೆಗೆ ಹೆಸರಾದಂಥ ವ್ಯಕ್ತಿಗಳಾಗಿದ್ದರು. ಅವು ಸಂಘಸಂಸ್ಥೆಗಳನ್ನು ಕಟ್ಟಿಕೊಂಡು ಅವರು ಪೂರಕವಾಗಿ ನಮ್ಮ ಉತ್ತರ ಕರ್ನಾಟಕದ ಭಾಗದಿಂದ ಬಂದಂಥ ವ್ಯಕ್ತಿಗಳಾಗಿದ್ದರು; ಸಿರ್ಸಿಯವರು. ಇವತ್ತು ಅವರು ನಮ್ಮನ್ನು ಅಗಲಿದ್ದಾರೆ. ಮೊನ್ನೆ ಕೂಡ ನಾನು ಅವರನ್ನು ಹೊರಗಡೆ ಹುಡುಕುತ್ತಾ ಇದ್ದೆ ಆಗ ಅವರಿಗೆ ಹಾರ್ಟ ಅಟ್ಯಾಕ್ ಆಗಿತ್ತು. ನಾನು ಕೂಡ ಹೋದೆ. ಡಾಕ್ಟರು ಬಂದಿದ್ದರು. ಡಿ.ಐ.ಜಿ. ಸಾಹೇಬರೇನೋ ಬಂದಿದ್ದರು. ಅವರನ್ನು ನೋಡುತ್ತಿದ್ದರು, ಇವತ್ತು ಕೂಡ ಈ ಘಟನೆ ನೋಡಿ ನಮ್ಮ ಮನಸ್ಸಿಗೆ ಬೇಜಾರಾಗಿದೆ. ಎಲ್ಲ ಶಾಸಕರು ಕೂಡ ದುಃಖದಲ್ಲಿ ಮುಳುಗಿದ್ದೇವೆ. ಒಬ್ಬ ನಿಷ್ಠಾವಂತ ಶಾಸಕನನ್ನು ನಾವು ಕಳೆದುಕೊಂಡಿದ್ದೇವೆ ಎಂಬ ಭಾವನೆಯನ್ನು ಇವತ್ತು ವ್ಯಕ್ತಪಡಿಸಿ ಅವರ ಕುಟುಂಬದವರಿಗೆ ದುಃಖವನ್ನು ಬರಿಸುವ

ಶಕ್ತಿಯನ್ನು ಮತ್ತು ಅವರ ಆತ್ಮಕ್ಕೆ ಚಿರಶಾಂತಿಯನ್ನು ಭಗವಂತ ನೀಡಲಿ ಎಂದು ಹಾರೈಸಿ ತಾವು ನನಗೆ ಇಲ್ಲಿ ಮಾತನಾಡುವುದಕ್ಕೆ ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ತಮಗೂ ವಂದಿಸಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಶ್ರೀ ಡಿ.ಟಿ. ಜಯಕುಮಾರ್ (ತೋಟಗಾರಿಕೆ ರಾಜ್ಯ ಸಚಿವರು) : ಮಾನ್ಯ ಸಭಾನಾಯಕರು ತಂದಿರತಕ್ಕ ಈ ನಿರ್ಣಯವನ್ನು ನಾನು ಕೂಡ ಅನುಮೋದಿಸುತ್ತಾ ಇತ್ತಿಚೆಗೆ ನಮ್ಮ ಪಕ್ಷದಲ್ಲಿ ಅವರು ಪರಿಶಿಷ್ಟ ವಿಭಾಗದ ಅಧ್ಯಕ್ಷರಾಗಿದ್ದರು. ನಾನು ಕೂಡ ಹಿಂದುಳಿದ ವಿಭಾಗದ ಅಧ್ಯಕ್ಷನಾಗಿ, ಮಾನ್ಯ ಮಂತ್ರಿಗಳಾದ ಶ್ರೀ ನಿಂಗಯ್ಯನವರು ಯುವಜನ ದಳದ ಅಧ್ಯಕ್ಷರಾಗಿ ಮತ್ತು ಮಹಿಳಾ ವಿಭಾಗದ ಅಧ್ಯಕ್ಷರು ಇವರೆಲ್ಲರೂ ಕೂಡ ಇಡೀ ಕರ್ನಾಟಕ ರಾಜ್ಯದ್ಯಾಂತ ಚುನಾವಣ ಪೂರ್ವದಲ್ಲಿ ನಮ್ಮ ಪಕ್ಷದ ಸಂಘಟನೆಯನ್ನು ನಡೆಸತಕ್ಕ ಸಂದರ್ಭದಲ್ಲಿ ನಾವು ಜಯಪ್ರಕಾಶ್‌ನಾರಾಯಣ ಅವರನ್ನು ಅತ್ಯಂತ ಹತ್ತಿರದಿಂದ ನೋಡಿದ್ದೇವೆ. ಬಹಳ ಅತ್ಯಂತ ಸರಳ ವ್ಯಕ್ತಿಗಳಾಗಿದ್ದರು. ಸ್ವಾತಂತ್ರ್ಯ ಹೋರಾಟಗಾರರೂ ಕೂಡ ಆಗಿದ್ದರು. ಯಾವಾಗಲೂ ಕೂಡ ದೀನದಲಿತರ ಬಗ್ಗೆ ಮತ್ತು ಬಡವರ ಬಗ್ಗೆ ಹೆಚ್ಚಿನ ಆಸಕ್ತಿ ವಹಿಸತಕ್ಕ ಮಾತನ್ನು ಯಾವಾಗಲೂ ಕೂಡ ಹೇಳುತ್ತಿದ್ದರು. ಮತ್ತು ಸಮಯಪ್ರಜ್ಞೆ ಅವರಲ್ಲಿತ್ತು. ನಾವೆಲ್ಲಾ ಹುಡುಗರು ಹೋಗುವುದಕ್ಕಿಂತ ಮುಂಚೆ ನೀವೆಲ್ಲಾ ಬೇಗ ಬರಬೇಕು, ಸಮಯವನ್ನು ಕಾಪಾಡಿಕೊಳ್ಳಬೇಕು ಎಂದು ಹೇಳುತ್ತಿದ್ದರು.

ಆ ದೃಷ್ಟಿಯಿಂದ ನಮಗಿಂತ ಮುಂಚೆ ಸಭೆಗೆ ಬರತಕ್ಕಂಥ ಒಂದು ಹವ್ಯಾಸವನ್ನು ಅವರು ಮಾಡಿಕೊಂಡಿದ್ದರು. ಬಹಳ ಸರಳ ವ್ಯಕ್ತಿಗಳು, ಸಜ್ಜನತೆ ಮತ್ತು ಪ್ರಾಮಾಣಿಕತೆ ಅವರಲ್ಲಿತ್ತು. ಅವರು ಎಲ್ಲರೂ ಕೂಡ ವಿದ್ಯಾವಂತರಾಗಬೇಕು, ನಮ್ಮ ಜನಾಂಗಕ್ಕೆ ನಾವು ಅವರಿಗೆ ಒಂದು ಲಕ್ಷ ರೂಪಾಯಿ ಕೊಟ್ಟರೂ ಕೂಡ ಅವರ ದರಿದ್ರ ಹೋಗುವುದಿಲ್ಲ, ಆದರೆ ಇವರನ್ನು ಸರಿಯಾದ ವಿದ್ಯಾವಂತರನ್ನಾಗಿ ಮಾಡಿದರೆ ಮಾತ್ರ ನಮ್ಮ ಜನಾಂಗದವರು ಉದ್ಧಾರವಾಗುತ್ತಾರೆ ಎನ್ನತಕ್ಕ ಮಾತನ್ನು ಕಳಕಳಿಯಿಂದ ಹೇಳುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಅವರು ನಮ್ಮೊಡನೆ ಸಮಾಲೋಚನೆ ನಡೆಸುತ್ತಿದ್ದುದು ನೋಡಿ ಜಯಕುಮಾರ್ ಅವರ ಈ ಸಮಾಜ ಉದ್ಧಾರವಾಗಬೇಕಾದರೆ ಅದರಲ್ಲೂ ನಮ್ಮ ಬಡವರು ಉದ್ಧಾರ ಆಗಬೇಕಾದರೆ ಪಾನನೀಷೇಧವನ್ನು ಜಾರಿಗೆ ತರಬೇಕು ಎಂಬುದನ್ನು ಒತ್ತಿ ಒತ್ತಿ ಹೇಳುತ್ತಿದ್ದರು. ಅವರು ಸ್ವತಃ ಪ್ರಾಕ್ಟೀಸ್ ಕೂಡ ಮಾಡಿಕೊಂಡು ಬಂದಿದ್ದರು. ಯಾವುದೇ ರೀತಿ ಡ್ರಿಂಕ್ಸನ್ನು ತೆಗೆದುಕೊಳ್ಳತಕ್ಕ ಅಭ್ಯಾಸ ಅವರಿಗಿರಲಿಲ್ಲ. ಅವರು ಹೇಳುತ್ತಿದ್ದರು ಪಾನನಿಷೇಧ ತಂದಹೊರತೂ ಯಾವುದೇ ಕಾರಣಕ್ಕೂ ಈ ಸಮಾಜ ಉದ್ಧಾರವಾಗುವುದಿಲ್ಲ ಎನ್ನತಕ್ಕ ಮಾತನ್ನು ಹೇಳುತ್ತಿದ್ದರು. ಅದರಲ್ಲೂ ಕೂಡ ನಾವು ಅತ್ಯಂತ ಗೌರವದಿಂದ ಅವರಿಗೆ ಕೊಡತಕ್ಕ ಶ್ರದ್ಧಾಂಜಲಿ ಏನು ಎಂದರೆ ನಮ್ಮ ರಾಜ್ಯದಲ್ಲಿ, ಮಾನ್ಯ ಸಭಾನಾಯಕರು ಇದರ ಬಗ್ಗೆ ಚಿಂತನೆ ಮಾಡಬೇಕು, ಅವರು ಏನು ಒಂದು ಆಸೆ ಆಕಾಂಕ್ಷೆಯನ್ನು ಇಟ್ಟುಕೊಂಡಿದ್ದರು ಈ ಜನರ ಉದ್ಧಾರಕೋಸ್ಕರ ಪಾನನಿಷೇಧವನ್ನು ತರಬೇಕು ಎಂಬ ವಿಚಾರವನ್ನು ಅವರು ಪದೇಪದೇ ಹೇಳುತ್ತಿದ್ದರು ಅದರ ಕಡೆ ನಮ್ಮ ಸರ್ಕಾರ ಒಂದೇ ಸಲ ಮಾಡುವುದಕ್ಕಾಗದಿದ್ದರು ಹಂತಹಂತವಾಗಿಯಾದರೂ ಕೂಡ ಈ ಪಾನನಿಷೇಧವನ್ನು ಜಾರಿಗೆ ತರುವುದೇ ನಾವು ನಿಜವಾಗಿ ಅವರಿಗೆ ಕೊಡತಕ್ಕ ಶ್ರದ್ಧಾಂಜಲಿ ಎಂದು ನಾನಾದರೂ ಕೂಡ ಭಾವಿಸಿಕೊಂಡಿದ್ದೇನೆ. ಅವರ ಕುಟುಂಬಕ್ಕೆ ಆಗಿರುವ ನಷ್ಟಕ್ಕೆ ಭಗವಂತ ಶಕ್ತಿಯನ್ನು ಕೊಡಲಿ, ಈ ಗಣ್ಯರನ್ನು ಕಳೆದುಕೊಂಡು ಸಮಾಜಕ್ಕಾಗಿರುವ ಈ ತುಂಬಲಾರದ ನಷ್ಟವನ್ನು ಬರಿಸಲಿ ಎಂಬ ಮಾತನ್ನು ಹೇಳಿ ನನ್ನ ಮಾತನ್ನು ಮುಗಿಸುತೇನೆ.

+ ಶ್ರೀ ಡಿ. ಮಂಜುನಾಥ್ (ಉನ್ನತ ಶಿಕ್ಷಣ ಸಚಿವರು) : ಮಾನ್ಯ ಅಧ್ಯಕ್ಷರೆ, ಈಗತಾನೆ ನಾನು ಮೃತರ ನಿವಾಸಕ್ಕೆ ಹೋಗಿ ಅಂತಿಮ ಗೌರವವನ್ನು ಸಲ್ಲಿಸಿ ಬಂದೆ. ಅವರು 1967 ರಲ್ಲಿ ಮೊದಲ ಬಾರಿಗೆ ವಿಧಾನಸಭೆಗೆ ಆರಿಸಿ ಬಂದಿದ್ದರು. ನಾನೂ ಮೊದಲನೇ ಸಾರಿ ಆಗ ಆರಿಸಿಬಂದಿದ್ದೆ. ನಂಜೇಗೌಡರು, ವಾಟಾಳ್ ನಾಗರಾಜ್ ಅವರು, ದೇವೇಗೌಡರು 1967 ರಲ್ಲಿದ್ದರು. ಜಯಪ್ರಕಾಶ್ ನಾರಾಯಣ್ ಅವರು ಒಳ್ಳೆಯ ವಿದ್ಯಾಸಂಸ್ಥೆಗಳನ್ನು ಕಟ್ಟಿದ್ದರು. ಈಗತಾನೇ ಅಲ್ಲಿ ಪಕ್ಕದಲ್ಲೇ ಇದ್ದಂತ ವಿದ್ಯಾಸಂಸ್ಥೆಗೆ ಹೋಗಿ ಬಂದೆ. ಮಿಡ್ಲ್‌ಸ್ಕೂಲಿನಿಂದ ಡಿಗ್ರಿವರೆಗೂ ಮಾಡಿದ್ದಾರೆ. ಅಂಬೇಡ್ಕರ್ ಅವರ ಹೆಸರಿನಲ್ಲಿ ಇಂಜನಿಯರಿಂಗ್ ಕಾಲೇಜ್ ಕೂಡ ಮಾಡಿ ಬಹಳ ಚೆನ್ನಾಗಿ ನಡೆಸುತ್ತಿದ್ದಾರೆ. ವಿದ್ಯಾ ಕ್ಷೇತ್ರದಲ್ಲಂತೂ ಬಹಳ ಶ್ರಮವಹಿಸಿ ಅದರಲ್ಲೂ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ ಮತ್ತು ಹಿಂದುಳಿದವರಿಗೆ ಹೆಚ್ಚು ಅವಕಾಶ ಮಾಡಿಕೊಟ್ಟು ತುಂಬಾ ಸಹಾಯ ಮಾಡಿದ್ದಾರೆ. ಅವರ ಸೇವೆಯನ್ನಂತೂ ನಾವೆಲ್ಲಾ ಸ್ಮರಿಸಬೇಕಾದುದು ನಮ್ಮ ಕರ್ತವ್ಯವಾಗಿದೆ. ಕಳೆದ ವಾರ ಅವರು ನನ್ನ ಇಲಾಖೆಗೆ ಸಂಬಂಪಟ್ಟ ಒಂದು ಪ್ರಶ್ನೆ ಕೇಳಿದ್ದರು. ಅನುದಾನ ಕೊಡುವುದರ ಬಗ್ಗೆ ಪರಿಶಿಷ್ಟ ಜಾತಿ ವರ್ಗದ ಕಾಲೇಜುಗಳ ಬಗ್ಗೆ ಏನಾದರೂ ಮಾಡಬೇಕು ಎಂದು ಹೇಳಿದ್ದರು. ಅದಕ್ಕೆ ನಾನು ಹೇಳಿದ ಸರ್ಕಾರ ಪರಿಶೀಲನೆ ಮಾಡುತ್ತದೆ ಎಂದು. ಈ ರೀತಿ ಅಂಬೇಡ್ಕರ್ ಮೆಡಿಕಲ್ ಕಾಲೇಜ್ ಇದೆಯಲ್ಲ ಅದರಲ್ಲೂ ಕೂಡ ಅವರು ಮ್ಯಾನೇಜಿಂಗ್ ಟ್ರಸ್ಟಿಯಾಗಿ ಕೆಲಸ ಮಾಡಿದ್ದಾರೆ. ಆ ಕಾಲೇಜನ್ನು ಇವತ್ತಿನ ದಿವಸ ಬಹಳ ಉನ್ನತ ಮಟ್ಟಕ್ಕೆ ತರುವುದಕ್ಕೆ ತುಂಬಾ ಪ್ರಯತ್ನ ಮಾಡಿದ್ದಾರೆ. ಅಂಥ ಮಹನೀಯರು ಇವತ್ತಿನ ದಿವಸ ನಮ್ಮನ್ನು ಅಗಲಿದ್ದಾರೆ. ಅದಕ್ಕೆ ನಾನು ಈಗ ಅಂತಿಮ ಗೌರವವನ್ನು ಸಲ್ಲಿಸಿ ಬಂದೆ. ಅದೇರೀತಿಯಲ್ಲಿ ಅವರ ಅತ್ಮಕ್ಕೆ ಶಾಂತಿ ದೊರೆಯಲಿ ಎಂದು ದೇವರಲ್ಲಿ ಪ್ರಾರ್ಥನೆ ಮಾಡಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.

+ ಶ್ರೀ ಚಂದ್ರಕಾಂತ ಜಿ.ಬೆಲ್ಲದ್ (ಧಾರವಾಡ) : ಸನ್ಮಾನ್ಯ ಉಪಾಧ್ಯಕ್ಷರೆ, ಇವತ್ತಿನ ದಿವಸ ಅನೇಕ ಹಿರಿಯರು ಸನ್ಮಾನ್ಯ ಜಯಪ್ರಕಾಶ್ ನಾರಾಯಣ್ ಅವರ ಬಗ್ಗೆ ಅವರ ಸಮೀಪದ ಪರಿಚಯದಿಂದ ಅವರ ಕಾರ್ಯಗಳನ್ನು ಕಂಡಂಥ ಜನರು, ಹಿರಿಯರು ಅವರ ಬಗ್ಗೆ ಸಂತಾಪ ಸೂಚಿಸಿ ನಮ್ಮನ್ನು ಅಗಲಿರುವುದರಿಂದ ಆಗಿರುವ ದುಃಖದ ಬಗ್ಗೆ ಮಾತನಾಡಿದ್ದಾರೆ. ಆದರೆ ಜಯಪ್ರಕಾಶ್ ನಾರಾಯಣ್ ಅವರನ್ನು ನಾನು ಸಮೀಪದಿಂದ ಕಂಡಿಲ್ಲ. ಆದರೆ ನಮ್ಮ ಸದನದಲ್ಲಿದ್ದರು. ಈಗ ಎಲ್ಲ ಹಿರಿಯರು ಮಾತನಾಡಿದ್ದನ್ನು ನೋಡಿದರೆ ಅಂಥ ಒಬ್ಬ ಅಪ್ರತಿಮವಾದಂಥ ವ್ಯಕ್ತಿ ತುಳಿತಕ್ಕೆ ಒಳಗಾದಂಥ ಸಮಾಜದ ಸಲುವಾಗಿ ಸತತವಾಗಿ ಚಿಂತನೆ ಮಾಡಿ ತನುಮನಧನಗಳಿಂದ ತಮ್ಮ ಇಡೀ ಜೀವನವನ್ನೇ ಮುಡುಪಾಗಿಟ್ಟು ಸಮಾಜದ ಏಳಿಗೆಗಾಗಿ, ತುಳಿತಕ್ಕೆ ಒಳಗಾದಂಥ ಜನರ ಏಳಿಗೆಗಾಗಿ ಸತತವಾಗಿ ಶ್ರಮಿಸಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಜನರನ್ನು ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ಆರ್ಥಿಕವಾಗಿ ಬೆಳವಣಿಗೆ ಮಾಡಲಿಕ್ಕೆ ತಮ್ಮನ್ನು ತಾವು ತೊಡಗಿಸಿ ಕೊಂಡಂಥ ಒಬ್ಬ ನಾಯಕರು ಇವತ್ತು ನಮ್ಮೆಲ್ಲರಿಂದ ಅಗಲಿದ್ದಾರೆ.

ನನಗೆ ಅಪಾರವಾದಂಥ ದುಃಖ ಆಗಿದೆ. ಮತ್ತು ಅವರ ಸಮಾಜಕ್ಕೂ ಕೂಡ ಅಪಾರವಾದ ದುಃಖ ಆಗಿ ಅಂಥ ಒಬ್ಬ ನಾಯಕರು ಅಗಲಿರುವುದಕ್ಕೆ ಎಲ್ಲರಿಗೂ ಬಹಳ ದುಃಖವಾಗಿದೆ. ಇವತ್ತು ಅವರ ಕುಟುಂಬಕ್ಕೆ ಆದಂಥ ದುಃಖ ಏನಿದೆ, ತಾಪ ಏನಿದೆ ಅದರಲ್ಲಿ ನಾವೆಲ್ಲರೂ ಭಾಗಿಗಳಾಗಿದ್ದೇವೆ. ಅವರು ಮಾಡಿದಂಥ ಕಾರ್ಯ ಶಾಶ್ವತವಾಗಿ ಉಳಿಯಬೇಕು. ಅಂಥ ಒಬ್ಬ ವ್ಯಕ್ತಿ ಏನು ತಮ್ಮ ಜೀವನದಲ್ಲಿ ಮಾಡಿ ಸಮಾಜದ ಏಳಿಗೆಗೆ, ಜನತೆಯ ಕಲ್ಯಾಣಕ್ಕಾಗಿ ಮಾಡಿದ್ದಾರೆ ಅದು ಶಾಶ್ವತವಾಗಿ

ಉಳಿಯಬೇಕು. ಒಬ್ಬ ವ್ಯಕ್ತಿ ತನ್ನ ಜೀವನದಲ್ಲಿ ಸಮಾಜದ ಸಲುವಾಗಿ ಎಷ್ಟೊಂದು ಉತ್ತಮವಾದಂಥ ಕಾರ್ಯಗಳನ್ನು ಮಾಡಬಲ್ಲ ಅನ್ನುವುದನ್ನು ತೋರಿಸಿಕೊಟ್ಟಂಥ ಒಬ್ಬ ಧೀಮಂತ ವ್ಯಕ್ತಿ. ಅದೂ ತುಳಿತಕ್ಕೆ ಒಳಗಾದಂಥ ಜನರು ಆ ಕಾಲದಿಂದಲೂ ಸಹ ಯಾವ ಜನರ ಸಲುವಾಗಿ ಧ್ವನಿ ಎತ್ತಿ ಮಾತನಾಡಲಿಕ್ಕೆ ಸಾಧ್ಯವಿರಲಿಲ್ಲ ಅಂಥ ಕಾಲದಲ್ಲಿ ಡಾಕ್ಟರ್ ಅಂಬೇಡ್ಕರ್ ಅವರ ಜೀವನವನ್ನು ನೆನಸಿಕೊಂಡು ಅವರ ಮಾರ್ಗದರ್ಶನದಲ್ಲಿ ನಡೆದಂಥ ಒಬ್ಬ ವ್ಯಕ್ತಿ ಇವತ್ತು ನಮ್ಮಿಂದ ಅಗಲಿದ್ದಾರೆ. ಸನ್ಮಾನ್ಯ ನಾಯಕರು ಅವರ ಜೀವನದ, ಅವರು ಮಾಡಿದಂಥ ಕಾರ್ಯವು ಮುಂದಿನ ಜನಾಂಗಕ್ಕೆ ಉಳಿಯುವಂಥ ಕಾರ್ಯದಲ್ಲಿ ಅವರಿಗೆ ಸೇವೆ ಮಾಡಬೇಕು ಎಂದು ಹೇಳಿ ವಿನಂತಿಸಿ ಅವರ ಕುಟುಂಬಕ್ಕೆ ಅವರ ಸಮಾಜಕ್ಕೆ ಆದಂಥ ನಷ್ಟದಲ್ಲಿ ನಾವೂ ಪಾಲುದಾರರಾಗಿದ್ದೇವೆ ಎಂದು ಹೇಳಿ ನನಗೆ ಅವಕಾಶ ಕೊಟ್ಟಿದ್ದಕ್ಕಾಗಿ ತಮ್ಮನ್ನು ವಂದಿಸಿ ನನ್ನ ಸಂತಾಪವನ್ನು ವ್ಯಕ್ತಪಡಿಸುತ್ತಿದ್ದೇನೆ.

+ ಶ್ರೀ ಬಿ.ಬಿ. ನಿಂಗಯ್ಯ (ಕೃಷಿ ಮಾರುಕಟ್ಟೆ ರಾಜ್ಯ ಸಚಿವರು) : ಮಾನ್ಯ ಉಪಾಧ್ಯಕ್ಷರೆ, ಬೆಳಗ್ಗೆ ನಾನು ಸದನಕ್ಕೆ ಬಂದಂಥ ಸಮಯದಲ್ಲಿ ಈ ವಾರ್ತೆಯನ್ನು ಕೇಳಿ ದಿಗ್ಭ್ರಮೆ ಜೊತೆಗೆ ಅತೀವ ದುಃಖ ಆಯಿತು. ಏಕೆಂದರೆ ಕಳೆದ ಹನ್ನೊಂದು ವರ್ಷಗಳಿಂದ ಅವರ ಜೊತೆಗೆ ನಾನು ಸಂಬಂಧವನ್ನು ಇಟ್ಟುಕೊಂಡಿದ್ದೆ. ನಮ್ಮ ಸಮಾಜದಲ್ಲಿ ಅತೀ ಹಿರಿಯರು ಮತ್ತು ಈ ಸಮಾಜದ ಬಗ್ಗೆ ತನ್ನದೇ ಆದ ಕಾಳಜಿಯನ್ನು ಕಳಕಳಿಯನ್ನು ಇಟ್ಟುಕೊಂಡು ಅವರ ಜೀವಿತದದ ಕಾಲದಲ್ಲಿ ಹೋರಾಟ ಮಾಡಿಕೊಂಡು ಬಂದಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಂತೂ ಅವರು ಮಾಡಿರತಕ್ಕ ಸೇವೆ ಈ ಸಮಾಜಕ್ಕೆ ಕೊಟ್ಟಿರತಕ್ಕ ಕೊಡುಗೆ ಅತ್ಯಂತ ಅವಿಸ್ಮರಣೀಯ ಎಂದರೆ ತಪ್ಪಾಗಲಿಕ್ಕಿಲ್ಲ. ನಾನು ಪ್ರಾರಂಭದಲ್ಲಿ 1985ನೇ ಇಸವಿಯಲ್ಲಿ ಶಾಸಕನಾಗಿ ಬಂದಾಗ ಅವರ ಅಂಬೇಡ್ಕರ್ ಮೆಡಿಕಲ್ ಕಾಲೇಜಿನಲ್ಲಿ ದೊಡ್ಡ ಗಲಾಟೆಯಾಯಿತು. ಈ ಮನೆಯಲ್ಲಿರತಕ್ಕ ಬಹುತೇಕ ಎಲ್ಲ ಹಿರಿಯ ಸದಸ್ಯರಿಗೆ ಅದು ಗೊತ್ತಿದೆ. ಆ ಕಾಲದಿಂದಲೂ ಅವರ ಹೋರಾಟದ ಜೊತೆಗೆ ನಾನೂ ಬಂದಿದ್ದೇನೆ. ಮಾನ್ಯ ಸಚಿವರಾದ ಶ್ರೀಮಾನ್ ಜಯಕುಮಾರ್ ಅವರು ಹೇಳಿದಹಾಗೆ ಕಳೆದ ಎರಡು ವರ್ಷಗಳ ಹಿಂದಿನಿಂದ ಈ ಪಕ್ಷದ ಸಂಘಟನೆ ವಿಚಾರದಲ್ಲಂತೂ ಅವರ ಆರೋಗ್ಯ ಅಷ್ಟು ಪ್ರೋತ್ಸಾಹದಾಯಕ ಪರಿಸ್ಥಿತಿಯಲ್ಲಿಲ್ಲದಿದ್ದರೂ ಕೂಡ ತಮ್ಮ ಸೇವೆಯನ್ನು ಕನಿಷ್ಠವಾದರೂ ಕೂಡ ಪಕ್ಷಕ್ಕೆ ಕೊಡಬೇಕೆಂಬ ದೃಷ್ಟಿಯಿಂದ ಹಗಲುರಾತ್ರಿ ನಮ್ಮ ಜೊತೆಗೆ ದುಡಿದ್ದನ್ನು ಕೂಡ ನಮ್ಮ ಸ್ನೇಹಿತರು ಈ ಸಂದರ್ಭದಲ್ಲಿ ಸ್ಮರಿಸಿದರು.

ಹೀಗೆ ಒಟ್ಟಾರೆ ಅವರ ಸಾವಿನಿಂದ ನಮ್ಮ ಪಕ್ಷಕ್ಕೆ ಅಷ್ಟೇ ಅಲ್ಲ, ನಮ್ಮ ದಲಿತ ಸಮಾಜಕ್ಕೆ ಸಾರ್ವಜನಿಕ ರಂಗಕ್ಕೆ ಅಪಾರವಾದ ನಷ್ಟವಾಗಿದೆ ಎಂದು ಈ ಸಂದರ್ಭದಲ್ಲಿ ಹೇಳುತ್ತೇನೆ. ಅವರ ಕುಟುಂಬಕ್ಕೆ ಅವರ ಸಾವಿನಿಂದ ಆಗಿರತಕ್ಕ ದುಃಖವನ್ನು ಭರಿಸತಕ್ಕ ಶಕ್ತಿ ವೃದ್ಧಿಯಾಗಲಿ, ಹಾಗೆ ಇವತ್ತು ಶಿಕ್ಷಣ ಕ್ಷೇತ್ರದಲ್ಲಿ ಅವರ ಸಾವಿನಿಂದ ಅವರು ಕಟ್ಟಿರತಕ್ಕ ತನ್ನದೇ ಆದ ರಾಜ್ಯ ಬಹುಶಃ ಇವತ್ತು ಕೊರಗುತ್ತದೆ. ಸಾವಿರಾರು, ಲಕ್ಷಾಂತರ ಜನರಿಗೆ ಅವರು ಆ ಕ್ಷೇತ್ರದ ಮೂಲಕ ಸಹಾಯ ಮಾಡುತ್ತಿದ್ದರು. ಪುನಃ ಆ ಕ್ಷೇತ್ರವನ್ನು ನಡೆಸಿಕೊಂಡು ಹೋಗುವುದಕ್ಕೆ ಕಷ್ಟವಾಗಬಹುದು. ಇದೆಲ್ಲಕ್ಕೂ ಕೂಡ ಮಾನ್ಯ ಸಭಾ ನಾಯಕರು ಅವರ ಕುಟುಂಬ ವರ್ಗದವರನ್ನು ಕರೆಸಿ ಅವರಿಗೆ ಧೈರ್ಯ ಮತ್ತು ಸಹಾಯ ಮಾಡಬೇಕೆಂದು ಈ ಸಂದರ್ಭದಲ್ಲಿ ಪ್ರಾರ್ಥನೆ ಮಾಡುತ್ತೇನೆ. ಅವರ ಆತ್ಮಕ್ಕೆ ಚಿರಶಾಂತಿ ಸಿಗಲಿ ಎಂದು ಹೇಳಿ ಈ ಸಂದರ್ಭದಲ್ಲಿ ಪ್ರಾರ್ಥನೆ ಮಾಡಿ, ಮಾನ್ಯ ಸಭಾ ನಾಯಕರು ತಂದಿರತಕ್ಕ ನಿರ್ಣಯಕ್ಕೆ ನನ್ನ ಬೆಂಬಲವನ್ನು ಸೂಚಿಸಿ ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

+ ಶ್ರೀ ಬಸವರಾಜು : ಮಾನ್ಯ ಉಪಾಧ್ಯಕ್ಷರೆ, ಶ್ರೀಮಾನ್ ಜಯಪ್ರಕಾಶ್ ನಾರಾಯಣ್‌ರವರನ್ನು ನಾನು ಅವರ ಮೆನೆಯಲ್ಲಿ ಬಹಳಷ್ಟು ವರ್ಷಗಳ ಹಿಂದೆ ಇಂಜಿನಿಯರಿಂಗ್ ಸೀಟಿನ ಸಲುವಾಗಿ ಭೇಟಿಯಾಗಿದ್ದೆ. ಒಬ್ಬ ಪರಿಶಿಷ್ಟ ಜಾತಿಯ ವಿದ್ಯಾರ್ಥಿಯನ್ನು ಕರೆದುಕೊಂಡು ಹೋದಾಗ ಅದರಲ್ಲೂ ಅವರು ಈ ರಾಜ್ಯದವರಲ್ಲ, ಬೇರೆ ರಾಜ್ಯದರವಾಗಿದ್ದರೂ ಕೂಡ ಒಂದು ಮಾನ್ಯತೆ ನೀಡಿ, ನಮ್ಮ ಜನಾಂಗ ಮುಂದೆ ಬರಬೇಕು, ಈ ಜನಾಂಗವನ್ನು ಈ ಸಮಾಜದಲ್ಲಿ ಒಂದು ರೀತಿ ಕಡೆಗಣಿಸುವಂತಹ ಪ್ರವೃತ್ತಿಯನ್ನು ಇನ್ನು ಮುಂದಾದರೂ ತಪ್ಪಿಸಬೇಕು. ಈ ರಾಜ್ಯದವರೆ ಅಲ್ಲ, ಬೇರೆ ರಾಜ್ಯದವರು ಇದ್ದರೂ ಕೂಡ, ನಾನು ಅಂತಹ ವಿದ್ಯಾರ್ಥಿಗಳಿಗೆ ವಿದ್ಯೆಯನ್ನು ಕಲ್ಪಿಸುವಂತಹ ಒಂದು ಸಂದರ್ಭ ನನಗೆ ಬಂದಿದೆ. ಈ ಇಂಜಿನಿಯರಿಂಗ್ ಕಾಲೇಜಿನಲ್ಲಿ ಸೀಟು ಕೊಡಿಸುವ ವ್ಯವಸ್ಥೆ ಮಾಡುತ್ತೇನೆಂಬ ಒಂದು ಉತ್ತಮ ಉದ್ದೇಶವನ್ನು ಇಟ್ಟುಕೊಂಡು ಅಂತಹ ವಿದ್ಯಾರ್ಥಿಗಳಿಗೆ ಒಂದು ಮಾರ್ಗದರ್ಶಕರಾಗಿ, ಹಿತಚಿಂತರಾಗಿ ಅವರು ದುಡಿಯುತ್ತಾ ಇದ್ದರು. ನಾನು ವೈಯಕ್ತಿಕವಾಗಿ ಹೇಳಬೇಕಾದರೆ, ಅವರ ಸಾವಿನಿಂದ ಪರಿಶಿಷ್ಟ ಜಾತಿ ಯವರಿಗೆ ತುಂಬಲಾರದ ನಷ್ಟವಾಗಿದೆ ಎಂದು ಹೇಳಿದರೆ ತಪ್ಪಾಗಲಾರದು. ಈ ಸಂದರ್ಭದಲ್ಲಿ ಅವರ ಕುಟುಂಬಕ್ಕೆ ಆಗಿರುವ ನಷ್ಟವನ್ನು ದೇವರು ಭರಿಸುವ ಶಕ್ತಿಯನ್ನು ಕೊಡಲೆಂದು ನಾನು ದೇವರಲ್ಲಿ ಪ್ರಾರ್ಥಿಸಿಕೊಂಡು ಈ ಸಂತಾಪ ಸೂಚಕವನ್ನು ಈ ಸಭೆಯಲ್ಲಿ ತಂದು ಅದರ ಮಂಡನೆಗೆ ನನ್ನ ಬೆಂಬಲವನ್ನು ಸೂಚಿಸುತ್ತಾ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಶ್ರೀ ಜಿ. ಬಸವಣ್ಣಪ್ಪ (ಹೊಳೆಹೊನ್ನಾರು) : ಮಾನ್ಯ ಉಪಾಧ್ಯಕ್ಷರೆ, ಇದೀಗ ನನಗೆ ತಿಳಿಯಿತು. ಸನ್ಮಾನ್ಯ ಜಪ್ರಕಾಶ್ ನಾರಯಣ್‌ರವರು ನಿಧನರಾದರು ಎಂದು ಸನ್ಮಾನ್ಯ ಶ್ರೀ ಜಯಪ್ರಕಾಶ್ ನಾರಾಯಣ್‌ರವರೊಡನೆ ನನ್ನ ಸ್ನೇಹಿತ್ವ ಸುಮಾರು 1967ನೇ ಇಸವಿಯಿಂದ ಇತ್ತು. ನಾನು ಅವರು 1967ರಲ್ಲಿ ಈ ಮನೆಯ ಶಾಸಕನಾಗಿ ಕೆಲಸ ಮಾಡಿದ್ದೇವೆ. ಅವರು ಒಳ್ಳೆಯ ಸಂಸದೀಯ ಪಟು. ಹಿಂದುಳಿದ ವರ್ಗದವರ ಬಗ್ಗೆ ಅದರಲ್ಲೂ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದವರ ಬಗ್ಗೆ ಅಪಾರವಾದ ಕಳಕಳಿಯನ್ನು ಹೊಂದಿರತಕ್ಕ ಒಬ್ಬ ವ್ಯಕ್ತಿ ಅಷ್ಟೇ ಅಲ್ಲ, ಈ ಶಾಸನ ಸಭೆಯಲ್ಲಿ ಕೆಲಸ ಮಾಡುವಾಗ, ರಚನಾತ್ಮಕ ಸಲಹೆಗಳನ್ನು ಕೊಟ್ಟು ಪರಿಶಿಷ್ಟ ಜಾತಿಯವರಿಗೆ ಆದ ಅನ್ಯಾಯದ ಬಗ್ಗೆ ಸದಾ ಹೊಡೆದಾಡುತ್ತಾ ಇದ್ದಂತಹ ಒಬ್ಬ ವ್ಯಕ್ತಿ. ಶಿಕ್ಷಣ ಸಂಸ್ಥೆಯಲ್ಲಿ ಪ್ರತಿಭಾವಂತ ವ್ಯಕ್ತಿಯಾಗಿ ಅಲ್ಲಿ ಪರಿಶಿಷ್ಟ ಜಾತಿಯವರ, ದುರ್ಬಲವರ್ಗದವರ ರಕ್ಷಣೆಯ ಬಗ್ಗೆ ಅಪಾರವಾದ ಕಳಕಳಿ ವಹಿಸಿ ಒಂದು ಶಿಕ್ಷಣ ಸಂಸ್ಥೆಯನ್ನು ಒಂದು ಮಾದರಿ ಸಂಸ್ಥೆಯನ್ನಾಗಿ ಮಾಡಿಕೊಂಡು ಬಂದಂತಹ ಒಬ್ಬ ವ್ಯಕ್ತಿ. ಮೊನ್ನೆ ತಾನೆ ಯಲಹಂಕದಲ್ಲಿ ಚುನಾವಣೆಗೆ ನಿಲ್ಲುವ ಸಂದರ್ಭದಲ್ಲಿ ಅವರು-ನಾವು ಒಂದಾಗಿ ಅವರ ಗೆಲುವಿಗೆ ನಾನೂ ಸಹ ಸಹಕಾರಿಯಾಗಿದ್ದೆ. ನನ್ನ ಗೆಲುವಿಗೆ ಅವರೂ ಸಹ ಸಹಾಕಾರಿ ಯಾಗಿದ್ದರು. ಹಿಂದುಳಿದವರ್ಗದವರ ಬಗ್ಗೆ, ಪರಿಶಿಷ್ಟ ಜಾತಿಯವರ ಬಗ್ಗೆ ಅಪಾರ ಕಳಕಳಿ ಹೊಂದಿರತಕ್ಕ ವ್ಯಕ್ತಿ ಅವರ ಪ್ರಗತಿಯ ಬಗ್ಗೆ ಸದಾ ಚಿಂತನೆ ಮಾಡತಕ್ಕ ಒಬ್ಬ ವ್ಯಕ್ತಿ ನಮ್ಮನ್ನು ಬಿಟ್ಟು ಅಗಲಿದ್ದಾರೆ. ನಿಜವಾಗಿಯೂ ಈ ದುರ್ಬಲ ವರ್ಗದವರಿಗೆ ಅಪಾರವಾದ ನಷ್ಟವಾಗಿದೆ. ಅವರ ಆತ್ಮಕ್ಕೆ ಈ ಸಂದರ್ಭದಲ್ಲಿ ಚಿರಶಾಂತಿಯನ್ನು ಕೋರಿ ನನ್ನ ಮಾತುಗಳನ್ನು ಮುಗಿಸುತ್ತೇನೆ.

ಉಪಾಧ್ಯಕ್ಷರು : ಮೃತರ ಗೌರವಾರ್ಥ ಮಾನ್ಯ ಸದಸ್ಯರು ಎದ್ದು ನಿಂತು ಒಂದು ನಿಮಿಷ ಗೌರವವನ್ನು ಸೂಚಿಸಬೇಕು.

(ಸದನದ ಎಲ್ಲ ಸದಸ್ಯರು ಎದ್ದು ನಿಂತು ಮೃತರಗೌರವಾರ್ಥ ಒಂದು ನಿಮಿಷ ಮೌನವನ್ನು ಆಚರಿಸಿದರು)

ಈ ಸಂತಾಪ ಸೂಚಕ ನಿರ್ಣಯವನ್ನು ಅವರ ಕುಟುಂಬ ವರ್ಗದವರಿಗಗೆ ಕಳುಹಿಸಿಕೊಡಲಾಗುವುದು. ಈಗ ಸಭೆಯನ್ನು ಮುಂದೂಡಿ ನಾಳೆ ಬೆಳಗ್ಗೆ 9-30ಕ್ಕೆ ಪುನಃ ಸೇರುವುದು.

(ಸಭೆಯ ಕಾರ್ಯಕಲಾಪಗಳನ್ನು ಬೆಳಿಗ್ಗೆ 10-55ಕ್ಕೆ ಮುಂದಾಗಿ ನಾಳೆ ಅಂದರೆ ದಿನಾಂಕ 7-4-95ರಂದು ಬೆಳಿಗ್ಗೆ 9-30 ಗಂಟೆಗೆ ಪುನಃ ಸಮಾವೇಶಗೊಳ್ಳಲು ತೀರ್ಮಾನಿಸಲಾಯಿತು)

---

(+ ಈ ಚಿಹ್ನೆ ಮಾನ್ಯ ಸದಸ್ಯರ ಟಿಪ್ಪಣಿ ಅಥವಾ ಭಾಷಣವನ್ನು ಪರಿಷ್ಕರಿಸಿಲ್ಲ ಎಂದು ಸೂಚಿಸುತ್ತದೆ)

47 pages

ಸರ್ಕಾರಿ ಹೊರವಲಯ ಮುದ್ರಣಾಲಯ, ಬೆಂಗಳೂರು – 560 059

